# ದಾಸ ಸಾಹಿತ್ಯ ಕೋಶ

ಜಿ. ವೆಂಕಟೇಶ್

ಪ್ರಿಸಮ್ ಬುಕ್ಸ್ ಪ್ರೈ.ಲಿ.

# ದಾಸ ಸಾಹಿತ್ಯ ಕೋಶ

ಸಂಗ್ರಾಹಕರು
**ಜಿ. ವೆಂಕಟೇಶ್**
ಹರಿದಾಸ ಸಾಹಿತ್ಯ ಸಂಶೋಧನ ಮಂದಿರ
ಡಿ.ಕೆ. ಗುರುರಾವ್ ಮತ್ತು ಜಿ. ಸಾವಿತ್ರಮ್ಮ ಚಾರಿಟಬಲ್ ಟ್ರಸ್ಟ್
ಬೆಂಗಳೂರು 560 020

**ಪ್ರಿಸಮ್ ಬುಕ್ಸ್ ಪ್ರೈ. ಲಿ.**
•ಬೆಂಗಳೂರು •ಚೆನ್ನೈ •ಹೈದರಾಬಾದ್ •ಕೋಚಿ •ಕೊಲ್ಕತ್ತಾ

Rarest Archiver

DASA SAHITYA KOSHA— *Kannada By* G. VENKATESH

*Published by*
**PRISM BOOKS PVT LTD**
1865, 32nd Cross, 10th Main, BSK II Stage, Bangalore - 560 070
Telephone : 26714108, Telefax : 26713979

*Also at :*

**Chennai** : 1st Floor, New No. 2, Old No. 33, 2nd Cross Street, CIT Nagar West
Chennai – 600035 Tel. : 044-42867308 / 42867509
e-mail : prismchennai@prismbooks.com

**Hyderabad**: Parvathi Residency, # 3-6-157/A, Flat No. 101, Beside Urdu Hall,
Himayat Nagar, Hyderabad – 500 029. Tel : 040-23261869 / 23261828
e-mail : prismhyderabad@prismbooks.com

**Kochi** : # 411/3 1st Floor, 'Shree Parameshwar', Muttathill lane. Kadhavanthara
Kochi – 682 020. Tel : 0484-4000945 e-mail : prismkochi@prismbooks.com

**Kolkata** : # D/66, Bapujinagar P.O, Regent Esatate, P-S Jadhavapur. Kolkata – 700 092. Tel : 033-24297957 e-mail : prismkolkata@prismbooks.com

**ದಾಸ ಸಾಹಿತ್ಯ ಕೋಶ**

© 2010, ಸಂಗ್ರಾಹಕರದು

Pages: 422

ಪುಟಗಳು : 422

ಮುದ್ರಣ
ಸ್ಟ್ಯಾಂಡರ್ಡ್ ಪ್ರೆಸ್
ಬೆಂಗಳೂರು

Rarest Archive

**ಅರ್ಪಣೆ**

ಈ ಸುಂದರ ಜನ್ಮ ಕೊಟ್ಟ

**ಶ್ರೀಮತಿ ಜಿ. ಸಾವಿತ್ರಮ್ಮ**

ಮತ್ತು

ದಿವಂಗತ ನಾವೆಲ್ಟಿ ಡಿ.ಕೆ. ಗುರುರಾಯರಿಗೆ

Rarest Archiver

## ಪರಿವಿಡಿ



Rarest Archiver

# ಪೀಠಿಕೆ

ಈ ಕೋಶದ ಸಂಗ್ರಾಹಕನಾಗಿ ನಾನು ಇದರ ಹಿನ್ನೆಲೆಯಾಗಿ ಕೆಲವು ಅಂಶಗಳನ್ನು ಓದುಗರ ಗಮನಕ್ಕೆ ತರುವುದು ನನ್ನ ಕರ್ತವ್ಯವೆಂದು ಭಾವಿಸಿ, ಈ ಪೀಠಿಕೆಯನ್ನು ಬರೆದಿದ್ದೇನೆ.

ವೈಯಕ್ತಿಕವಾಗಿ ಹೇಳಬೇಕೆಂದರೆ, ಪ್ರಾರಂಭದಿಂದಲೂ ಇಂಗ್ಲಿಷ್ ಮೀಡಿಯಂನಲ್ಲಿ ಓದಿ, ವ್ಯಾಪಾರ ಹಾಗು ವ್ಯವಹಾರದಲ್ಲೂ ಇಂಗ್ಲಿಷ್ ಉಪಯೋಗಿಸುತ್ತಿದ್ದ ನನಗೂ ಕನ್ನಡ ಬಾಷೆ-ಸಾಹಿತ್ಯಗಳಿಗೂ ಬಹುದೂರವಾಗಿತ್ತು.

ಆದರೆ, ಸಂಗೀತದಲ್ಲಿ ಆಸಕ್ತಿ ಇದ್ದ ನಾನು, ಕ್ರಮಬದ್ಧವಾಗಿ ಸಂಗೀತ ಕಲಿಯುವ ಆಸೆಯಿಂದ ಗುರುಗಳನ್ನು ಆಶ್ರಯಿಸಿದೆ. ದಿವಂಗತ ವಿದ್ವಾನ್ ಟಿ. ಚೌಡಯ್ಯನವರ ಶಿಷ್ಯರಾದ ವಿದ್ವಾನ್ ಎನ್.ಎಲ್.ಚೆಲುವರಾಜ್ ಅವರೇ ನನ್ನ ಪ್ರಥಮ ಗುರುಗಳು. ಅವರು ನನಗೆ ಹಾಡುಗಾರಿಕೆಯನ್ನು ಪ್ರಾರಂಭಿಕ ಪಾಠಗಳಿಂದ ಶಾಸ್ತ್ರೀಯವಾಗಿ ಕಲಿಸಿದರು. ನಂತರ ಆಕಾಶವಾಣಿಯಲ್ಲಿ ಸಂಗೀತ ನಿರ್ದೇಶಕರಾಗಿದ್ದ ದಿವಂಗತ ವಿದ್ವಾನ್ ಹೆಚ್.ಕೆ.ನಾರಾಯಣ ಅವರಿಂದ ದೇವರನಾಮಗಳು ಹಾಗೂ ಲಘು ಸಂಗೀತವನ್ನು ಕಲಿತೆ. ಇವರುಗಳಿಗೆ ನನ್ನ ನಮಸ್ಕಾರಪೂರ್ವಕವಾದ ಕೃತಜ್ಞತೆಗಳು.

ಸಂಗೀತದಲ್ಲೂ ನನ್ನ ಪ್ರಧಾನ ಆಸಕ್ತಿ "ದೇವರನಾಮಗಳು". ಅದನ್ನು ಕಲಿಯುತ್ತಾ ಹೋದಂತೆ "ಹರಿದಾಸ ಸಾಹಿತ್ಯ"ಕ್ಕೆ ಪ್ರವೇಶ ದೊರೆತು ಹರಿದಾಸರ ಬಗ್ಗೆ, ಅವರ ದೇವರ ನಾಮಗಳ ರಚನೆಯ ಹಿನ್ನೆಲೆ, ಅಂತರಾರ್ಥ ಮುಂತಾದ ಹೆಚ್ಚಿನ ವಿಷಯಗಳಲ್ಲಿ ಆಸಕ್ತಿ ಉಂಟಾಯಿತು.

ಶ್ರುತಿ, ಸ್ಮೃತಿ, ಪುರಾಣೇತಿಹಾಸಗಳಲ್ಲಿ ಸಂಪೂರ್ಣ ನಂಬಿಕೆಇಟ್ಟು 'ಸಾಲಮಾಡಲಿಬ್ಯಾಡ, ಸಾಲದೆನ್ನಲಿಬ್ಯಾಡ, ನಾಳಿಗೆ ಹ್ಯಾಂಗೆಂಬೊ ಚಿಂತೆಬ್ಯಾಡ'ಯೆಂದೊಪ್ಪಿಕೊಂಡು, ಹರಿದಿನ ವ್ರತಾಚರಣೆಗಳನ್ನು ಬಿಡುವುದಿಲ್ಲಎಂಬ ಪ್ರತಿಜ್ಞೆಮಾಡಿ, 'ಹರಿನಿಂದಕರ ಕಣ್ಣೆತ್ತಿ ನೋಡಬ್ಯಾಡ'ಎಂದು ಉಪದೇಶಿಸಿ, ಹರಿನಾಮಸ್ಮರಣೆಯಿಂದ ಪ್ರಾಪ್ತವಾದ ಪವಿತ್ರಾನ್ನವನ್ನೇ ಉಣಬೇಕುಎಂದು ನಂಬಿ ಹರಿಸೇವೆಗಾಗಿ ತಮ್ಮ ಜೀವನವನ್ನು ಮೀಸಲಾಗಿರಿಸಿದ ಹರಿದಾಸರ ಜೀವನ ಶೈಲಿ ನನ್ನನ್ನು ಆಕರ್ಷಿಸಿತು.

ಹರಿದಾಸ ಸಾಹಿತ್ಯದಲ್ಲಿ ಅಧ್ಯಯನ ಮಾಡಲು ಮತ್ತು ಮಾಡ ಬಯಸುವ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ "ಹರಿದಾಸ ಸಾಹಿತ್ಯ ಸಂಶೋಧನ ಮಂದಿರ"ವನ್ನು ಸ್ಥಾಪಿಸಿ,

Rarest Archiver

ಅದರ ಆಶ್ರಯದಲ್ಲಿ "ಗ್ರಂಥ ಭಂಡಾರ"ವೊಂದನ್ನು ಬೆಳೆಸಲಾಯಿತು. ಇದೇ ಗ್ರಂಥ ಭಂಡಾರದ ಸಹಾಯದಿಂದ ಸಿದ್ಧವಾಗಿರುವುದು ಈ ಗ್ರಂಥ.

ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ 50 ಸಂಪುಟಗಳಲ್ಲಿ ಪ್ರಕಟವಾಗಿರುವ "ಸಮಗ್ರ ದಾಸ ಸಾಹಿತ್ಯ"ವೇ ನನಗೆ ಪ್ರೇರಣೆ ಮತ್ತು ಮಾದರಿ.

ಅಧ್ಯಯನ ಮುಂದುವರಿದಂತೆ, ಸ್ಟ್ಯಾಟಿಸ್ಟಿಕ್ಸ್ ವಿದ್ಯಾರ್ಥಿಯಾಗಿದ್ದ ನನಗೆ ಸಹಜವಾಗಿಯೇ ದಾಸ ಸಾಹಿತ್ಯಕ್ಕೆ ಸಂಬಂಧಿಸಿದ ಶಬ್ದ ಕೋಶವೊಂದರ ಅಗತ್ಯವಿದೆ ಎನ್ನಿಸಿ ಕಾರ್ಯ ಪ್ರಾರಂಭಿಸಿದಾಗ, ನನ್ನ ಸೌಭಾಗ್ಯದಿಂದ ದಾಸ ಸಾಹಿತ್ಯಕ್ಕೆ ಅಪಾರ ಸೇವೆಯನ್ನು ಸಲ್ಲಿಸಿರುವ ಮೈಸೂರು ವಿಶ್ವವಿದ್ಯಾಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಿರಿಯ ಸಂಶೋಧಕರಾಗಿ ನಿವೃತ್ತರಾದ ಶ್ರೀಮತಿ ಡಾ. ಟಿ.ಎನ್.ನಾಗರತ್ನ ಅವರ ಮಾರ್ಗದರ್ಶನದ ಭರವಸೆ ಸಿಕ್ಕಿತು. ಅವರ ಮಾರ್ಗದರ್ಶನದಂತೆ ನಿರ್ದಿಷ್ಟ ಕ್ರಮದಲ್ಲಿ ಕೆಲಸ ಪ್ರಾರಂಭಿಸಿದೆ.

ಸಹಾಯಕ ಸಾಹಿತ್ಯದಲ್ಲಿನ ಗ್ರಂಥಗಳಲ್ಲಿ ಸಿದ್ಧವಾಗಿದ್ದ ಕಠಿಣ ಶಬ್ದಾರ್ಥಗಳನ್ನು ಸಂಗ್ರಹಿಸುತ್ತಾ ಹೋದಂತೆ, ಸುಮಾರು 15,000 ಶಬ್ದಗಳ ಸಂಗ್ರಹಣೆಯಾಯಿತು. ಇವುಗಳನ್ನು ಶುದ್ಧೀಕರಿಸಲು ಸಹಾಯ ಮಾಡಿದವರೆಂದರೆ–

1. ಮಂತ್ರಾಲಯದ ವಿದ್ವಾನ್ ಕುರುಡಿ ಅನಂತಾಚಾರ್ಯರು;

2. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಥಮ ದರ್ಜೆ ಸಹಾಯಕ ಸಂಶೋಧಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಶ್ರೀ ಜಿ. ಜಿ. ಮಂಜುನಾಥನ್ ಅವರು;

3. ಮೈಸೂರಿನ ಶ್ರೀಮತಿ ಡಾ. ಟಿ.ಎನ್. ನಾಗರತ್ನರವರು–

ಇವರುಗಳಿಗೆ ನನ್ನ ನಮಸ್ಕಾರಪೂರ್ವಕವಾದ ಕೃತಜ್ಞತೆಗಳು.

ಅಧ್ಯಯನ ಮುಂದುವರಿದಂತೆ ಅನೇಕ ಸಂಸ್ಕೃತ ಪದಗಳು ಕಂಡು ಬಂದವು. ಲೋಕರೂಢಿಯಲ್ಲಿಲ್ಲದೆ ಕೇವಲ ಶಾಸ್ತ್ರವ್ಯವಹಾರದಲ್ಲಿರುವ ಪದಗಳನ್ನು ಪಾರಿಭಾಷಿಕ ಪದಗಳೆಂದು ಪರಿಗಣಿಸಿ ಪ್ರತ್ಯೇಕವಾದ ಪಟ್ಟಿ ಕೊಡಲಾಗಿದೆ. ಅವುಗಳ ಬಗ್ಗೆ ಚರ್ಚಿಸಿ ಪದಗಳ ಸ್ವರೂಪವನ್ನು ನಿಷ್ಕರ್ಷಿಸಲು ಸಹಾಯ ಮಾಡಿದವರೆಂದರೆ–

1. ಮಂತ್ರಾಲಯದ ವಿದ್ವಾನ್ ಕುರುಡಿ ಅನಂತಾಚಾರ್ಯರು;

2. ಭಾರತ ಸರ್ಕಾರದ ಏಜೀಸ್ ಆಫೀಸ್‌ನ ಸೇವೆಯಿಂದ ನಿವೃತ್ತರಾದ ವಿದ್ವಾನ್ ಎಂ.ಟಿ.ಪ್ರಹ್ಲಾದಾಚಾರ್ಯರು;

3. ಪೂರ್ಣಪ್ರಜ್ಞ ವಿದ್ಯಾಪೀಠದ ಡಾ. ಹೆಚ್. ಸತ್ಯನಾರಾಯಣಾಚಾರ್ಯರು;

Rarest Archiver

4. ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾನ್ ಸಿ.ಹೆಚ್. ಬದರೀನಾಥಾಚಾರ್ಯರು–

ಈ ವಿದ್ವಾಂಸರುಗಳಿಗೆ ನನ್ನ ನಮಸ್ಕಾರಪೂರ್ವಕವಾದ ಕೃತಜ್ಞತೆಗಳು.

## ಪ್ರತ್ಯೇಕವಾದ ಶಬ್ದಕೋಶದ ಅಗತ್ಯ ಏನು?

ಭಾಷೆಯ ದೃಷ್ಟಿಯಿಂದ ರಚಿತವಾಗಿರುವ ಶಬ್ದಕೋಶಗಳಲ್ಲಿ ದೊರೆಯದ ಹಾಗೂ ಹರಿದಾಸ ಸಾಹಿತ್ಯದ ಹಿನ್ನೆಲೆಯಲ್ಲಿ ವಿಶೇಷ ಅರ್ಥ ನೀಡುವ ಅನೇಕ ಶಬ್ದಗಳು ಗಮನಕ್ಕೆ ಬಂದವು. ಹರಿದಾಸರೇ ಅನೇಕ ಹೊಸ ಪದಗಳನ್ನು ಸೃಷ್ಟಿಸಿಕೊಂಡಿದ್ದಾರೆ; ಎರಡು ಅಥವಾ ಹೆಚ್ಚಿನ ಪದಗಳನ್ನು ಸೇರಿಸಿ ತಮ್ಮ ಅರ್ಥಕ್ಕೆ ಅನುಗುಣವಾದ, ಪ್ರಾಸ–ತಾಳಗಳಿಗೆ ಹೊಂದುವಂಥಹ ಸಂಯುಕ್ತ ಪದಗಳನ್ನು ರಚಿಸಿಕೊಂಡಿದ್ದಾರೆ. ಹಾಗಾಗಿ ದಾಸ ಸಾಹಿತ್ಯಾಭ್ಯಾಸಕ್ಕೆ ಅನುಕೂಲವಾಗುವ ಪ್ರತ್ಯೇಕ ಶಬ್ದಕೋಶವೊಂದರ ಅಗತ್ಯವಿದೆ ಎನ್ನಿಸಿತು. ಆ ಅನಿಸಿಕೆಯೇ ಈ 'ದಾಸ ಸಾಹಿತ್ಯ ಕೋಶ'.

ತಮ್ಮ ಇಷ್ಟದೈವಗಳನ್ನು ಹರಿದಾಸರು ಹಲವಾರು ಹೆಸರುಗಳಿದ ಕರೆದು ಸಂತಸಪಟ್ಟಿದ್ದಾರೆ. ಉದಾಹರಣೆಗೆ ವಿಷ್ಣುವನ್ನು "ಆದಿವೈದ್ಯ, ಒಬ್ಬಕತ್ತಲೆಗೈದಿಸುವ, ಕಪಟನಾಟಕ ಸೂತ್ರಧಾರ" ಎಂಬ ನೂರಾರು ಹೆಸರುಗಳಿಂದ ಕರೆದಿದ್ದಾರೆ. ಈ ಸಂಬಂಧದಲ್ಲಿ ನಾನು ಗಮನಿಸಿರುವ, ಇದೇ ಗ್ರಂಥದಲ್ಲಿ ಕಂಡು ಬರುವ ಇಂಥ ಹೆಸರುಗಳ ಯಾದಿಯನ್ನೇ ಕೊಟ್ಟಿದ್ದೇನೆ.

ಹರಿದಾಸ ಸಾಹಿತ್ಯದಲ್ಲಿ ದೊರೆಯುವ ಷಷ್ಠ್ಯಂತ ಪದಸಮುಚ್ಚಯಗಳನ್ನು ಹಾಗೇಯೇ ಉಳಿಸಿಕೊಳ್ಳಲಾಗಿದೆ. ಉದಾಹರಣೆಗೆ: ಕದಬಾಗಿರಿಸಿದಕಳ್ಳಮನೆ, ಕಂಗಳಯ್ಯ, ತಲೆಯಗಾಯ್ದನ, ತಳಪಟವಮಾಡು, ತ್ರಿಪುರವಹಾಸ್ಯಗೈಸಿದನಿಪುಣ.

ಅನ್ವಾರ್ಥಪ್ರಧಾನವಾದ ಬಹುವ್ರೀಹಿ ಸಮಾಸದಂಥಹ ಪದಗಳನ್ನು ಹಾಗೆಯೇ ಉಳಿಸಿಕೊಳ್ಳಲಾಗಿದೆ.

## ದಾಸರುಗಳ ಸಂಕ್ಷಿಪ್ತ ಜೀವನ ಪರಿಚಯ

ಶಬ್ದ ಕೋಶದ ರಚನೆಯ ಕಾರ್ಯ ಮುಂದುವರಿದಂತೆ, ಉಲ್ಲೇಖಿಸಿದ ಗ್ರಂಥಗಳಲ್ಲಿ ಹರಿದಾಸರ ಬಗ್ಗೆ ಅನೇಕ ವಿವರಗಳು ಕಂಡು ಬಂದವು. ಆಗ, ಹರಿದಾಸರುಗಳ ಸಂಕ್ಷಿಪ್ತ ಜೀವನ ಪರಿಚಯವನ್ನು ಈ ಗ್ರಂಥದಲ್ಲಿ ಮಾಡಿ ಕೊಡಬೇಕೆಂದು ನನಗೆ ಅನ್ನಿಸಿದ್ದರಿಂದ, ಈ ವಿಭಾಗವನ್ನು ಸಿದ್ಧಪಡಿಸಲಾಯಿತು.

1. ಸಾಮಾನ್ಯವಾಗಿ ಹರಿದಾಸರುಗಳ ಹೆಸರಿನ ಅಕಾರಾದಿಯ ಪಟ್ಟಿ ಸಿದ್ಧವಾಗುತ್ತದೆ. ಆದರೆ ಇಲ್ಲಿ ಅಂಕಿತದ 'ಅ'ಕಾರಾದಿಯಲ್ಲಿ ಸಿದ್ಧಪಡಿಸಿದೆ.

2. ಯಾವ ಹೆಸರಿಗೆ ಯಾವ ಅಂಕಿತವೆನ್ನುವ ಪ್ರತ್ಯೇಕ ಪಟ್ಟಿಯನ್ನು ಕೊಟ್ಟಿದೆ.

Rarest Archiver

3. ಸಂಗ್ರಹಿಸಲು ಉದ್ದೇಶಿಸಿದ ಅಂಶಗಳೆಂದರೆ, ಹರಿದಾಸರುಗಳ ಅಂಕಿತ, ಕಾಲ, ಮೂಲ ಹೆಸರು, ಜನಪ್ರಿಯ ಹೆಸರು, ಅಂಕಿತಪ್ರಾಪ್ತಿ, ಹುಟ್ಟೂರು, ವೃತ್ತಿ, ಕಾರ್ಯಕ್ಷೇತ್ರ, ಶಿಷ್ಯರು, ರಚನೆಗಳು, ಕಾಲವಾದ ತಿಥಿ ಹಾಗೂ ಸ್ಥಳ. ಇವುಗಳ ಬಗ್ಗೆ ವಿವರಗಳನ್ನು ನೀಡಲು ಪ್ರಯತ್ನಿಸಲಾಗಿದೆ.

## ಅನುಸರಿಸಿದ ಕ್ರಮ

1. ಪ್ರಾರಂಭದಲ್ಲಿ ದಾಸರ ಹೆಸರುಗಳ ಸಂಗ್ರಹಕ್ಕೆ ಮೂಲ ಆಕರವಾದದ್ದು "ಸಮಗ್ರ ದಾಸ ಸಾಹಿತ್ಯ"ದ ಗ್ರಂಥಗಳು. ಅಂದರೆ ಈ ಗ್ರಂಥಗಳಲ್ಲಿ 'ದಾಸರು' ಎಂದು ಪರಿಗಣಿತರಾಗಿರುವ 'ಕೀರ್ತನಕಾರರು'.

2. ನನಗೆ ದೊರೆತ ಇತರ ಗ್ರಂಥಗಳಲ್ಲಿ ಕಂಡು ಬರುವ ದಾಸರುಗಳು

3. ಅಂಕಿತ ಪಡೆದ ಶಿಷ್ಯರೆಂದು ಮೇಲ್ಕಂಡ ಗ್ರಂಥಗಳಲ್ಲಿ ಹೆಸರಿಸಲಾದವರು (ಕೆಲವರ ಅಂಕಿತ ದೊರೆತಿಲ್ಲ)

4. ಕಾಲಮಿತಿಯನ್ನು ಅನುಸರಿಸದೆ ಸುಮಾರು 600 ಅಂಕಿತಗಳು/ಹೆಸರುಗಳನ್ನು ಸಂಗ್ರಹಿಸಲಾಯಿತು. ಅನಂತರ "ಕ್ರಿಸ್ತ ಶಕ 2000ದ ಮೊದಲು ಕಾಲವಾದವರು" ಎಂಬ ಕಾಲಮಿತಿಯ ಆಧಾರದ ಮೇಲೆ ಮೂರು ವಿಭಾಗಗಳನ್ನು ಮಾಡಲಾಯಿತು.

ಭಾಗ–1: ಅಂಕಿತ ಮತ್ತು ಮೂರು ಅಥವಾ ಹೆಚ್ಚಿನ ಅಂಶಗಳ ಬಗ್ಗೆ ಮಾಹಿತಿ ದೊರೆತವರು

ಭಾಗ–2: ಹರಿದಾಸ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದವರಾದರೂ ಕೆಲವರು ಅಂಕಿತ ಸ್ವೀಕರಿಸಿಲ್ಲ. ಆದರೆ ಇತರ ನಾಲ್ಕು ಮಾಹಿತಿ ಸಿಕ್ಕಿದೆ.

ಭಾಗ–3: ಅತ್ಯಂತ ಕಡಿಮೆ ಮಾಹಿತಿ ಸಿಕ್ಕಿರುವವರ ವಿವರಗಳು

## ಅನುಬಂಧಗಳು

ಹರಿದಾಸರ ಪರಿಚಯ ಸಿದ್ಧಪಡಿಸುವಾಗ ಕೆಲವು ಅಂಶಗಳ ಬಗ್ಗೆ ವಿರೋಧಾಭಾಸಗಳು ಕಂಡುಬಂದವು. ಅವುಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

Rarest Archiver

# ಕೃತಜ್ಞತೆಗಳು

ಈ ಗ್ರಂಥ ಬಿಡುಗಡೆಯ ಸಮಾರಂಭದ ಅಧ್ಯಕ್ಷತೆ ವಹಿಸಿ, ಗ್ರಂಥವನ್ನು ಬಿಡುಗಡೆ ಮಾಡಿ, ಆಶೀರ್ವಚನವನ್ನು ನೀಡಲು ದಯಮಾಡಿ ಒಪ್ಪಿರುವ ಶ್ರೀ ಪೇಜಾವರ ಮಠಾಧೀಶರಾದ ಪರಮಪೂಜ್ಯ ಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರಿಗೆ ನನ್ನ ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

ಗ್ರಂಥ ರಚನೆ ಕಾರ್ಯದಲ್ಲಿ ನನಗೆ ಮಾರ್ಗದರ್ಶನ ಮಾಡಿದವರು ಶ್ರೀಮತಿ ಡಾ.ಟಿ.ಎನ್.ನಾಗರತ್ನರವರು. ಅವರಿಂದ ನಾನು ಈ ಕಾರ್ಯವನ್ನು ಕ್ರಮಬದ್ಧವಾಗಿ, ಯಾವುದೇ ವಿಷಯದಲ್ಲೂ ಸಂಧಾನ ಮಾಡಿಕೊಳ್ಳದೆ, ಶಿಸ್ತಿನಿಂದ ಕೆಲಸ ಮಾಡಲು ಸಾಧ್ಯವಾಯಿತು. ಅವರ ಸ್ವಂತ ಭಂಡಾರದಲ್ಲಿದ್ದ ಅಮೂಲ್ಯ ಗ್ರಂಥಗಳನ್ನು ಉಪಯೋಗಿಸಿಕೊಳ್ಳಲು ನನಗೆ ಅನುಮತಿ ಕೊಟ್ಟದ್ದಲ್ಲದೆ ಪ್ರತಿ ಹಂತದಲ್ಲೂ ನನ್ನ ಕಾರ್ಯವನ್ನು ಪರಿಶೀಲಿಸಿ, ಸೂಕ್ತ ತಿದ್ದುಪಡಿಗಳನ್ನು ಸೂಚಿಸಿದರು. ಅವರಿಗೆ ನನ್ನ ಕೃತಜ್ಞತಾಪೂರ್ವಕ ಪ್ರಣಾಮಗಳು.

ನನ್ನ ಈ ಕೆಲಸದಲ್ಲಿ ಸಹಕಾರ ನೀಡಿದ–

ನಾನು ಮೈಸೂರಿಗೆ ಭೇಟಿ ನೀಡಿದಾಗಲೆಲ್ಲ ಆಶ್ರಯನೀಡಿ, ಪ್ರೋತ್ಸಾಹ ನೀಡಿದ ಆಪ್ತಮಿತ್ರರಾದ ಶ್ರೀಯುತ ಹೇಮಂತ್ ಮೆಹ್ತಾ ಅವರಿಗೆ,

ನನ್ನ ಪತ್ನಿ ಸೌ. ಸೌಮ್ಯ ಮತ್ತು ನನಗೆ ಕಂಪ್ಯೂಟರ್ ಉಪಯೋಗಿಸುವ ವಿಧಾನಗಳಲ್ಲಿ ಸಹಾಯ ಮಾಡಿದ ನನ್ನ ಮಕ್ಕಳಾದ ಚಿ. ಶ್ವೇತ ಮತ್ತು ಚಿ. ವಿಕ್ರಮ್ ಕುಲಕರ್ಣಿಗೆ,

ಈ ಗ್ರಂಥವನ್ನು ಪ್ರಕಾಶನ ಮಾಡಲು ಒಪ್ಪಿದ ಪ್ರಿಸಮ್ ಬುಕ್ಸ್ ಸಂಸ್ಥೆಯವರಿಗೆ

ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ–ಸಹಕಾರಗಳನ್ನು ನೀಡಿದ ಅಭಿಮಾನಿಗಳಿಗೆ

ನನ್ನ ಕೃತಜ್ಞತೆಗಳು.

ಕ್ಷೇತ್ರಕಾರ್ಯವಿಲ್ಲದೆ ಉಲ್ಲೇಖಿಸಿದ ಗ್ರಂಥಗಳ ಪರಿಮಿತಿಯಲ್ಲಿ ಕೈಗೊಂಡ ಈ ಕೆಲಸ ನನ್ನ ಪ್ರಥಮ ಪ್ರಯತ್ನ. ಸಾಕಷ್ಟು ಅರೆ–ಕೊರೆಗಳಿವೆಯೆಂಬುದು ನನಗೆ ತಿಳಿದಿದೆ. ರಚನಾತ್ಮಕ ಸಲಹೆ–ಸೂಚನೆಗಳನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸುವೆ.

ಈ ಗ್ರಂಥವು ಹರಿದಾಸ ಸಾಹಿತ್ಯ ಸಂಶೋಧನೆಯಲ್ಲಿ ದುಡಿಯುವವರಿಗೆ ಕಿಂಚಿತ್ತಾದರೂ ಉಪಯುಕ್ತವಾದರೆ ನಾನು ಧನ್ಯ.

–ಜಿ. ವೆಂಕಟೇಶ್

Rarest Archiver

# ಕಠಿಣ ಶಬ್ದಾರ್ಥಗಳು

## ಅ

**ಅ** ಮೂಲಸ್ವರ, ಮೂಲಾಕ್ಷರ; ಅಂಬರ; ವಿಷ್ಣು
**ಅಂಕ** ತೊಡೆ; ಚಿನ್ಹೆ; ಬಿರುದು
**ಅಂಕಣ** ನಾಲ್ಕು ಕಂಬಗಳ ನಡುವಿನ ಸ್ಥಳ
**ಅಂಕದರ್ಪ** ಹೆಚ್ಚಿನ ಅಭಿಮಾನ
**ಅಂಕರಹ** ಯಾವಾಗಲೂ; ಮಿತಿಮೀರಿ
**ಅಂಕವಣಿ, ಅಂಕಾವಾಳೆ** (ಕುದುರೆಯ) ರಿಕಾಪು, ಕುದುರೆಯ ಮೇಲಿನ ತಡಿ, ಪೀಠ, ಆಸನ
**ಅಂಕವತ್ಸಲ** ಪ್ರೀತಿಯಿಂದ ಕೂಡಿದ; ಬಿರುದುಳ್ಳವನು
**ಅಂಕಿತ** ತಪ್ತ ಮುದ್ರಾಂಕಿತ, ಗುರುಗಳಿಂದ ದೊರೆತ ಮುದ್ರಿಕೆ
**ಅಂಕುರ** ಮೊಳಕೆ, ಚಿಗುರು, ಹುಟ್ಟು
**ಅಂಕುರಿಸು** ಮೊಳಕೆಯೊಡೆ
**ಅಂಕೆ** ಹತೋಟಿ, ಹಿಡಿತ, ಆಜ್ಞೆ, ಅಪ್ಪಣೆ; ಸಂಖ್ಯೆ, ಗುರುತು
**ಅಂಕೆಯವ** ಅಧೀನದವ, ಗುರುತಿನವ
**ಅಂಗ** ದೇಹ; ರೀತಿ
**ಅಂಗಜ** ಮನ್ಮಥ
**ಅಂಗಜನಚಾಪ** ಮನ್ಮಥನ ಬಿಲ್ಲು
**ಅಂಗಜನಯ್ಯ, ಅಂಗಜಪಿತ** ಕಾಮನ ತಂದೆ– ವಿಷ್ಣು
**ಅಂಗಜಲುಬ್ಧಕ** ಕಾಮಾಸಕ್ತ, ವಿಷಯಲೋಲುಪ; ಮನ್ಮಥನೆಂಬ ಬೇಡ
**ಅಂಗಜಶರತಾಪ** ಮನ್ಮಥನ ಬಾಧೆ
**ಅಂಗಜಾವರಸುತ** ಪಾರ್ವತಿಯ ಮಗ–ಗಣಪತಿ
**ಅಂಗಡಿಯಿಡು** ಬಯಲು ಮಾಡು
**ಅಂಗಣ** ಅಂಗಳ
**ಅಂಗದ** ತೋಳಭಾಪುರಿ; ವಾಲಿಯ ಮಗ
**ಅಂಗದಂಡನೆ** ಶರೀರವನ್ನು ಬಳಲಿಸುವುದು (ಕಾಯಕ್ಲೇಶ)
**ಅಂಗದಪ** ರಾಮ
**ಅಂಗದೇಶ** ದೇಹ; ಒಂದು ದೇಶದ ಹೆಸರು
**ಅಂಗದೊಳಿರು** ಸಾಯುಜ್ಯಮುಕ್ತಿ ಹೊಂದು; ಶರೀರದಲ್ಲಿ ಸೇರು
**ಅಂಗನಾಂಬರಹರಣ** ಗೋಪಿಯರ ವಸ್ತ್ರಾಪಹರಣ ಮಾಡಿದವನು–ಕೃಷ್ಣ
**ಅಂಗನೆ** ಸ್ತ್ರೀ, ಪತ್ನಿ
**ಅಂಗಯಿಸು** ಬಯಸು
**ಅಂಗರಾಗ** ದೇಹಕ್ಕೆ ಲೇಪಿಸುವ ಸುಗಂಧ
**ಅಂಗವಟಿ** ಅತಿಚೆಲುವೆ
**ಅಂಗವಟ್ಟ** ಶರೀರ
**ಅಂಗವೆಲ್ಲಕಂಗಳುಳ್ಳವ** ಮೈಯೆಲ್ಲಾ ಕಣ್ಣುಳ್ಳವ– ಇಂದ್ರ
**ಅಂಗಸಂಗಿ** ಹೆಂಡತಿ, ಸಹವಾಸಿ
**ಅಂಗಸಿಂಗ** ನರಸಿಂಹರೂಪಿ–ವಿಷ್ಣು
**ಅಂಗಳು** ತಾಳುಗೆ; ಬಾಯಿಯ ಮೇಲ್ಭಾಗ
**ಅಂಗಾರ** ಬೆಂಕಿ, ಕೆಂಡ, ಇದ್ದಲು; ಮಾಧ್ವರು ಹಣೆಯಲ್ಲಿ ಧರಿಸುವ ಇದ್ದಲಿನ ರೇಖೆ, ಧೂಪ ಶೇಷ
**ಅಂಗಾರಕ** ಮಂಗಳಗ್ರಹ
**ಅಂಗಿರಸ್** ಸಪ್ತರ್ಷಿಗಳಲ್ಲಿ ಒಬ್ಬ
**ಅಂಗುಟ** ಹೆಬ್ಬೆಟ್ಟು

Rarest Archiver

**ಅಂಗುಟಾಗ್ರ** ಹೆಬ್ಬೆರಳಿನ ಮೇಲು ಭಾಗ
**ಅಂಗುಲಿ** ಬೆರಳು
**ಅಂಗುಲೀಯಕ** ಉಂಗುರ
**ಅಂಗುಷ್ಠ** ಹೆಬ್ಬೆರಳು
**ಅಂಗುಳ್ಯ** ಉಂಗುರ
**ಅಂಗೈಯಲ್ಲಿಧ್ವಜಪದ್ಮ** ಇವು ಮಹಾಪುರುಷರ ಸಾಮುದ್ರಿಕ ಲಕ್ಷಣಗಳು
**ಅಂಗೈಸು** ಜತೆಯಾಗು
**ಅಂಘ್ರಿ** ಕಾಲು, ಹೆಜ್ಜೆ, ಪಾದ
**ಅಂಘ್ರಿಕಂಜಾತ, ಅಂಘ್ರಿಕಮಲ** ಪಾದಪದ್ಮ
**ಅಂಘ್ರಿಜಲ** ಗಂಗೆ, ಪಾದೋದಕ
**ಅಂಘ್ರಿಪ** ಪಾದದಿಂದ ನೀರು ಕುಡಿಯುವ–ವೃಕ್ಷ, ಮರ
**ಅಂಘ್ರಿಸುಯುಗ್ಮ** ಪಾದಕಮಲಗಳು
**ಅಂಚಲ** ಸೆರಗು, ಅಂಚು, ಕೊನೆ (ತುದಿ)
**ಅಂಚಿಗಂಚು** ಕೊಟ್ಟಕೊನೆ
**ಅಂಚಿತ** ಮನೋಹರವಾದ, ಹೊಳೆಯುವ; ಪ್ರಸಿದ್ಧವಾದ
**ಅಂಚೆ** ಹಂಸ
**ಅಂಚೆಗಮನ** ವಾಯುದೇವರು, ಬ್ರಹ್ಮದೇವರು
**ಅಂಚೆಗಮನೆ** ಹಂಸಗಮನೆ, ಹಂಸದಂತೆ ನಡೆಯುವವಳು; ಸರಸ್ವತಿ, ಹಂಸವಾಹನೆ
**ಅಂಚೆದುಪ್ಪಳ** ಹಂಸದ ಮೆತ್ತನೆಯ ಕೂದಲು/ಗರಿ
**ಅಂಚೆವಾಹನ** ಹಂಸವಾಹನ
**ಅಂಜನ** ಕಾಡಿಗೆ, ಕಪ್ಪು; ನಿಧಿ–ನಿಕ್ಷೇಪಾದಿಗಳನ್ನು ಕಂಡು ಹಿಡಿಯಲು ಕಣ್ಣಿಗೆ ಹಚ್ಚಿಕೊಳ್ಳುವ ಮಂತ್ರಪೂತವಾದ ಕಪ್ಪು; ಅದೃಶ್ಯನಾಗುವುದೇ ಮೊದಲಾದ ಅದ್ಭುತ ಶಕ್ತಿಯನ್ನು ಕೊಡುವ ಮಂತ್ರಪೂತವಾದ ಕಪ್ಪು; ಆಂಜನೇಯನ ತಾಯಿ
**ಅಂಜನಾಭಖಂಡ** ಹನುಮನುದಿಸಿದ ಖಂಡ; ಭರತಖಂಡ
**ಅಂಜನಾಸುತ** ಅಂಜನೆಯ ಮಗ, ಆಂಜನೇಯ
**ಅಂಜನೆ** ಆಂಜನೇಯನ ತಾಯಿ
**ಅಂಜಲಿ** ಕೈಬೊಗಸೆ, ಜೋಡಿಸಿದ ಕೈಗಳು
**ಅಂಜಲೀಬದ್ಧ** ಕೈಮುಗಿದಿರುವಿಕೆ
**ಅಂಟಣಿಸು** ಹೊಂದಿಸು, ಕೂಡಿಸು
**ಅಂಡ** ಶಿವ, ವಿಶ್ವ; ತತ್ತಿ, ಮೊಟ್ಟೆ
**ಅಂಡಕಬಾಹ** ಬ್ರಹ್ಮಾಂಡಬಾಹ
**ಅಂಡಜ** ಬ್ರಹ್ಮ, ಗರುಡ
**ಅಂಡಜಧ್ವಜ** ಗರುಡನ ಬಾವುಟ, ಗರುಡಧ್ವಜನಾದ ಶ್ರೀಹರಿ
**ಅಂಡಜರಾಜವರೂಥ** ಪಕ್ಷಿರಾಜನಾದ ಗರುಡನನ್ನೇ ವಾಹನವಾಗಿ ಉಳ್ಳಾತ–ವಿಷ್ಣು
**ಅಂಡಜವಾಹನ, ಅಂಡಜಾಸನ** ಗರುಡವಾಹನ–ವಿಷ್ಣು
**ಅಂಡಜಾಧಿಪ** ಪಕ್ಷಿರಾಜ–ಗರುಡ
**ಅಂಡಲೆ** ಕಾಡು, ಹಟಮಾಡು; ಕ್ಲೇಶಪಡು, ಗೊತ್ತು ಗುರಿಯಿಲ್ಲದೆ ಅಲೆದಾಡು; ನೋಯಿಸು
**ಅಂಡೋದಕ** ಬ್ರಹ್ಮಾಂಡವನ್ನು ಬಳಸಿದ ನೀರು
**ಅಂತಃಸ್ಥ, ಅಂತಸ್ಥ** ಒಳಗಿನ, ರಹಸ್ಯ, ಅಡಕವಾದ
**ಅಂತಕ** ಯಮ
**ಅಂತಕಭಯ** ಮೃತ್ಯುಭಯ, ಯಮನಭಯ
**ಅಂತಕಾಪುರ** ಯಮಪುರಿ
**ಅಂತಕ್ಕಚ್ಚು** ಅಂತಃಕರಣಕ್ಕೆ ಹಚ್ಚಿಕೊ, ಪ್ರೀತಿಸು
**ಅಂತರ** ಗುಟ್ಟು; ವ್ಯತ್ಯಾಸ; ಆಲಸ್ಯ; ದೂರ
**ಅಂತರಂಗದಾಸೆ** ಉತ್ಕಟಪ್ರೇಮ
**ಅಂತರಾಯ** ವಿಘ್ನ, ತೊಂದರೆ
**ಅಂತರಾವೇದಿ** ಅಂತರ್ವೇದಿ; ಗಂಗಾ ಯಮುನಾ ನದಿಗಳ ನಡುವಣ ಪ್ರದೇಶ–"ಬ್ರಹ್ಮಾವರ್ತ"
**ಅಂತರಿಕ್ಷ** ಆಕಾಶ
**ಅಂತರ್ಗತ** ಒಳಗೊಂಡ

Rarest Archiver

**ಅಂತರ್ಯಾಮಿ** ಪರಮಾತ್ಮ, ಒಳಗೆ ಅಡಗಿದವ

**ಅಂತವಿಲ್ಲದಪದ** ಮುಕ್ತಿ

**ಅಂತಸ್ಸು** ಅಂತರಂಗ

**ಅಂತಿಗಂತೆ** ಯಮನೇ ಅಹುದಂತೆ

**ಅಂತಿಜ<ಅಂತ್ಯಜ** ಶೂದ್ರ ಜನ್ಮ (ನಾರದರಿಗೆ ಪೂರ್ವ ಜನ್ಮ); ಹೊಲೆಯ; ಕೊಲೆಗಡುಕ

**ಅಂತಿಯ** ಅಂತ್ಯ, ಕೊನೆ

**ಅಂತು** ಅಂತ್ಯ, ಕೊನೆ, ತುದಿ; ಗುಟ್ಟು; ಮಹಿಮೆ

**ಅಂತುಮಹಿಮೆ** ನಿಗೂಢ ಮಹಿಮೆ, ವೇದೋಕ್ತ ಮಹಿಮೆ

**ಅಂತೇವಾಸಿ** ಗುರುವಿನ ಮನೆಯಲ್ಲೇ ಇದ್ದು ಓದುವ ಶಿಷ್ಯ; ಚಂಡಾಲ

**ಅಂತ್ಯಜಳು** ಹೊಲತಿ, ಶೂದ್ರಳು; ಚಂಡಾಲ ಸ್ತ್ರೀ

**ಅಂದ** ಚೆಲುವು, ಸುಂದರ

**ಅಂದಣ** ಪಲ್ಲಕ್ಕಿ, ಮೇನೆ

**ಅಂದವಿಲ್ಲದ** ಮೈಯಲ್ಲಿ ನೆಟ್ಟಗಿಲ್ಲದ

**ಅಂದು** ನಿಲುಕು, ಎಟುಕು; ಆಡಿ

**ಅಂದುಗೆ** ಕಾಲಿನ ಆಭರಣ, ಗೆಜ್ಜೆ

**ಅಂಧ** ಕುರುಡ

**ಅಂಧಂತಮಸು** ನರಕದಲ್ಲಿಯ ಅತಿ ಕತ್ತಲೆಯ ಭಾಗ, ಮುಖ್ಯ ನರಕಗಳಲ್ಲೊಂದು

**ಅಂಧಃತಾಮಿಸ್ರ** ಅಂಧಂತಮಸ್ಸು, ಕಗ್ಗತ್ತಲೆಯ ನರಕ; (ನಾನು ಸತ್ತರೂ ಯಥಾರ್ಥ ಜ್ಞಾನಿಗಳನ್ನು ಸ್ವಸ್ಥವಾಗಿ ಇರಗೊಡಲಾರೆ ಎನ್ನುವ ಆಕ್ರೋಶದ ವಿಸ್ತಾರ )

**ಅಂಧಕ** ಕುರುಡ

**ಅಂಧಕಜಾತರು** ಕುರುಡನ ಮಕ್ಕಳು; ಧೃತರಾಷ್ಟ್ರನ ಮಕ್ಕಳಾದ ಕೌರವರು

**ಅಂಧಕನಸುತ** ದುರ್ಯೋಧನ

**ಅಂಧಕರೈವರು** ಪಂಚೇಂದ್ರಿಯಗಳು

**ಅಂಧಕೂಪ** ಕತ್ತಲಿನಿಂದ ತುಂಬಿರುವ ಬಾವಿ; ಹಾಳು ಬಾವಿ; ನರಕ

**ಅಂಧತ್ವ** ಕುರುಡುತನ

**ಅಂಧನೃಪನಂದನ** ದುರ್ಯೋಧನ

**ಅಂಧರಾಯ** ಧೃತರಾಷ್ಟ್ರ

**ಅಂಬ** ಹಸು, ಮಾತೆ, ತಾಯಿ

**ಅಂಬಕ** ಕಣ್ಣು

**ಅಂಬಕತ್ರಯ** ಮೂರುಕಣ್ಣುಳ್ಳವನು–ಶಿವ

**ಅಂಬಟೆಕಾಯಿ** ಸಣ್ಣಸಣ್ಣ ಮಾವಿನ ಕಾಯಿಯಂತಹ ಹುಳಿಗಾಯಿ (ಉಪ್ಪಿನಕಾಯಿ ಹಾಕುವ ರೂಢಿಯಿದೆ)

**ಅಂಬರ** ಆಕಾಶ; ವಸ್ತ್ರ; ಹತ್ತಿರ

**ಅಂಬರಕೇಶ** ಶಿವ

**ಅಂಬರಕೇಳಿ** ಮಾಯಾಜಾಲ; ಕ್ಷಣಿಕಸುಖ

**ಅಂಬರಗ್ಗಣೆ** ದೇವಗಂಗೆ

**ಅಂಬರಗ್ಗವಣ** ಆಕಾಶಗಂಗೆ

**ಅಂಬರದಹನ** ಆಕಾಶದಲ್ಲಿ ಇದ್ದ ತ್ರಿಪುರಗಳನ್ನು ದಹಿಸಿದವ–ಶಿವ

**ಅಂಬರಭೂಮಿವಿಹಾರಿಣಿ** ಆಕಾಶ ಭೂಮಿಗಳಲ್ಲಿ ವಿಹರಿಸುವವಳು–ದುರ್ಗಾದೇವಿ, ಗಂಗೆ

**ಅಂಬರಮಣಿ** ಸೂರ್ಯ

**ಅಂಬರಮಾನಿ** ಆಕಾಶಕ್ಕೆ ಅಭಿಮಾನಿಯಾದ ಗಣಪತಿ

**ಅಂಬರರಾಜ** ಆಕಾಶರಾಜ

**ಅಂಬರಾಂಬರ** ದಿಗಂಬರ, ಬೌದ್ಧಾವತಾರ

**ಅಂಬರಾದ್ಯರು** ಪಂಚಭೂತಗಳು, ಭೂತಾಭಿಮಾನಿ ದೇವತೆಗಳು

**ಅಂಬರಾಧಿಪ** ದೇವತೆಗಳ ಒಡೆಯ; ಅಂತರಿಕ್ಷಾಭಿಮಾನಿಯಾದ ಗಣಪತಿ

**ಅಂಬರಾಧೀಶ್ವರ** ಆಕಾಶಕ್ಕೆ ಅಭಿಮಾನಿದೇವನು–ಗಣಪತಿ

**ಅಂಬರೀಶವರದ** ವಿಷ್ಣು

**ಅಂಬರೇಶ** ಆಕಾಶರಾಜ, ಚಂದ್ರ

**ಅಂಬಷ್ಠ** ಮಾವುತ; ಕ್ಷೌರಿಕ

Rarest Archiver

**ಅಂಬಳ** ಜಗನ್ಮಾತೆ
**ಅಂಬಾ** ದೇವಿ, ತಾಯಿ
**ಅಂಬಾತನಯ, ಅಂಬಿಕಜ** ಪಾರ್ವತಿಯ ಪುತ್ರ–ಗಣಪತಿ
**ಅಂಬಿಕಾ** ಪಾರ್ವತಿ
**ಅಂಬಿಕಾಲಯ** ಕಾಳಿಯ ಗುಡಿ
**ಅಂಬಿಗ** ನಾವಿಕ
**ಅಂಬು** ನೀರು, ಗಂಗಾನದಿ; ಕರ; ಬಾಣ
**ಅಂಬುಕಣ** ನೀರಹನಿ
**ಅಂಬುಗುಳ್ಳೆ** ನೀರುಗುಳ್ಳೆ
**ಅಂಬುಚರ** ಮತ್ಸ್ಯಾವತಾರ–ವಿಷ್ಣು, ಮಚ್ಚರೂಪಿ; ನೀರಿನ ಸೆಳೆವು (ಸಂಸಾರವೆಂಬ ನೀರು)
**ಅಂಬುಜ** ಕಮಲ
**ಅಂಬುಜನಾಭ** ಪದ್ಮನಾಭರೂಪಿ ಪರಮಾತ್ಮ–ವಿಷ್ಣು (ಹೊಕ್ಕುಳಲ್ಲಿ ಕಮಲವಿದ್ದವ)
**ಅಂಬುಜನೇತ್ರ** ಕಮಲನಯನ–ವಿಷ್ಣು
**ಅಂಬುಜಭವ** ಬ್ರಹ್ಮ
**ಅಂಬುಜಭವವಿನುತ** ಬ್ರಹ್ಮನಿಂದ ಸ್ತುತಿಸಲ್ಪಡ ತಕ್ಕವನು
**ಅಂಬುಜಮಿತ್ರ** ಸೂರ್ಯ
**ಅಂಬುಜಮಿತ್ರತನಯ, ಅಂಬು** ಸೂರ್ಯನ ಮಗನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಅಂಬುಜವಲ್ಲಿ** ಲಕ್ಷ್ಮಿ
**ಅಂಬುಜಷಂಡ** ಕಮಲಗಳ ಸಮೂಹ
**ಅಂಬುಜಸಂಭವ** ಬ್ರಹ್ಮ
**ಅಂಬುಜಾ** ಲಕ್ಷ್ಮಿ
**ಅಂಬುಜಾಂಬಕ, ಅಂಬುಜಾಕ್ಷ** ಕಮಲದಂತೆ ಕಣ್ಣುಳ್ಳವನು–ವಿಷ್ಣು
**ಅಂಬುಜಾಕ್ಷಿ** ಕಮಲದಂತೆ ಸುಂದರವಾದ ಕಣ್ಣುಗಳುಳ್ಳವಳು, ಕಮಲಾಕ್ಷಿ
**ಅಂಬುಜಾಪ್ತ** ಸೂರ್ಯ
**ಅಂಬುಜಾರಿ** ಚಂದ್ರ
**ಅಂಬುಜಾರಿಧರ** ಶಿವ, ಚಂದ್ರಶೇಖರ
**ಅಂಬುಜಾಲಯಪತಿ** ಲಕ್ಷ್ಮೀಪತಿ–ಶ್ರೀಹರಿ
**ಅಂಬುಜಾಸನ** ಬ್ರಹ್ಮ
**ಅಂಬುಜೋದ್ಭವಪಿತ** ವಿಷ್ಣು
**ಅಂಬುದ** ಮೋಡ
**ಅಂಬುದಶ್ಯಾಮ** ಮೇಘಶ್ಯಾಮನಾದ ಶ್ರೀಹರಿ, ನೀಲವರ್ಣನಾದ ಕೃಷ್ಣ
**ಅಂಬುಧಿ** ಸಮುದ್ರ
**ಅಂಬುಧಿಜಾ** ಲಕ್ಷ್ಮಿ
**ಅಂಬುಮೊನೆ** ಬಾಣದ ತುದಿ
**ಅಂಬುರುಹ** ಕಮಲ
**ಅಂಬುರುಹನಾಭ** ಕಮಲನಾಭ–ವಿಷ್ಣು
**ಅಂಬುರುಹೋದ್ಭವ** ಬ್ರಹ್ಮ
**ಅಂಬುವಾರಾಸಿ** ನೀರಿನ ಸಮುದ್ರ
**ಅಂಬುಶಾಯಿ** ನಾರಾಯಣ
**ಅಂಭೋಧಿ** ಸಮುದ್ರ
**ಅಂಭೋಧಿಶಯನ** ವಿಷ್ಣು
**ಅಂಭೋನಿಧಿ** ಸಮುದ್ರ
**ಅಂಭೋರುಹ** ಕಮಲ
**ಅಂಭೋಹ ವೀಧಿ** ಮೇಘಮಾರ್ಗ
**ಅಂಭ್ರಣಿ** ವೇದಾಭಿಮಾನಿ–ಲಕ್ಷ್ಮೀದೇವಿ, ಸೃಷ್ಟಿಯ ಪ್ರಾರಂಭದಲ್ಲಿ ಯೋಗನಿದ್ರಾರೂಢನಾದ ಶ್ರೀಹರಿಯನ್ನು ಎಬ್ಬಿಸುವ ಲಕ್ಷ್ಮೀದೇವಿಯ ರೂಪ; ವೇದವ್ಯಾಸರ ಪತ್ನಿ; ಸರಸ್ವತಿ; ಪಾದ ಧೂಳು
**ಅಂಶ** ಅವತಾರ ರೂಪ
**ಅಂಶಿಗೆ** ಮೂಲರೂಪ
**ಅಂಶು** ಕಿರಣ
**ಅಂಶುಮಾಲಿ** ಸೂರ್ಯ
**ಅಂಸ** ಹೆಗಲು
**ಅಉಮ** ಈ ಮೂರು ಅಕ್ಷರಗಳು ಸೇರಿ ಆದದ್ದು ಓಂಕಾರ

Rarest Archiver

**ಅಕಟ** ಆಶ್ಚರ್ಯ, ಉದ್ಗಾರ
**ಅಕಟಕಟ** ಅಯ್ಯಯ್ಯೋ
**ಅಕಳಂಕ** ಕಳಂಕವಿಲ್ಲದ, ನಿರ್ಮಲ
**ಅಕಾಮ್ಯ** ಅಪೇಕ್ಷೆಯಿಲ್ಲದ
**ಅಕಾಯ** ನಿರಾಕಾರ, ಅಪ್ರಾಕೃತ ಶರೀರ
**ಅಕಿಂಚನ** ಬಹಳ ಬಡವ, ದಟ್ಟ ದರಿದ್ರ
**ಅಕುಂಠಿತ** ಕುಂದಿಲ್ಲದ, ನಾಶವಾಗದ
**ಅಕುಟಿಲ** ಸತ್ಯಮಾರ್ಗವನ್ನನುಸರಿಸುವವ, ವಕ್ರತೆಯಿಲ್ಲದವನು, ದೋಷವಿಲ್ಲದವ
**ಅಕುಟಿಲಾತ್ಮಕ** ಕಪಟರಹಿತ, ನಿಖಿಲದೋಷ ದೂರ–ಶ್ರೀಹರಿ
**ಅಕುತೋಭಯ** ಯಾವ ಕಾರಣದಿಂದಲು ಭಯವಿಲ್ಲದವನು
**ಅಕೂಪಾರ** ಆಮೆ; ಆಳವಲ್ಲದ
**ಅಕೃತ** ಅಪಕ್ವ
**ಅಕೃತ್ರಿಮ** ಕೃತ್ರಿಮವಿಲ್ಲದ
**ಅಕ್ಕಜ** ಆಶ್ಚರ್ಯ; ಅಸೂಯೆ
**ಅಕ್ಕಟ** ಅಯ್ಯೋ
**ಅಕ್ಕರ** ಅಕ್ಷರ, ವರ್ಣ; ಪ್ರೀತಿ; (ನನ್ನ) ಹಣೆಯ ಬರಹ
**ಅಕ್ಕರತಿ** ಅತುಲವಾದ ಪ್ರೀತಿ
**ಅಕ್ಕರೆ** ಪ್ರೀತಿ
**ಅಕ್ಕಸ** ರೋಷ, ಆಕ್ರೋಶ; ಕನಿಕರದಿಂದಕೂಡಿದ; ಮೊರೆ
**ಅಕ್ಕಳೆ** ಕವೆ
**ಅಕ್ಕಿಗೆ ತಿರುಗುವವ** ಭಿಕ್ಷಾಟನೆ ಮಾಡುವವ, ಯಾಯಾವಾರ ಮಾಡುವವ
**ಅಕ್ಕಿಪಿಲ್ಲಿ** ಅಕ್ಕಿ ಆಕಾರದ ಒಂದು ಬಗೆಯ ಕಾಲುಂಗುರ
**ಅಕ್ಕಿಸು** ಪಡೆದುಕೊ, ಭಿಕ್ಷಾಟನೆ ಮಾಡು
**ಅಕ್ಕೆ** ಅಳುವಿಕೆ, ವಿಲಾಪ
**ಅಕ್ರೂರಜ** ಅಕ್ರೂರನ ಮಗ
**ಅಕ್ರೂರವರದ** ವಿಷ್ಣು
**ಅಕ್ಲೇಶ** ದುಃಖರಹಿತನಾದವನು
**ಅಕ್ಷ** ಕಣ್ಣು; ಅಚ್ಚು; ಅಕ್ಷಕುಮಾರ
**ಅಕ್ಷಕುವರ** ರಾವಣನ ಒಬ್ಬ ಮಗ
**ಅಕ್ಷತನಾರೇರು, ಅಕ್ಷತನಾರಿಯ** ಅಕ್ಷತಯೋನಿ ಸ್ತ್ರೀಯರು, ಋತುಮತಿಯಾಗಿರದ ಕನ್ನಿಕೆಯರು (ನರಕಾಸುರನು ಸೆರೆಯಲ್ಲಿ ಇಡಲ್ಪಟ್ಟಿದ್ದ ಋತುಮತಿಯಾಗಿರದ ಹದಿನಾರುಸಾವಿರ ಕನ್ಯೆಯರು)
**ಅಕ್ಷತೆ** ಮೊನೆ ಮುರಿಯದ ಅಕ್ಕಿ; ಅರಿಸಿನ ಅಥವಾ ಕುಂಕುಮ ಲೇಪಿತ ಮಂತ್ರಿತ ಅಕ್ಕಿ; ಹಣೆಯ ಬೊಟ್ಟು
**ಅಕ್ಷಮಣ** ನಿತ್ಯತ್ವ ರಕ್ಷಕ, ಕ್ಷಮೆಗೆ ಅನರ್ಹ
**ಅಕ್ಷಯ** ನಾಶವಾಗದಿರುವ; ಅರವತ್ತು ಸಂವತ್ಸರ ಗಳಲ್ಲಿ ಒಂದು; ರಾವಣನ ಮಗ ಅಕ್ಷಕುಮಾರ
**ಅಕ್ಷಯಫಲ** ದ್ರೌಪದಿಗೆ ದೂರ್ವಾಸಾತಿಥ್ಯದ ಪ್ರಕರಣದಲ್ಲಿ ಮತ್ತು ದುಃಶಾಸನನಿಂದ ಒದಗಿದ ಮಾನಭಂಗದ ಪ್ರಕರಣದಲ್ಲಿ ದಾನ ಮಾಡಿದ ಅಕ್ಷಯ ಪಾತ್ರೆ ಮತ್ತು ವಸ್ತ್ರ
**ಅಕ್ಷಯವಂತ** ನಿತ್ಯತ್ವವುಳ್ಳವನು
**ಅಕ್ಷಯಾಂಬರ** ಹರಿಹಿಂಗದ ಉಡಿಗೆ, ಅಕ್ಷಯವಸ್ತ್ರ
**ಅಕ್ಷರ** ನಾಶವಿಲ್ಲದವನು, ದೇಹ ನಾಶವಿಲ್ಲದ–ಲಕ್ಷ್ಮಿ
**ಅಕ್ಷರಕ್ಷರವಿವೇಕ** ಅಕ್ಷರ–ಕ್ಷರಗಳ ಸರಿಯಾದ ಜ್ಞಾನ
**ಅಕ್ಷರಪುರುಷ** ರಮಾದೇವಿಯ ಗಂಡ ಶ್ರೀಹರಿ
**ಅಕ್ಷರಳು** ರಮಾದೇವಿ, ತ್ರಿಜಗನ್ಮಾತೆ ಲಕ್ಷ್ಮಿ, ತ್ರಿಗುಣಾಭಿಮಾನಿ
**ಅಕ್ಷರಿ** ವಿದ್ವಾಂಸ, ವಿದುಷಿ
**ಅಕ್ಷರೇಷ್ಠ** ನಾಶವಿಲ್ಲದ, ಬಲಾಢ್ಯ
**ಅಕ್ಷಾಸುರಾಂತಕ** ರಾವಣನ ಮಗ ಅಕ್ಷಕುಮಾರನಿಗೆ ಯಮಸ್ವರೂಪಿ–ಹನುಮಂತ
**ಅಕ್ಷಿ** ಕಣ್ಣು
**ಅಕ್ಷಿತ್ರಯ** ಮುಕ್ಕಣ್ಣ, ಶಿವ

Rarest Archiver

**ಅಕ್ಷೀಣ** ನಾಶವಿಲ್ಲದ, ಶಕ್ತನಾದ

**ಅಕ್ಷೋಭ್ಯ** ಕ್ಷೋಭೆಗೊಳಗಾಗದವನು

**ಅಕ್ಷೋಹಿಣಿ** 21870 ಆನೆಗಳು + 21870 ರಥಗಳು + 65610 ಕುದುರೆಗಳು + 109350 ಕಾಲಾಳುಗಳಿರುವ ಸೈನ್ಯ ಸಮೂಹ

**ಅಖಂಡನ** ಭೇದರಹಿತನಾದ ಅಥವಾ ವ್ಯಾಪ್ತನಾದ–ವಿಷ್ಣು

**ಅಖಂಡಲೇಶ** ಸಮಸ್ತಕ್ಕೂ ಒಡೆಯ, ಶ್ರೀಹರಿ

**ಅಖಂಡೈಕ** ಪರಿಪೂರ್ಣ

**ಅಖಿಲ(ಳ)** ಇಡಿಯಾದ, ಸಮಸ್ತ

**ಅಖಿಳಖಿಳ** ಅಭಂಗವಾದ, ಸಮಗ್ರವಾದ

**ಅಖಿಳದೋಷನಿರ್ಧೂತ** ಸಮಸ್ತ ಕಳಂಕವನ್ನು ನಿವಾರಿಸುವವನು

**ಅಖಿಳವಾದ್ಯ** ವಾದ್ಯಗಳಲ್ಲಿ ನಾಲ್ಕು ವಿಧಗಳಿವೆ; ಎಲ್ಲ ದೇವತಾ ವಾದ್ಯಗಳು, ಸಮಸ್ತ ವಾದ್ಯಗಳು

**ಅಖಿಳಾಗಮಸ್ತುತ** ಎಲ್ಲ ವೇದಗಳಿಂದಲೂ ಹೊಗಳಲ್ಪಟ್ಟ

**ಅಗ** ಬೆಟ್ಟ

**ಅಗಜಾವಲ್ಲಭ** ಪಾರ್ವತಿಯ ಗಂಡ–ಶಿವ

**ಅಗಜೆ** ಪಾರ್ವತಿ

**ಅಗಜೆನಂದನ** ಗಣಪತಿ, ಷಣ್ಮುಖ

**ಅಗಜೇಶಶರಕಾಲ** ಶಿವಧನುಸ್ಸು ಮುರಿದವನು–ರಾಮ

**ಅಗಣಿ** ಅಗುಳಿ, ಚಿಲಕ

**ಅಗಣಿತ** ಎಣಿಕೆಗೆ ಮೀರಿದುದು, ಲೆಕ್ಕವಿಲ್ಲದಷ್ಟು, ಅಸಂಖ್ಯಾತ

**ಅಗಣಿತಗುಣಧಾಮ** ಅನಂತ ಗುಣಗಳಿಗೆ ಮನೆಯಾದವನು, ನಿಲಯನಾದವನು –ಶ್ರೀಹರಿ

**ಅಗಣಿತಪಾದ** ಮಿತಿಯಿಲ್ಲದವ; ದೊಡ್ಡಪಾದದವನು–ವಿಷ್ಣು

**ಅಗಣಿತಸದ್ಗುಣ** ಲೆಕ್ಕವಿಲ್ಲದ ಸದ್ಗುಣಗಳಿಂದ ಕೂಡಿದವ, ಪೂರ್ಣನಾದವ, ಪರಮಾತ್ಮ–ಶ್ರೀಹರಿ

**ಅಗದ** ರೋಗವಿಲ್ಲದ, ಔಷಧ

**ಅಗದಂಕರ** ಔಷಧ ನೀಡುವವ, ವೈದ್ಯ

**ಅಗಮ್ಯ** ಬುದ್ಧಿಗೆಟುಕದ, ಹೋಗಿಸೇರಲಾಗದ

**ಅಗಮ್ಯಗೋಚರ** ದುರ್ಲಭವಾಗಿ ಕಾಣುವ

**ಅಗರು** ಒಂದು ಜಾತಿಯ ಸುಗಂಧದ ಮರ, ಸುಗಂಧ ದ್ರವ್ಯ

**ಅಗಳ** ಮಿತಿಮೀರಿದ

**ಅಗಿಲ** ಭಯಗ್ರಸ್ತ

**ಅಗ್ಗ** ಶ್ರೇಷ್ಠ; ಸುಲಭ ಬೆಲೆಯ

**ಅಗ್ಗಣಿ<ಅಗ್ಗವಣಿ** ಪರಿಶುದ್ಧ ನೀರು, ಪೂಜೆಯ ನೀರು

**ಅಗ್ಗರಜ** ಅಗ್ರಜ, ಅಣ್ಣ

**ಅಗ್ಗಳ** ಶ್ರೇಷ್ಠ, ದೊಡ್ಡ, ಬಲಶಾಲಿ

**ಅಗ್ಗಳಿಕೆ** ಹೆಚ್ಚುಗಾರಿಕೆ, ದೊಡ್ಡಸ್ತಿಕೆ

**ಅಗ್ಗಳೆಯ** ಶ್ರೇಷ್ಠ

**ಅಗ್ನಿಜೆ** ಯಜ್ಞಕುಂಡದಿಂದ ಹುಟ್ಟಿದವಳು–ದ್ರೌಪದಿ

**ಅಗ್ನಿನೇತ್ರ** ಶಿವ, ನರಸಿಂಹ, ದುರ್ಗೆ; ಈ ಮೂವರಿಗೂ ಮೂರನೆಯದಾದ ಅಗ್ನಿನೇತ್ರ ವಿದೆ

**ಅಗ್ನಿಹೋತ್ರ** ಯಜ್ಞ

**ಅಗ್ರ** ಮೊದಲನೆಯ, ಮುಖ್ಯ

**ಅಗ್ರಗಣ್ಯ** ಎಲ್ಲಕ್ಕೂ ಹಿರಿಯನೆಂದು ಎಣಿಸಲ್ಪಡುವ, ಶ್ರೇಷ್ಠ

**ಅಗ್ರಜ** ಅಣ್ಣ

**ಅಗ್ರಜಳು** ಹಿರಿಯವಳು, ಅಕ್ಕ

**ಅಗ್ರಣಿ** ಶ್ರೇಷ್ಠ, ಮುಂದಾಳು

**ಅಗ್ರಪೂಜೆ** ಮೊದಲ ಪೂಜೆ; ಯಜ್ಞಾರಂಭದಲ್ಲಿ ಸಲ್ಲಿಸುವ ಸನ್ಮಾನ, ಹೆಚ್ಚಿನ ಸನ್ಮಾನ

**ಅಗ್ರಹಾರ** ವಿಪ್ರವಸತಿಯ ಬಡಾವಣೆ, ವಿಪ್ರರ ಊರು

**ಅಗ್ರೇಸರರು** ಶ್ರೇಷ್ಠರು, ಮುಂದಾಳುಗಳು

Rarest Archiver

**ಅಗ್ರೋದಕ** ಮೀಸಲು ನೀರು, ದೇವರ ಪೂಜೆಗೆ ಮೀಸಲಾದ ನೀರು

**ಅಘ** ಪಾಪ, ತಪ್ಪು; ದುಃಖ,

**ಅಘಕಕ್ಷಗಾಂಗೇಯ** ಪಾಪಗಳೆಂಬ ಕಾಡಿಗೆ ಭೀಷ್ಮ, ಅಗ್ನಿ, ಭಗವಂತ; ಪಾಪಾರಣ್ಯ ದಹನ

**ಅಘಕರಿಗೆಕೇಸರಿ** ಪಾಪವೆಂಬ ಆನೆಗೆ ಸಿಂಹ

**ಅಘಕುಲವನ**, **ಅಘಕೂಟ** ಪಾಪಸಮೂಹ, ಪಾಪರಾಶಿ

**ಅಘಘಾತ** ಪಾಪವನ್ನು ಕಳೆಯುವ

**ಅಘಟಿತ** ನಡೆಯದ, ಸಂಭವಿಸದ; ರಚನೆಗೆ ಅಶಕ್ಯವಾದ

**ಅಘದಾತ** ಪಾಪವನ್ನು ಕತ್ತರಿಸುವವನು; ಕೊಡುವವನು ಎಂದೂ ಅರ್ಥವಿದೆ

**ಅಘಭೋಗ** ದುರಾಚಾರದ ವಿಷಯತೃಪ್ತಿ

**ಅಘಮರ್ಷಣ** ಪಾಪಕಳೆಯುವ ಕಾರ್ಯ; ಪಾಪನಾಶಕವಾದ ಋಗ್ವೇದದ ಒಂದು ಸೂಕ್ತ–ಪುರುಷ ಸೂಕ್ತ

**ಅಘರುದ್ಧ** ಪಾಪನಾಶಕ

**ಅಘರ್ವದಾವ** ಪಾಪವೆಂಬ ಅರಣ್ಯಕ್ಕೆ ಬೆಂಕಿ

**ಅಘವಿದೂರ** ಪಾಪವಿದೂರ

**ಅಘವೃಂದ** ಪಾಪರಾಶಿ

**ಅಘಶಮನ** ಪಾಪಗಳನ್ನು ಪರಿಹರಿಸುವುದು

**ಅಘಸಂಹರಣ** ಪಾಪನಾಶನ

**ಅಘಹರ** ಪಾಪ ನಾಶಮಾಡುವವ–ಶ್ರೀಹರಿ, ಶಿವ

**ಅಘಹಾರಿಣಿ** ಪಾಪನಾಶಿನಿ, ಗಂಗೆ

**ಅಘಾವಳಿ**, **ಅಘಾಳಿ** ಪಾಪಸಮೂಹ

**ಅಚಂಚಲಪ್ರಕೃತಿ** ಸ್ಥಿರ ಪ್ರಕೃತಿ, ಸ್ಥಿರವಾದ ಸ್ವಭಾವ

**ಅಚಲ** ಪರ್ವತ, ಜಡ

**ಅಚಲಜಾವರ** ಪಾರ್ವತೀಪತಿ–ಶಿವ

**ಅಚಲಸುತೆ** ಪಾರ್ವತಿ

**ಅಚಲೋದ್ಧರಣ** ಕೂರ್ಮಾವತಾರಿ ಶ್ರೀಹರಿ

**ಅಚಾಟ** ಪ್ರಚಂಡ

**ಅಚಿಂತ್ಯ** ಚಿಂತಿಸಲಾಗದ, ಕಲ್ಪನೆಗೆ ಮೀರಿದ, ಧ್ಯಾನವನ್ನು ಮಿಕ್ಕಿದ, ಊಹೆಗೂ ನಿಲುಕದ ಸಾಮರ್ಥ್ಯ

**ಅಚ್ಚ** ಶುದ್ಧ, ಪಾರದರ್ಶಕ

**ಅಚ್ಚಗನ್ನಿಕೆ** ನಿತ್ಯಮುಕ್ತಳಾದ ಲಕ್ಷ್ಮಿ

**ಅಚ್ಚದ** ಪ್ರೀತಿಯ

**ಅಚ್ಚನ** ನಿರ್ಮಲವಾದ, ಶ್ರೇಷ್ಠವಾದ

**ಅಚ್ಚಿನೊಳಗೆ ಮೆಚ್ಚು** ಸಂಸಾರಚಕ್ರದಲ್ಲಿ ಒಲುಮೆ

**ಅಚ್ಚು** ಪ್ರೀತಿ; ಪ್ರತೀಕ, ಚಕ್ರ

**ಅಚ್ಚುಳಿ** ಪ್ರೀತಿ

**ಅಚ್ಛ** ಮುದ್ದು

**ಅಚ್ಛಿದ್ರ** ತೂತು ಇಲ್ಲದ, ಸಂಪೂರ್ಣ

**ಅಚ್ಛಿನ್ನ** ಅಖಂಡ, ಓತಪ್ರೋತ, ನಾಶವಾಗದ, ತುಂಡುಮಾಡದ (ಅತಿರೋಹಿತ ಭಕ್ತಿಯುಳ್ಳವ ರೆಂದು ಭಾವ), ಪರಿಪೂರ್ಣ

**ಅಚ್ಯುತ** ಕೊರತೆ ಇಲ್ಲದವನು, ಚ್ಯುತಿ ಇಲ್ಲದವನು, ನಾಶವಿಲ್ಲದವನು–ಶ್ರೀಹರಿ

**ಅಜ** ಮೇಕೆ; ಬ್ರಹ್ಮ; ಜನನವಿಲ್ಲದ, ಪರಮಾತ್ಮ; ಈಶ್ವರ, ಜೀವ, ಆಕಾಶ, ಸೂರ್ಯ, ಚಂದ್ರ, ಕಾಮ ಇತ್ಯಾದಿ

**ಅಜಕಾನನವಾಸ** ಉಡುಪಿಯಲ್ಲಿ ವಾಸಿಸುವ ಕೃಷ್ಣ (ಅಜಕಾನನವೇ ಈಗ ಅಜ್ಜರಕಾಡು ಆಗಿದೆ); ಚಂದ್ರ ತಪಸ್ಸು ಮಾಡಿದ (ಅಬ್ಜಗಾಡು) ಕಾಡಿನಲ್ಲಿ ವಾಸಿಸುವವ

**ಅಜಕ್ಷೀರ** ಮೇಕೆ ಹಾಲು

**ಅಜಗರ** ಸರ್ಪ, ಹೆಬ್ಬಾವು (ಅಘಾಸುರ)

**ಅಜಗರ ವೃತ್ತಿ** ಹೆಬ್ಬಾವಿನಂತೆ ತನ್ನಲ್ಲಿಗೆ ತಾನಾಗಿ ಬಂದ ಆಹಾರವನ್ನು ಮಾತ್ರ ಸ್ವೀಕರಿಸುವ ನಿಯಮವನ್ನು ಹೊಂದುವುದು

**ಅಜಗರಶಯನ** ಸರ್ಪಶಯನನಾದ ವಿಷ್ಣು

**ಅಜಜ್ಞಾನಿ** ಬ್ರಹ್ಮಜ್ಞಾನಿ

**ಅಜತಾತ** ಬ್ರಹ್ಮನ ತಂದೆ–ಶ್ರೀಹರಿ

Rarest Archiver

**ಅಜನಪಿತ** ವಿಷ್ಣು

**ಅಜನಯ್ಯ** ಬ್ರಹ್ಮನತಂದೆ ಶ್ರೀಹರಿ

**ಅಜನರಸಿ, ಅಜನರಾಣಿ** ಬ್ರಹ್ಮನ ರಾಣಿ ಸರಸ್ವತಿ

**ಅಜಪದವಿ** ಬ್ರಹ್ಮಪದವಿ

**ಅಜಪಿತ** ಬ್ರಹ್ಮನ ತಂದೆಯಾದ ಶ್ರೀಹರಿ

**ಅಜಪಿತನಮೊಮ್ಮಗ** ಶಿವ

**ಅಜಭವ** ಬ್ರಹ್ಮ ಮತ್ತು ಶಿವ, ನಾರದ; ಭೃಗುಋಷಿ

**ಅಜಭವಪೂಜಿತ** ಬ್ರಹ್ಮ ಮತ್ತು ಶಿವನಿಂದ ಆರಾಧಿಸಲ್ಪಡುವವನು–ಶ್ರೀಹರಿ

**ಅಜಭವಸುರರು** ಬ್ರಹ್ಮ, ಶಿವ ಮೊದಲಾದ ದೇವತೆಗಳು

**ಅಜಭೂಪ** ರಘುವಂಶದ ದೊರೆ, ಅಜ

**ಅಜರ** ಮುಪ್ಪಿಲ್ಲದ

**ಅಜವಾತತಾತ** ಬ್ರಹ್ಮ ವಾಯುಗಳ ಜನಕ–ವಿಷ್ಣು

**ಅಜಸುತ** ಅಜಮಹಾರಾಜನ ಮಗನಾದ ದಶರಥ; ನಾರದ; ಬ್ರಹ್ಮನಪುತ್ರ

**ಅಜಸುರ** ಬ್ರಹ್ಮಾದಿ ದೇವತೆಗಳು

**ಅಜಸ್ರ** ಸದಾಕಾಲ, ಯಾವಾಗಲೂ

**ಅಜಾಂಡ** ಬ್ರಹ್ಮಾಂಡ

**ಅಜಾಗರ** ಎಚ್ಚರವಿಲ್ಲದ

**ಅಜಾಡ್ಯ** ಹುಟ್ಟಿಲ್ಲದ; ರೋಗವಿಲ್ಲದ, ಯಾವ ವ್ಯಾಧಿಯೂ ಇಲ್ಲದೆ ಇರುವುದು

**ಅಜಾತ** ಹುಟ್ಟು ಇಲ್ಲದವ–ಶ್ರೀಹರಿ

**ಅಜಾದಿರೂಪ** 'ಅ' ದಿಂದ 'ಕ್ಷ'ದವರೆಗಿನ ಭಗವದ್ರೂಪಗಳು; ವಿಷ್ಣು

**ಅಜಾಮಿಳ** ಮರಣಕಾಲದಲ್ಲಿ ತನ್ನ ಮಗನಾದ ನಾರಾಯಣನನ್ನು ಕರೆದುದರಿಂದ ಮುಕ್ತಿ ಪಡೆದವ

**ಅಜಾರಣ್ಯಪುರ** ಉಡುಪಿ

**ಅಜಿತ** ಅಜೇಯ, ಸೋಲಿಲ್ಲದ

**ಅಜಿತಭೂಮ** ಅಜಿತಾದಿ ಅನಂತನಾಮಕನಾದ ಪರಮಾತ್ಮ

**ಅಜಿನ** ಜಿಂಕೆ ಚರ್ಮ

**ಅಜೇಯ** ಜಯಿಸಲು ಅಸಾಧ್ಯವಾದ

**ಅಜ್ಜುಗಾರ** ಸಮಯಕ್ಕೆ ಒದಗುವವ

**ಅಜ್ಞಾತ** ತಿಳಿಯದ

**ಅಜ್ಞಾನತಮ** ಅಜ್ಞಾನವೆಂಬ ಕತ್ತಲೆ

**ಅಟಕಾದಿ** ಸೀಗೆ, ಅಂಟ್ವಾಳಕಾಯಿ, ಅರಿಸಿಣ, ಎಣ್ಣೆಗಳ ಮಿಶ್ರಣ–ಎರದುಕೊಳ್ಳುವಾಗ ಮೈಗೆ ಹಚ್ಚಿ ತಿಕ್ಕಿಕೊಳ್ಳುವುದು

**ಅಟನೆ** ಸಂಚಾರ, ತಿರುಗಾಟ

**ಅಟನ್ಯ** ನಾಶ

**ಅಟವಿ** ಅಡವಿ

**ಅಟಾಅಟ** ಡಂಭಾಚಾರ, ಅಟ್ಟಹಾಸ, ಅಟಾಟೋಪ

**ಅಟಾಣಿ** ಅಟನೆ, ಸಂಚಾರ, ತಿರುಗಾಟ

**ಅಟ್ಟ<ಆಡು** ಸಿದ್ಧಮಾಡಿದ; ಬೇಯಿಸಿದ

**ಅಟ್ಟಡವಿ** ಕಟ್ಟಡವಿ, ದಟ್ಟವಾದ ಅರಣ್ಯ

**ಅಟ್ಟಮದ** ಅಷ್ಟಮದ

**ಅಟ್ಟಳ** ಅಟ್ಟ, ಮೇಲಿನ ಕೊಠಡಿ

**ಅಟ್ಟಾಲ** ಉಪ್ಪರಿಗೆ

**ಅಟ್ಟಾವಳಿ** ಮಹಡಿಗಳ ಸಾಲು

**ಅಟ್ಟಿಸು** ತೋರು, ಕಾಣು; ಓಡಿಸು

**ಅಟ್ಟು** ಓಡಿಸು

**ಅಟ್ಟುಂಬೋದು** ಅಡುಗೆ ಮಾಡಿ ಉಣ್ಣುವುದು

**ಅಟ್ಟುಇಕ್ಕದವರು** ಅಡುಗೆ ಮಾಡಿ ಬೇರೆಯವರಿಗೆ ಬಡಿಸದ ಲೋಭಿಗಳು

**ಅಟ್ಟುಇಟ್ಟುಸುಟ್ಟುಕೊಟ್ಟುಮುಟ್ಟಿ** ಕ್ರಮವಾಗಿ:– ಅಡಿಗೆಮಾಡಿ, ನೈವೇದ್ಯಕ್ಕಿಟ್ಟು, ವೈಶ್ವದೇವ ಮಾಡಿ, ಬಲಿಹರಣಮಾಡಿ, ವಿಪ್ರಭೋಜನ ಮಾಡಿಸಿ, ಪಾದಸ್ಪರ್ಶಮಾಡಿ

**ಅಟ್ಟುಣ್ಣು** ಅಡುಗೆ ಮಾಡಿಕೊಂಡು ಊಟಮಾಡು

**ಅಟ್ಟುಮಣಿಅರಿಮಣಿಇಕ್ಕು** ಎಡೆಬಿಡದೆ ಕೆಲಸಕ್ಕೆ ಹಚ್ಚು

Rarest Archiver

**ಅಟ್ಟುಳಿ** ತೊಂದರೆ, ಹಿಂಸೆ; ಕೋಟಲೆ, ಜನ ಸಂದಣಿ

**ಅಡಕ** ಇಕ್ಕಟ್ಟು, ತೊಂದರೆ; ಒಳಗೊಂಡ

**ಅಡಕಲ, ಅಡಕಿಲು** ಒಂದರಮೇಲೊಂದು ಪೇರಿಸಿಟ್ಟದ್ದು

**ಅಡಕು** ತುಂಬು, ಒಳಸೇರಿಸು

**ಅಡಗಾಣಿಪ** ತಡೆಮಾಡುವ, ಮರೆಮಾಡುವ

**ಅಡಗೆಡಹು** ಅಡ್ಡಲಾಗಿ ಬೀಳು

**ಅಡಚು** ಒತ್ತಾಗಿ ಸೇರು

**ಅಡರು** ಹತ್ತು; ದಾಳಿ ಮಾಡು, ಮುತ್ತಿಗೆ ಹಾಕು

**ಅಡವಿಯತೊಪ್ಪಲ** ಕಾಡಿನ ಸೊಪ್ಪು (ಮದ್ದಿಗೆ ಬರುವಂಥದ್ದು)

**ಅಡವು** ಸಮೃದ್ಧಿ; ಒತ್ತೆ ಇಡು

**ಅಡಶಿರೋಶಿ** ನಿರಾಶೆ

**ಅಡಸು** ಆಕ್ರಮಿಸು, ಮುತ್ತು

**ಅಡಿ** ತಳ, ಪಾದ, ಹೆಜ್ಜೆ

**ಅಡಿಗಟ್ಟು** ತಳಭಾಗ, ಮುಗ್ಗು

**ಅಡಿಗಡಿಗೆ** ಮತ್ತೆ ಮತ್ತೆ

**ಅಡಿದಾವರ** ಪಾದಪದ್ಮ

**ಅಡಿದಾಸ** ಪಾದಸೇವಕ

**ಅಡಿಬಿದ್ದು** ಪಾದಕ್ಕೆ ನಮಸ್ಕರಿಸಿ

**ಅಡಿಯಾಗು** ದಾಸನಾಗು

**ಅಡಿಯಾಡು** ಎಡತಾಕು, ಮತ್ತೆ ಮತ್ತೆ ಬರು

**ಅಡಿವೆ** ಹುಟ್ಟು; ಅಡಿಯನ್ನು ಇಟ್ಟರೆ

**ಅಡಿಸತ್ತ, ಅಡಿಹೋದ** ತಳ ಒಡೆದ, ತೂತಾದ

**ಅಡು** ಅಡುಗೆಮಾಡು

**ಅಡುವಮಡಕೆ** ಅಡುಗೆಮಾಡುವ ಮಡಕೆ, ಕರ್ಮ

**ಅಡುವು** ತಕ್ಕುದಾಗು, ಯೋಗ್ಯವೆನಿಸು

**ಅಡೆಗೆಡೆ** ಅಡ್ಡ ಬೀಳು, ನಮಸ್ಕರಿಸು

**ಅಡ್ಡಯಿಸು** ಎದುರಿಸು, ತಡೆ

**ಅಥಳ<ಆಢ್ಯ** ಹಿರಿದು, ದೊಡ್ಡದು

**ಅಣಕ** ಅಪಹಾಸ್ಯ; ಕುಂದು

**ಅಣಗೊತ್ತು** ಪೀಡೆಯನ್ನು ಕಳೆ; ಶಾಂತಗೊಳಿಸು; ತಗ್ಗುವಂತೆ ಅದುಮು

**ಅಣತಿ** ಹೊಂದಿಸು, ಕೊಡು

**ಅಣಿ** ಸಿದ್ಧತೆ

**ಅಣಿಮಯ** ಅತಿಶಯ

**ಅಣಿಮಾ** ಅತ್ಯಂತ ಚಿಕ್ಕ/ಸೂಕ್ಷ್ಮ ರೂಪವನ್ನು ಧರಿಸುವ ಶಕ್ತಿ; ಅಷ್ಟಸಿದ್ಧಿಗಳಲ್ಲಿ ಒಂದು

**ಅಣಿಮಾದಿ** ಅಷ್ಟಸಿದ್ಧಿಗಳು

**ಅಣಿಯರ** ಅತಿಶಯ, ಸಿಕ್ಕಾಪಟ್ಟೆ

**ಅಣು** ಅತ್ಯಂತ ಸೂಕ್ಷ್ಮವಸ್ತು, ಕಣ, ತೀರಸಣ್ಣದು; ಶಿವ

**ಅಣುಗ** ಪ್ರೀತಿಪಾತ್ರ, ಪ್ರಿಯ; ಮಗ; ಭಕ್ತ, ಸೇವಕ

**ಅಣುಗಂಟೆ** ಕಿರುಗಂಟೆ

**ಅಣುಗಿ** ಪ್ರಿಯೆ, ಮಗಳು

**ಅಣುಗು** ಪ್ರೀತಿ

**ಅಣುಜಾಣ** ಬುದ್ಧಿವಂತ

**ಅಣುತೃಣ** ಸೂಕ್ಷ್ಮವಾದ ವಸ್ತು ಮತ್ತು ಹುಲ್ಲು; ಕ್ಷುಲ್ಲಕ

**ಅಣುಮಹದ್ಗತ, ಅಣುಮಹದ** ಅಣುವಿನಲ್ಲಿ ಅಣು ಮಹತ್ತಿನಲ್ಲಿ ಮಹತ್ತಾಗಿ ಇರುವವ, ಅಣೋರಣೀಯ, ಮಹತೋಮಹಿಮ–ಶ್ರೀಹರಿ

**ಅಣುರೇಣು** ಚಿಕ್ಕಕಣ, ಧೂಳಿನಕಣ

**ಅಣೆ** ಸಾಧ್ಯವಾಗು

**ಅಣೋರಣೀಯವಾನ್, ಅಣೆ** ಅಣುವಿನಲ್ಲಿ ಅಣುವಾದವನು–ಶ್ರೀಹರಿ

**ಅಣ್ಣಾವಟ್ಟಿಗಾರ** ಕೆಲಸಮಾಡಲು ಹಿಂಜರಿಯುವವ, ಸೋಮಾರಿ, ಉಡಾಳ

**ಅಣ್ಣೆಕಲ್ಲು** ದುಂಡುಹರಳು ಬಳಸಿ ಆಡುವ ಆಟ

**ಅಣ್ಣೆವಾಲು** ಪರಿಶುದ್ಧ ಹಾಲು

**ಅತತ್ತ್ವನಾಯಕರು** ತತ್ತ್ವಾಭಿಮಾನಿಗಳಲ್ಲದ ದೇವತೆಗಳು

Rarest Archiver

**ಅತಲ(ಳ)** ಭೂಲೋಕದ ಕೆಳಗಿನದೊಂದು ಲೋಕ

**ಅತಿಕಾಯ** ರಾವಣನ ಒಬ್ಬ ಮಗ

**ಅತಿಗಳಿ, ಅತಿಗಳೆ** ತಿರಸ್ಕರಿಸಿನುಡಿ

**ಅತಿಚಿತ್ರ** ಚಿತ್ರವಿಚಿತ್ರ; ಅತ್ಯದ್ಭುತ

**ಅತಿತತ್ತ್ವ** ಸ್ವತಂತ್ರತತ್ತ್ವ, ಎಲ್ಲಾತತ್ತ್ವಗಳಿಂದ ಮಿಗಿಲಾದ ತತ್ತ್ವ; ಶ್ರೀಹರಿ

**ಅತಿಥಿ** ಕರೆಸಿಕೊಳ್ಳದೆ/ಆಮಂತ್ರಣವಿಲ್ಲದೆ ಬರುವವ

**ಅತಿಬಾಹು** ಬಾಹುಬಲವುಳ್ಳವ, ಭುಜಬಲಉಳ್ಳವ

**ಅತಿಭೋಜನ** ಪ್ರಳಯ ಕಾಲದಲ್ಲಿ ಇಡೀ ವಿಶ್ವವನ್ನು ತಿನ್ನುವವ–ವಿಷ್ಣು

**ಅತಿಯಮಧುರಾಹಾರ** ಕಬ್ಬನ್ನೇ ಆಹಾರವಾಗಿ ಉಳ್ಳವ

**ಅತಿರಕ್ಷ** ಚೆನ್ನಾಗಿ ರಕ್ಷಿಸಿದವ

**ಅತಿರಸ** ಕಜ್ಜಾಯ

**ಅತಿರೋಹಿತ** ಯಾವಾಗಲೂ ಮರವೆಯಿಲ್ಲದ, ನಾಶವಾಗದಂಥ; ಉನ್ನತ

**ಅತಿವ್ಯಾಮಾಪ್ರೀಯ** ಅತ್ಯಂತ ಪ್ರಿಯ

**ಅತಿಸಾರ** ಒಂದೇ ಸಮನೆ ಭೇದಿಯಾಗುವ ರೋಗ

**ಅತೀತ** ಒಳಗಾಗದ, ನಿಲುಕದ; ಕಳೆದು ಹೋದ; ಎಲ್ಲೆಯನ್ನು ಮೀರಿದವ

**ಅತುರಿಯ** ತುರ್ಯಾವಸ್ಥೆ ಮೀರಿದವ

**ಅತುಲ(ಳ)** ಬಹಳವಾದ; ಹೋಲಿಕೆಯಿಲ್ಲದ, ಅನಂತಾನಂತ, ಅಗಾಧ, ಅಳೆಯಲಾಗದ, ಅನುಪಮ

**ಅತೈಲಭಕ್ಷ್ಯ** ಎಣ್ಣೆಯನ್ನು ಬಳಸದೆ ತುಪ್ಪದಲ್ಲಿ ಕರಿದ ಭಕ್ಷ್ಯಗಳು

**ಅತೌಕಿಕ** ಅಪ್ರಾಕೃತ

**ಅತ್ತತ್ತ** ಆಕಡೆ, ಇನ್ನೂ ಆಕಡೆ

**ಅತ್ತೆ** ಭೂಮಿ ಅಥವಾ ಮಾಯೆ, ಆಕಡೆ

**ಅತ್ತೆಅತ್ತಿಗೆಯು** ಸಂಶಯ–ವಿಪರ್ಯಎಂಬ ಇಬ್ಬರು ಸ್ತ್ರೀಯರು; ಜರಾಸಂಧನ ಮಕ್ಕಳು; ಕಂಸನ ಹೆಂಡತಿಯರು

**ಅತ್ರಿ** ಸಪ್ತರ್ಷಿಗಳಲ್ಲೊಬ್ಬ

**ಅತ್ರಿತನಯ, ಅತ್ರಿನೇತ್ರೋದ್ಭವ** ಚಂದ್ರನು ಸಾಂಶ; ಈತ ಮೊದಲು ಭಗವಂತನ ಮನಸ್ಸಿನಿಂದ ಹುಟ್ಟಿದ, ಆದ್ದರಿಂದ ಮನೋಜ; ನಂತರ ಅತ್ರಿಗೆ ಅನುಸೂಯೆಯಲ್ಲಿ ಹುಟ್ಟಿದ, ಹಾಗಾಗಿ ಅತ್ರಿ ಗೋತ್ರೋದ್ಭವ. ಇನ್ನೊಮ್ಮೆ ಅನುಸೂಯೆಯ ಸಹಾಯವಿಲ್ಲದೆ ಅತ್ರಿಯ ತಪಸ್ಸಿನಿಂದ ಅವನ ಕಣ್ಣಿನಿಂದ ಸುರಿದು ಬಂದು ಆವಿರ್ಭವಿಸಿದ, ಹಾಗಾಗಿ ಅತ್ರಿನೇತ್ರೋದ್ಭವ. ಮತ್ತೊಮ್ಮೆ ಕ್ಷೀರಸಾಗರಮಥನಕಾಲದಲ್ಲಿ ಲಕ್ಷ್ಮೀದೇವಿಗಿಂತ ಮುಂಚೆಯೇ (ತಮ್ಮನಾಗಿ) ಆವಿರ್ಭವಿಸಿದ. ಒಬ್ಬನಿಗೆ ಹಲವು ಬಗೆಯ ಆವಿರ್ಭವ.

**ಅದಟ** ಪರಾಕ್ರಮಿ

**ಅದಟು** ಪರಾಕ್ರಮ, ಶೌರ್ಯ

**ಅದಭ್ರ** ಸಮೃದ್ಧವಾದ

**ಅದಲು** ಅಲುಗು; ವಿನಿಮಯ

**ಅದಿತಿ** ಕಶ್ಯಪನ ಹೆಂಡತಿ

**ಅದಿರ್ಪು** ಬೆದರಿಸು

**ಅದುಭುತ<ಅದ್ಭುತ** ಅತ್ಯಾಶ್ಚರ್ಯಕರವಾದ

**ಅದೃಢ** ಅಪನಂಬಿಕೆ

**ಅದೃಶ್ಯಾಂಘ್ರಿ** ಕಣ್ಣಿಗೆ ಕಾಣಿಸದ ಪಾದವುಳ್ಳವ–ಶೇಷ

**ಅದೃಷ್ಟದೃಷ್ಟ** ಕಾಣಿಸಿಕೊಳ್ಳದವ, ಕಾಣಿಸಿಕೊಳ್ಳುವವ

**ಅದೋಷ** ದೋಷವಿಲ್ಲದವ

**ಅದ್ದು** ಮುಳುಗಿಸು

**ಅದ್ಭುತವಾದಿ** ಮಾಯಾವಾದಿ

**ಅದ್ಯಾಪಿ** ಇದುವರೆಗೂ, ಇನ್ನೂ

**ಅದ್ರಿ** ಪರ್ವತ, ಬೆಟ್ಟ, ದೇವತೆಗಳು, ಬ್ರಹ್ಮ

**ಅದ್ರಿಕುವರಿ, ಅದ್ರಿಜೆ** ಪಾರ್ವತಿ

Rarest Archiver

**ಅದ್ರಿಜಾಪತಿ** ಪಾರ್ವತಿಪತಿ–ಶಿವ

**ಅದ್ರಿಜಾಮಾತ** ಪರ್ವತನ ಅಳಿಯ–ಶಿವ

**ಅದ್ರಿಧರ** ಗೋವರ್ಧನ ಪರ್ವತವನ್ನು ಕೈಯಲ್ಲಿ ಎತ್ತಿದವನು–ಕೃಷ್ಣ

**ಅದ್ವೈತ** ಬ್ರಹ್ಮ ಮತ್ತು ಜೀವಿಗಳು ಬೇರೆಬೇರೆಯಲ್ಲ ಎಂದು ಪ್ರತಿಪಾದಿಸುವ ಮತ, ವಾದ

**ಅದ್ವೈತತ್ರಯ** ಎರಡಲ್ಲದ ಮೂರು ತತ್ವಗಳು–ಜ್ಞಾನ, ಭಕ್ತಿ, ವೈರಾಗ್ಯಗಳು; ಭಾವಾದ್ವೈತ, ಕ್ರಿಯಾದ್ವೈತ, ದ್ರವ್ಯಾದ್ವೈತ

**ಅಧನ** ಬಡವ, ಹಣವಿಲ್ಲದವ

**ಅಧಮಾಧಮ** ಅತ್ಯಂತ ಕೀಳು

**ಅಧಮ್ಮ** ಅಧಮ, ಕೀಳಾದವ

**ಅಧರ** ತುಟಿ

**ಅಧರಸೋಮ** ಅಧರಾಮೃತ

**ಅಧಸ್ಥಾನ** ಕೆಳಗಿನ ಸ್ಥಾನ

**ಅಧಿ** ನೆಲೆ

**ಅಧಿಕ** ಹೆಚ್ಚು

**ಅಧಿಷ್ಠಾನ** ಆಧಾರ, ತಳಹದಿ, ನೆಲೆಸಿರುವುದು

**ಅಧುನಾಪಿ** ಈಗಲೂಕೂಡ

**ಅಧೋಕ್ಷಜ** ಇಂದ್ರಿಯ ನಿಗ್ರಹಿ, ಬಾಹ್ಯೇಂದ್ರಿಯಗಳಿಗೆ ಕಾಣದಿರುವವ (ಜ್ಞಾನಗಮ್ಯ)–ವಿಷ್ಣು

**ಅಧೋಭುವನ** ಪಾತಾಳ, ಕೆಳಗಿನ ಲೋಕ

**ಅಧೋಮುಖ** ಕೆಳಮುಖ

**ಅಧೋರ್ಧ್ವಲೋಕ** ಸ್ವರ್ಗಾದಿ ಏಳು ಲೋಕ ಮತ್ತು ಪಾತಾಳಾದಿ ಏಳು ಲೋಕ

**ಅಧೋಲೋಕ** ಅತಳ, ವಿತಳ, ಸುತಳ, ತಳಾತಳ, ಮಹಾತಳ, ರಸಾತಳ, ಪಾತಾಳ

**ಅಧ್ವರ್ಯು** ಯಜ್ಞಕರ್ತ, ಯಜಮಾನ

**ಅಧ್ಯಕ್ಷ** ಯಜಮಾನ

**ಅಧ್ಯಾತ್ಮ** ಶಾರೀರಿಕ–ಮಾನಸಿಕ ಸಂಬಂಧಿ

**ಅಧ್ವ** ಮಾರ್ಗ

**ಅಧ್ವರ** ಯಜ್ಞ, ಯಾಗ

**ಅಧ್ವರ್ಯು** ಯಜ್ಞವನ್ನು ನಡೆಸುವವನು, ಮುಂದಾಳು

**ಅನಂಗ** ಮನ್ಮಥ; ಅಂಗಾಂಗವಿಲ್ಲದವ

**ಅನಂಗಕೇಳಿ** ಕಾಮಕೇಳಿ

**ಅನಂಗಜನಕ** ಶ್ರೀಹರಿ

**ಅನಂಗಬಾಣ** ಕಾಮಬಾಣ

**ಅನಂತ** ಆದಿಶೇಷ; ಆಕಾಶ; ಕೊನೆಯಿಲ್ಲದ, ವಿಷ್ಣು

**ಅನಂತಕೀರ್ತಿ** ವಿಷ್ಣು

**ಅನಂತಬ್ರಹ್ಮ** ವಿಷ್ಣು

**ಅನಂತಮೂರ್ತಿ** ವಿಷ್ಣು

**ಅನಂತರ** ಭವಿಷ್ಯದಲ್ಲಿ, ಮುಂದೆ

**ಅನಂತಶಕ್ತಿ** ವಿಷ್ಣು

**ಅನಂತಶಯನ** ವಿಷ್ಣು

**ಅನಂತಾನಂತಶಬ್ದವಾಚ್ಯ** ವಿಷ್ಣು

**ಅನಂತೋರು** ಅನಂತ ಬಾಹುಗಳುಳ್ಳವರು

**ಅನಕ** ಅಲ್ಲಿಯತನಕ, ಆವರೆಗೆ

**ಅನಗಂತೀಕಿ (ಕಲಭಾಷೆ)** ಎನಗಂಜಿಕೆ

**ಅನಗ್ನಿಕ** ಬೆಂಕಿಯಿಂದ ಬೇಯಿಸದ, ಅಗ್ನಿಯಲ್ಲಿ ಹೋಮಿಸದ

**ಅನಘ** ಪಾಪ ಹೊಂದದವನು, ನಿರ್ದೋಷ, ನಿಷ್ಪಾಪಿ, ಪುಣ್ಯವಂತ, ಪಾಪಲೇಪವಿಲ್ಲದ ಶ್ರೀಹರಿ

**ಅನಘಾತ್ಮಕ** ಪಾವನ, ಪಾಪರಹಿತನಾದ

**ಅನಘೋತ್ತಮ** ಅತ್ಯುತ್ತಮ, ಸರ್ವೋತ್ತಮ

**ಅನಜನಪ್ರಚಂಡ** ವೈರಿಗಳಕಾಲ–ವಿಷ್ಣು

**ಅನಡುಹ<ಅನಡ್ವ** ಎತ್ತು, ಗೂಳಿ

**ಅನಧಿಕ** ಕಡಿಮೆ

**ಅನನ** ನಾಶ

**ಅನನುತ** ವಾಯುದೇವರಿಂದ ಸ್ತುತ್ಯನಾದ

**ಅನನ್ಯಪ** ಅದ್ವಿತೀಯ

**ಅನಪತ್ಯ** ಆಪತ್ತು

**ಅನಪಾಯಿನಿ** ನಾಶರಹಿತಳು; ಲಕ್ಷ್ಮಿ

Rarest Archiver

**ಅನಪೇಕ್ಷ** ಅಪೇಕ್ಷಿಸದೆ, ಬಯಸದ
**ಅನಭಿಜ್ಞರು** ಅರಿಯದವರು
**ಅನಭಿಮತ** ಒಪ್ಪಿಗೆಯಾಗದ, ಅಯೋಗ್ಯ
**ಅನಭಿಮುಖ** ವಿರೋಧಿ
**ಅನರ್ಘ್ಯ** ಅಮೂಲ್ಯ, ಬಹು ಬೆಲೆ ಬಾಳುವ
**ಅನರ್ಘ್ಯಾಂಬರ** ಬೆಲೆಯುಳ್ಳ ವಸ್ತ್ರ
**ಅನರ್ಥಕ** ಅರ್ಥಹೀನ, ಅಪ್ರಯೋಜಕ
**ಅನಲ(ಳ)** ಬೆಂಕಿ
**ಅನಲನೇತ್ರ** ಉರಿಗಣ್ಣುಳ್ಳ ಶಿವ
**ಅನಲಸಖತನಯ** ವಾಯುಪುತ್ರ ಹನುಮಂತ, ಗಾಳಿ
**ಅನಲಸ್ನೇಹಿತ** ವಾಯುದೇವರು, ಗಾಳಿ
**ಅನಲಾಂಗನೆ** ಅಗ್ನಿಪತ್ನಿಯಾದ ಸ್ವಾಹಾದೇವಿ
**ಅನಲಾಂತರ್ಗತ** ಅಗ್ನಿಯಲ್ಲಿ ಅಡಗಿರುವ
**ಅನಲಾಕ್ಷ** ಶಿವ
**ಅನಲಾಕ್ಷಕಾರ್ಮುಕ, ಅನಲಾಕ್ಷ** ಶಿವಧನಸ್ಸು
**ಅನಲ್ಪ** ಬಹಳ
**ಅನವತ್ಸರ** ಸೂರ್ಯನ ವರ್ಷಾವಧಿ
**ಅನವದ್ಯ** ನಿರ್ದೋಷವಾದ, ನಿಷ್ಕಳಂಕ
**ಅನವರತ** ನಿರಂತರ, ಸದಾ
**ಅನಶನ** ಉಪವಾಸ, ಊಟಮಾಡದ, ದೇವತೆ
**ಅನಸ್ತ** ಕೊನೆಯಿಲ್ಲದ, ನಾಶವಾಗದ
**ಅನಾಖ್ಯಾತ** ಅಪ್ರಸಿದ್ಧ, ಸಾಮಾನ್ಯವಾಗಿ ಗೊತ್ತಾಗದ
**ಅನಾಗತ** ಭವಿಷ್ಯದ
**ಅನಾಥಬಂಧು** ವಿಷ್ಣು
**ಅನಾದಿ** ಆದಿಯಿಲ್ಲದ, ನಿರಂತರ; ವೇದ
**ಅನಾದಿಕರ್ಮ** ಪ್ರಾಚೀನ ಕರ್ಮ, ಪ್ರಾರಬ್ಧಕರ್ಮ
**ಅನಾವೃಷ್ಟಿ** ಮಳೆ ಬೀಳದ
**ಅನಾಹತ** ಗಾಯಗೊಳ್ಳದ, ಅಭೇದ್ಯ; ಶರೀರದಲ್ಲಿಯ ಕಾಲ್ಪನಿಕ ಚಕ್ರ
**ಅನಿಚ್ಚ** ಅನಿತ್ಯ, ಅಸ್ಥಿರ
**ಅನಿತು** ಅಷ್ಟು
**ಅನಿಮಿತ್ತ** ಸ್ವಚ್ಛಂದ, ತನ್ನ ಇಚ್ಛೆ, ಅಕಾರಣ, ಆಕಸ್ಮಿಕ, ಯಾವ ನಿರೀಕ್ಷಣೆಯೂ ಇಲ್ಲದ
**ಅನಿಮಿತ್ತಬಂಧು** ರಕ್ತಸಂಬಂಧವಿಲ್ಲದ ಬಂಧು; ಆಪತ್ತಿಗೆ ಒದಗುವವ, ರಕ್ಷಕ; ಕಾರಣವಿಲ್ಲದೆ ಸಮಯಕ್ಕೆ ಒದಗುವವನು; ಭಗವಂತ
**ಅನಿಮಿಷ** ಮೀನು, ರೆಪ್ಪೆಯಿಲ್ಲದ, ರೆಪ್ಪೆಬಡಿಯದ; ದೇವತೆ
**ಅನಿಮಿಷದೃಷ್ಟಿ** ಎವೆಯಿಕ್ಕದ ದೃಷ್ಟಿ, ದೇವತಾದೃಷ್ಟಿ
**ಅನಿಮಿಷನದಿ** ದೇವನದಿ–ಗಂಗೆ
**ಅನಿಮಿಷಪಜನಸುತ** ಇಂದ್ರನ ಮಗ ಅರ್ಜುನನ ಮಗ ಅಭಿಮನ್ಯು
**ಅನಿಮಿಷಪತಿ, ಅನಿಮಿಷೇಶ** ದೇವತೆಗಳ ಒಡೆಯ–ಇಂದ್ರ
**ಅನಿರುದ್ಧ** ತಡೆಯಿಲ್ಲದ, ಬಂಧನಕ್ಕೊಳಗಾಗದವ
**ಅನಿರುದ್ಧಜಾತ** ಬ್ರಹ್ಮ
**ಅನಿರುದ್ಧದೇವನಮನೆ** ವೈಕುಂಠ
**ಅನಿರುದ್ಧಾದಿರೂಪ** ಅನಿರುದ್ಧ, ಪ್ರದ್ಯುಮ್ನ, ಸಂಕರುಷಣ, ವಾಸುದೇವ, ನಾರಾಯಣ ರೂಪಗಳು
**ಅನಿರ್ಜರ** ದೇವತೆಯಲ್ಲದವ
**ಅನಿರ್ವಚನೀಯ** ವರ್ಣಿಸಲು ಶಕ್ಯವಿಲ್ಲದ, ವಚನಕ್ಕೆ ನಿಲುಕದವ
**ಅನಿರ್ವಿಣ್ಣ, ಅನಿರ್ವಿಣ್ಣ:** ಭಕ್ತರಿಗೆ ಅಭೀಷ್ಟವನ್ನು ನೀಡುವಲ್ಲಿ ಅಲಂಬುದ್ಧಿ(ಸಾಕು ಎಂಬ ತೃಪ್ತಿ) ಇಲ್ಲದಿರುವವನು–ವಿಷ್ಣು
**ಅನಿಲ** ಗಾಳಿ; ಬೇರೆಯವರನ್ನು ಆಶ್ರಯಿಸದಿರುವವ, ಸ್ವತಂತ್ರ (ನಿಲ=ನಿಲಯ=ಆಶ್ರಯ)
**ಅನಿಲಜ, ಅನಿಲಸುತ** ವಾಯುಪುತ್ರನಾದ ಹನುಮಂತ, ಭೀಮ
**ಅನಿಲಾಶನಶೈಲಾಧಿಪ** ಗಾಳಿಯನ್ನೇ ಆಹಾರವಾಗಿವುಳ್ಳ ಸರ್ಪಗಳಿಗೆ ಅಧಿಪರಾದ ಶೇಷದೇವರಿಂದ ಅಧಿಷ್ಠಿತ ಪರ್ವತಕ್ಕೆ ಒಡೆಯ–ಶೇಷಗಿರಿವಾಸ, ವೇಂಕಟೇಶ

Rarest Archiver

**ಅನಿವಾರ್ಯ** ನಿವಾರಿಸಲು ಸಾಧ್ಯವಾಗದ

**ಅನಿವಿಷ್ಟ–ನಿವಿಷ್ಟ** ಸರ್ವತ್ರ ಸರ್ವ ಪದಾರ್ಥಗಳಲ್ಲಿ ನಿಯಾಮಕನಾಗಿರುವವನು –ಶ್ರೀಹರಿ

**ಅನಿಶ** ಪ್ರಕಾಶ, ಕತ್ತಲಿಲ್ಲದ, ಅಜ್ಞಾನವಿಲ್ಲದ; ನಿತ್ಯ, ಯಾವಾಗಲೂ; ಅಧಿಕ; ಮಾರುತಿ

**ಅನಿಷ್ಟಿಹ** ಪಾಪಪರಿಹಾರಕ

**ಅನೀಶಜೀವರು** ಅಸ್ವತಂತ್ರ, ಜೀವ; ಈ ಎಂದರೆ ಒಡೆಯ, ನಿಯಾಮಕ, ಸರ್ವಸ್ವತಂತ್ರ; ಜೀವರೆಂದೂ ಈಶರಲ್ಲ

**ಅನುಕಟ್ಟು** ಸರಿಯಾಗಿಕಟ್ಟು

**ಅನುಕರಿಸು** ಪ್ರತಿಫಲ ಕೊಡು (ಅನುಗ್ರಹ ರೂಪ)

**ಅನುಗತಿ** ಸಾವು

**ಅನುಗಾಣು** ಸ್ವರೂಪ ತಿಳಿ

**ಅನುಗಾಲ** ಯಾವಾಗಲು

**ಅನುಗುಣ್ಯ** ತಾರ್ಕಿಕ, ಕ್ರಮಬದ್ಧ

**ಅನುಜ** ತಮ್ಮ, ಸಹೋದರ

**ಅನುಜೆ** ತಂಗಿ

**ಅನುತಪಿಸು** ಮರುಗು

**ಅನುತಾಪ** ದುಃಖ

**ಅನುದಾತ್ತ** ದೃಢ, ಧಾರ್ಢ್ಯ; ಔದಾರ್ಯ; ಸ್ವರಗಳನ್ನು ತಗ್ಗಿದ ದನಿಯಲ್ಲಿ ಉಚ್ಚರಿಸುವುದು

**ಅನುದಿನ** ಪ್ರತಿನಿತ್ಯ

**ಅನುಪಮಸಪ್ತಾವರಣ** ಪಂಚಭೂತ, ಮಹತ್‌ತತ್ವ ಮತ್ತು ಅವ್ಯಕ್ತಾವರಣಗಳು

**ಅನುಪಮಿತ** ಉಪಮಾತೀತ

**ಅನುಪೂರ್ವ** ವಿಶೇಷವಾದ

**ಅನುಪೂರ್ವಕ** ಪೂರ್ವಜರ ಸಂಪ್ರದಾಯದಂತೆ

**ಅನುಬಂಧ** ಸಂಬಂಧ, ವಿಶೇಷ ಪ್ರೀತಿ

**ಅನುಬಂಧಿ** ಹತ್ತಿಹೊಂದಿದವ, ಬಂಧು, ಸಂಬಂಧಿ

**ಅನುಭೋಗ** ಪೂರ್ವಕರ್ಮದ ಫಲವನ್ನು ಅನುಭವಿಸುವುದು

**ಅನುಮಾನತೀರಥ(ತೀರ್ಥ)** ಮಧ್ವಾಚಾರ್ಯ ರಿಗಿರುವ ಹತ್ತು ಹೆಸರುಗಳಲ್ಲಿ ಒಂದು

**ಅನುಮೇಯ** ಊಹೆ

**ಅನುಮೇಷ** ಸದಾಕಾಲ

**ಅನುಯೋಗ** ಆತ್ಮಧ್ಯಾನ

**ಅನುರಾಗ** ಪ್ರೀತಿ

**ಅನುರೂಪ** ಅನುಗುಣವಾದ

**ಅನುರೂಹವಂದ್ಯ** ಯೋಗ್ಯರಿಂದ ನಮಸ್ಕಾರ ಪಡೆದವನು

**ಅನುಲೇಪ** ತೊಡೆತ, ಬಳಿಯುವಿಕೆ, ಒಂದು ಲೋಹದ ಮೇಲೆ ಮತ್ತೊಂದು ಲೋಹದ ಲೇಪ

**ಅನುಲೋಮ** ಮೇಲಿನಿಂದ ಕೆಳಗಿನ; ಮೇಲ್ಜಾತಿಯ ಗಂಡು ಕೆಳಜಾತಿಯ ಕನ್ಯೆಯೊಂದಿಗೆ ವಿವಾಹ ವಾಗಿ ನಂತರ ಅವರಿಂದ ಜನಿಸಿದವರು

**ಅನುವರ** ಯುದ್ಧ, ಕಾಳಗ

**ಅನುವು** ಆಸ್ಪದ, ಅನುಕೂಲ

**ಅನುವ್ರತ** ಅನುಸರಿಸುವವ

**ಅನುಶಾಪ** ಶಾಪದಮೇಲೆ ಮತ್ತೊಂದು ಶಾಪ/ ಪರಿಹಾರ, ಉಪಶಾಪ

**ಅನುಶೃತ** ಶೃತಿಗಳನ್ನು ಅನುಸರಿಸಿದ

**ಅನುಶ್ರುತ** ಪ್ರಸಿದ್ಧ

**ಅನುಶ್ರುತಪ್ರಣವ** ಆಶ್ರಮ ಸ್ವೀಕರಿಸುವಾಗ ವಿರಜಾ ಹೋಮವಾದ ಮೇಲೆ ಗುರುವಿನಿಂದ ದೊರ ಕುವ ಓಂಕಾರ ಮಂತ್ರ

**ಅನುಶ್ರುತಿ** ನಾಮಸ್ಮರಣೆ

**ಅನುಷ್ಠಾನ** ಆಚರಣೆ

**ಅನುಸಂಧಾನ** ಪ್ರಯೋಗ, ಸಾಧನೆ, ಶೋಧ, ಪರಿಶೀಲನೆ; ಧ್ಯಾನ, ವ್ಯಾಪ್ತ ಚಿಂತನೆ, ಸನ್ನಿಧಾನ ಚಿಂತನೆ

**ಅನುಸರಿಸು** ಕೂಡಿಸು; ಹಿಂಬಾಲಿಸು

**ಅನುಸ್ಮೃತಿ** ಮತ್ತೆ ಮತ್ತೆ ಕಾಡುವ ನೆನಪು

Rarest Archiver

**ಅನೃತ** ಸುಳ್ಳು, ಕೆಟ್ಟದ್ದು

**ಅನೇಕಚರಿತ** ಸದ್ಗುಣಪೂರ್ಣ–ಶ್ರೀಹರಿ

**ಅನೇಕಮಂತ್ರಪ್ರತಿಪಾದ್ಯ** ವಿಷ್ಣು

**ಅನೇಮಿ** ನಿಯಮ ಇಲ್ಲದವನು, ಕಟ್ಟಳೆ ಇಲ್ಲದವನು

**ಅನ್ನ** ಅನ್ನನಾಮಕ ಪರಮಾತ್ಮ, ಊಟ

**ಅನ್ನಂಕ<ಅನ್ನಕ** ಅಲ್ಲಿಯವರೆಗೆ

**ಅನ್ನಂತ<ಅನಂತ** ಕೊನೆಯಿಲ್ಲದ

**ಅನ್ನಮದ** ಅಷ್ಟಮದಗಳಲ್ಲಿ ಒಂದು

**ಅನ್ನಮಯಾದಿರೂಪ** ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದ ಮಯ ರೂಪ

**ಅನ್ನಿಗ** ಅನ್ನಕ

**ಅನ್ನುಮಾನ<ಅನುಮಾನ** ಸಂದೇಹ

**ಅನ್ಯ** ಇತರ, ತನ್ನವರಲ್ಲದ, ಬೇರೆ

**ಅನ್ಯತ್ರ** ಬೇರೆಯವರನ್ನು, ಬೇರೆಕಡೆಗೆ

**ಅನ್ಯಥಾಜ್ಞಾನಿ** ಹರಿಪಾರಮ್ಯವನ್ನು ಒಪ್ಪಿಕೊಳ್ಳದ ವಿಪರೀತ ಮತಿ, ನೈಜಜ್ಞಾನವಿಲ್ಲದವ

**ಅನ್ಯಾಟನೆ** ನಿನ್ನನ್ನುಬಿಟ್ಟು ಇತರೆ; ಕಂಡಕಡೆ ತಿರುಗುವಿಕೆ

**ಅನ್ಯಾರ್ಜನೆ** ಅನ್ಯಾಯವಾಗಿ ಸಂಪಾದಿಸಿದ್ದು

**ಅನ್ಯೂನ** ಕೊರತೆಯಿಲ್ಲದ

**ಅನ್ವಯ** ಹೊಂದಿಕೆ ಅಥವಾ ವಂಶ, ಸಂಬಂಧ

**ಅಪ್** ನೀರು

**ಅಪಕೃತಿ** ಅಪಕಾರ

**ಅಪಗತಾಶ್ರಯ** ನಿರಾಶ್ರಯ, ಯಾರ ಆಶ್ರಯವೂ ಬೇಕಾಗದ

**ಅಪಚಯ** ಕುಗ್ಗುವಿಕೆ, ಕ್ಷೀಣತೆ; ಅಮಂಗಳ

**ಅಪಟ** ಶಿವ, ದಿಗಂಬರ

**ಅಪತಾಪ** ಅಪ್ಪಿತಪ್ಪಿ

**ಅಪತ್ಯ** ಮಗು, ಮಕ್ಕಳು; ದುರ್ಬುದ್ಧಿಯುಳ್ಳವ

**ಅಪದೂರು** ಸುಳ್ಳು ಆಪಾದನೆ

**ಅಪನಿಯ** ಮನಃಪೂರ್ವಕ

**ಅಪರಂಜಿ** ಶುದ್ಧಬಂಗಾರ

**ಅಪರಂಪಾರ** ವಿಪರೀತ

**ಅಪರಬುದ್ಧಿ** ಕೀಳು ಬುದ್ಧಿ, ಲೌಕಿಕಬುದ್ಧಿ

**ಅಪರರಾತ್ರಿ** ರಾತ್ರಿಯ ಉತ್ತರಾರ್ಧ

**ಅಪರಿಗ್ರಹ** ಪರಿಗ್ರಹಣ ಮಾಡದ, ತೆಗೆದುಕೊಳ್ಳದ

**ಅಪರಿಚ್ಛಿನ್ನಸುಗುಣಪೂರ್ಣ** ಸದ್ಗುಣ ಪರಿಪೂರ್ಣತಮ

**ಅಪರಿಮಿತ** ಅನಂತ

**ಅಪರೋಕ್ಷ** ಪ್ರತ್ಯಕ್ಷ, ನೇರ, ಭಗವಂತನನ್ನು ಪ್ರತ್ಯಕ್ಷ ಕಾಣುವುದು

**ಅಪರ್ಣ, ಅಪರ್ಣಾ** ಪಾರ್ವತಿ

**ಅಪಲಾಪ** ನಿಂದೆ, ದೂರು

**ಅಪವರ್ಗ** ಮೋಕ್ಷ, ವೈಕುಂಠ; ಭೂಲೋಕ

**ಅಪವರ್ಗದ** ಮೋಕ್ಷ ಕೊಡುವವ–ಶ್ರೀಹರಿ

**ಅಪವರ್ಗಧಸಿಗೆ** ಮೋಕ್ಷದ ಹಂಚಿಕೆ

**ಅಪವರ್ಗಪ್ರದ** ಮೋಕ್ಷಪ್ರದ

**ಅಪವರ್ಗ್ಯ** ಮೋಕ್ಷಕ್ಕೆ ಯೋಗ್ಯ

**ಅಪವ್ರತ** ಕೆಟ್ಟವಾಕ್ಯ

**ಅಪಸರ್ಗ** ಮೋಕ್ಷ

**ಅಪಸರ್ಪಣ** ಹಿಂದಕ್ಕೆ ಹೋಗುವುದು

**ಅಪಸವ್ಯ** ಅಶುದ್ಧ, ಅಪವಿತ್ರ

**ಅಪಸವ್ಯಮನ** ವಿರುದ್ಧ ಮನ, ಅಯೋಗ್ಯ ಮನ

**ಅಪಸವ್ಯಹಸ್ತ** ಎಡಗೈ

**ಅಪಸಾತಕೆ** ತಮ್ಮತಮ್ಮೊಳಗೆ

**ಅಪಸ್ಮಾರ** ಮೂರ್ಛೆರೋಗ

**ಅಪಸ್ಮಾರಿ** ಬುದ್ಧಿಗೇಡಿ, ಮೂರ್ಛೆರೋಗಿ

**ಅಪಹತ** ಕಳೆ, ಓಡು

**ಅಪಹರ್ತ** ಪರಿಹರಿಸುವವ

**ಅಪಾಂಗ** ಕರುಣಾದೃಷ್ಟಿ, ಕಡೆಗಣ್ಣು, ಕಡೆಗಣ್ಣ ನೋಟ

**ಅಪಾಂಗಿ** ಕಡೆಗಣ್ಣ ನೋಟದವಳು

Rarest Archiver

**ಅಪಾನವಾಯು** ಗುದಸ್ಥಾನದ ವಾಯು; ಪಂಚಪ್ರಾಣರಲ್ಲಿ ಒಬ್ಬ
**ಅಪಾಪ** ಪುಣ್ಯ
**ಅಪಾರ** ಅನಂತ
**ಅಪಾರ್ಥ** ಅನ್ಯಾಯದ ನಿಷ್ಫಲ ಐಶ್ವರ್ಯ
**ಅಪು**<**ಅಪ್ಪು** ನೀರು; ಆಲಿಂಗನ
**ಅಪೂಟ** ಪೂರ್ಣ
**ಅಪೂಪ** ಪಕ್ವಾನ್ನ, ರವೆಯ ಭಕ್ಷ್ಯ
**ಅಪ್ಪ** ತಂದೆ
**ಅಪ್ಪ, ಅಪ್ಪಲು, ಅಪ್ಪಾಲು** ಸಿಹಿದೋಸೆ, ದೇವಸ್ಥಾನದಲ್ಲಿ ದೇವರ ನೈವೇದ್ಯಕ್ಕೆ ಮಾಡುವ ತಿನಿಸು, ದಪ್ಪವಾದ ದೋಸೆ
**ಅಪ್ಪಡಿಯಾಗು** ಆ ರೀತಿಯಾಗು, ಚೆನ್ನಾಗು
**ಅಪ್ಪಣೆ** ಅನುಮತಿ, ಒಪ್ಪಿಗೆ
**ಅಪ್ಪಾರ** ಅಪಾರ
**ಅಪ್ಪಾಲುಮರಳಪ್ಪು** ಹೊರಳುವೆ, ಅಪ್ಪಾಲೆ ತಿಪ್ಪಾಲೆ
**ಅಪ್ಪೀರ** ಮುದ್ದಾದ, ಸುಂದರವಾದ, ಒಪ್ಪುವ
**ಅಪ್ಪುನಿಧಿ** ಸಮುದ್ರ
**ಅಪ್ರತಿ** ಎಣೆಯಿಲ್ಲದ, ಬಹಳ ಹೆಚ್ಚಿನ, ಎದುರಿಲ್ಲದ, ಸರಿಗಟ್ಟದ
**ಅಪ್ರತಿಮಲ್ಲ** ಎದುರಾಳಿ ಇಲ್ಲದ ಜಟ್ಟಿ–ಕೃಷ್ಣ
**ಅಪ್ರತಿಹತ** ಪ್ರತಿವಾದಿಗಳಿಂದ ಭಂಗಪಡಿಸಲ್ಪಡದ, ಹಿಂದೂಡದ; ತಿರಸ್ಕರಿಸದ
**ಅಪ್ರಬುದ್ಧ** ತಿಳಿವಳಿಕೆ ಇಲ್ಲದವ, ಅಜ್ಞಾನಿ
**ಅಪ್ರಮೇಯ** ಅಳತೆಗೆ ಸಿಗದವನು, ಸರ್ವವ್ಯಾಪಿಯಾದ–ಕೃಷ್ಣ
**ಅಪ್ರಾಕೃತ** ಜ್ಞಾನಿ, ಪ್ರಕೃತಿಯ ಸಂಬಂಧವಿಲ್ಲದ, ಪ್ರಕೃತಿಗೆ ನಿಲುಕದವ–ಶ್ರೀಹರಿ
**ಅಪ್ರಾಪ್ಯ** ಎಟುಕದ, ಸಿಗದ
**ಅಪ್ರೀತಿ** ಪ್ರೀತಿಯಿಲ್ಲದ್ದು
**ಅಬದ್ಧ** ಸುಳ್ಳು, ಬದ್ಧನಾಗದೇ ಇರುವುದು; ಅರ್ಥಹೀನ, ಸೂಕ್ತವಲ್ಲದ
**ಅಬಲೆ** ಹೆಣ್ಣು
**ಅಬುಜಜಾಂಡೋದರ** ಬ್ರಹ್ಮಾಂಡವನ್ನೇ ಹೊಟ್ಟೆಯಲ್ಲಿಟ್ಟವನು, ಜಗದುದರ–ಶ್ರೀಹರಿ
**ಅಬುಜಭವ** ಬ್ರಹ್ಮ
**ಅಬುಜೆ** ಅಬ್ಧಿಜೆ–ಲಕ್ಷ್ಮಿ
**ಅಬುಧಿ** ಸಮುದ್ರ
**ಅಬ್ಜ** ಕಮಲ
**ಅಬ್ಜಜ** ಬ್ರಹ್ಮ
**ಅಬ್ಜಜಾಂಡ** ಬ್ರಹ್ಮಾಂಡ
**ಅಬ್ಜನಾಭ** ಪದ್ಮನಾಭ–ವಿಷ್ಣು
**ಅಬ್ಜಬಾಣ** ಮನ್ಮಥ
**ಅಬ್ಜಭವ** ಬ್ರಹ್ಮ
**ಅಬ್ಜಮಿತ್ರ** ಸೂರ್ಯ
**ಅಬ್ಜಸಂಭವ** ಬ್ರಹ್ಮ
**ಅಬ್ಜಸಂಭವಪಿತ** ವಿಷ್ಣು
**ಅಬ್ಜಸಖ** ಸೂರ್ಯ
**ಅಬ್ಜಸದನ** ಕಮಲದಲ್ಲಿ ವಾಸ ಮಾಡುವವಳು–ಲಕ್ಷ್ಮಿ
**ಅಬ್ಜಾಕ್ಷ** ಕಮಲಾಕ್ಷ–ಶ್ರೀಹರಿ
**ಅಬ್ಜಾಪಾರಿಗ** ಬ್ರಾಹ್ಮಣ, ಬ್ರಹ್ಮಜ್ಞಾನಿ
**ಅಬ್ದ** ವರುಷ, ಮೋಡ
**ಅಬ್ದಿದಾವರ್ತ** ನೀರಿನೊಡನೆ; ಅನೇಕ ಬಾರಿ
**ಅಬ್ಧಿ** ಸಮುದ್ರ
**ಅಬ್ಧಿಜೆ, ಅಬ್ಧಿತನಯೆ** ಸಮುದ್ರದಲ್ಲಿ ಹುಟ್ಟಿದವಳು–ಲಕ್ಷ್ಮಿ
**ಅಬ್ಧಿಮೇಖಲ** ಕಡಲೇ ಒಡ್ಯಾಣವಾದ ಭೂಮಿ, ಕಡಲೇ ಸೀಮೆಯಾದ ಭೂಮಿಯುದ್ದಕ್ಕೂ
**ಅಬ್ಧಿಸಪ್ತಕ** ಸಪ್ತ ಸಮುದ್ರಗಳು
**ಅಬ್ಬರ** ಆಡಂಬರ, ಆರ್ಭಟ
**ಅಬ್ಬರಿಸು** ಆರ್ಭಟಿಸು
**ಅಬ್ಬು** ಸಾಧ್ಯವಾಗು
**ಅಭಯಕರ** ಅನುಗ್ರಹ ಹಸ್ತ

Rarest Archiver

**ಅಭಯಕೃತ್** ಅಭಯವನ್ನುಂಟು ಮಾಡುವವನು

**ಅಭವ** ಬ್ರಹ್ಮ; ಹುಟ್ಟು ಇಲ್ಲದವ

**ಅಭಾಗ್ಯಲಕ್ಷ್ಮಿ** ದೌರ್ಭಾಗ್ಯದ ದೇವತೆ, ಅಲಕ್ಷ್ಮಿ, ಕುಲಕ್ಷ್ಮಿ

**ಅಭಾವಜ್ಞಾನಿ** ಅಜ್ಞಾನಿ, ಅಪ್ರಬುದ್ಧ

**ಅಭಿಕಾರ, ಅಭಿಗಾರ** ತುಪ್ಪ

**ಅಭಿಜಿತ್** ಸೂರ್ಯೋದಯದಿಂದ ಹದಿನೈದು ಘಳಿಗೆ (ಆರು ತಾಸು) ನಂತರದ ಕಾಲಾವಧಿ

**ಅಭಿಜ್ಞ** ಚೆನ್ನಾಗಿ ತಿಳಿದವನು

**ಅಭಿಧಾನ** ಹೆಸರು, ಅನ್ವರ್ಥನಾಮ

**ಅಭಿನ್ನ** ಭಿನ್ನವಲ್ಲದ

**ಅಭಿಮಂತ್ರಿತ** ಮಂತ್ರಿಸಲ್ಪಟ್ಟ

**ಅಭಿಮುಖ** ಎದುರು

**ಅಭಿವಾದನ** ನಮಸ್ಕಾರ, ಗೋತ್ರಪ್ರವರ ಸಹಿತ ನಮಿಸುವುದು

**ಅಭಿವ್ಯಾಪ್ತ** ವ್ಯಾಪಿಸಿರುವ, ಹಬ್ಬಿರುವ

**ಅಭಿವ್ಯಾಪ್ತಿ** ವ್ಯಾಪಿಸಿರುವ ಚಿನ್ಮಯ

**ಅಭಿಷೇಚನೆ, ಅಭಿಷೇಣ** ಅಭಿಷೇಕ

**ಅಭೀಷ್ಟ** ಬಯಸಿದುದು, ಕೋರಿಕೆ, ಇಚ್ಛೆ

**ಅಭ್ಯಂಗನ, ಅಭ್ಯಂಜನ** ಎಣ್ಣೆ ನೀರಿನಸ್ನಾನ, ಅಭಿಷೇಕ, ಮಂಗಳಸ್ನಾನ

**ಅಭ್ಯಂತರ** ಅಂತರಂಗ; ಅಡ್ಡಿ, ಆತಂಕ

**ಅಭ್ಯಂತ್ರ** ತೊಂದರೆ

**ಅಭ್ಯಾಗತ** ಅನಿರೀಕ್ಷಿತವಾಗಿ ಬಂದ ಅತಿಥಿ, ಕರೆಯದೆ ಬಂದವನು

**ಅಭ್ರ** ಮೋಡ, ಆಕಾಶ; ಕಣ್ಣು

**ಅಮರ** ಶಾಶ್ವತ, ಮರಣವಿಲ್ಲದ; ದೇವತೆ

**ಅಮರತಟನೀಧರ** ಗಂಗಾಧರ

**ಅಮರತರಂಗಿಣಿ** ದೇವನದಿಯಾದ ಗಂಗೆ

**ಅಮರತರಂಗಿಣಿಪಿತ** ಗಂಗಾಜನಕ–ಶ್ರೀಹರಿ

**ಅಮರತರು** ಕಲ್ಪವೃಕ್ಷ

**ಅಮರನದಿ** ಗಂಗೆ, ಭಾಗೀರಥಿ

**ಅಮರಪತಿ** ಇಂದ್ರ

**ಅಮರಪಾದಪ, ಅಮರಾಂಘ್ರಿಪ** ಕಲ್ಪವೃಕ್ಷ

**ಅಮರಾಸ್ಯ** ಅಗ್ನಿ

**ಅಮರಾಳಿ** ದೇವತೆಗಳ ಸಮೂಹ

**ಅಮರಿಸು** ಒಂದಾಗು, ಸೇರು, ಕೂಡು

**ಅಮರುತ** ಅಮೃತ

**ಅಮರೇಂದ್ರ, ಅಮರೇಶ** ದೇವೇಂದ್ರ, ಇಂದ್ರ

**ಅಮರೋತ್ತಂಸ** ದೇವತೆಗಳಲ್ಲಿ ಶ್ರೇಷ್ಠನಾದವನು: ಪೂರ್ಣಪ್ರಜ್ಞ

**ಅಮರ್ದು** ಆಕ್ರಮಿಸಿ; ಅಮೃತ

**ಅಮಲ** ಮಲವಿಲ್ಲದ್ದು, ಪವಿತ್ರ, ನಿರ್ಮಲ

**ಅಮಲಪಿತ್ತ** ಮತ್ತು ಬರುವ ಪಿತ್ತ

**ಅಮಲೋಸಗನಾಗದಿರಲು** ಬಟ್ಟೆಯೊಗೆದರೂ ಬೆಳ್ಳಗೆ(ನಿರ್ಮಲ) ಆಗದಿರಲು

**ಅಮಳ** ನಿರ್ಮಲವಾದ, ಪರಿಶುದ್ಧ

**ಅಮಾತ್ಯ** ಮಂತ್ರಿ

**ಅಮಿತ** ಮಿತಿಯಿಲ್ಲದ, ಅಪಾರ, ಅಧಿಕ, ಅನಂತ

**ಅಮಿತಗುಣಪೂರ್ಣ** ಅನಂತಗುಣಗಳಿಂದ ಪೂರ್ಣನಾದವ–ಪರಮಾತ್ಮ

**ಅಮಿತಪ್ರಮತಿ** ಅತಿರೋಹಿತ ಜ್ಞಾನಿ–ಮಧ್ವಾಚಾರ್ಯ

**ಅಮಿತಭೋಕ್ತ** ಪ್ರಳಯಕಾಲದಲ್ಲಿ ಸಮಸ್ತ ಚರಾಚರ ಜಗತ್ತನ್ನು ಭೋಜನ ಮಾಡುವವ–ಶ್ರೀಹರಿ

**ಅಮಿತಮತಿ** ಮಿತಿಯಿಲ್ಲದ ಜ್ಞಾನವುಳ್ಳ ಶ್ರೀಹರಿ; ಪೂರ್ಣಪ್ರಜ್ಞರಾದ ಮಧ್ವಾಚಾರ್ಯರು

**ಅಮಿತಸೌಲಭ್ಯ** ಅತ್ಯಂತ ಅನುಕೂಲವಾದ

**ಅಮಿತಾರ್ಕಪ್ರಕಾಶ** ಕೋಟಿಸೂರ್ಯ ಪ್ರಕಾಶ

**ಅಮಿತೇಂದುರುಚಿಹಾಸ** ಬೆಳುದಿಂಗಳಂತಹ ನಗು

**ಅಮಿತೋದ್ಧಾರ** ಉದ್ಧರಿಸುವುದರಲ್ಲಿ ಮಿತಿಯಿಲ್ಲದ

**ಅಮುಕುತ** ಅಮುಕ್ತ, ನಿತ್ಯ ಸಂಸಾರಿ

Rarest Archiver

**ಅಮೂರ್ತಿ** ನಿರಾಕಾರ
**ಅಮೃತ** ಸಾವಿಲ್ಲದ ಅಮರತ್ವ ಕೊಡುವ ಪೇಯ
**ಅಮೃತರೂಪ** ಚಿರಂಜೀವಿ, ಅವಿನಾಶಿ
**ಅಮೃತಸರಿತ** ದೇವಗಂಗೆ
**ಅಮೃತಾಂಧಸ** ಅಮೃತವೇ ಆಹಾರವಾಗಿದ್ದ ದೇವಗಂಧರ್ವರು
**ಅಮೃತಾಂಶು** ಚಂದ್ರ
**ಅಮೇಧ್ಯ** ತಿನ್ನಬಾರದ್ದು; ಮಲ
**ಅಮೇಯಾತ್ಮ** ವೇದಾದಿ ಪ್ರಮಾಣಗಳಿಂದಲೂ ಸಂಪೂರ್ಣವಾಗಿ ತಿಳಿಯಲ್ಪಡದವ–ಶ್ರೀಹರಿ
**ಅಮ್ಮೆಸು** ಸೇರು
**ಅಮೋಘ** ಅತಿಶಯ
**ಅಮ್ಮ** ತಂದೆ, ತಾಯಿ
**ಅಮ್ಮಗೂಡು** ಸಹಕರಿಸು, ಒಪ್ಪು
**ಅಮ್ಮಲಾ** ಅಮಲ, ನಿರ್ಮಲ
**ಅಮ್ಮಾಲೆ** ಒಂದು ಬಗೆಯ ಆಟ
**ಅಮ್ಮಿ** ಮೊಲೆ; ಚಿಕ್ಕ ಹೆಂಗಸು
**ಅಮ್ಮಿಯಾಲಮೃತ್ಯೆರಿ** ಮೊಲೆ ಹಾಲ ಅಮೃತವನ್ನು ಎರೆ, ಮೊಲೆಹಾಲು ಕೊಡು
**ಅಮ್ಮಿಳ್ಳ** (?) ಮುಚ್ಚು (?)
**ಅಮ್ಮು** ಸಾಮರ್ಥ್ಯ; ಸಾಧ್ಯ
**ಅಮ್ಮೆ** ಅಮ್ಮಿ, ಮೊಲೆ, ಮೊಲೆಪಾಲು
**ಅಮ್ಯಾತಸುಖ** ಮೋಕ್ಷಸುಖ, ಅಮಿತಸುಖ
**ಅಮ್ಲಾನ** ಯಾವಾಗಲೂ ಬಾಡದಿರುವ
**ಅಯನ** ಚಲಿಸುವುದು; ಪ್ರದೇಶ; ಆರು ತಿಂಗಳ ಅವಧಿ
**ಅಯಶರೀರ, ಅಯಃಶರೀರ** ಅಶರೀರ, ಉಕ್ಕಿನ ದೇಹ
**ಅಯೋನಿಜ** ಯೋನಿಯಿಂದ ಹೊರ ಬರದವ, ಗರ್ಭವಾಸವಿಲ್ಲದವ
**ಅಯ್ದಾರು** ಐದು ಆರು, ಪಂಚೇಂದ್ರಿಯ ಮತ್ತು ಷಡ್ರಿಪು
**ಅಯ್ಯ** ತಂದೆ
**ಅರ** ಧರ್ಮ, ದೋಷ, ಪಾಪ; ಚಕ್ರನೇಮಿ, ಕ್ಷಾಮ; ಗಾಡಿಯ ಅಚ್ಚು
**ಅರಕ<ಅರ್ಕ** ಸೂರ್ಯ
**ಅರಗಿನಪಾಯಸ** ಪಾಯಸವಾದರೂ ಮಾರಕವಾದುದು, ಅರಗು ಹಾಕಿ ಮಾಡಿದ ಪಾಯಸ
**ಅರಗಿಳಿ** ರಾಜಗಿಳಿ
**ಅರಜಾಣ** ಜಾಣರಲ್ಲಿ ಅರಸು, ಶ್ರೇಷ್ಠಜ್ಞಾನಿ
**ಅರಣಿ** ಹೂವು; ಯಾಗಕ್ಕೆ ಉಪಯೋಗಿಸುವ ಕೊರಡು; ಒಬ್ಬ ಋಷಿಯ ಹೆಸರು
**ಅರತ** ಅರ್ಥ, ಅನಾಸಕ್ತ
**ಅರತು** ಅನಾಸಕ್ತಿ
**ಅರದೂರ** ಪಾಪವನ್ನು ಕಳೆಯುವವ, ಪಾಪರಹಿತ
**ಅರವಟ್ಟಿಗೆ** ದಾರಿಹೋಕರಿಗೆ ನೀರು ಪಾನಕ, ಆಹಾರ, ಇತ್ಯಾದಿ ಕೊಡುವ ಸ್ಥಳ
**ಅರವಣಿಕಾರರು** ಕೊಟ್ಟ ಮಾತಿನಂತೆ ನಡೆಯದವರು
**ಅರವತ್ತುಗಳಿಗೆ** ಒಂದು ದಿವಸದ ಅವಧಿ
**ಅರವರ್ಜಿತ** ಪಾಪರಹಿತ, ಅಧರ್ಮಿ
**ಅರವಿಂದ** ಕಮಲ, ತಾವರೆ
**ಅರವಿಂದನಯನ** ಕಮಲದಂತೆ ಕಣ್ಣುಗಳುಳ್ಳವ–ವಿಷ್ಣು
**ಅರವಿಂದನಾಭ** ವಿಷ್ಣುವಿನ ಪದ್ಮನಾಭರೂಪ
**ಅರವಿಂದಮಂದಿರೆ** ಲಕ್ಷ್ಮಿ
**ಅರವಿಂದಾಂಬಕೀ** ಕಮಲದಂತೆ ಕಣ್ಣುಗಳುಳ್ಳವಳು; ವಿಷ್ಣುವಿನ ಮೋಹಿನೀ ರೂಪ
**ಅರವಿಂದಾನನೆ** ಕಮಲಮುಖಿ–ಲಕ್ಷ್ಮಿ
**ಅರವಿಂದಾಸನ** ಬ್ರಹ್ಮ
**ಅರವಿಂದಾಸನಯ್ಯ** ವಿಷ್ಣು
**ಅರವಿದೂರ** ದೋಷರಹಿತ, ಪರಿಪೂರ್ಣನಾದವ, ಧರ್ಮಾತ್ಮ
**ಅರಶೀಲಗುಟ್ಟು** ಅವಮರ್ಯಾದೆಮಾಡು
**ಅರಸ** ರಾಜ, ಕಂಸ

Rarest Archiver

**ಅರಸಂಚೆ** ರಾಜಹಂಸ

**ಅರಸತ್ತಿಗೆ** ರಾಜನ ಶ್ವೇತಛತ್ರ

**ಅರಸು** ಹುಡುಕು

**ಅರಹಾಗ** ಅರ್ಧ ಆಣೆ, ಆರು ಕಾಸು, ಹಳೇನಾಣ್ಯ

**ಅರಳಂಬು** ಹೂಬಾಣ

**ಅರಳನಂಬುನ** ಹೂವಿನಂತಹ ಕಣ್ಣುಳ್ಳವ–ವೇಂಕಟೇಶ

**ಅರಳಾಂಬುಜ** ಅರಳಿದ ಕಮಲ

**ಅರಳಿನಮಳೆ** ಹೂಬಾಣ

**ಅರಳಿಮರನೆರಕ್ಕಸ** ಬ್ರಹ್ಮರಾಕ್ಷಸ

**ಅರಳೆಲೆ** ಅರಳಿಎಲೆಯಾಕಾರದ ಆಭರಣ

**ಅರಳೆಲೆಯಢಾಳ** ಅರಳೆಲೆಯ ಕಾಂತಿ

**ಅರಾತಿ** ಶತ್ರು

**ಅರಾತ್ನಿ** ಮೊಳಕೈ

**ಅರಿ** ತಿಳಿ, ಚಕ್ರ, ಶತ್ರು, ದೋಷ, ಆಯುಧ, ನಾಶಮಾಡು

**ಅರಿಕರಿಷಂಡಮೃಗೇಂದ್ರ** ಶತ್ರುಗಳೆಂಬ ಆನೆಗಳ ಸಮೂಹಕ್ಕೆ ಸಿಂಹ

**ಅರಿಕೆ** ಅಜ್ಞಾನ

**ಅರಿಜನಪ್ರಚಂಡ** ಶತ್ರುಗಳಿಗೆ ಪ್ರಚಂಡ; ವೈರಿಗಳ ಕಾಲ–ವಿಷ್ಣು

**ಅರಿದರ** ಚಕ್ರ, ಶಂಖ

**ಅರಿದರಿದು** ಅಸಾಧ್ಯ

**ಅರಿದರೀಧರ** ಶಂಖಚಕ್ರಧಾರಿ–ವಿಷ್ಣು

**ಅರಿದು** ಕತ್ತರಿಸಿ; ಅಸಾಧ್ಯ, ಅಶಕ್ಯ

**ಅರಿಪರಿಹರ** ವೈರಿನಾಶಕ

**ಅರಿಪಾಣಿ** ಚಕ್ರಪಾಣಿ–ವಿಷ್ಣು

**ಅರಿಪು** ಮನಸ್ಸಿಗೆ ತಿಳಿಯುವಂತೆ ಹೇಳು, ಮನಸ್ಸಿಗೆ ಮುಟ್ಟುವಂತೆ ಮಾಡು

**ಅರಿಮದಖಂಡನ** ವೈರಿಗಳ ಮದ ಹರಿಸಿದವನು–ಶ್ರೀಹರಿ

**ಅರಿಮದಭಂಗ** ವೈರಿಗಳ ಸೊಕ್ಕನ್ನು ಮುರಿದವ

**ಅರಿಮಸ್ತಕ** ಶತ್ರುರುಂಡ ಅಥವಾ ತಲೆ

**ಅರಿವಿಭಾಡ** ಶತ್ರುನಾಯಕ

**ಅರಿವು** ಜ್ಞಾನ, ತಿಳಿವಳಿಕೆ

**ಅರಿವೆ** ಬಟ್ಟೆ

**ಅರಿಷಡ್ವರ್ಗ** ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಗಳೆಂಬ ಮನುಷ್ಯನ ಆರು ಆಂತರಿಕ ವೈರಿಗಳು

**ಅರಿಷ್ಟ** ಒಬ್ಬ ದೈತ್ಯ; ಬಡತನ; ಪಾಪ, ಅಶುಭ, ಕೆಡಕನ್ನುಂಟು ಮಾಡುವ

**ಅರಿಹರ** ಪಾಪವನ್ನು ಹೋಗಲಾಡಿಸುವವನು, ವೈರಿಯನ್ನು ಕತ್ತರಿಸುವವನು–ಶ್ರೀಹರಿ

**ಅರಿಹೃದಯದಲ್ಲಣ** ಶತ್ರು ಹೃದಯ ನಡುಗಿಸುವವ

**ಅರುಣ** ಸೂರ್ಯನ ಸಾರಥಿ; ಕೆಂಪು

**ಅರುಣನಿಭ** ಸೂರ್ಯ ಕಿರಣದಂತೆ ಹೊಳೆಯುವ, ಕಾಂತಿಯುಳ್ಳ

**ಅರುಣಪಲ್ಲವ** ಕೆಂಪುಚಿಗುರು

**ಅರುಣವಸನ** ಕಾವಿಬಟ್ಟೆ

**ಅರುಣಾಂಬರ** ರಕ್ತ(ನಸುಗೆಂಪು)ವಸ್ತ್ರ

**ಅರುಣಾಂಬರಧರ** ರಕ್ತ(ನಸುಗೆಂಪು)ವಸ್ತ್ರಧಾರಿ; (ಪೀತಾಂಬರಧರ ಎಂಬ ಅರ್ಥವೂ ಇದೆ, ಆದರೆ ಅಪರೂಪ)

**ಅರುಣಾಂಬು(ಭೋ)ರುಹ** ಕೆಂಪು ಕಮಲದ ಹೂವು, ಕೆಂದಾವರೆ

**ಅರುಣಾಚಲ** ಅರುಣಾಚಲೇಶ್ವರನ ವಿಸ್ತಾರವಾದ ಭವ್ಯ ಮಂದಿರವಿರುವ ತಿರುವಣ್ಣಾಮಲೈ ಬಳಿ ಇರುವ ಊರು; ಪರ್ವತ

**ಅರುಣಾಚಲನಿಲಯ** ಅರುಣಾಚಲೇಶ್ವರ, ಅಲ್ಲಿಯ ಕ್ಷೇತ್ರದೇವತೆ

**ಅರುಣಾತ್ಮಜ** ಜಟಾಯು

**ಅರುಣಾಬ್ಜಚರಣ** ಕೆಂಪು ಕಮಲದಂತಹ ಪಾದವುಳ್ಳವ

Rarest Archiver

**ಅರುಣಿ** ಸಾಲಮಾಡದವ
**ಅರುಹ** ಅರ್ಹ
**ಅರುಹು** ಹೇಳು, ತಿಳಿಸು; ಅರಿವು, ಜ್ಞಾನ
**ಅರುಳು** ಕೃಪೆ, ಕರುಣೆ
**ಅರೆ** ಕಲ್ಲುಬಂಡೆ; ಚಕ್ರ; ಕಡಮೆ, ಅರ್ಧ
**ಅರೆಕಟ್ಟು** ಹಿಂದಿನಿಂದ ಬಂದು ಬಿಗಿದಪ್ಪು, ಅಡ್ಡಗಟ್ಟು
**ಅರೆದಿಂಗಳ್** ಅರ್ಧಚಂದ್ರ
**ಅರೆಮೊರೆ** ಅರೆಮರೆ, ಸಂಶಯ, ದಿಗಿಲು
**ಅರೆಯುಟ್ಟು** ಹಿಂದಕ್ಕಟ್ಟು, ಬೆನ್ನಟ್ಟು
**ಅರೆಯರು** ನೃತ್ಯ ಮಾಡುತ್ತ ಹಾಡುವ ಶ್ರೀವೈಷ್ಣವರು
**ಅರೆಲವ** ಅರ್ಧ, ತುಂಡು, ಚೂರು, ಕಿಂಚಿತ್ತಾದರೂ; ರೆಪ್ಪೆಯಿಂದ ಕಣ್ಣು ಮಿಳಕಿಸುವ ಕಾಲದ ಅರ್ಧ ಅವಧಿ
**ಅರೆವಾಳ** ಕತ್ತಿ, ಕರವಾಳು
**ಅರೆಶಶಿ** ಅರ್ಧಚಂದ್ರನಿಗೆ ಸಮಾನ (ಅಷ್ಟಮೀ ಚಂದ್ರ)
**ಅರೋಚಕ** ಅಜೀರ್ಣ; ರುಚಿಯಿಲ್ಲದ
**ಅರ್ಕ** ಸೂರ್ಯ; ಎಕ್ಕ
**ಅರ್ಕಕೋಟಿಪ್ರದೀಪ** ಕೋಟಿಸೂರ್ಯ ಪ್ರಕಾಶ
**ಅರ್ಕವದನೆ** ಸೂರ್ಯನಂತೆ ಹೊಳೆಯುವ ಮುಖದವಳು
**ಅರ್ಕಸ್ಥ** ಸೂರ್ಯನೊಳಗಿರುವವನು
**ಅರ್ಗಳವಾಗು** ಹೆಚ್ಚಾಗು
**ಅರ್ಘ್ಯ** ದೇವತೆಗಳಿಗೂ ಪೂಜ್ಯರಿಗೂ ಕೈತೊಳೆಯಲು ಕೊಡುವ ನೀರು; ದೇವತೀರ್ಥದಿಂದ ಬಿಡುವ ಜಲ
**ಅರ್ಚ** ಪೂಜಿಸುವ
**ಅರ್ಚನೆ** ಪೂಜೆ
**ಅರ್ಚೆ** ಪ್ರತಿಮೆ
**ಅರ್ಜನೆ** ಗಳಿಕೆ
**ಅರ್ಜುನ** ಗಳಿಕೆ; ಮಧ್ಯಪಾಂಡವ, ಪಾರ್ಥ; ಮತ್ತಿಮರ
**ಅರ್ಜುನಸಖ** ಕೃಷ್ಣ
**ಅರ್ಜುನಸೂತ** ಅರ್ಜುನನ ಸಾರಥಿ–ಕೃಷ್ಣ
**ಅರ್ಣ** ಅಕ್ಷರಗಳ; ಸಾಗರ, ವಿಶಾಲ, ವಿಪುಲ
**ಅರ್ಣವ** ಸಮುದ್ರ
**ಅರ್ತಿ** ಪ್ರೀತಿ; ನೋವು, ವ್ಯಥೆ, ದೋಷ
**ಅರ್ತಿಕಾರ್ತಿ** ಪ್ರೀತಿಯ ಹೆಂಡತಿ, ಪ್ರೇಯಸಿ
**ಅರ್ತಿಹಂತ** ಪಾಪಪರಿಹಾರಕ, ಸಂಕಟಹರ–ಶ್ರೀಹರಿ
**ಅರ್ಥ** ಪುರುಷಾರ್ಥ, ಸಂಪತ್ತು
**ಅರ್ಥಕಾರಿಣಿ** ಸಂಪತ್ತನ್ನು ನೀಡುವವಳು–ಲಕ್ಷ್ಮಿ
**ಅರ್ಥಕೃತಸ್ನೇಹ** ಫಲಾಪೇಕ್ಷೆಯ ಸ್ನೇಹ
**ಅರ್ಥಿ** ಅಪೇಕ್ಷೆ, ಇಚ್ಛಿಸುವವ, ಬೇಡುವುದು
**ಅರ್ಥಿಪಂಕೇರುಹ** ಸೂರ್ಯ
**ಅರ್ಥಿಮಂದಾರ** ಬೇಡಿದುದನ್ನು ನೀಡುವ ಪಾರಿಜಾತ ಪುಷ್ಪ; ಕಲ್ಪವೃಕ್ಷ
**ಅರ್ದಿ** ಪರಿಪೂರ್ಣ
**ಅರ್ದಿತ** ನೆನೆ
**ಅರ್ದಿಸು** ಅಡಗಿಸು
**ಅರ್ಧಚಂದ್ರಫಾಲ** ಶಿವ, ಅಷ್ಟಮಿ ಚಂದ್ರನಂತೆ ಹಣೆಯುಳ್ಳವ
**ಅರ್ಧಮಾನ** ಒಂದು ಅಳತೆ, ಅರ್ಧಪಾವು
**ಅರ್ಧಿ** ಪರಿಪೂರ್ಣ
**ಅರ್ಬುದ** ಹತ್ತುಕೋಟಿ
**ಅರ್ಭಕ** ಶಿಶು, ಸಣ್ಣ ಹುಡುಗ
**ಅರ್ಯಮ** ಸೂರ್ಯ
**ಅರ್ವ** ಹೀನ, ನೀಚ; ಕುದುರೆ
**ಅರ್ವಪಥ** ಜ್ಞಾನದ ಹಾದಿ
**ಅರ್ವಾಕ್ಶಿರ** ತಲೆಕೆಳಗಾಗಿ ಕಾಲುಮೇಲಾಗಿ
**ಅರ್ಹಣೆ** ಪೂಜಾಸಾಮಗ್ರಿ
**ಅಲ** (ಅವ್ಯಯ) ಸಮರ್ಥ

Rarest Archives

**ಅಲಂ** ಯೋಗ್ಯ

**ಅಲಕುಮಿ** ಕಲಿಮಾನಿನಿ, ಬುದ್ಧಿಮಾನಿ

**ಅಲಗು** ಆಯುಧದ ಮೊನೆ, ಕತ್ತಿ

**ಅಲತಿಗೆ**<ಅಲಕ್ತಕ ಕೆಂಬಣ್ಣದ ಅರಗು (ಸ್ತ್ರೀಯರು ಕಾಲಿಗೆ ಹಚ್ಚಿಕೊಳ್ಳುವ ಕೆಂಪು ಬಣ್ಣ)

**ಅಲಬು** ಒಂದು ಜಾತಿಯ ಹುಲ್ಲು, ಜೊಂಡು

**ಅಲಮೇಲುಮಂಗ** ಲಕ್ಷ್ಮೀದೇವಿಯ ಅವತಾರ; ತಿರುಚ್ಚಾನೂರು

**ಅಲಮೇಲುಮಂಗಪತಿ** ವೇಂಕಟೇಶ

**ಅಲಮೇಲುಮಂಗಮ್ಮ** ತಿರುಚ್ಚಾನೂರಿನ ಪದ್ಮಾವತಿ

**ಅಲರಿಸು** ಅರಳು, ಹೂವು

**ಅಲವ** ಬಹಳ, ಸರ್ವ, ದೊಡ್ಡ, ಪೂರ್ಣ

**ಅಲವಬೋಧ** ಪೂರ್ಣಭೋಧ–ಮಧ್ವಾಚಾರ್ಯ

**ಅಲವರು** ಆಶೆಪಡು, ಹಂಬಲಿಸು

**ಅಲವು** ಅಲ್ಲಾಡು

**ಅಲಸು** ಉದಾಸೀನ ಮಾಡು; ಆಯಾಸಗೊಳ್ಳು

**ಅಲಿವರು** ಅಲೆಯುವವರು

**ಅಲೆಬಡಿಸು** ಪೀಡಿಸು

**ಅಲ್ಪನೀರ** ಸಣ್ಣವ

**ಅಲ್ಲ** ಶುಂಠಿ; ಅಯೋಗ್ಯ; ನಿಷಿದ್ಧ

**ಅಲ್ಲಳಿ** ವಿನೋದ

**ಅವ** ಜ್ಞಾನ

**ಅವಕಾಶ** ನಡುವಿನ ಪ್ರದೇಶ; ಸಂದರ್ಭ ಒದಗು

**ಅವಗಡ** ಅಸಡ್ಡೆ

**ಅವಗಡಿಸು** ಅಪಮಾನಿಸು, ಸೋಲಿಸು

**ಅವಗಡೆಯ** ತೊಂದರೆ, ಸಾಹಸ

**ಅವಗಾಹ್ಯ** ಚೆನ್ನಾಗಿ ತಿಳಿಯುವುದು

**ಅವಗುಣ** ಹೀನಸ್ವಭಾವ, ದುರ್ಗುಣ, ದೋಷ

**ಅವಚಿಕೊ** ಒತ್ತಿ ಅಪ್ಪಿಕೊ, ತಬ್ಬು

**ಅವಜ್ಞೆ** ಅಲಕ್ಷ್ಯ, ಕಡೆಗಣಿಸುವಿಕೆ, ಅವಮಾನ

**ಅವಡು ಕಚ್ಚು** ಅವಡೆ/ದವಡೆ/ ತುಟಿ ಕಚ್ಚು

**ಅವತಾರ** ದೇವತೆಗಳೆಲ್ಲರೂ ಭಿನ್ನ ಅಂಶಗಳಿಂದ ಬೇರೆಬೇರೆ ರೂಪ ಹೊಂದಿರುವುದೆ ಅವತಾರ

**ಅವತೀರ್ಣ** ಉದ್ಭವ

**ಅವದಾನ** ಆಹುತಿ, ಪ್ರಶಸ್ತವಾದ ಕೆಲಸ

**ಅವದ್ಯ** ನಿಂದ್ಯ, ಹೀನ

**ಅವಧರಿಸು** ಕೇಳು

**ಅವಧಾನ** ಮನಸ್ಸಿನ ಏಕಾಗ್ರತೆ; ಎಚ್ಚರಿಕೆ ಹೇಳುವುದು; ಸ್ತುತಿ ಮಾಡುವುದು

**ಅವಧಾರಣ** ನಿಶ್ಚಯ, ಒತ್ತಿ ಹೇಳುವುದು

**ಅವಧಾರು** ಕೇಳು; ದೇವತೆ–ಗುರು–ರಾಜ–ಹಿರಿಯರೇ ಮೊದಲಾದವರ ಗಮನಸೆಳೆಯಲು ಬಳಸುವ ಮಾತು

**ಅವಧೂತ** ಎಲ್ಲವನ್ನು ತೊರೆದವ, ಬೈರಾಗಿ, ವೈರಾಗ್ಯಶಾಲಿ

**ಅವಧ್ಯ** ಯಾರಿಂದಲೂ ಕೊಲ್ಲಲ್ಪಡಲಾರದ

**ಅವನಿ** ಭೂಮಿ

**ಅವನಿಜೆ** ಸೀತೆ

**ಅವನಿಜೆಪತಿ** ರಾಮ

**ಅವನಿಧರ** ವರಾಹಾವತಾರಿ, ಶ್ರೀಹರಿ

**ಅವನಿಪ** ರಾಜ

**ಅವನಿಪತಿ** ಅರಸ, ದೊರೆ

**ಅವನಿಪಮಹೇಂದ್ರ** ರಾಜಮಹೇಂದ್ರಿ(ಊರು)

**ಅವನಿಪಾಲ** ರಾಜ

**ಅವನಿಪಿತ** ಹಿರಣ್ಯಕಶ್ಯಪ

**ಅವನೀಶ, ಅವನೀಶ್ವರ** ದೊರೆ, ವರಾಹದೇವರು

**ಅವನುಡಿ** ಕೆಟ್ಟ ಮಾತು

**ಅವಭೃತ** ಯಾಗದ ಅನಂತರ ಮಾಡುವ ಮಂಗಳಸ್ನಾನ

**ಅವಮತಿ** ಅವಮಾನ

**ಅವರ** ನೀಚ, ಕೆಳಮಟ್ಟ, ಅಧಮ

**ಅವರಜ** ಅನಂತರ ಹುಟ್ಟಿದವ, ತಮ್ಮ

**ಅವರಜಾರಾತಿ** ತಮ್ಮನ ಶತ್ರು

Rarest Archiver

**ಅವಲಬೋಧಮತಿ** ವಾಯುಮತಿ
**ಅವಲಿ, ಅವಲು** ಅವಲಕ್ಕಿ
**ಅವಲೋಕನ** ನೋಟ, ದೃಷ್ಟಿ
**ಅವಲೋಕನಕೂರ್ಮದೃಷ್ಟಿ** ಆಮೆಯು ಕೇವಲ ತನ್ನ ದೃಷ್ಟಿಯಿಂದಲೇ ತನ್ನ ಮರಿಗಳನ್ನು ಪೋಷಣೆ ಮಾಡುತ್ತದೆಂದು ನಂಬಿಕೆ
**ಅವಶ** ವಶವಲ್ಲದ, ಸ್ವತಂತ್ರ; ಅಸಾಧ್ಯ
**ಅವಸರ** ಕಾರ್ಯ; ಸಂದರ್ಭ, ಅವಕಾಶ, ಸಮಯ; ಬೇಗ, ಲಗುಬಗೆ
**ಅವಸರಮನೆ** ಅಡಿಗೆ ಮನೆ
**ಅವಸಾನ** ಕೊನೆ
**ಅವಸ್ಥಾತ್ರಯ** ಜಾಗ್ರತ್, ಸ್ವಪ್ನ, ಸುಷುಪ್ತಿ
**ಅವಹಿತ** ನಿಯೋಜಿಸಿದ, ಇಡಲ್ಪಟ್ಟ; ಏಕಾಗ್ರಚಿತ್ತ-ವುಳ್ಳ
**ಅವಾಙ್ಮಾನಸಗೋಚರ** ಜ್ಞಾನ ಮತ್ತು ಚಿಂತನೆಗಳಿಗೆ ಪೂರ್ಣವಾಗಿ ಕಾಣದವನು
**ಅವಿ** ಒಂದು ಅಳತೆ; ಕುರಿ ಮೇಕೆ; ಸೂರ್ಯ, ಬೆಟ್ಟ, ಗಾಳಿ, ಎಕ್ಕದಗಿಡ
**ಅವಿಕಾರ** ನಿರ್ವಿಕಾರ
**ಅವಿಕ್ಲವ** ಕೆಟ್ಟಭಾವನೆ
**ಅವಿತಾಪ್ರು** ಒಬ್ಬ ಗಂಧರ್ವ
**ಅವಿದಿತ** ದಡ್ಡ, ತಿಳಿಯದಿರುವುದು
**ಅವಿದ್ಯಾ** ಅಜ್ಞಾನಾದಿ ಮಾಯಾ ಪಂಚಕಗಳಲ್ಲಿ ಒಂದು
**ಅವಿನಾಶ** ನಾಶವಿಲ್ಲದ್ದು, ಅಚ್ಯುತವಾದ
**ಅವಿನೀತ** ವಿನಯವಿಲ್ಲದ, ನಡತೆಗೆಟ್ಟ
**ಅವಿಯೋಗಿ** ಅಗಲಿಕೆ ಇಲ್ಲದವ
**ಅವಿಯೋಗಿನಿ** ಎಂದೂ ನಾರಾಯಣನಿಂದ ಅಗಲದಿರುವವಳು–ಲಕ್ಷ್ಮಿ
**ಅವಿರಳಪುರಿ** ಶೃಂಗೇರಿ; ಜ್ಞಾನಿಗಳ ಊರು
**ಅವ್ಯಕ್ತ** ಕಾಣದ, ಅದೃಶ್ಯರೂಪಿ
**ಅವ್ಯಯ** ನಾಶರಹಿತನಾದವನು, ಅನಾದಿನಿತ್ಯ
**ಅವ್ಯಯಾತ್ಮ** ಶಾಶ್ವತ, ಬಿಂಬಾತ್ಮ
**ಅವ್ಯವಧಾನ** ವ್ಯವಧಾನರಹಿತ, ಸತತ
**ಅವ್ಯಾಕೃತಾಕಾಶ** ಆಕಾಶ ಎರಡು ವಿಧ, ಭೂತಾಕಾಶ ಹಾಗೂ ಅವ್ಯಾಕೃತಾಕಾಶ ಎಂದು; ಪ್ರಕೃತಿಯಿಂದ ಆವಿರ್ಭವಿಸಿದ ಆಕಾಶ ಭೂತಾಕಾಶ, ಇದಕ್ಕೆ ಹುಟ್ಟು ನಾಶಗಳಿವೆ; ನಿತ್ಯವಾದ ಎಂದೆಂದೂ ಇರುವ ಆಕಾಶ ಅವ್ಯಾಕೃತಾಕಾಶ
**ಅವ್ಯಾಹತ** ಅಖಂಡ; ನಿರಂತರವಾದ
**ಅವ್ಯಾಳ್ಯ<ಅವೇಳೆ** ಅಲಕ್ಷ್ಯ; ವೇಳೆಯಲ್ಲದ ವೇಳೆ
**ಅವ್ವೆ** ರಮಾದೇವಿ, ತಾಯಿ
**ಅಶಕ್ಯ** ಸಾಧ್ಯವಾಗದ್ದು
**ಅಶನ** ಅನ್ನ, ಆಹಾರ, ಊಟ
**ಅಶನಘಾತುಕ** ಅನ್ನ ಕೊಡದವ; ಕೇವಲ ಅನ್ನಕ್ಕಾಗಿ ದೇಹಧರಿಸಿರುವವನು
**ಅಶನಪ್ರಭೇದ** ಪಂಕ್ತಿಯಲ್ಲಿ ಪರಭೇದ
**ಅಶನಿ** ಸಿಡಿಲು; ವಜ್ರಾಯುಧ; ಊಟಮಾಡುವವ
**ಅಶನಿಸು** ಊಟ ಮಾಡು
**ಅಶರೀರ** ಆಕಾಶ
**ಅಶೀತಿ** ಎಂಬತ್ತು
**ಅಶೇಷ** ಸಂಪೂರ್ಣ
**ಅಶೋಕ** ವಿಶೋಕ:–ಕೃಷ್ಣ ಕುಬ್ಜೆಯಲ್ಲಿ ಪಡೆದ ಮಗ–ಭೀಮಸೇನನ ಸಾರಥಿ
**ಅಶ್ರು** ಕಣ್ಣೀರು, ಆನಂದಬಾಷ್ಪ
**ಅಶ್ರುತ** ಕೇಳಿಲ್ಲದ
**ಅಶ್ವಮುಖ** ಕುದುರೆಮುಖ, ಹಯವದನ
**ಅಶ್ವವಾಹಕ** ಕುದುರೆ ನಡೆಸುವವನು
**ಅಶ್ವಿನಿಗಳು** ಅಶ್ವಿನಿದೇವತೆಗಳು – ಆಧಿವ್ಯಾಧಿಗಳನ್ನು ಪರಿಹಾರ ಮಾಡಿ ಸಾಧನಕ್ಕೆ ಸಹಕಾರಿಗಳಾಗಿರುವವರು
**ಅಷ್ಟಕಂಬ** ಎಂಟು ಕಂಬಗಳು, ಭೂಮಿ, ಅಪ್, ತೇಜ, ವಾಯು, ಆಕಾಶ, ಮನ, ಬುದ್ಧಿ, ಅಹಂಕಾರ

Rarest Archiver

**ಅಷ್ಟಚಾತುರ್ಲಕ್ಷ** 84 ಲಕ್ಷ (ಯೋನಿಗಳು)

**ಅಷ್ಟಜ್ಯೋತಿ** ಅಷ್ಟಾಂಗಗಳು(ಯಮನಿಯಮ ಇತ್ಯಾದಿ)

**ಅಷ್ಟದಿಕ್ಕು** ಎಂಟು ದಿಕ್ಕು

**ಅಷ್ಟದಿಕ್ಪತಿಗಳು, ಅಷ್ಟದಿಕ್ಪಾಲಕರು** ಉತ್ತರ–ಕುಬೇರ, ದಕ್ಷಿಣ–ಯಮ, ಪೂರ್ವ–ಇಂದ್ರ, ಪಶ್ಚಿಮ–ವರುಣ, ಈಶಾನ್ಯ–ಮಹೇಶ, ನೈರುತ್ಯ–ನಿಋರತಿ, ಆಗ್ನೇಯ–ಅಗ್ನಿ, ವಾಯುವ್ಯ–ಪ್ರವಹವಾಯು

**ಅಷ್ಟಪದೋದರ** ಬ್ರಹ್ಮ

**ಅಷ್ಟಪಾಶಗಳು** ಲಜ್ಜೆ, ಜುಗುಪ್ಸೆ, ಕುಲ, ಶೀಲ, ಭಯ, ಶಂಕೆ, ತೃಷೆ, ಗರ್ವ

**ಅಷ್ಟಪ್ರಕೃತಿ** ಪಂಚತನ್ಮಾತ್ರಗಳು, ಮನಸ್ಸು, ಬುದ್ಧಿ, ಅಹಂಕಾರ

**ಅಷ್ಟಭಾಗ್ಯಗಳು** ಆನೆ, ಕುದುರೆ, ಪಲ್ಲಕ್ಕಿ, ಛತ್ರ, ಚಾಮರ, ಸೈನ್ಯ, ಕೋಶ, ರಾಜ್ಯ

**ಅಷ್ಟಭೋಗ** ಪಾನ, ಭೋಜನ, ವಸನ, ಗಂಧ, ಪುಷ್ಪ, ತಾಂಬೂಲ, ಸ್ತ್ರೀ, ಮನೆ

**ಅಷ್ಟಮದ** ಧನ, ಕುಲ, ವಿದ್ಯೆ, ರೂಪ, ಯೌವ್ವನ, ಬಲ, ಪರಿವಾರ ಹಾಗೂ ಅಧಿಕಾರ

**ಅಷ್ಟಮಶನಿ** ಜನ್ಮ ಲಗ್ನದಿಂದ ಎಂಟನೆಯ ಶನಿ

**ಅಷ್ಟಮಹಿಷಿಯರು** ಶ್ರೀಕೃಷ್ಣನ ಎಂಟು ರಾಣಿಯರು–ಭೀಷ್ಮಕನ ಮಗಳಾದ ರುಕ್ಮಿಣಿ, ಸತ್ರಾಜಿತನ ಮಗಳಾದ ಸತ್ಯಭಾಮೆ, ನಗ್ನಜಿತನ ಮಗಳಾದ ನೀಲಾ(ಸತ್ಯಾ), ಸೋದರತ್ತೆ ಶ್ರುತಕೀರ್ತಿಯ ಮಗಳಾದ ಭದ್ರೆ, ಸೋದರತ್ತೆ ರಾಜಾದಿದೇವಿಯ ಮಗಳು ಮಿತ್ರವಿಂದೆ, ಸೂರ್ಯನ ಮಗಳು ಕಾಳಿಂದಿ, ಮದ್ರಾಧಿಪತಿಯ ಮಗಳು ಲಕ್ಷಣಾ, ಜಾಂಬವಂತನೆಂಬ ಕರಡಿರಾಜನ ಮಗಳು ಜಾಂಬವತಿ

**ಅಷ್ಟಮಾಸ್ತ್ರೀಯರಪತಿ** ಅಷ್ಟಮಹಿಷಿಯರ ಪತಿ–ಕೃಷ್ಣ

**ಅಷ್ಟಮಾಸ್ತ್ರೀಯರು** ಅಷ್ಟಮಹಿಷಿಯರು

**ಅಷ್ಟಮೂರ್ತಿ** ಶಿವನ ನಾಮಾಂತರ, ರುದ್ರದೇವರು

**ಅಷ್ಟವಸುಗಳು** ಧರ, ಧ್ರುವ, ಸೋಮ, ವಿಷ್ಣು, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ

**ಅಷ್ಟಸಂಪನ್ನೆ** ಅಷ್ಟಗುಣಯುತೆ

**ಅಷ್ಟಸಿದ್ಧಿ** ಅಣಿಮಾ(ಸೂಕ್ಷ್ಮರೂಪವನ್ನು ಧರಿಸುವ ಶಕ್ತಿ), ಮಹಿಮಾ(ದೊಡ್ಡ ಆಕಾರವನ್ನು ಧರಿಸುವ ಶಕ್ತಿ), ಗರಿಮಾ(ಭಾರವಾಗುವ ಶಕ್ತಿ), ಲಘಿಮಾ(ಹಗುರಾಗುವ ಶಕ್ತಿ), ಪ್ರಾಪ್ತಿ (ಅಸಾಧ್ಯವಾದ್ದನ್ನು ಪಡೆಯುವುದು), ಪ್ರಾಕಾಮ್ಯ (ಬಯಸಿದ್ದನ್ನು ಪಡೆಯುವುದು), ಈಶಿತ್ವ (ಪ್ರಭಾವ ಬೀರುವುದು), ವಶಿತ್ವ (ಇಂದ್ರಿಯ ನಿಗ್ರಹ)

**ಅಷ್ಟಸೌಭಾಗ್ಯ** ಅನ್ನ, ಅರ್ಥ, ಪ್ರಭುತ್ವ, ಯೌವನ, ವೈಭವ, ಗೃಹ, ವಸ್ತ್ರ, ಆಭರಣ

**ಅಷ್ಟಾಂಗ** ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ಶ್ರದ್ಧೆ, ಪಾದಗಳು, ಕೈಗಳು, ಕರ್ಣಗಳು

**ಅಷ್ಟಾಂಗಯೋಗ** ಯಮ(ಇಂದ್ರಿಯ ನಿಗ್ರಹ), ನಿಯಮ(ನಿಯಂತ್ರಣ, ಕಟ್ಟಳೆ), ಆಸನ (ಕುಳಿತುಕೊಳ್ಳುವುದು), ಪ್ರಾಣಾಯಾಮ (ಉಸಿರನ್ನು ಹತೋಟಿಯಲ್ಲಿಡುವುದು), ಪ್ರತ್ಯಾಹಾರ(ಸಾಮೀಪ್ಯ), ಧ್ಯಾನ(ಏಕಾಗ್ರತೆ), ಧಾರಣ (ಮನೋನಿಗ್ರಹ), ಸಮಾಧಿ (ತನ್ಮಯತೆ)

**ಅಷ್ಟಾಕ್ಷರಮಹಾಮಂತ್ರ, ಅಷ್ಟಾಕರಿ** ಎಂಟು ಅಕ್ಷರಗಳ ಮಂತ್ರ – ಓಂ ನಮೋ ನಾರಾಯಣಾಯ

**ಅಷ್ಟಾದಶಪುರಾಣ, ಅಷ್ಟಾದಶಸ್ವಚ್ಛಪುರಾಣ** ಹದಿನೆಂಟು ಪುರಾಣಗಳು

**ಅಷ್ಟಾಪದ** ಸುವರ್ಣ; ಶರಭ

**ಅಷ್ಟಾಪದೋದರ** ಬ್ರಹ್ಮ, ಊರ್ಣನಾಭ

**ಅಷ್ಟೈಶ್ವರ್ಯಪ್ರದಾತ** ವಿಷ್ಣು

Rarest Archiver

**ಅಸಂಕಾಶ** ಎಣೆಯಿಲ್ಲದ
**ಅಸಗ** ಅಗಸ, ರಜಕ
**ಅಸಚ್ಛಾಸ್ತ್ರಗಿರಿಕುಲಿಶ** ದುಃಶಾಸ್ತ್ರ ಪರ್ವತಕ್ಕೆ ವಜ್ರಾಯುಧ
**ಅಸತಿ** ವ್ಯಭಿಚಾರಿಣಿ; ದುಷ್ಟ ಸ್ತ್ರೀ
**ಅಸದಳ** ಅಸಾಧ್ಯ
**ಅಸಮನೇತ್ರ** ಶಿವ
**ಅಸಮಭವ** ಅದ್ವಿತೀಯ
**ಅಸಮಸೇತುಬಂಧನ** ರಾಮ
**ಅಸಮಾಕ್ಷಚಾಪ** ಶಿವಧನುಸ್ಸು
**ಅಸಮಾಸ್ತ್ರ** ಸಮಾನವಿಲ್ಲದ ಅಸ್ತ್ರ, ಅಸದೃಶ; ಮನ್ಮಥ (ಬೆಸಸಂಖ್ಯೆ, ಐದು ಬಾಣಗಳುಳ್ಳವನು), ಅರವಿಂದ, ಅಶೋಕ, ನೀಲೋತ್ಪಲ, ಚೂತ, ನವಮಲ್ಲಿಕಾ
**ಅಸರೀಫ**ಅಷರಫೀ, ಪರ್ಷಿಯಾ ದೇಶದ ಒಂದು ಬಂಗಾರದ ನಾಣ್ಯ
**ಅಸಲಿ** ಕೊರಳ ಅಭರಣ
**ಅಸವಶ** ಪರವಶ
**ಅಸವಸ** ಬೇಗ, ತ್ವರೆ
**ಅಸವಳಿ** ಶಕ್ತಿಗುಂದು
**ಅಸಿ** ಕತ್ತಿ, ಖಡ್ಗ
**ಅಸಿಚಕ್ರ** ಹದನಾದ ಚಕ್ರ; ಅಂಬರೀಶ
**ಅಸಿತ** ಕಪ್ಪು, ಕಲೆ
**ಅಸಿತಪಕ್ಷ** ಕೃಷ್ಣಪಕ್ಷ
**ಅಸಿತಪ್ರಭ** ಕೃಷ್ಣವರ್ಣ, ಕೃಷ್ಣ
**ಅಸಿತಸುಳಿಗುರುಳು** ಸುರುಳಿ ಸುರುಳಿಯಾದ ಕಪ್ಪುಕೂದಲು
**ಅಸಿತಾಂಗ** ಕಪ್ಪು ಬಣ್ಣದ ಶರೀರ ಉಳ್ಳಾತ
**ಅಸಿಪತ್ರವನ** ಈ ನರಕದಲ್ಲಿಯ ಗಿಡಗಳಿಗೆ ಇರುವ ಕತ್ತಿಯ ಅಲಗುಗಳು ಪಾಪಿಯನ್ನು ಬಾಧಿಸುವವು
**ಅಸಿಪದಲಕ್ಷಣ** ಖಡ್ಗಧಾರೆಯಂತಹದು
**ಅಸಿಮಧ್ಯ** ಸಣ್ಣನಡು
**ಅಸಿಯಕಲ್ಲು** ಅರೆಯುವ ಕಲ್ಲು
**ಅಸಿಯರು** ಕೃಶಾಂಗಿಗಳು, ಚೆಲುವೆಯರು
**ಅಸಿವರಣದಮಧ್ಯ** ಅಸಿ–ವರಣಾ ಎಂಬ ಎರಡು ನದಿಗಳ ಮಧ್ಯ ಪ್ರದೇಶ ವಾರಣಾಸಿ(ಕಾಶಿ)
**ಅಸು** ಪ್ರಾಣ, ಹೆಚ್ಚಾಗಿ
**ಅಸುಗಳು** ಜೀವಿಗಳು
**ಅಸುದೇವ** ಪ್ರಾಣದೇವ
**ಅಸುನಾಥ** ಪ್ರಾಣದ ಒಡೆಯ, ಪ್ರಾಣೇಶ, ವಾಯುದೇವರು
**ಅಸುನಾಥಸುತ** ಹನುಮಂತ
**ಅಸುಪತಿ** ಪ್ರಾಣದೇವರು
**ಅಸುಪಾಲ** ಪ್ರಾಣದೇವರು
**ಅಸುಮಯ** ಮೂಲಜೀವಿಗಳಿಂದ ತುಂಬಿದ
**ಅಸುರ** ನಿಷ್ಠುರ, ರಾಕ್ಷಸ, ತಾಮಸ
**ಅಸುರಕುಲಗುರು** ಶುಕ್ರಾಚಾರ್ಯ
**ಅಸುರಪುರ** ಲಂಕೆ
**ಅಸುರಾರಾತಿ** ರಾಕ್ಷಸರ ಶತ್ರು–ವಿಷ್ಣು
**ಅಸುರಾರಿ** ವಿಷ್ಣು
**ಅಸುರುಹ** ಪ್ರಾಣದಿಂದ ಹುಟ್ಟಿರುವ ಮುಖ್ಯ ವಾಯು
**ಅಸುರುಹವಂದ್ಯ** ಮುಖ್ಯಪ್ರಾಣನಿಂದ ಹುಟ್ಟಿ ಬದುಕಿರುವ ರುದ್ರಾದಿಗಳಿಂದ ವಂದ್ಯ
**ಅಸುರೆ** ರಾಕ್ಷಸಿ, ಹಿಡಂಬಿ
**ಅಸುರೇತರ** ರಾಕ್ಷಸನಲ್ಲದ; ದೇವತೆ
**ಅಸುರೇತರಾಂಘ್ರಿಪ** ದೇವವೃಕ್ಷ–ಕಲ್ಪತರು
**ಅಸುವುಗುಂದು** ಪ್ರಾಣವನ್ನು ಕಳೆ
**ಅಸ್ಪೃಷ್ಯ** ಹುಟ್ಟದೇಯಿದ್ದ
**ಅಸೇದು** ಉಸಿರಾಟದ ತೊಂದರೆ
**ಅಸ್ತಮಾನ** ಮುಳುಗುವಿಕೆ, ಸಂಜೆ
**ಅಸ್ತಿ** ಇರುವಿಕೆ
**ಅಸ್ಥಿ** ಎಲುವು, ಮೂಳೆ
**ಅಹಂ** ನಾನು
**ಅಹಂಕೃತಿ** ಗರ್ವ

Rarest Archiver

**ಅಹಂಕೃತು** ಅಹಂಕಾರತತ್ತ್ವದೊಡೆಯ ಶಿವ
**ಅಹಂಭಾವ** ನಾನೆಂಬ ಭಾವ, ಗರ್ವ
**ಅಹಂಮಮ** ನಾನು ನನ್ನದೆಂಬ ಸ್ವಾಹಂಕಾರ
**ಅಹಮ್ಮತಿ** ಅಹಂಕಾರ
**ಅಹರಹ, ಅಹರಹರ್** ಹಗಲೂ ರಾತ್ರಿ, ಆಗಾಗ್ಗೆ, ಎಂದೆಂದೂ, ಪ್ರತಿದಿನ
**ಅಹರಹರ** ಪ್ರತಿನಿತ್ಯ
**ಅಹರು** ಆಗುವರು
**ಅಹರ್ನಿಶಿ** ಹಗಲಿರುಳು
**ಅಹಶ್ಚರಾತ್ರಿ** ಹಗಲು ರಾತ್ರಿ
**ಅಹಸ್ಸು** ಹಗಲು
**ಅಹಿ** ಶೇಷ, ಹಾವು, ಸರ್ಪ
**ಅಹಿಕ<ಐಹಿಕ** ಪ್ರಾಪಂಚಿಕ
**ಅಹಿಕಂಕಣ** ನಾಗಾಭರಣ, ಹಾವನ್ನು ಕಂಕಣವಾಗಿ ಉಳ್ಳವನು–ಶಿವ
**ಅಹಿಗಿರಿ** ಶೇಷಾಚಲ
**ಅಹಿಗಿರಿತಿಮ್ಮ** ವೇಂಕಟೇಶ
**ಅಹಿತ** ಶತ್ರು
**ಅಹಿತಲ್ಪ** ಶೇಷಶಾಯಿ–ಶ್ರೀಹರಿ
**ಅಹಿಧರ** ಶಿವ
**ಅಹಿಪ** ಹಾವುಗಳ ಒಡೆಯ, ಸರ್ಪರಾಜ
**ಅಹಿಪತಿ** ಶೇಷ
**ಅಹಿಪದಿ** ಹಾವು; ಕಾಣದಿರುವ ಪಾದಉಳ್ಳವ
**ಅಹಿಪರ್ಯಂಕ** ಶೇಷಶಯನ, ಹಾವಿನ ಹಾಸಿಗೆ, ವಿಷ್ಣುವಿನ ಹಾಸಿಗೆ
**ಅಹಿಭೂಷಣ** ನಾಗಾಭರಣ ಶಿವ
**ಅಹಿರಾಜ** ಶೇಷ, ನಾಗರಾಜ
**ಅಹಿರಾಜಕಂಕಣ** ಶೇಷನನ್ನು ಕಂಕಣ ರೂಪ ಆಭರಣವನ್ನಾಗಿ ಉಳ್ಳವನು–ಶಿವ
**ಅಹಿರಾಜತಲ್ಪ** ವಿಷ್ಣು
**ಅಹಿರಾಜಶಯ್ಯ** ಆದಿಶೇಷನಮೇಲೆ ಮಲಗಿರುವವನು ವಿಷ್ಣು
**ಅಹಿವರ** ಆದಿಶೇಷ
**ಅಹಿವೇಣಿ** ನಾಗವೇಣಿ, ಸರ್ಪದಂತೆ ಜಡೆಯುಳ್ಳವಳು
**ಅಹಿಶಯನ, ಅಹಿಶಾಯಿ** ಸರ್ಪಶಯನ ವಿಷ್ಣು
**ಅಹೀಂದ್ರ** ಶೇಷ
**ಅಳಕ** ಕೂದಲು, ಮುಂಗುರುಳು, ಸಡಿಲು, ತಲೆಗೂದಲನ್ನು ಉಳ್ಳ–ಶಿವ
**ಅಳಗಿರಿ** ಸುಂದರವಾದ ಬೆಟ್ಟ; ತಿರುಪತಿ
**ಅಳಲು** ಆಸೆಪಡು; ದುಃಖ, ಕಷ್ಟ
**ಅಳವಡು** ಹೊಂದು, ಸೇರು, ಕೂಡು
**ಅಳವಲ್ಲ** ಸಾಧ್ಯವಲ್ಲ, ಅಳತೆಗೆ ನಿಲುಕದ
**ಅಳವು** ಸಾಮರ್ಥ್ಯ, ಶಕ್ತಿ; ಸಾಧ್ಯ, ಒದಗು; ಅಳತೆ, ನೆಲೆ
**ಅಳಿ** ದುಂಬಿ; ಹಾಳುಮಾಡು, ನಾಶವಾಗು
**ಅಳಿಗಂಧ** ಹೂವಿನಹುಡಿ
**ಅಳಿಗುರುಳು** ದುಂಬಿಯಂತೆ ಕಪ್ಪಾದ ತಲೆ ಕೂದಲು
**ಅಳಿದುಳಿದಮತ** ಹರಿಸರ್ವೋತ್ತಮತ್ವವನ್ನು ಒಪ್ಪದ ಮತ
**ಅಳಿಯೇರು** ಅತಿಯಾಸೆಪಡು
**ಅಳಿವಂತ** ನಾಶವಾಗುವಂತಹ
**ಅಳಿವಿಂಡು** ದುಂಬಿಯ ಹಿಂಡು
**ಅಳಿವು** ನಾಶ, ಸಾವು
**ಅಳುಕಿಸು** ಅಳಿಸು, ಇಲ್ಲವಾಗಿಸು
**ಅಳುಕು** ಹಿಂಜರಿ, ಅಂಜು
**ಅಳುಕುಂದಿತನ** ಹಿಂಜರಿಯುವ ಸ್ಥಿತಿ
**ಅಳುಪು, ಅಳುವು** ಅತಿಯಾಸೆ ಪಡು,ಬಯಸು, ಆಶಿಸು
**ಅಳೆ** ಮಜ್ಜಿಗೆ
**ಅಳ್ಕು<ಅಳುಕು** ಹೆದರು
**ಅಳ್ಗಿ>ಅಳಗೆ** ಮಜ್ಜಿಗೆ ಇಡುವ ಮಡಕೆ
**ಅಳ್ತಿ** ಪ್ರೀತಿ
**ಅಳ್ಳೆ** ಏಡಿ

Rarest Archiver

## ಆ

**ಆಂದೋಳ, ಆಂದೋಳಿಕ** ಉಯ್ಯಾಲೆ, ಪಲ್ಲಕ್ಕಿ
**ಆಕರಮಾರ್ಗ** ಷಡ್ವೈರಿಗಳ ದಾರಿ
**ಆಕರಿಸು** ಸಂಗ್ರಹಿಸು, ಹಿಡಿ
**ಆಕರ್ಣಿಸು** ಕೇಳು
**ಆಕಾಶತತ್ತ್ವಾಭಿಮಾನಿ** ಗಣಪತಿ
**ಆಕಾಶತರಂಗಿಣೀ** ಗಂಗೆ
**ಆಕಾಶಾಭಿಮಾನಿ** ಗಣಪತಿ
**ಆಕೀರ್ಣ** ಹರಡಿದ, ತುಂಬಿದ
**ಆಕೆವಾಳ** ಶೂರ, ವೀರ
**ಆಕ್ರತ** ಪ್ರೀತಿ
**ಆಕ್ರೋಶ** ಸಿಟ್ಟು
**ಆಖಂಡಲ** ಇಂದ್ರ
**ಆಖರು** ಅಕ್ಕರೆ
**ಆಖು** ಇಲಿ
**ಆಖುವಾಹ, ಆಖುವಾಹನ** ಇಲಿಯನ್ನು ವಾಹನವಾಗಿ ಉಳ್ಳವನು–ಗಣಪತಿ
**ಆಖುವೈರಿ** ಸರ್ಪ
**ಆಖ್ಯ, ಆಖ್ಯಾ** ಸಖ, ಸ್ನೇಹಿತ; ಖ್ಯಾತಿ, ಹೆಸರು, ಹೇಳಿದ
**ಆಗತಶೌಚ** ಪರಂಪರೆಯಿಂದ ಬಂದ ಶುಚಿಕಾರ್ಯ
**ಆಗತೇಷ್ಟಪ್ರದ** ನಂಬಿದವರ ಇಷ್ಟಪ್ರದ
**ಆಗಮ** ದೇವಪೂಜಾ ತಂತ್ರ ವಿಧಾನ ತಿಳಿಸುವ ಶಾಸ್ತ್ರ ವೇದಶಾಸ್ತ್ರ ರಹಸ್ಯ, ಸಂಪ್ರದಾಯ ಗ್ರಂಥ, ಮುಂದೆ ಬರಲಿರುವ ಪಾಪಕರ್ಮ ಫಲ; ಬರುವುದು
**ಆಗಮಜ್ಞ** ವೇದಗಳನ್ನು ತಿಳಿದವನು
**ಆಗಮವಾಕ್ಯ** ವೇದವಾಕ್ಯ
**ಆಗರ** ಮನೆ, ಕೇಂದ್ರ, ನೆಲೆ
**ಆಗಸ** ಆಕಾಶ
**ಆಗಾಮಿ** ಮುಂಬರುವ; ಈ ಜನ್ಮದಲ್ಲಿ ಮಾಡುವ ಕರ್ಮ, ಮುಂದಿನ ಜನ್ಮದಲ್ಲಿ ಅನುಭವಿಸುವ ಕರ್ಮಗಳು
**ಆಗಾರ** ಮನೆ
**ಆಗುಪೋಗು** ಆಗುಹೋಗು, ಸಂಗತಿ
**ಆಗ್ರಹ** ಅಹಂಕಾರದಿಂದ ಕೂಡಿದ ಕೋಪ
**ಆಘ್ರಾಣ** ಮೂಗು, ವಾಸನೆ ನೋಡುವ ಕ್ರಿಯೆ
**ಆಘ್ರಾಣಿಸು** ವಾಸನೆ ನೋಡು
**ಆಚಂಡಾಲಸಪ್ತರು** ಚಂಡಾಲರವರೆಗೆ ಏಳು ಜಾತಿಯವರು
**ಆಚಮನ** ಅಂಗೈಯಲ್ಲಿ ನೀರನ್ನು ಹಾಕಿಕೊಂಡು ಮಂತ್ರಪೂರ್ವಕವಾಗಿ ಸೇವಿಸುವುದು
**ಆಚಾರ** ಸಂಪ್ರದಾಯ, ಕಟ್ಟುಪಾಡು
**ಆಚ್ಛಾದ** ಮುಚ್ಚುವುದು, ಮರೆಮಾಡುವುದು; ಹೊದಿಕೆ, ಬಟ್ಟೆ
**ಆಜಾನ** 27ನೇ ಕಕ್ಷದಲ್ಲಿ ಬರುವ 16,000 ಅಗ್ನಿಪುತ್ರರು, 100ಜನ ಗಂಧರ್ವರು, 130ಜನ ಕುಬೇರನ ಭೃತ್ಯರು
**ಆಜಾನಕರ್ಮಜ** ಆಜಾನರು, ಕರ್ಮಜರು ಎಂಬ ದೇವತಾಪ್ರಭೇದಗಳು
**ಆಜಿ** ಯುದ್ಧ
**ಆಜೀರ್ತಿ** ಅಜೀರ್ಣ
**ಆಜ್ಞಾಚಕ್ರ** ಮೋಕ್ಷದತ್ತ ಹೋಗುವ ಶ್ರೀವೈಷ್ಣವಾನುಷ್ಠಾನದ ಭಕ್ತನೊಬ್ಬನಿಗೆ ಸಂತೋಷದಾಯಕ ಜೀವನಮಾರ್ಗ
**ಆಜ್ಞೆ** ಕಟ್ಟಳೆ
**ಆಜ್ಯ** ಅಂಟಿಸುವ ಸ್ವಭಾವವುಳ್ಳ, ತುಪ್ಪ, ಅಭಿಗಾರ
**ಆಜ್ಯಧಾರಾಹುತ** ತುಪ್ಪದ ಹೋಮ
**ಆಟ** ಕ್ರೀಡೆ; ಕುಣಿತ, ನೃತ್ಯ, ನಾಟಕ
**ಆಟೋಪ** ಆವೇಶ

Rarest Archive

**ಆಟ್ಟೆ**<ಅಟ್ಟುಳಿ ಹಿಂಸೆ
**ಆಡು** ಕ್ರೀಡಿಸು, ವ್ಯವಹರಿಸು
**ಆಢಕ** ಒಂದು ಅಳತೆ; ಜಮಾಖರ್ಚು
**ಆಢ್ಯ** ಶ್ರೀಮಂತ, ಹೊಂದಿದ; ಬಲ, ಶಕ್ತಿ, ಸಮರ್ಥ
**ಆಣಿ** ಶ್ರೇಷ್ಠವಾದ, ದುಂಡಾದ ಮುತ್ತು, ಮೊಳೆ, ಆಜ್ಞೆ
**ಆಣಿಕಾರಿಕೆ** ರತ್ನ ಪರೀಕ್ಷೆ
**ಆಣಿಮುತ್ತು** ದೊಡ್ಡಮುತ್ತು, ಅಪರೂಪದಮುತ್ತು, ಶ್ರೇಷ್ಠಮುತ್ತು; ಅಮೂಲ್ಯವಾದ ಮಾತು, ಮುತ್ತಿನಂಥ ಮಾತು; ಜೀವ
**ಆಣ್ಮ** ಪ್ರಿಯಕರ; ಒಡೆಯ
**ಆತತ** ಹರಡಿದ, ವಿಶಾಲವಾದ, ವ್ಯಾಪ್ತ
**ಆತತಾಯಿ** ಮೋಸದಿಂದ ಕೊಲ್ಲುವವ, ಕೊಲೆ ಪಾತಕಿ; ರಾಕ್ಷಸ, ದುಷ್ಟ
**ಆತಪ** ಬಿಸಿಲು, ಕಾಂತಿ, ಪ್ರಕಾಶ
**ಆತಪತ್ರ** ಕೊಡೆ, ಛತ್ರಿ, ಆಶ್ರಯ
**ಆತಪಿ** ಸೂರ್ಯ
**ಆತವರ** ಗಂಡು ಕುರಿ, ಟಗರು
**ಆತು** ತಾಗಿಕೊಂಡು, ಹೊಂದಿಕೊಂಡು, ಧರಿಸಿ, ಹಿಡಿದು
**ಆತುಮ** ಆತ್ಮ
**ಆತ್ತ** ಕೈಕೊಂಡ, ಸ್ವೀಕರಿಸಿದ
**ಆತ್ಮ** ಉಸಿರು, ಜೀವ
**ಆತ್ಮಘಾತ** ಪ್ರಾಯೋಪವೇಶ ಮೊದಲಾದ ವಿಧಿಗಳು
**ಆತ್ಮಜ** ಮಗ
**ಆತ್ಮಜಾಯಾ** ತನ್ನ ಹೆಂಡತಿ
**ಆತ್ಮಬಳಲು** ಸಾಯಿ
**ಆತ್ಮಭೂ** ಬ್ರಹ್ಮ
**ಆತ್ಮಾದಿರೂಪ** ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ರೂಪ
**ಆತ್ಮೇಶ್ವರ** ಪತಿ, ದೇವರು, ಪರಮಾತ್ಮ
**ಆಥದೋಷಕರಣ** ಪಾಪದೋಷನಿವಾರಕ
**ಆದಿಕಚ್ಛಪ** ಕೂರ್ಮಾವತಾರ–ವಿಷ್ಣು
**ಆದಿಕಾರಣ** ಸೃಷ್ಟಿಗೆಕಾರಣ, ಮುಖ್ಯಕಾರಣ
**ಆದಿಕಾರಿಣಿ** ಮೂಲಪ್ರಕೃತಿಯು ಆದಿಕಾರಣ, ಇದರ ಅಭಿಮಾನಿನಿ ಲಕ್ಷ್ಮಿ
**ಆದಿತೇಯ** ದೇವತೆ; ಅದಿತಿದೇವಿಯ ಮಗ
**ಆದಿತ್ಯಗಣದವರು** ದಿಗಭಿಮಾನಿಗಳಾದ–ಶ್ರೋತ್ರೇಂದ್ರಿಯ ನಿಯಾಮಕರಾದ ದೇವತೆಗಳು
**ಆದಿತ್ಯರು** ದೇವತೆಗಳು, ದ್ವಾದಶಾದಿತ್ಯರು, ಹನ್ನೆರಡು ಸೂರ್ಯರು
**ಆದಿನಾರಾಯಣ** ವಿಷ್ಣುವಿನ ಮೂಲ ರೂಪ; ಆದಿತ್ಯನಾರಾಯಣ; ಉಡುಪಿ ಕೃಷ್ಣನಿಗೆ ಭಾನುವಾರದ ಅಲಂಕಾರ
**ಆದಿಮೂಲ** ಎಲ್ಲರಿಗೂ ಮೊದಲಿನವ, ಅನಾದಿ; ಪರಾತ್ಪರ ವಸ್ತು, ಪರಮಾತ್ಮ–ಶ್ರೀಹರಿ
**ಆದಿವೈದ್ಯ** ಧನ್ವಂತರಿ–ಶ್ರೀಹರಿ
**ಆದೇಯ** ತಿಳಿವಳಿಕೆ
**ಆದ್ಯ** ಮೊದಲಿಗ, ಬಲಿಷ್ಠ
**ಆಧಾರ** ಷಟ್ ಕ್ರಿಯೆಗಳಲ್ಲಿ ಒಂದಾದ ಮೂಲಾಧಾರ; ಆಶ್ರಯ
**ಆಧಿ** ಮಾನಸಿಕ ತೊಂದರೆ, ದುರ್ವ್ಯಸನ, ಶಾರೀರಿಕ ತೊಂದರೆ; ನೆಲೆ;
**ಆಧಿದೈವಿಕ** ದೈವಿಕವಾಗಿ ಉಂಟಾಗುವ ತೊಂದರೆ; ಜನನ–ಮರಣ ಸಂಬಂಧಿ
**ಆಧಿಭೂತ** ದೈಹಿಕ, ಶರೀರಕ್ಕಾಗುವ ಜ್ವರ ರೋಗಾದಿ
**ಆಧಿಭೌತಿಕ** ಭೌತಿಕ ಸಂಬಂಧಿ; ಪ್ರಾಣಿಗಳಿಂದ ಒದಗುವ ವಿಪತ್ತು; ಪಂಚಭೂತಗಳಿಂದಾಗುವ ತೊಂದರೆ
**ಆಧಿವ್ಯಾಧಿ** ಮಾನಸಿಕ ಮತ್ತು ದೈಹಿಕ ತೊಂದರೆ
**ಆಧೇಯ** ಅಭಯ ಹೊಂದತಕ್ಕ ಜೀವ, ಆಶ್ರಿತ

Rarest Archive

**ಆಧೇಯಆಧಾರ** ಆಧಾರವಾಗಿರುವ ವಸ್ತು ಮತ್ತು ಆಧಾರವಾಗಿರುವ ವಸ್ತುವನ್ನು ಅವಲಂಬಿಸಿರುವುದು

**ಆಧ್ಯಾತ್ಮ** ಸೂಕ್ಷ್ಮ, ಪ್ರಧಾನ, ಪ್ರಥಮ

**ಆಧ್ಯಾತ್ಮಿಕ** ತಾಪತ್ರಯಗಳಲ್ಲಿ ಒಂದು, ಆತ್ಮಕ್ಕೆ ಸಂಬಂಧಿಸಿದ ತಾಪ

**ಆನಂದ** ಲಕ್ಷ್ಮಿ; ಸಂತಸ

**ಆನಂದತೀರ್ಥೇಂದು** ಮಧ್ವಾಚಾರ್ಯರೆಂಬ ಚಂದ್ರ

**ಆನಂದಪುರ** ಮೋಕ್ಷ

**ಆನಂದಮಯ** ಸಂತೋಷವಾಗಿರುವುದು, ಭಗವಂತ ಸದಾ ಕಾಲದಲ್ಲಿಯೂ ಆನಂದ ಮಯನಾಗಿರುತ್ತಾನೆ

**ಆನಂದಮುನಿ** ಮಧ್ವಾಚಾರ್ಯರು

**ಆನಂದವರ್ಧಾಂಗಿ** ಲಕ್ಷ್ಮಿ; ಹೆಂಡತಿ

**ಆನಂದಶತಕ** ಆನಂದ ಪರಿಪೂರ್ಣ–ಶತಾನಂದ ಬ್ರಹ್ಮ

**ಆನಂದಿ** ಸಂತೋಷವಾಗಿರುವವನು, ನಗುಮುಖದವನು

**ಆನಂದ್ಯೃತಿ<ಅರುಂಧತಿ** ವಸಿಷ್ಠ ಋಷಿಯ ಹೆಂಡತಿ

**ಆನಕ** ದುಂದುಭಿ, ನಗಾರಿ, ತಮಟೆ,

**ಆನಕದುಂದುಭಿ** ವಸುದೇವ

**ಆನಕದುಂದುಭಿಕುವರ** ಕೃಷ್ಣ

**ಆನತ** ಬಾಗಿದ, ನಮಸ್ಕರಿಸಿದ; ಬೇಡುವವ, ಶರಣಾಗತ, ದಾಸ

**ಆನತಹಿತಕರ** ಶರಣಾದವರಿಗೆ ಒಳ್ಳೆಯದನ್ನು ಮಾಡುವವನು–ಶ್ರೀಹರಿ

**ಆನನ** ಮುಖ

**ಆನನಚತುಷ್ಟ** ಚತುರ್ಮುಖ–ಬ್ರಹ್ಮ

**ಆನಿ** ಆನೆ, ಕರಿ, ಗಜ

**ಆನೀಕ** ಸಮೂಹ, ಗುಂಪು

**ಆನು** ಹಿಡಿ, ಧರಿಸು; ನಾನು; ಒದಗು

**ಆನುಪೂರ್ವಕ** ಯಥಾಕ್ರಮವಾದರೀತಿ

**ಆನೆ** ಕುಂಜರ, ಹಸ್ತಿ, ಕರಿ, ಸಾಮಜ, ಗಜ, ನಾಗ, ದಂತಿ

**ಆನೆವಾಹನ** ಭಗದತ್ತ–ಪ್ರಾಗ್ಜ್ಯೋತಿಷಪುರದ ರಾಜ

**ಆನೆವಾಹನಪಿತ** ಭೂಮಿ ಪುತ್ರನಾದ ನರಕಾಸುರ (ಇವನ ಮಗ ಭಗದತ್ತ)

**ಆನೆವಾಹನಪಿತನತಾಯಿ** ಭೂಮಿ

**ಆಪ** ನೀರು, ನೀರಿಗೆ ಅಭಿಮಾನಿಯಾದ ವರುಣ

**ಆಪಜಾಸನ** ಕಮಲಾಸನ, ಬ್ರಹ್ಮ

**ಆಪಣ** ಮಾರುಕಟ್ಟೆ, ಅಂಗಡಿ

**ಆಪದ** ಆಪತ್ತು

**ಆಪದ್ಬಾಂಧವ** ವಿಷ್ಣು

**ಆಪನಿತು** ಶಕ್ತಿಯಿದ್ದಷ್ಟು

**ಆಪನ್ನ** ಕಷ್ಟಕ್ಕೆ ಗುರಿಯಾದವ, ಬೇಡುವವ, ಆರ್ತ, ಭಕ್ತ, ಹೊಂದಿದವ, ಶರಣ

**ಆಪಾದಮೌಳಿ** ಪಾದದಿಂದ ಶಿರಸ್ಸು

**ಆಪಾದಮೌಳಿಪರ್ಯಂತ** ಪಾದದಿಂದ ಶಿರಸ್ಸಿನ ವರೆಗೆ

**ಆಪುತ** ಆಪ್ತ

**ಆಪೂಸಾಪೂ** ಆಗು ಹೋಗುಗಳು

**ಆಪೋಶನ** ಊಟಕ್ಕೆ ಮೊದಲು ಹಾಗೂ ಊಟದ ನಂತರ ಅಂಗೈಯಲ್ಲಿ ನೀರನ್ನು ಹೀರುವುದು, ಮತ್ತು ಹಾಗೆ ಹೀರುವ ನೀರು

**ಆಭ** ಕಾಂತಿ

**ಆಭಾಸ** ಹೊಳಪು, ತೋರಿಕೆ; ನೆರಳು

**ಆಭೂಷ** ಅಲಂಕೃತ

**ಆಮಯ** ದು:ಖ, ರೋಗ, ಯಾತನೆ

**ಆಮರ್ಷ** ಕೋಪ, ಮತ್ಸರ, ಹಟ

**ಆಮಲಕ** ನೆಲ್ಲಿಕಾಯಿ

**ಆಮಿಷ** ಆಸೆ, ಮಾಂಸ

Rarest Archiver

**ಆಮುಷ್ಮಿಕ** ಪರಲೋಕ, ಪರಲೋಕಕ್ಕೆ ಸಂಬಂಧಿಸಿದ, ಪಾರಮಾರ್ಥಿಕ

**ಆಮುಷ್ಮಿಕಾರ್ಥ** ಪರಲೋಕಕ್ಕೆ ಸಂಬಂಧಿಸಿದ ಬೇಡಿಕೆ

**ಆಮೋದ** ಸುವಾಸನೆ; ಸಂತೋಷ

**ಆಮ್ನಾಯ** ವೇದ; ಶ್ರುತಿ; ಗೋ: ವಂಶ, ಪೀಳಿಗೆ

**ಆಮ್ನಾಯಂಗಕೂಅಮಿತ** ವೇದಶಾಸ್ತ್ರಕ್ಕೂ ಅಗೋಚರವಾಗಿರುವವನು-ಶ್ರೀಹರಿ

**ಆಮ್ರ** ಆಮ್ಲ, ಹುಳಿ, ಮಾವು

**ಆಮ್ಲ** ಹುಳಿ, ಹುಣಿಸೆ

**ಆಮ್ಲಪಿತ್ತ** ಕೋಪಾಧಿಕ್ಯ

**ಆಯ** ಆಯತ, ಉಚಿತವಾದ ರೀತಿ; ರಹಸ್ಯ, ಒಳಗು, ಮರ್ಮ, ಗುಟ್ಟು, ತಂತ್ರ; ಪ್ರಮಾಣ

**ಆಯತ** ವಾಸಸ್ಥಾನ, ನೆಲೆ, ವಿಶಾಲವಾದ, ಅಗಲವಾದ; ಅಣಿಗೊಳಿಸು, ಸಿದ್ಧ; ಸರಿಯಾದ, ಉಚಿತ, ಉಚಿತಕ್ರಮ; ಬಂದಂತಹ, ಸಹಜ

**ಆಯತನ** ನೆಲೆ, ದೇವಾಲಯ

**ಆಯತಾಂಬಕ, ಆಯತಾಕ್ಷ, ಆಯತೇಕ್ಷಣ** ವಿಶಾಲವಾದ ಕಣ್ಣುಳ್ಳವ-ಶ್ರೀಹರಿ

**ಆಯಸ** ಆಯಾಸ, ಬಳಲಿಕೆ; ಉಕ್ಕು, ಕಬ್ಬಿಣ

**ಆಯುಸ್ಥಗತವಾದ** ಪೂರ್ವಸಂಚಿತ; ಬೆನ್ನು ಹಿಡಿದುಕೊಂಡುಬಂದ

**ಆಯು** ಆಯುಷ್ಯ, ಜೀವಿತ

**ಆಯುತ** ವಿಸ್ತಾರ, ಒಂದುಸಾವಿರ

**ಆಯುಧಾಭ** ಆಯುಧದಂತಿರುವ

**ಆಯುವೃದ್ಧಿ** ಆಯುಷ್ಯದ ಹೆಚ್ಚಳ

**ಆಯುಷ್ಕರಮಾಡು** ಆಯುಸ್ಸನ್ನು ಹೆಚ್ಚಿಸು

**ಆರಂಗಡಿ** ಷಡ್ರಿಪುಗಳು

**ಆರಂಭ** ಸಾಗುವಳಿಮಾಡುವಿಕೆ; ಪ್ರಾರಂಭ

**ಆರಡಿ** ದುಂಬಿ; ಆರು ಮಂದಿ, ಷಟ್ಪದಿ; ನೋವು, ಸಂಕಟ

**ಆರಣ** ವೇದಗಳಲ್ಲಿ ಒಂದು ಭಾಗ

**ಆರತ<ಆರ್ತ** ಸಂಕಟ, ವ್ಯಾಕುಲ; ಕಷ್ಟಕ್ಕೆ ಸಿಕ್ಕಿದವ, ದೀನ

**ಆರಪಾರ** ನಿರಂತರ, ನೇರ; ಸ್ಪಷ್ಟ

**ಆರಬ್ಧಾಂತಗಾಮಿನಿ** ಆದಿಯಿಂದ ಅಂತ್ಯದ ವರೆಗೂ ಪ್ರವಹಿಸುವುದು (ಸೃಷ್ಟಿ, ಸ್ಥಿತಿ, ಲಯ, ಕಾರಣ)

**ಆರಭಾರ** ಚಿಂತೆ, ಹಿತ, ಹೊಗೆ, ಆಡಳಿತ, ಮೇಲ್ವಿಚಾರಣೆ

**ಆರಯ್** ಈಕ್ಷಿಸು, ಸೇರು, ಹುಡುಕು, ಕಾಪಾಡು

**ಆರಾಜಕ** ಅರಾಜಕ-ರಾಜನಿಲ್ಲದಾಗ ರಾಜ್ಯದಲ್ಲಿ ಆಗುವ ಅವ್ಯವಸ್ಥೆ

**ಆರಾನುನಿಗ್ರಹ** ಇಂದ್ರಿಯ ಸುಖ ನಿಗ್ರಹಿಸಿದವ

**ಆರಾಭಾರ** ಹೊಣೆ

**ಆರಾಮ** ತೋಟ; ಕ್ಷೇಮವಾಗಿರುವುದು

**ಆರಾರು** ಸಮರ್ಥವಾಗು, ಶಕ್ತಿಯುತವಾಗು

**ಆರಾರುಎರಡುಸಾವಿರದಾರಿ** 6X6X2000= 72ಸಾವಿರ ನಾಡಿಗಳಲ್ಲಿ ವಾಯುದೇವರು ಹೋಗಿ ಬರುವರು

**ಆರಾರುಮೇಲೊಂದುಅಧಿಕಲೆಕ್ಕ** ಮಧ್ವಾಚಾರ್ಯರ 37 ಗ್ರಂಥಗಳು

**ಆರಾರ್ತಿ** ಮಂಗಳಾರತಿ

**ಆರು** ತೃಪ್ತಿಪಡು; ಘರ್ಷಿಸು; ಷಡ್ರಿಪುಗಳು; ಯಾರು

**ಆರುಅಕ್ಷರಮಂತ್ರ** ಓಂ ಕ್ಲೀಂ ಕೃಷ್ಣಾಯನಮಃ

**ಆರುಅರಿ** ಅರಿಷಡ್ವರ್ಗ

**ಆರುಎರಡುಮಹಿಷಿಯರು** ಅಷ್ಟಮಹಿಷಿಯರು

**ಆರುಎರಡುವಿಧದಿ** 6+2=8 ಅಷ್ಟಮದ

**ಆರುಕಂಟಕ** ಷಡ್ರಿಪುಗಳು

**ಆರುಕಟ್ಟು** ಷಟ್‌ಶಾಸ್ತ್ರ

**ಆರುತೆರೆ** ಷಡೂರ್ಮಿಗಳು

**ಆರುನಾಲ್ಕುಭುಜ** ದಶಭುಜ-ಶಿವ

Rarest Archiver

**ಆರುನಾಲ್ಕುಮಂದಿ** 6X4=24 ಪಾರುಪತ್ಯಗಾರರು: 5 ಪಂಚಮಹಾಭೂತಗಳು, 5 ತನ್ಮಾತ್ರೆಗಳು, 5 ಕರ್ಮೇಂದ್ರಿಯಗಳು, 5 ಜ್ಞಾನೇಂದ್ರಿಯಗಳು, 1 ಮನಸ್ಸು, 1 ಬುದ್ಧಿ, 1 ಅಹಂಕಾರ, 1 ಚಿತ್ತ – ಒಟ್ಟು 24 ಅಭಿಮಾನಿ ದೇವತೆಗಳು; ತತ್ತ್ವಾಭಿಮಾನಿಗಳು

**ಆರುನಾಲ್ಕುಶಿರ** ದಶಶಿರ–ರಾವಣ

**ಆರುಮಂದಿ, ಆರುಮಂದಿಕಳ್ಳರು, ಆರುಮಂದಿ ಗಂಡರು** ಅರಿಷಡ್ವರ್ಗಗಳು

**ಆರುಮಾರ್ಗ** ಷಡಂಗಯೋಗ

**ಆರುಮುಖದಬೂಚೀ** ಆರುಮುಖದ ಗುಮ್ಮ; ಕಾರ್ತಿಕೇಯ (ಮಕ್ಕಳಿಗೆ ಹೆದರಿಸಲು)

**ಆರುಮೂರರದ್ವಾರ** ನವರಂಧ್ರಗಳು, ಶರೀರದ ಒಂಬತ್ತು ತೂತುಗಳು, ಬಾಗಿಲುಗಳು

**ಆರುಮೂರರಮೇಲೆಮೂರಧಿಕಮತಗಳು** 6X3=18+3=21 ಭಾಷ್ಯಗಳು

**ಆರುಮೂರು** ಒಂಬತ್ತು ದಾರಿಗಳು, ನವವಿಧ ಭಕ್ತಿ, ನವವಿಧ ದ್ವೇಷ

**ಆರುಮೂರುಮೂರು ಸಾವಿರದ** ಶ್ವಾಸಜಪ; 6X3=18+3=21; 21,000+600 ಹೀಗೆ 21,600 ಶ್ವಾಸೋಚ್ಛ್ವಾಸ ಕ್ರಿಯೆಗಳು

**ಆರುಮೂರುವಿಧದ ಸೋಪಸ್ವ** 6+3=9 ನವವಿಧ ಭಕ್ತಿ ಮಾರ್ಗಗಳು

**ಆರುಮೂರುಹದಿನಾರು** 6+3+16=ಇಪ್ಪತ್ತೈದು, ಪಂಚವಿಂಶತಿ (ಮೂಲತತ್ತ್ವ)

**ಆರುಮೊಗ** ಷಣ್ಮುಖ

**ಆರುಮೊಗನಯ್ಯ** ಶಿವ

**ಆರುವರ್ಗ, ಆರುವೈರಿ** ಅರಿಷಡ್ವರ್ಗ

**ಆರುಶಾಸ್ತ್ರ** ಷಟ್‌ಶಾಸ್ತ್ರ

**ಆರುಸೋಪಾನ** ಆರು ಮೆಟ್ಟಿಲುಗಳು, ಷಟ್ಚಕ್ರ

**ಆರುಹತ್ತರಮೂಲ** 6+10=16 ಕಳೆಗಳುಳ್ಳ ಲಿಂಗ ಶರೀರ( ಪಂಚ ಭೂತಗಳು, ಪಂಚ ತನ್ಮಾತ್ರೆಗಳು, ಪಂಚ ಜ್ಞಾನೇಂದ್ರಿಯಗಳು ಮತ್ತು ಮನಸ್ಸು)

**ಆರುಹುಲಿ** ಅರಿಷಡ್ವರ್ಗ

**ಆರೂಢ** ಏರಿದ, ಹತ್ತಿಕುಳಿತ, ವಾಹನವಾಗಿ ಉಳ್ಳವ

**ಆರೆ** ಚಕ್ರ, ಸಹಿಸಲಾರೆ, ತಾಳಲಾರೆ

**ಆರೆರಡಾನೆ** 6+2=8, ಅಷ್ಟಮದ

**ಆರೆರಡುಪೆಸರು** 6X2=12, ದ್ವಾದಶನಾಮ, ವಿಷ್ಣುವಿನ ಹನ್ನೆರಡು ಹೆಸರು

**ಆರೇರಿ** ಷಟ್ಚಕ್ರಗಳನ್ನು ಭೇದಿಸಿ

**ಆರ್ಕೈದುಕೊ** ನೋಡಿಕೊ

**ಆರೊಳಗೆ** ಷಡ್ರಿಪುಗಳಲ್ಲಿ

**ಆರೋಗಣೆ** ಊಟ, ಭೋಜನ

**ಆರೋಗಿಸು** ಸೇವಿಸು

**ಆರೋಪಿಸು** ಅರ್ಪಿಸು, ಒಪ್ಪಿಸು

**ಆರ್ಜನೆಮಾಡದೆ** ಸಂಪಾದನೆ ಮಾಡದೆ; ಅವರೊಡನೆ ಸ್ನೇಹ ಬೆಳಸದೆ

**ಆರ್ಜವ** ಪ್ರಾಮಾಣಿಕತೆ, ಋಜುಸ್ವಭಾವ

**ಆರ್ಜವಮಾರ್ಗ** ವಾಯುಮಾರ್ಗ, ಋಜು ಮಾರ್ಗ, ನೇರ ದಾರಿ

**ಆರ್ಜಿತ** ಗಳಿಸಿದ, ಸಂಪಾದಿಸಿದ

**ಆರ್ಜಿಸು** ಸಂಪಾದಿಸು

**ಆರ್ತ** ಸಂಕಟ, ಕಷ್ಟಕ್ಕೆ ಸಿಕ್ಕಿದವ

**ಆರ್ತಾರ್ತಿಹರ** ಮೊರೆ ಇಡುವವರ ಕಷ್ಟವನ್ನು ನಾಶ ಮಾಡುವವ, ಆಪತ್ತಿಗೆ ಸಿಕ್ಕಿದವರ ಸಂಕಟ ಕಳೆವವನು–ಶ್ರೀಹರಿ

**ಆರ್ತಿ** ರೋಗ, ವ್ಯಥೆ, ಕಷ್ಟ, ದುಃಖ; ಬಿಲ್ಲಿನ ತುದಿ

**ಆರ್ಭಕ** ಆರ್ಭಟಿಸುವವನು, ಯಜಮಾನ, ವೀರ

**ಆರ್ಭಟಿಸು** ಘರ್ಜಿಸು

**ಆರ್ಮೊಗ** ಷಣ್ಮುಖ, ಸುಬ್ರಹ್ಮಣ್ಯ

**ಆರ್ಯಳು** ಹಿರಿಯಳು; ಲಕ್ಷ್ಮಿ

**ಆರ್ಯಾ** ಸುಷುಮ್ನಾ ನಾಡಿಯ ಉತ್ತರಕ್ಕಿರುವ ಶಾಖಾನಾಡಿ; ಪೂಜ್ಯ ಸ್ತ್ರೀ, ಲಕ್ಷ್ಮಿ

Rarest Archiver

**ಆರ್ಯಾವರ್ತ** ಆರ್ಯಾವರ್ತ ಖಂಡ; ಆರ್ಯರು ನೆಲೆಸಿದ್ದ ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವಿನ ಪ್ರದೇಶ
**ಆರ್ಷದ** ಋಷಿಗಳಿಗೆ ಸಂಬಂಧಿಸಿದವ
**ಆಲ(ಳ)ವಾಲ(ಳ)** ಗಿಡಕ್ಕೆ ನೀರು ನಿಲ್ಲಲು ಮಾಡುವ ಪಾತಿ
**ಆಲಂಬ** ಆಧಾರ, ಆಶ್ರಯ
**ಆಲಯ** ಮನೆ
**ಆಲವಟ್ಟಿಗೆ, ಆಲಾವಂಟಿಗೆ** ಬೀಸಣಿಗೆ
**ಆಲಿ** ಕಣ್ಣು, ಕಣ್ಣು ಗುಡ್ಡೆ; ಸಮೂಹ, ಸಾಲು; ತೆರೆ, ಮಾರ್ಗ, ಬಗೆಬಗೆ; ಮಿತ್ರ
**ಆಲಿಸು** ಕೇಳು
**ಆಲು** ಹಾಲು, ನೀರನ್ನು ಇಡುವ ಸಣ್ಣಪಾತ್ರೆ, ಹೂಜಿ, ಹರಿಗೋಲು
**ಆಲುಕ** ಆದಿಶೇಷ
**ಆಲುಪಾಲಕ** ಹರಿಗೋಲನ್ನು ಕಾಯುವವ, ಅಂಬಿಗ
**ಆಲೇಖಪತಿ** ದೇವತೆಗಳ ಒಡೆಯ
**ಆಲೇಶ** ಸಂಶಯ
**ಆಲ್ಪರಿ** ದೈನ್ಯದಿಂದ ಬೇಡಿಕೊಳ್ಳು, ಅಂಗಲಾಚು, ಗೋಳಾಡು
**ಆಲ್ವರಿ** ಗೋಳಾಡು
**ಆವಕಾವನು** ದನ ಕಾಯುವವನು; ಕೃಷ್ಣ
**ಆವಗ** ಆಗ, ಆವಾಗಲೂ, ಯಾವಾಗಲೂ, ನಿರಂತರ
**ಆವನ್ನಕ** ಎಲ್ಲಿಯವರೆಗೆ
**ಆವಪಳ್ಳಿ** ಗೋಕುಲ
**ಆವರ** ಯಾರ
**ಆವರಕ, ಆವರ್ಕ** ಆವರಿಸಿಕೊಂಡಿರುವ, ಹೊದಿಕೆಯಾಗಲ್ಪಟ್ಟ, ಮುಚ್ಚುಳ
**ಆವಲ್ಯ** ತಾವರೆ ಜಾತಿಯ, ಆವಲದ ಹೂವ
**ಆವಹ** ಮರುದಗ್ಗಣಗಳಲ್ಲೊಂದು
**ಆವಳಿ** ಸಮೂಹ, ಗುಂಪು; ಸಾಲು, ಪಂಕ್ತಿ
**ಆವಳಿಸು** ಆಕಳಿಸು
**ಆವಿ** ಚೆಗಟ, ಕೂರ್ಮ, ಕುರಿ
**ಆವಿರ್ಭಾವ** ಹುಟ್ಟುವುದು, ಕಣ್ಣಿಗೆಕಾಣುವುದು
**ಆವಿರ್ಭೂತ** ಸೃಷ್ಟಿ; ಕಣ್ಣಿಗೆಕಾಣುವಂತಹ, ಸ್ವಯಂವ್ಯಕ್ತ
**ಆವು** ಹಸು, ಆಕಳು; ನಾವು
**ಆವೆ** ಆಮೆ, ತಾಬೇಲು
**ಆಶಂಕೆ** ಸಂಶಯ ಜ್ಞಾನ
**ಆಶಾತ** ಶುಚಿಯಿಲ್ಲದ್ದು, ಹೊಲಸು
**ಆಶಾಪಾಶ** ಆಶೆ ಎಂಬ ಬಂಧನ
**ಆಶಿವಿಷ, ಆಶೀವಿಷಧರ** ಹಲ್ಲಿನಲ್ಲಿ ವಿಷವುಳ್ಳದ್ದು–ಹಾವು
**ಆಶು** ಬೇಗನೆ, ಇದ್ದಕ್ಕಿದಂತೆ
**ಆಶೆಕಾರ** ಸುಖಾಪೇಕ್ಷಿ
**ಆಶ್ಚರಿ** ಆಶ್ಚರ್ಯ
**ಆಶ್ರಾಂತ** ದಣಿವಾಗುವವರೆಗೆ
**ಆಶ್ವಿನೇಯ** ಅಶ್ವಿನಿದೇವತೆಗಳು
**ಆಷಾಠ** ಆಷಾಢಮಾಸ, ಮುತ್ತುಗದ ಗಿಡ
**ಆಸಕುತಿ<ಆಸಕ್ತಿ** ಸ್ವಇಚ್ಛೆ
**ಆಸರಿಸು** ಆಶ್ರಯಿಸು
**ಆಸರು, ಆಸರೆ** ಆಶ್ರಯ
**ಆಸವ** ಮಕರಂದ; ಬಟ್ಟಿಯಿಳಿಸಿದ್ದು, ಮದ್ಯ, ಸುರೆ
**ಆಸಾರ** ವೈರಿಗಳನ್ನು ಮುತ್ತುವುದು
**ಆಸು** ಅಷ್ಟು
**ಆಸುಪಾಸು** ಅಕ್ಕಪಕ್ಕ, ಆಗುಹೋಗುಗಳು
**ಆಸುರೀಭಾವ** ರಾಕ್ಷಸ ಪ್ರವೃತ್ತಿ
**ಆಸ್ಯ** ಮುಖ
**ಆಸ್ಯತೇಜೋಂಶ** ಮುಖ ಕಾಂತಿ
**ಆಸ್ವಾದ** ಸವಿ, ರುಚಿ
**ಆಹ** ಆಗುವವ
**ಆಹತಿ** ಹೊಡೆತ

Rarest Archiver

**ಆಹರ** ಆಹಾರ
**ಆಹಲ್ಲಾದ<ಆಹ್ಲಾದ** ಸಂತೋಷ; ಪ್ರಹ್ಲಾದನ ತಮ್ಮ
**ಆಹವ** ಯುದ್ಧ
**ಆಹಾರ** ಪ್ರಹಾರ, ಹೊಡೆತ
**ಆಹಿತ** ಪಂಚಲೋಹಾದಿಕೃತ ಪ್ರತಿಮೆ
**ಆಹುದು** ಆಗುವುದು, ಹೌದು
**ಆಹೂತ** ಆಮಂತ್ರಿತ; ಆಕರ್ಷಿತ
**ಆಹೃತ** ತಂದ
**ಆಹೋದು** ಆಗುವುದು
**ಆಹ್ವ, ಆಹ್ವಯ, ಆಂಹ್ವ** ಹೆಸರು, ನಾಮಧೇಯ
**ಆಳ** ಮೋಸ
**ಆಳಂಪಲ್ಲಕ್ಕಿ** ಉತ್ಸವವಿಶೇಷ
**ಆಳಕ** ಅಳ್ಳಕ, ಸಡಿಲ; ಕೇಶ
**ಆಳವಾಡು** ವಂಚಿಸು
**ಆಳಿ** ಸಮೂಹ
**ಆಳು** ಮುಳುಗು
**ಆಳುವಾಡುತಿನ್ನುವವಮತ** ವಂಚಿಸಿ ಜೀವನ ಮಾಡುವ ಮತ
**ಆಳ್ವಾರರು** ತಮಿಳುನಾಡಿನ ಶ್ರೀವೈಷ್ಣವ ಸಂತರು

## ಇ

**ಇಂಗಡಲ್** ಕ್ಷೀರಸಾಗರ
**ಇಂಗಡಲಸುತೆ** ಸಮುದ್ರರಾಜನ ಮಗಳು–ಲಕ್ಷ್ಮಿ
**ಇಂಗಡಲಳಿಯ** ಸಮುದ್ರರಾಜನ ಅಳಿಯ–ಶ್ರೀಹರಿ
**ಇಂಗಡಲಾತ್ಮಜೆ** ಕ್ಷೀರಸಮುದ್ರದಲ್ಲಿ ಹುಟ್ಟಿದವಳು–ಲಕ್ಷ್ಮಿ
**ಇಂಗಡಲು** ಕ್ಷೀರಸಾಗರ, ಸಮುದ್ರ
**ಇಂಗಿತ** ಆಶ್ರಯ, ಅಭಿಪ್ರಾಯ
**ಇಂಗಿತಜ್ಞ** ಬೇರೆಯವರ ಮನಸ್ಸಿನ ಆಶಯಗಳನ್ನು ಅರಿವವನು
**ಇಂಚಿ (?)** ಏಣಿ (?)
**ಇಂಚು** ಏರು, ಇಳಿ
**ಇಂತುಂತೆಂದು** ಹೀಗೆಹಾಗೆ ಎಂದು
**ಇಂದಿರರೂಪ** ಮೋಹಿನೀರೂಪ
**ಇಂದಿರಾ(ರೆ)** ಲಕ್ಷ್ಮಿ
**ಇಂದಿರಾಧವ, ಇಂದಿರಾಪತಿ.** ಶ್ರೀಹರಿ
**ಇಂದೀವರ** ತಾವರೆ, ನೀಲಿನೈದಿಲೆ, ಕನ್ನೈದಿಲೆ
**ಇಂದೀವರಾಕ್ಷಿ** ಕಮಲದಂತೆ ಕಣ್ಣುಗಳುಳ್ಳವಳು–ಲಕ್ಷ್ಮಿ
**ಇಂದು** ಚಂದ್ರ; ಈದಿನ
**ಇಂದುಕುಲ** ಚಂದ್ರವಂಶ
**ಇಂದುಕುಲಾಧಿಪ** ಚಂದ್ರವಂಶಕ್ಕೆ ಒಡೆಯ
**ಇಂದುಕ್ಷೇತ್ರ** ಉಡುಪಿ
**ಇಂದುಧರ** ಶಿವ
**ಇಂದುಧರಾಂಶ** ರುದ್ರಾಂಶ, ದುರ್ವಾಸ(ಅತ್ರಿ ಮತ್ತು ಅನುಸೂಯೆಯರ ಮಗ)
**ಇಂದುಧರಾತ್ಮಜ** ಚಂದ್ರನನ್ನು ಧರಿಸಿದ ಶಿವನ ಮಗ
**ಇಂದುನಿಭ** ಚಂದ್ರನಿಗೆ ಸಮನಾದ ಕಾಂತಿಯುಳ್ಳ
**ಇಂದುಬಿಂಬ** ಚಂದ್ರಬಿಂಬ
**ಇಂದುಭಾಗೆ** ಚಂದ್ರಭಾಗಾ ನದಿ, ಅರ್ಧ ಚಂದ್ರನ ಆಕಾರದ ಪಾತ್ರವುಳ್ಳ ನದಿ
**ಇಂದುಭಾಸ್ಕರಸ್ವರಗಳು** ಅಷ್ಟಾಂಗಯೋಗದಲ್ಲಿ ಶ್ವಾಸೋಚ್ಛ್ವಾಸಗಳು
**ಇಂದುಮುಖಿ** ಚಂದ್ರನಂತೆ ಸುಂದರ ಮುಖವುಳ್ಳವಳು
**ಇಂದುಮೌಲಿ(ಳಿ)** ಚಂದ್ರಮೌಳಿ–ಶಿವ
**ಇಂದುಮೌಳಿಜ** ಶಿವನಿಂದ ಹುಟ್ಟಿದವ–ಗಣಪತಿ

Rarest Archiver

**ಇಂದುರವಿನೇತ್ರ** ಚಂದ್ರ-ಸೂರ್ಯರನ್ನು ಕಣ್ಣಾಗಿ ಉಳ್ಳವನು-ಶಿವ
**ಇಂದುವದನೆ** ಚಂದ್ರಮುಖಿ
**ಇಂದುಶೇಖರ** ಶಿವ
**ಇಂದುಹಾಸ** ಚಂದ್ರಹಾಸ, ಬೆಳುದಿಂಗಳು
**ಇಂದ್ರಗೋಪ** ಮಿಂಚುಹುಳ
**ಇಂದ್ರಚಾಪ** ಕಾಮನಬಿಲ್ಲು
**ಇಂದ್ರಜ** ಅರ್ಜುನ
**ಇಂದ್ರಜಾತಾಖ್ಯ** ಪುರಂದರಾರ್ಯ
**ಇಂದ್ರಜಾರಿಸೂತ** ಶಲ್ಯ, ಕರ್ಣನ ಸಾರಥಿ
**ಇಂದ್ರಜಾಲ** ಕಣ್ಕಟ್ಟು ವಿದ್ಯೆ, ಮಾಯಾಜಾಲ
**ಇಂದ್ರದಂಡ** ವಜ್ರಾಯುಧ
**ಇಂದ್ರದ್ಯುಮ್ನ** ಶ್ರೀಕೃಷ್ಣನಿಂದ ಹತನಾದ ಒಬ್ಬ ಕ್ಷತ್ರಿಯ; ಒಬ್ಬ ರಾಜಋಷಿ
**ಇಂದ್ರನಂದನ** ಜಯಂತ, ಅರ್ಜುನ
**ಇಂದ್ರನನುಜ, ಇಂದ್ರಾನುಜ** ವಾಮನ, ಉಪೇಂದ್ರ
**ಇಂದ್ರನೀಲ** ರತ್ನ, ನೀಲಮಣಿ
**ಇಂದ್ರವಿರೋಧಿ** ಹಿರಣ್ಯಕಶಿಪು
**ಇಂದ್ರಸಾವರ್ಣಿ** ಮನು
**ಇಂದ್ರಸೇನಾ** ನಳದಮಯಂತಿಯರಲ್ಲಿ ಅವತರಿಸಿದ ಭಾರತಿ(ಭಾರತೀರೂಪ)
**ಇಂದ್ರಹದಿನಾಲ್ಕುಮನುನರಕ** ಹದಿನಾಲ್ಕು ಮನುಗಳೂ ಇಂದ್ರರೂ ಇರುವವರೆಗಿನ ನರಕ
**ಇಂದ್ರಾಣಿ** ಶಚೀದೇವಿ
**ಇಂದ್ರಾರಾತಿ** ಇಂದ್ರನನ್ನು ತಡೆಯುವವನು, ಇಂದ್ರಜಿತು, ಇನಸಖ
**ಇಂದ್ರಿಯ** ದೇಹದ ಅಂಗಗಳು; ವೀರ್ಯ
**ಇಂದ್ರಿಯದಹಿಲ** ದಶೇಂದ್ರಿಯಗಳು
**ಇಂದ್ರಿಯನೇಮ** ಇಂದ್ರಿಯ ನಿಗ್ರಹ
**ಇಂದ್ರಿಯಪ್ರತಿಮೆ** ಬೇರೆ ದೇಹ
**ಇಂದ್ರಿಯಾತ್ಮಕ** ಸಂಯಮಶಾಲಿ
**ಇಂದ್ವರ್ಕ** ಚಂದ್ರ-ಸೂರ್ಯ
**ಇಂಧನ** ಸೌದೆ
**ಇಂಬಾಗು** ಗುರಿಗೆ ಸರಿಯಾಗು, ವಿಶಾಲವಾಗು
**ಇಂಬಿಡು** ಆಶ್ರಯಕೊಡು, ಸಲಹು, ಗುರಿಯಿಡು
**ಇಂಬು** ನೆಲ, ತಾಣ, ಆಶ್ರಯ, ಜಾಗ, ಅನುಕೂಲ; ಹೆಚ್ಚಾಗಿ, ಗುರಿ, ಸುಖ
**ಇಂಬುದೋರು** ಆಶ್ರಯವನ್ನುಕೊಡು
**ಇಕ್ಕಡಿಚಿತ್ತ** ಎರಡು ಮನಸ್ಸು, ಡೋಲಾಯಮಾನದ ಚಿತ್ತ, ಚಂಚಲ ಚಿತ್ತ
**ಇಕ್ಕು** ಕೊಡು, ದಾನಮಾಡು; ಹೊಡಿ
**ಇಕ್ಕೆ** ವಾಸಸ್ಥಾನ, ಆಶ್ರಯ
**ಇಕ್ಕೆಲ** ಎರಡೂ ಕಡೆ
**ಇಕ್ಷು** ಕಬ್ಬು
**ಇಕ್ಷುಚಾಪ** ಕಬ್ಬಿನ ಬಿಲ್ಲಿನವನು-ಮನ್ಮಥ
**ಇಕ್ಷುಚಾಪನಪಿತ** ಮನ್ಮಥ ಪಿತ-ವಿಷ್ಣು
**ಇಕ್ಷುದಂಡ** ಕಬ್ಬಿನ ಜಲ್ಲೆ
**ಇಕ್ಷುಧನ್ವ** ಕಬ್ಬನ್ನು ಬಿಲ್ಲಾಗಿ ಉಳ್ಳವ-ಮನ್ಮಥ
**ಇಕ್ಷುಶರ** ಕಬ್ಬನ್ನು ಬಾಣವನ್ನಾಗಿ ಉಳ್ಳವ-ಮನ್ಮಥ
**ಇಕ್ಷ್ವಾಕು** ವೈವಸ್ವತ ಮನುವಿನ ಹಿರಿಯ ಮಗ, ಸೂರ್ಯವಂಶದ ಮೂಲಪುರುಷ, ಈತನ ವಂಶದಲ್ಲಿ ಮುಂದೆ ರಾಮ ಹುಟ್ಟಿದ
**ಇಗಡ<ವಿಗಡ** ಪರಾಕ್ರಮ, ಶೌರ್ಯ
**ಇಗಡೇರು<ವಿಗಡೆಯರು** ವಿಚಿತ್ರರು(ಕೀಳರ್ಥದ ಪ್ರಯೋಗ)
**ಇಚ್ಛಜ** ಮನ್ಮಥ
**ಇಚ್ಛಿತ** ಇಷ್ಟವಾದುದು, ಮನಸ್ಸಿಗೆ ಬಂದದ್ದು
**ಇಟ್ಟ(ಟ್ಟೆ)ಣಿಸು** ಗುಂಪಾಗು
**ಇಟ್ಟಳ** ರಾಶಿ, ಗುಂಪು, ಸಮೂಹ
**ಇಟ್ಟಿಕಲ್ಲು** ಇಟ್ಟಿಗೆ
**ಇಟ್ಟಿಗೆಮೇಲೆನಿಂತವ** ಪಂಡರಾಪುರದ ಪಾಂಡುರಂಗ
**ಇಟ್ಟೆಡೆ** ನೂಕುನುಗ್ಗಲು, ಇಕ್ಕಟ್ಟು
**ಇಡಗಿ** ಇಡುವಿಕೆ

Rarest Archiver

**ಇಡಲ** ಹೊಡೆ
**ಇಡಿ** ಕುಟ್ಟು, ಚಚ್ಚು
**ಇತರಾಸೂನು** ಇತರ ದೇವಿಯಮಗ, ಮಹಿದಾಸ
**ಇತ್ತಂಡ** ಎರಡೂ ಪಕ್ಕದ ಗುಂಪು
**ಇತ್ತೆರ, ಇತ್ತೆರಪು** ಎರಡುಕಡೆ
**ಇತ್ತೆರಬುಗುಡಿ** ಎರಡುಕಡೆ ಬುಗುಡಿ ಇರುವ ಒಂದು ಆಭರಣ
**ಇತ್ಯಪೂಜ್ಯ** ಇಚ್ಛಿಸಲ್ಪಡುವವ ಮತ್ತು ಪೂಜಿಸಲ್ಪಡುವವ
**ಇದ** ವಿಧ, ವಿಧಾನ, ರೀತಿ
**ಇದೇವೆ** ಇದೇ
**ಇದ್ದಗೆ** ಎರಡು ತಲೆಯುಳ್ಳ ಅಗ್ನಿ
**ಇದ್ದನಿತು** ಇರುವಷ್ಟು (ಧರ್ಮದ ಸಂಪಾದನೆ)
**ಇದ್ದನಿಸರು** ಹೆಂಡತಿ, ಮಕ್ಕಳು, ಬಂಧು, ಬಳಗ
**ಇನ** ಸೂರ್ಯ
**ಇನಕುಲಕಪಿ** ಸೂರ್ಯವಂಶದ ಸುಗ್ರೀವ
**ಇನಕುಲಾಂಬುಧಿಚಂದ್ರ** ಸೂರ್ಯವಂಶದ ಅಭ್ಯುದಯಕ್ಕೆ ಕಾರಣ–ರಾಮ
**ಇನಕುಲೇಂದ್ರ** ಸೂರ್ಯವಂಶ ಶ್ರೇಷ್ಠ–ರಾಮ
**ಇನಗಭಸ್ತಿಗ** ಸೂರ್ಯಕಿರಣಸ್ಥ
**ಇನಚಂದ್ರನಿಭವಕ್ತ್ರ** ಸೂರ್ಯ ಚಂದ್ರರಂತೆ ಪ್ರಭೆಯುಳ್ಳ ಮುಖದವನು
**ಇನಜ, ಇನತನಯ, ಇನಸುತ**, ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಇನಜನತನುಜ** ಧರ್ಮರಾಜ
**ಇನಿತನು** ಮನೋಹರ, ಮಹತ್ವದ ಶರೀರ
**ಇನಿತು** ಈ ಬಗೆಯಾಗಿ, ಇಷ್ಟು
**ಇನಿಯ** ಪ್ರಿಯಕರ, ಪತಿ, ಗಂಡ
**ಇನ್ನಾರು** ಇನ್ನಾದರು
**ಇನ್ನೆಗಂ** ಇಲ್ಲಿಯವರೆಗೆ
**ಇಪ್ಪ** ಇರುವ
**ಇಪ್ಪತ್ತಾರು ಮನೆಯಾಳುಗಳು** ತತ್ತ್ವಾಭಿಮಾನಿ ದೇವತೆಗಳು
**ಇಪ್ಪತ್ತೈದುತತ್ತ್ವ** ಐದು ಜ್ಞಾನೇಂದ್ರಿಯ, ಐದು ಕರ್ಮೇಂದ್ರಿಯ, ಐದು ತನ್ಮಾತ್ರೆ, ಐದು ಮಹಾಭೂತ, ಪ್ರಕೃತಿ, ಮಹತ್, ಬುದ್ಧಿ, ಮನ, ಅಹಂಕಾರ
**ಇಪ್ಪತ್ತೊಂದು ನರಕಗಳು** ತಾಮಿಸ್ರ, ಅಂಧತಾಮಿಸ್ರ, ರೌರವ, ಮಹಾರೌರವ, ಕುಂಭೀಪಾಕ, ಕಾಲಸೂತ್ರ, ಅಸಿಪತ್ರವನ, ಸೂಕರಮುಖ, ಅಂಧಕೂಪ, ಕ್ರಿಮಿಭೋಜನ, ಸಂದಂಶ, ತಪ್ತಸೂರ್ಯ, ವಜ್ರಕಂಟಕ ಶಾಲ್ಮಲೀ, ವೈತರಣಿ, ಪೂಯೋಧ/ಪೂಯಶೋಣಿತ, ಪ್ರಾಣರೋಧ, ವಿಶಸನ, ಲಾಲಾಭಕ್ಷ್ಯ, ಸಾತಮೇಯಾದನ, ಅವೀಚಿ, ಅಯೋರೇತಃಪಾನ
**ಇಪ್ಪತ್ತೊಂದು ಭಾಷ್ಯಗಳು** ಭಾರತೀ, ವಿಜಯ, ಸಚ್ಚಿದಾನಂದ, ಬ್ರಹ್ಮಘೋಷ, ಶತಾನಂದ, ವಿಜಯ, ರುದ್ರಭಟ್ಟ, ವಾಮನ, ಯಾದವ ಪ್ರಕಾಶ, ರಾಮಾನುಜ, ಉದ್ವರ್ತಪ್ರಪಂಚ, ದ್ರವಿಡ, ಬ್ರಹ್ಮದತ್ತ, ಭಾಸ್ಕರ, ಪಿಶಾಚ, ವೃತ್ತಿಕಾರಕ, ವಿಜಯಭಟ್ಟ, ವಿಷ್ಣುಕ್ರಾಂತ, ವಾದೀಂದ್ರ, ಮಾಧವದಾಸ, ಶಂಕರ
**ಇಬ್ಬರು** ದ್ವೈತಬುದ್ಧಿ
**ಇಬ್ಬರುಸವತೇರು** ಆಶಾ, ಲಜ್ಜಾ (ವಿದ್ಯಾ, ಅವಿದ್ಯಾ)
**ಇಭ** ಆನೆ
**ಇಭಕರ** ಆನೆಯ ಸೊಂಡಿಲು
**ಇಭಕರಸದ್ಯೋರು** ಆನೆಯ ಸೊಂಡಿಲಂತಹ ತೊಡೆ
**ಇಭಗಿರಿ** ಕರಿಗಿರಿ
**ಇಭಗುಹ** ಆನೆಗುಂದಿ (ಹಂಪಿ ಹತ್ತಿರದ ಊರು)
**ಇಭಪತಿ** ಗಜೇಂದ್ರ
**ಇಭಪುರಿ** ಹಸ್ತಿನಾವತಿ
**ಇಭಮುಖ** ಗಣಪತಿ

Rarest Archiver

**ಇಭರಾಜ** ಗಜೇಂದ್ರ

**ಇಭರಾಜಗಮನೆ** ಗಜಗಮನೆ, ರಮಾದೇವಿ

**ಇಭರಾಜವರದ** ಆನೆ; ಗಜೇಂದ್ರವರದ, ಗಜೇಂದ್ರ ರಕ್ಷಕ–ವಿಷ್ಣು

**ಇಭರಿಪು** ಸಿಂಹ

**ಇಭರಿಪುಸಮಕಟಿ** ಸಿಂಹದ ನಡುವಿನಂತಹ ಚಿಕ್ಕದಾದ ಸೊಂಟ, ಒಪ್ಪಿಡಿ ನಡು

**ಇಭವರದ** ಗಜೇಂದ್ರವರದ–ಶ್ರೀಹರಿ

**ಇಮ್ಮನ** ಎರಡುಮನಸ್ಸು, ದ್ವಂದ್ವ, ಸಂದೇಹ

**ಇಮ್ಮನೆ** ಸಲೀಸಾಗಿ, ಚೆನ್ನಾಗಿ

**ಇಮ್ಮಹಿಷೇರು** ಇಬ್ಬರು ರಾಣಿಯರು, ಶ್ರೀದೇವಿ ಭೂದೇವಿಯರು

**ಇಮ್ಮಿಗಿಲು** ಎರಡರಷ್ಟು ಹೆಚ್ಚು, ಎರಡಕ್ಕೂಮೀರಿ

**ಇರಕಟ<ಇರ್ಕಟ** ಇಕ್ಕಟ್ಟು, ಸ್ಥಳಸಂಕೋಚ

**ಇರಕಿಲು** ಸಂದು

**ಇರವರಿ** ಸ್ಥಿತಿಯನ್ನು ತಿಳಿ

**ಇರವು** ಇರುವಿಕೆ, ಅಸ್ತಿತ್ವ; ಸ್ಥಿತಿ, ರೂಪ, ಆಕಾರ

**ಇರಸಲ್ಮಳೆ** ಎರಚಲು ಮಳೆ

**ಇರುಕಳು** ಇರಿಯುವ ಆಕಳು, ತಿವಿಯುವ ಪ್ರಾಣಿ, ಹೋರಿ ಮುಂತಾದ ಕೊಂಬಿನ ಪ್ರಾಣಿ

**ಇರುಕು** ಹತ್ತಿಕ್ಕು

**ಇರುವಂತಿ** ಒಂದು ಬಗೆಯ ಮಲ್ಲಿಗೆಹೂವು

**ಇರುಹೆ** ಇರುವೆ

**ಇರ್ಕುಳಿಗೊಳ್ಳು** ಮೋಹಿಸು

**ಇಲಾಪತಿ** ಯಮಧರ್ಮರಾಜ

**ಇಲ್ವಲ** ರಸಾಭಿಮಾನಿ ದೈತ್ಯ, ಒಬ್ಬ ರಾಕ್ಷಸನ ಹೆಸರು

**ಇಷೀಕ** ಕೊಳಲು

**ಇಷು** ಬಾಣ

**ಇಷ್ಟಕಭಾವ** ಪ್ರೀತಿಪಾತ್ರವಾದ ಭಾವ

**ಇಷ್ಟದ, ಇಷ್ಟಾರ್ಥ** ಕೋರಿಕೆ, ಬೇಡಿದ ಫಲ

**ಇಷ್ಟಾರ್ಥಧೇನು** ಕಾಮಧೇನು

**ಇಷ್ಟಿ** ಯಾಗ, ಪೂಜೆ; ಬಯಕೆ

**ಇಸು** ಬಾಣ ಪ್ರಯೋಗ ಮಾಡು

**ಇಸುತಿಂಬರು** ಇಚ್ಛಿತ ಪಡೆದು ಭೋಗಿಸುವರು

**ಇಹ** ಸಂಸಾರ

**ಇಹಪರ** ಲೌಕಿಕ ಮತ್ತು ಪಾರಲೌಕಿಕ

**ಇಹೋದು** ಇರುವದು

**ಇಹ್ಯ** ಇರುವ

**ಇಳಾ** ಭೂಮಿ

**ಇಳಾವರ್ತ** ಭೂಮಿಯನ್ನು ಸುತ್ತಿದ; ಆರು ಖಂಡಗಳಲ್ಲೊಂದು

**ಇಳಾಸುತೆ** ಸೀತಾದೇವಿ, ಭೂಜಾತೆ

**ಇಳಿ** ಇಡಿಯಾಗಿ; ಕೆಳಗೆ ಬರುವುದು

**ಇಳುಹು** ಇಳಿಸು, ಕತ್ತರಿಸು

**ಇಳೆ** ಭೂಮಿ

**ಇಳೆಜ** ಭೂಮಿಪುತ್ರ ಮಂಗಳ

**ಇಳೆದೇವ** ವಿಪ್ರ

**ಇಳೆಯಕದ್ದಸಾಳಿ** ವರಾಹಾವತಾರ

**ಇಳೆಯಾಣ್ಮ** ಭೂಪತಿ–ರಾಜ

**ಇಳೆಸುರ** ಭೂಸುರ, ಬ್ರಾಹ್ಮಣ

## ಈ

**ಈ** ಕೊಡು

**ಈಂಟು** ಕುಡಿ, ಹೀರು

**ಈಕ್ಷಣ** ಕಣ್ಣು, ನೋಟ; ಹೆಂಡತಿ, ಮಕ್ಕಳು ಹಾಗೂ ಹಣದ ವ್ಯಾಮೋಹ

**ಈಕ್ಷಿಸು** ನೋಡು, ದೃಷ್ಟಿ ಬೀರು

**ಈಟು** ಇಷ್ಟು, ಸ್ವಲ್ಪ

**ಈಡಾ** ಎಡಭಾಗದಿಂದ ಹಾಯ್ದು ಬಲಗಿವಿಗೆ ಮುಟ್ಟುವ ನಾಡಿ

Rarest Archiver

**ಈಡಾಡು, ಈಡ್ಯಾಡು** ಚೆಲ್ಲು, ಎರಚಾಡು, ತೂರೆ, ಬಿಸುಡು, ಕತ್ತರಿಸು
**ಈಡಾಪಿಂಗಳ** ಸೂರ್ಯ–ಚಂದ್ರ; ನಾಡಿಗಳು
**ಈಡು** ಸಮ, ಸರಿ, ಸರಿಸಮಾನ; ಸಾಕಷ್ಟು; ಬಲಿಯಾಗು, ಗುರಿ; ಚೆನ್ನು
**ಈಡ್ಯ** ಸ್ತುತ್ಯರ್ಹವಾದದ್ದು, ಹೊಗಳಿಕೆಗೆ ಪಾತ್ರ, ಪೂಜ್ಯ
**ಈತಿಬಾಧೆ** ರೋಗಬಾಧೆ
**ಈಪ್ಸಿತ** ಆಸೆಪಟ್ಟ, ಬಯಸಿದ
**ಈಪ್ಸಿತಾರ್ಥ** ಆಸೆಪಟ್ಟ ವಸ್ತು
**ಈರ** ವಾಯುದೇವರು
**ಈರಡಿ** ಎರಡು ಹೆಜ್ಜೆ, ಎರಡು ಪಾದ
**ಈರಮತ** ದ್ವೈತಮತ
**ಈರಲು** ಹೆರಿಗೆಯಾದ ಹನ್ನೊಂದನೆಯದಿನ ಬಾಣಂತಿ ಮಾಡುವ ಮಂಗಳಸ್ನಾನ
**ಈರವಿಧಿ** ಎರಡುವಿಧಿ
**ಈರಷಾ<ಈರ್ಷೆ** ಹೊಟ್ಟೆ ಕಿಚ್ಚು
**ಈರೆರಡುಪಾದ** ನಾಲ್ಕು ವೇದಗಳು
**ಈರೇಳುಧರೆ** ಹದಿನಾಲ್ಕು ಲೋಕ
**ಈರೊಂದುತಾಪ** 2+1=3 ತಾಪತ್ರಯ
**ಈರ್ಲು** ಮುಟ್ಟು ಮೈಲಿಗೆಯಿಂದ ಮಕ್ಕಳಿಗೆ ಬರುವ ಶೀತಭೇದಿ
**ಈಶ** ಒಡೆಯ, ದೇವ
**ಈಶಕೋಟಿಪ್ರವಿಷ್ಟೆ** ಲಕ್ಷ್ಮಿ
**ಈಶನಭಜಕರು** ಹರನಭಕ್ತರು
**ಈಶಾವಾಸ್ಯ** ವಾಸಮಾಡಲು ಯೋಗ್ಯ; ಈಷನ ಆವಾಸವಾದ; ಒಂದು ಉಪನಿಷತ್ತು
**ಈಶಿ(ಷಿ)ತ್ವ** ಎಲ್ಲರೂ ತಾನು ಹೇಳಿದಂತೆ ನಡೆಯುವುದು; ಒಡೆತನ
**ಈಶಿತವ್ಯ** ಆಶಾಪಾಶಕ್ಕೊಳಗಾಗದ; ಭಕ್ತ, ಜ್ಞಾನಿ; ಪೂಜೆಗೆ ತಕ್ಕ
**ಈಶ್ವರ** ಸೃಷ್ಟಿಕರ್ತ
**ಈಷಣ** ಉತ್ಕಟ ಅಪೇಕ್ಷೆ, ಆಸೆ, ಮೋಹ
**ಈಷನ್ಮಾತ್ರ** ಸ್ವಲ್ಪ
**ಈಸ** ಅವಕಾಶ ಕೊಡನು
**ಈಸು** ಇಷ್ಟು, ಈಜು
**ಈಸೋಕಾಯಿ** ಈಜಲು ಬಳಸುವ ಸೋರೆ ಬುರುಡೆ
**ಈಹ** ಇರುವ
**ಈಹಕೆ** ಇಹಕ್ಕೆ, ಲೌಕಿಕಕ್ಕೆ, ವಿಷಯಭೋಗ ಲಾಲಸೆ
**ಈಹಾಮೃಗ** ತೋಳ–ವೃಕಕ್ಕೆ ಆಹಾರವಾಗಿ; ನಾಟ್ಯಶಾಸ್ತ್ರದ ದಶರೂಪಕಗಳಲ್ಲಿ ಒಂದು

## ಉ

**ಉಂಗುಟ, ಉಂಗುಷ್ಟ** ಹೆಬ್ಬೆರಳು
**ಉಂಚ** ಶ್ರೇಷ್ಠನಾದವನು, ಎತ್ತರವಾದ; ಬೇಡಿಪಡೆಯುವ; ಹಕ್ಕಲು, ಕೆಳಗೆ ಬಿದ್ದ ಕಾಳು ಕಡ್ಡಿ
**ಉಂಚಗೌಡಿ** ಹಕ್ಕಲನ್ನು ಆರಿಸಿಕೊಂಡು ಬಂದು ಬದುಕುವ ನಿರ್ಗತಿಕ ಹೆಣ್ಣು
**ಉಂಛ, ಊಂಛ** ಬೇಡಿಪಡೆಯುವದು
**ಉಂಛವೃತ್ತಿ <ಊಂಛವೃತ್ತಿ** ಉಪಾದಾನ, ಹರಿದಾಸರು ಬೇಡುವ ಭಿಕ್ಷೆ
**ಉಂಟುತನ** ಶ್ರೀಮಂತಿಕೆ
**ಉಂದದ** ಮರ್ಯಾದೆಗೆ ಯೋಗ್ಯವಲ್ಲದ
**ಉಂದುರ** ಇಲಿ
**ಉಂದುರವರವಾಹನ** ಗಣಪತಿ
**ಉಂಬಳಿ** ಮಾನ್ಯವಾಗಿ ಕೊಡುವ ಭೂಮಿ

Rarest Archiver

**ಉಂಬು** ಉಣ್ಣು
**ಉಕುತಿ** ಉಕ್ತಿ, ಮಾತು, ನೀತಿಮಾತು
**ಉಕ್ಕಾ** ಅವ್ವಾ ಮಕ್ಕಳ ಮುದ್ದುನುಡಿಯ ಅನುಕರಣ ಧ್ವನಿ, ಬಾಲಭಾಷೆ, ಕಲಭಾಷೆ
**ಉಕ್ಕು** ಸೊಕ್ಕು, ಅಹಂಕಾರ, ಬೀಗು; ಹಾಲು
**ಉಕ್ಲವ** ಉಕ್ಕುವಿಕೆ, ಹೆಚ್ಚುವಿಕೆ
**ಉಗಮ** ಮೂಲ, ಹುಟ್ಟು
**ಉಗಾಭೋಗ** ಬೇಕಾದ ರಾಗದಲ್ಲಿ ಹಾಡಲು ಬರುವ ಒಂದು ಪದ್ಯ ಪ್ರಕಾರ
**ಉಗಿ** ಹೊರದೂಡು, ಉಗುಳು
**ಉಗು** ಹೊರಸೂಸು, ಜಿನುಗು
**ಉಗುರುಬಿದ್ದಲ್ಲಿ** ಹೆಜ್ಜೆ ಇಟ್ಟಲ್ಲಿ
**ಉಗ್ಗಡ** ಶ್ರೇಷ್ಠ
**ಉಗ್ಗಡಿಸು** ಸಾರು, ಘೋಷಿಸು, ಹೊಗಳು
**ಉಗ್ಗವೇರಿಸಿಕೊಂಡು** ಶಿಕ್ಷೆ ಪಡೆದು, ನೇಣುಹಾಕಿಸಿ ಕೊಂಡು
**ಉಗ್ಗು** ತೊದಲುನುಡಿ, ಗುಕ್ಕು, ತುತ್ತು
**ಉಗ್ರ** ಭಯಂಕರ
**ಉಗ್ರರೂಪ** ನರಸಿಂಹಾವತಾರ
**ಉಗ್ರಾಸನ** ಕಠಿಣವಾದ ಯೋಗಾಸನ
**ಉಗ್ರೇಶ್ವರ** ರುದ್ರ
**ಉಘೇ** ಜಯಘೋಷ
**ಉಘ್ಘಡಿಸು** ಜಯಘೋಷ ಮಾಡು
**ಉಚಂಬಿಳಿಸು** ಉಕ್ಕೇರು
**ಉಚಿಥ್ಯ** ಅಗ್ನಿಕುಮಾರರು; ಋಷಿ
**ಉಚ್ಚವಿ** ಉತ್ಸಾಂಕಿ, ಆದರವುಳ್ಳ
**ಉಚ್ಚಾಹ** ಉತ್ಸಾಹ
**ಉಚ್ಚು** ಬಿಚ್ಚು, ತೆಗೆ
**ಉಚ್ಚುಬಡಿ** ಹೊರತೆಗೆ
**ಉಚ್ಚೈಶ್ರವಸ್** ಇಂದ್ರನ ಪಟ್ಟದ ಕುದುರೆ
**ಉಚ್ಛ್ವಾಸ** ಒಳಗಿನಿಂದ ಹೊರಗೆ ಬರುವ ಉಸಿರು
**ಉಚ್ಛವ** ಉತ್ಸವ
**ಉಚ್ಛಿಲೀಂದ್ರ** ಮೇಲೆ ಬಂದ ಶಿಲೀಂಧ್ರ, ನಾಯಿಕೊಡೆ
**ಉಚ್ಛಿಷ್ಟ** ತಿಂದು ಮಿಕ್ಕಿದ್ದು, ಎಂಜಲು, ದೇವರ ಪ್ರಸಾದ
**ಉಛಾಯಿಸು** ಅಡೆತಡೆ ಇಲ್ಲದೆ ಮಾತಾಡು
**ಉಟ್ಟಣೆ** ಉರುಟಣೆ
**ಉಟ್ಟದಟ್ಟಿ** ಕಟ್ಟಿದ ವಸ್ತ್ರ
**ಉಟ್ಟದ್ದುಬಿಟ್ಟು** ಬತ್ತಲೆ
**ಉಡಚಮ್ಮ** ಕಾಮರೋಗಗಳ ದೇವತೆ. ಮುನವಳ್ಳಿ (ಬೆಳಗಾವಿ) ಕೋಟೆಯಲ್ಲಿರುವ ಈ ದೇವತೆ ಪ್ರಸಿದ್ಧವಾಗಿದೆ
**ಉಡತೆ** ಅಳಿಲು, ಉಡಎನ್ನುವ ಪ್ರಾಣಿ
**ಉಡಿ** ಮುರಿ, ಸೊಂಟ
**ಉಡಿಗೆಜ್ಜೆ** ಗೆಜ್ಜೆಯ ಉಡದಾರ
**ಉಡಿಘಂಟೆ** ಬಾಲ ತೊಡಿಗೆಗಳಲ್ಲಿ ಒಂದು, ಸೊಂಟಕ್ಕೆ ಉಡಿದಾರದ ಜೊತೆಗೆ ಕಟ್ಟುವ ಘಂಟೆ
**ಉಡು** ಪಂಚೆ, ಸೀರೆ ಮುಂತಾದುವನ್ನು ಸುತ್ತಿಕೊಳ್ಳುವುದು; ಉಡ, ದೊಡ್ಡಜಾತಿಯ ಹಲ್ಲಿ, ಗೋಧೆ: ನಕ್ಷತ್ರ
**ಉಡುಗಣ** ನಕ್ಷತ್ರ ಸಮೂಹ, ನಕ್ಷತ್ರ ಪುಂಜ, ತಾರಾಗಣ
**ಉಡುಗು** ಕುಂದು, ಕೃಶವಾಗು
**ಉಡುಗೆ** ವಸ್ತ್ರ, ಬಟ್ಟೆ
**ಉಡುಚಕ್ರ** ಆಜ್ಞಾಚಕ್ರ
**ಉಡುಧವ** ನಕ್ಷತ್ರಾಧಿಪತಿಯಾದ ಚಂದ್ರ
**ಉಡುಪ** ಅಂಗಹೀನ; ಚಂದ್ರ
**ಉಡುಪತಿ** ಚಂದ್ರ, ನಕ್ಷತ್ರಗಳಿಗೆ ಒಡೆಯ;
**ಉಡುಪಶೇಖರ** ಚಂದ್ರಶೇಖರ, ಶಿವ
**ಉಡುಪಾಲಯ** ಆಕಾಶ (ನೀಲವರ್ಣ), ಚಂದ್ರನ ನೆಲೆಮನೆ
**ಉಡುಪಿ** ಚಂದ್ರ; ರಜತಪೀಠಪುರ, ಉಡುಪಿ ಕ್ಷೇತ್ರ

Rarest Archive

**ಉಡುಪಿನ** ಉಡುಪಿಯ
**ಉಡುಪೀಶ** ಉಡುಪಿಯ ಒಡೆಯ ಕೃಷ್ಣ
**ಉಡುಮಂಡಲವರ, ಉಡುರಾ** ಚಂದ್ರ
**ಉಡುರಾಶಿ** ನಕ್ಷತ್ರ ಸಮೂಹ
**ಉಡುವಣಿ** ಉಡಿದಾರ, ಸೊಂಟಕ್ಕೆ ಕಟ್ಟುವ ದಾರ
**ಉಡೆ** ಬಟ್ಟೆ, ಉಡಿಗೆ; ಮಡಿಲು, ಸೋಗಿಲು
**ಉಣ್ಣಿ<ಉಣ್ಣೆ** ದನಕರುಗಳ ಮೈಗೆ ಅಂಟಿ ಕೊಂಡಿರುವ ಒಂದು ಕೀಟ
**ಉಣ್ಣು** ಊಟಮಾಡು
**ಉತ್ಕಚ** ಉದ್ದವಾದ ಕೂದಲು, ನಿಮಿರಿನಿಂತ ತಲೆಕೂದಲು
**ಉತ್ಕಟ** ಸೊಕ್ಕು, ಉಗ್ರತೆ, ಆಧಿಕ್ಯ
**ಉತ್ಕೃಷ್ಟ** ಶ್ರೇಷ್ಠ
**ಉತ್ಕ್ರಮಣ** ಅಂತ್ಯಕಾಲ
**ಉತ್ಕ್ರಾಂತಿ** ವಿಕಾಸ
**ಉತ್ತ** ನಡುವಣ ಸ್ಥಳ, ಮಧ್ಯಸ್ಥಳ
**ಉತ್ತಂಸ** ಶಿರೋಮಣಿ, ಆಭರಣ, ಶ್ರೇಷ್ಠ
**ಉತ್ತತ್ತಿ** ಒಣ ಖರ್ಜೂರ
**ಉತ್ತಮಾಂಗ** ತಲೆ
**ಉತ್ತಮಾಂಗರುಹ** ತಲೆಕೂದಲು
**ಉತ್ತರ** ಪ್ರಾರ್ಥನೆ, ಬಿನ್ನಹ
**ಉತ್ತರಕ್ರಿಂಯೆ** ಸತ್ತವರಿಗೆ ಮಾಡುವ ಕ್ರಿಯೆ, ಅಪರಕರ್ಮ, ತಿಥಿ
**ಉತ್ತರಮತ** ವಿರುದ್ಧ ಮತ
**ಉತ್ತರಪೇರಿ** ಉತ್ತರ ಭಾಗ; ಹಸ್ತಿಗಿರಿ, ಕಂಚಿ
**ಉತ್ತರಿಸು** ಕತ್ತರಿಸು, ಚೂರುಮಾಡು; ದಾಟಿಸು, ದೂರಮಾಡು; ಉತ್ತರಕೊಡು
**ಉತ್ತಾನಪಾದ** ಸ್ವಯಂಭು ಮನುವಿನ ಕಿರಿಯ ಮಗ
**ಉತ್ತಾರ** ಸಂದಾಯ, ಉದ್ಧಾರ
**ಉತ್ತಾರಣ** ದಾಟಿಸುವುದು
**ಉತ್ತಾರಮಾಡು** ಕತ್ತರಿಸು, ತೀರಿಸು
**ಉತ್ತೀರ್ಣ** ದಾಟು, ತೇರ್ಗಡೆ
**ಉತ್ತುಂಗ** ಎತ್ತರವಾದ, ಶ್ರೇಷ್ಠ
**ಉತ್ಥಾಪನ** ಏಳುವುದು
**ಉತ್ಪಥ** ದುರ್ಮಾರ್ಗ
**ಉತ್ಪಲ** ಕನ್ನೈದಿಲೆ
**ಉತ್ಪಾತ** ಅಪಶಕುನ
**ಉತ್ಫುಲ್ಲ** ಅರಳಿದ
**ಉತ್ರಾಣಿ** ಬುಧಗ್ರಹದ ಪೂಜೆಗೆ ಬಳಸುವ ಸಸ್ಯವಿಶೇಷ
**ಉತ್ಸಂಗ** ತೊಡೆ
**ಉತ್ಸರ್ಜನೆ** ಮುಗಿಸುವಿಕೆ; ಸಮರ್ಪಿಸು; ವೀರ್ಯ ಸ್ಖಲನ
**ಉತ್ಸರ್ಪಣ** ಮೇಲಕ್ಕೆ ಹೋಗುವುದು
**ಉತ್ಸಹಾತ್ಮ, ಉತ್ಸಾಹಾತ್ಮ** ಸಂತೋಷದಿಂದ ಕೂಡಿದ ಆತ್ಮ
**ಉದಕ** ನೀರು
**ಉದಕಜಾಸನ** ಕಮಲಾಸನ, ಬ್ರಹ್ಮ
**ಉದಕಶಾಯಿ** ನೀರಿನ ಮೇಲೆ ಶಯನ ಮಾಡಿದವ –ಶ್ರೀಹರಿ
**ಉದಧಿ** ಸಮುದ್ರ
**ಉದಧಿನಂದನ** ಚಂದ್ರ
**ಉದಧಿಶಯನ** ಸಮುದ್ರಶಯನ–ಶ್ರೀಹರಿ
**ಉದಧಿಹಾರಿದವ** ಹನುಮಂತ
**ಉದಮಿದಾರ** ಉದ್ಯಮಿ, ಕಸಬುದಾರ
**ಉದಯವ್ಯಾಪಿನಿದರ್ಶ** ಉದಯಕಾಲ ವ್ಯಾಪಿಸಿದ ಅಮಾವಾಸ್ಯ
**ಉದಯಾದ್ರಿ** ಪೂರ್ವದಲ್ಲಿರುವ ಪರ್ವತ
**ಉದಯಾಸ್ತಮಾನ** ಹುಟ್ಟು–ಸಾವು
**ಉದರ** ಹೊಟ್ಟೆ
**ಉದರಂಭರಣ** ಹೊಟ್ಟೆಪಾಡು
**ಉದರಕಾಂಚುಕ** ಹೊಟ್ಟೆಗಾಗಿ ಮಾಡುವ ಉದ್ಯೋಗ

Rarest Archiver

**ಉದರಕುದಿ** ಹೊಟ್ಟೆಯ ಸಂಕಟ
**ಉದರಜ** ಹೊಟ್ಟೆಯಲ್ಲಿ ಹುಟ್ಟಿದ
**ಉದರಪಾದಶೈಲಸದನ** ಉದರವೇ ಪಾದವಾಗುಳ್ಳ ಶೇಷ
**ಉದರಪೋಷಣೆ** ಹೊಟ್ಟೆ ಹೊರೆದುಕೊಳ್ಳುವಿಕೆ
**ಉದರವೈರಾಗ್ಯ** ಹೊಟ್ಟೆ ಪಾಡಿಗಾಗಿ ವೈರಾಗ್ಯದ ಸೋಗು
**ಉದವ** ಉದ್ಘೋಷ/ಜಯಘೋಷ ಮಾಡುವವ
**ಉದಾತ್ತ** ಸ್ವರಗಳನ್ನು ಎತ್ತರದ ಸ್ಥಾಯಿಯಲ್ಲಿ ಹಾಡುವುದು
**ಉದಿತತರಣಿ** ಉದಯ ಸೂರ್ಯ
**ಉದಿತಾರ್ಕ** ಉದಯಿಸಿದ ಸೂರ್ಯ
**ಉದಿಸು** ಹುಟ್ಟು
**ಉದುಭವ** ಉದ್ಭವ, ಸೃಷ್ಟಿ
**ಉದುಭವಾದಿಗಳು** ಸೃಷ್ಟಿ, ಸ್ಥಿತಿ, ಲಯ
**ಉದ್ಗಾತೃ** ಸಾಮವೇದವನ್ನು ಗಾನ ಮಾಡುವವನು
**ಉದ್ಗೀತ** ಗೋವಿನಲ್ಲಿರುವ ಭಗವದ್ರೂಪ, ಸಾಮವೇದಪ್ರಿಯನಾದ ನಾರಾಯಣ
**ಉದ್ದಂಡ** ಶ್ರೇಷ್ಠ, ಶೂರ, ಪ್ರಚಂಡ, ಉನ್ನತ, ಪ್ರಬಲವಾದ; ತಿಕ್ಕು; ಭೀಕರ, ದುಷ್ಟ
**ಉದ್ದಂಡತನ** ಪ್ರತಿಷ್ಠೆ
**ಉದ್ದಂಡಧಾರ** ತ್ರಿಶೂಲಧಾರಿ ಶಿವ
**ಉದ್ದರಿ**<**ಉದ್ಧಾರ** ಸಾಲ
**ಉದ್ದಾಮ** ಶ್ರೇಷ್ಠ
**ಉದ್ದಿಮೆ** ಉದ್ಯಮ, ಉದ್ಯೋಗ
**ಉದ್ದು** ತಿಕ್ಕು; ಧಾನ್ಯ
**ಉದ್ಧವ** ವಸುದೇವನ ತಮ್ಮ, ಕೃಷ್ಣನ ಮಂತ್ರಿ; ತತ್ವಜ್ಞಾನಿ
**ಉದ್ಘಾಟಗಳು** ತೋರುವಿಕೆ
**ಉದ್ಭಟ** ಶ್ರೇಷ್ಠ
**ಉದ್ಭವಳು** ಹುಟ್ಟಿದವಳು, ದ್ರೌಪದಿ (ಅಗ್ನಿಪುತ್ರಿ)
**ಉದ್ಯತ್, ಉದ್ಯುತ್** ಮೇಲೆದ್ದ
**ಉದ್ಯತಾಕ್ಷಿ** ಕಣ್ತುಂಬ ನೋಡುವವ
**ಉದ್ಯದ್ಗದಾಧಾರಿ** ಎತ್ತಿಹಿಡಿದ ಗದೆಯುಳ್ಳವನು
**ಉದ್ಯೋಪ** ಉದ್ಯಾಪನೆ, ಪವಿತ್ರಕಾರ್ಯದ ಮುಕ್ತಾಯ ಸಮಾರಂಭ
**ಉದ್ವಹ** ಮರುತ-49 ಮರುದ್ಗಣದಲ್ಲಿ ಒಂದು ಗಣ
**ಉನ್ನಂತ** ಉನ್ನತ, ಶ್ರೇಷ್ಠ, ಅತ್ಯಂತ ಶ್ರೇಷ್ಠವಾದ
**ಉನ್ನತಕರದಾತೆ** ಕೈಎತ್ತಿ ಕೊಡುವವಳು
**ಉನ್ನತಭಕ್ತ** ಬ್ರಹ್ಮದೇವರು; ಶ್ರೇಷ್ಠ ಭಕ್ತ
**ಉನ್ನಹ** ಉತ್ಸಾಹ
**ಉನ್ನಾಹ** ಸಂಭ್ರಮ; ಹೆಚ್ಚು, ಉನ್ನತಿ; ಬಂಧನ
**ಉನ್ನಿಸು** ಮುಳುಗಿಸು
**ಉನ್ಮತ್ತ** ಕೊಬ್ಬಿದ, ಸೊಕ್ಕೇರಿದ
**ಉನ್ಮದ** ಉನ್ಮಾದ, ಆವೇಶ, ಹುಚ್ಚು
**ಉನ್ಮನ, ಉನ್ಮನಿ** ಊರ್ಧ್ವಮನಸ್ಥಿತಿ, ಸಮಾಧಿ ಸ್ಥಿತಿ, ದೈವತ್ವದೊಂದಿಗೆ ಕೂಡಿದ ಮನಸ್ಥಿತಿ, ಪರಮಾನಂದ ಸ್ಥಿತಿ, ಪರಮಾತ್ಮನನ್ನು ಕಾಣ ಬೇಕೆಂದು ಅತ್ಯಂತ ಆತುರನಿರುವ ಜೀವಾತ್ಮನ ತಲ್ಲೀನ ಅವಸ್ಥೆ
**ಉನ್ಮೂಲ** ಬುಡಸಹಿತ ಕೀಳುವುದು
**ಉಪಕಾರ** ಪ್ರತಿಬಿಂಬಿಸುವಿಕೆ; ಸಹಾಯ
**ಉಪಕೃತಿ** ಉಪಕಾರ
**ಉಪಕ್ರಮ** ಸತ್ವಪರೀಕ್ಷೆ
**ಉಪಗೂಢ** ಕಣ್ಣಿಗೆ ಕಾಣಿಸದಿದ್ದ; ಗುಪ್ತನಾಗಿದ್ದ, ಎನ್ನೊಳಗೆ ಗುಪ್ತನಾಗಿರುವ ಮಹಾಕರುಣಾ ಸಮುದ್ರ
**ಉಪಚಯ** ಬೆಳವಣಿಗೆ
**ಉಪಚಾರ** ಸತ್ಕಾರ
**ಉಪಜಿಹ್ವೆ** ಕಿರುನಾಲಗೆ, ಅದು ಊದಿಕೊಳ್ಳುವ ರೋಗ
**ಉಪಟಳ, ಉಪತ್ಯ, ಉಪದ್ರ** ತೊಂದರೆ, ಹಿಂಸೆ
**ಉಪಪತಿ** ಬೇರೊಬ್ಬ ಗಂಡ, ಮಿಂಡ

Rarest Archiver

**ಉಪಬರ್ಹ, ಉಪಬರ್ಹಣ** ದಿಂಬು, ಒಬ್ಬ ಗಂಧರ್ವ

**ಉಪಮರ್ದನ** ಪರಿಹಾರ

**ಉಪಮಾ** ಹೋಲಿಕೆ, ಪರೀಕ್ಷೆ

**ಉಪಮೆ** ಹೋಲಿಕೆ, ಒಂದು ಕಾವ್ಯಾಲಂಕಾರ

**ಉಪರತಿ** ಬಿಡುವು, ವಿರಾಮ; ಸಾವು, ವೈರಾಗ್ಯ

**ಉಪರಾಗ** ಸೂರ್ಯ–ಚಂದ್ರರ ಗ್ರಹಣಕಾಲ

**ಉಪರಿಗೃಹ** ಉಪ್ಪರಿಗೆ, ಮಾಳಿಗೆ ಮನೆ

**ಉಪರಿಚೇಲ** ವಲ್ಲಿ, ಮೇಲ್ಪರದೆ, ಮೇಲೆಮುಚ್ಚುವ ವಸ್ತ್ರ; ಮೇಲ್ಹಾವಣಿ

**ಉಪರಿಮ** ಮೇಲಿನ

**ಉಪಲ** ಕಲ್ಲು, ಶಿಲೆ

**ಉಪವಾಯುಗಳು** ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ

**ಉಪವೀತ** ಜನಿವಾರ, ಯಜ್ಞೋಪವೀತ

**ಉಪಶಾಂತ** ತಾಳ್ಮೆಯಿಂದ ಕೂಡಿದ, ಸಮಾಧಾನ ಹೊಂದಿದ

**ಉಪಸಾಧನ** ಬೇರೆ ಸಾಧನ, ಪರಿಕರ

**ಉಪಸೇಚನ** ವ್ಯಂಜನ ಪದಾರ್ಥ

**ಉಪಸ್ಕರ, ಉಪಸ್ಕಾರ** ಅಡಿಗೆಗೆ ಬೇಕಾದ ಉಪ್ಪು ಮೆಣಸು ಇತ್ಯಾದಿ ಬೇಯಿಸದ ಸಾಮಗ್ರಿ ಅಥವಾ ಮಸಾಲೆ

**ಉಪಸ್ಥ** ಜನನೇಂದ್ರಿಯ

**ಉಪಸ್ಪರ್ಶ** ಸಮೀಕ್ಷಿಸುವುದು; ಮುಟ್ಟುವುದು

**ಉಪಹತಿ** ತೊಂದರೆ, ಆಘಾತ

**ಉಪಹಾರ** ಕಾಣಿಕೆ, ಅಲ್ಪಾಹಾರ

**ಉಪಹಾಸ** ವ್ಯಂಗ್ಯದ ನಗೆ, ಹಾಸ್ಯ

**ಉಪಾದೇಯ** ಸ್ವೀಕಾರಾರ್ಹ, ಅಂಗೀಕಾರಾರ್ಹ

**ಉಪಾಧಿ** ಧರ್ಮದ ವಿಷಯವಾಗಿ ಮಾಡುವ ಚಿಂತನೆ, ತೊಂದರೆ, ಬಿರುದು, ಕಾರಣ, ಅಜ್ಞಾನದ ಆವರಣ; ತೋರಿಕೆ; ಸಾಧನ; ಕಾಮನೆ; ಪ್ರಯೋಜನಾಪೇಕ್ಷೆ; ಅಹಂಕಾರ ಮಮಕಾರಗಳಿಂದ ಒದಗಿದ ಅಡ್ಡಿ

**ಉಪಾಯನ** ಕಾಣಿಕೆ, ದಾನ, ಬಾಗಿನ

**ಉಪಾಸನ** ಆರಾಧನೆ; ಮನದಾಳದ ಚಿಂತನೆ

**ಉಪಾಸ್ಯ** ಉಪಾಸಿಸಲ್ಪಡುವ, ಆರಾಧಿಸಲ್ಪಡುವ, ಆರಾಧಿಸಲು ಯೋಗ್ಯವಾದ

**ಉಪೇಂದ್ರ** ಇಂದ್ರನ ತಮ್ಮ–ವಿಷ್ಣು

**ಉಪೇಕ್ಷಿಸು** ನಿರ್ಲಕ್ಷಿಸು

**ಉಪೇತ** ಕೂಡಿದ

**ಉಪೋಷಣ, ಉಪೋಷ್ಯ** ಉಪವಾಸ

**ಉಪ್ಪರಿಗೆ** ಮಹಡಿ

**ಉಪ್ಪವಡು** ನಿದ್ರೆಯಿಂದ ಎದ್ದೇಳು

**ಉಪ್ಪುಬೇವುಗಳನಿವಾಳಿ** ದೃಷ್ಟಿ ತೆಗೆಯುವುದು, ಇಳಿ ತೆಗೆಯುವುದು

**ಉಪ್ಪುವೋಗರ** ಚಿತ್ರಾನ್ನ

**ಉಪ್ಪೆಸರು** ಹುಳಿ ಕಾರ ಇಲ್ಲದ ಉಪ್ಪು ಮಾತ್ರ ಹಾಕಿದ ಒಂದು ಬಗೆಯ ಸಾರು

**ಉಬ್ಬಟೆ** ಉನ್ನತಿಕೆ

**ಉಬ್ಬರ** ಹೆಚ್ಚಳ

**ಉಬ್ಬಲ** ದುಃಖ; ಕೆಸರು, ಬದಿ

**ಉಬ್ಬಸ** ಸಂಕಟ, ಮೇಲುಸಿರು

**ಉಬ್ಬಳಿ** ತೆರೆ, ತರಂಗ

**ಉಬ್ಬು** ಅಹಂಕಾರ

**ಉಬ್ಬುಕೊಬ್ಬು** ಉತ್ಸಾಹ ಮತ್ತು ಸೊಕ್ಕು

**ಉಭಯ** ಎರಡು

**ಉಭಯರಾಯರು** ಕೌರವ ಪಾಂಡವರು

**ಉಭಯಸುಖ** ಇಹಪರ ಸುಖ

**ಉಭಯಾಂಧ** ಎರಡೂ ಕಣ್ಣಿಲ್ಲದವನು, ಧೃತರಾಷ್ಟ್ರ

**ಉಮ, ಉಮೆ** ಪಾರ್ವತಿ

**ಉಮೆನಂದನ** ಗಣಪತಿ

**ಉಮೇಶ** ಶಿವ

**ಉಮ್ಮ** ಮುತ್ತು, ಮುದ್ದು (ತೊದಲ್ನುಡಿ)

**ಉಮ್ಮಡಿಕೆ** ಸೊಕ್ಕು, ಗರ್ವ

**ಉಮ್ಮತ್ತೂರು** ಚಾಮರಾಜನಗರ ಜಿಲ್ಲೆಯ ಒಂದು ಊರು

Rarest Archiver

**ಉಮ್ಮೆಯ** ಶ್ರೇಷ್ಠ; ಆನಂದ, ಉತ್ಸಾಹ
**ಉಮ್ಮಹ** ಉತ್ಸಾಹ, ಸಂತೋಷ
**ಉಮ್ಮಳಿಕೆ** ನೋವು, ದುಃಖ
**ಉಮ್ಮಾ, ಉಮ್ಮಿ** ಉಮಾ; ಪಾರ್ವತಿ
**ಉಮ್ಮು** ಉಣ್ಣು, ತಿನ್ನು
**ಉಮ್ಮೆಯರಸ** ಶಿವ
**ಉರ** ಎದೆ, ವಕ್ಷಸ್ಥಳ; ಬಹಳ, ಶ್ರೇಷ್ಠ
**ಉರಗ** ಹಾವು, ಸರ್ಪ, ಕಾಳಿಂಗ, ಶೇಷ
**ಉರಗಕೇತನ** ಸರ್ಪಧ್ವಜ–ದುರ್ಯೋಧನ
**ಉರಗಗಿರಿ** ಶೇಷಾಚಲ
**ಉರಗತಲ್ಪ** ಹಾವನ್ನು ಹಾಸಿಗೆಯಾಗಿ ಉಳ್ಳವ–ಶ್ರೀಹರಿ
**ಉರಗನಉಪವಾಸ** ಉದ್ದೇಶರಹಿತವಾದ ಕ್ರಿಯೆ; ಅಭಾವ ವೈರಾಗ್ಯ; ಹಾವಿನ ಉಪವಾಸ
**ಉರಗಪರು** ಶೇಷದೇವರು
**ಉರಗಫಣ** ಹಾವಿನಹೆಡೆ
**ಉರಗಬಂಧನ** ನಾಗಪಾಶ
**ಉರಗಬಾಣ** ಸರ್ಪಾಸ್ತ್ರ
**ಉರಗಭೂಷ, ಉರಗಭೂಷಣ** ಸರ್ಪಭೂಷಣ, ನಾಗಾಭರಣ–ಶಿವ
**ಉರಗಮಾರ್ಗ** ಮುಕ್ತಜೀವರು ಅನುಸರಿಸುವ ಶೇಷಮಾರ್ಗ; ತಿರುಪತಿ ಬೆಟ್ಟ ಏರುವ ಒಂದು ದಾರಿಯ ಹೆಸರು
**ಉರಗಶಯನ** ಸರ್ಪದ ಮೇಲೆ ಮಲಗಿದವ–ವಿಷ್ಣು
**ಉರಗಶಿಖರ, ಉರಗಾದ್ರಿ** ಸರ್ಪಗಿರಿ–ತಿರುಮಲೆ
**ಉರಗಾಧಿನಾಥ** ಆದಿಶೇಷ
**ಉರಗಾಶನವಾಹನ** ಗರುಡವಾಹನ–ವಿಷ್ಣು
**ಉರಗೇಂದ್ರ, ಉರಗೇಶ** ನಾಗರಾಜ, ಆದಿಶೇಷ
**ಉರಲು** ಪಾಶ, ಜೇರುಗುಣಿಕೆಯ ಹಗ್ಗ
**ಉರವಣಿಗೆ** ಆತುರ, ಸಂಭ್ರಮ
**ಉರವಣಿಸು** ಉತ್ಸಾಹದಿಂದಿರು, ಆತುರಿಸು
**ಉರವಣೆ** ಆಧಿಕ್ಯ, ಅಬ್ಬರ; ಗರ್ವ
**ಉರಸ್** ಎದೆ, ವಕ್ಷಸ್ಥಳ
**ಉರಳಿ** ಉಂಡೆ
**ಉರಿಕಾವು** ಹೊಟ್ಟೆ ಮೈ ಕೈ ಉರಿಯುವ ರೋಗ
**ಉರಿಗಣ್ಣ, ಉರಿನಯನ** ಹಣೆಗಣ್ಣ, ಕೆಂಡಗಣ್ಣ, ಶಿವ
**ಉರಿಗೈಯ** ಭಸ್ಮಾಸುರ
**ಉರಿಯೊಳಗೆಜನಿಸಿದಂಗನೆ** ಬೆಂಕಿಯ ಮಗಳು ದ್ರೌಪದಿ
**ಉರಿಯೊಳುಜನಿಸಿದವ** ದೃಷ್ಟದ್ಯುಮ್ನ
**ಉರು** ಹೆಚ್ಚಾದ, ಅತಿದೊಡ್ಡ, ಶ್ರೇಷ್ಠ
**ಉರುಕ್ರಮ** ಹೆಚ್ಚು ಪರಾಕ್ರಮ
**ಉರುಗವಿಷ್ಟರ** ಶೇಷಶಾಯಿ–ವಿಷ್ಣು
**ಉರುಗಾಯನ** ಪರಮಾತ್ಮ
**ಉರುಗು** ಸಂಕುಚಿತವಾಗು
**ಉರುಟಣೆ, ಉರುಟಿಗೆ** ವಧು ವರರು ಪರಸ್ಪರರಿಗೆ ಮಂಗಳದ್ರವ್ಯಗಳನ್ನು ಹಚ್ಚಿ ಹಾಡು ಹೇಳುವ ವಿನೋದಕ್ರಿಯೆ, ಒಗಟು ಪದ
**ಉರುಟು** ದುಂಡಾದ, ಪೂರ್ಣ ಹಿಟ್ಟಾಗದ ರವೆಯಂತಹ ಚೂರ್ಣ
**ಉರುತರ** ಬಹಳ ಶ್ರೇಷ್ಠ, ಅತಿಶ್ರೇಷ್ಠ
**ಉರುಪಾಪಾಟವಿ** ದಟ್ಟ ಪಾಪದ ಕಾಡು
**ಉರುಪು** ಸುಡು
**ಉರುಬೆ** ಅಬ್ಬರ
**ಉರುಭರ** ಹುಮ್ಮಸ್ಸು, ಆವೇಶ
**ಉರುಮುದ್ರೆ** ಶ್ರೇಷ್ಠವಾದಮುದ್ರೆ
**ಉರುವ** ಶ್ರೇಷ್ಠ
**ಉರುವಿ**<ಉರ್ವಿ ಭೂಮಿ
**ಉರುವಿಪತಿ** ರಾಜ
**ಉರುಶಕ್ತಿ** ಅಧಿಕ ಶಕ್ತಿ
**ಉರುಹು** ನೀಡು, ಸುಡು, ತಾಪಗೊಳಿಸು
**ಉರುಳು** ನೇಣುಹಗ್ಗ

Rarest Archive

**ಉರುಳುಗೂದಲು** ಗುಂಗುರು ಕೂದಲು

**ಉರೆ** ಚೆನ್ನಾಗಿ, ಅಧಿಕವಾಗಿ, ಅತಿಶಯವಾಗಿ, ವಿಶೇಷವಾಗಿ

**ಉರೋಜ** ಮೊಲೆ

**ಉರ್ಬಿ**<**ಉರ್ವಿ** ಭೂಮಿ, ಊರ್ಧ್ವ, ಮೇಲೆ

**ಉರ್ಮಿ**<**ಊರ್ಮಿ** ತರಂಗ, ಅಲೆ

**ಉರ್ವರ** ಅತಿಶಯ

**ಉರ್ವಿಕರು** ಭೂಮಿಯ ಮೇಲಿನ ಜನ

**ಉರ್ವೀಶ** ರಾಜ, ಭೂಪತಿ

**ಉಲಗಡೆ** ಸ್ಪಷ್ಟತೆ

**ಉಲವು** ಶಬ್ದಮಾಡು, ಇರವು, ಗದ್ದಲ

**ಉಲಿ** ಧ್ವನಿಮಾಡು, ಶಬ್ದ

**ಉಲಿವು** ಶಬ್ದ

**ಉಲುಕು** ಅಲ್ಲಾಡು, ನಡುಗು

**ಉಲುಪೆ** ಮಂಗಳ ಪ್ರಸಂಗಗಳಲ್ಲಿ ಉಚಿತವಾಗಿ ಕೊಡುವ ಆಹಾರ ಸಾಮಗ್ರಿ, ಪಡಿ

**ಉಲುಹು** ಶಬ್ದ

**ಉಲೂಖಲ** ಒರಳು

**ಉಲ್ಕ** ಆಕಾಶದಿಂದ ಬೀಳುವ ಅಗ್ನಿಜ್ವಾಲೆ

**ಉಶನಾರ್ಯ** ಶುಕ್ರಾಚಾರ್ಯ

**ಉಷ್ಟ** ಒಂಟೆ

**ಉಷ್ಣಾಂಶು** ಸೂರ್ಯ

**ಉಸಿರೆಣಿಸು** ಕಳವಳವನ್ನು ತಿಳಿದುಕೊ

**ಉಸುಕು** ಮರಳು

**ಉಸುರು** ಹೇಳು, ಮಾತನಾಡು; ಪ್ರಾಣ

**ಉಳಿ** ಅವಿತುಕೊ

**ಉಳಿಯುಮುಟ್ಟದದೈವ** ಉಳಿಯಿಂದ ಕೆತ್ತದೆ ಸ್ವಯಂಭುವಾದ ವೇದಮೂರ್ತಿ

**ಉಳುಹು** ಕಾಪಾಡು, ಸಂರಕ್ಷಿಸು

**ಉಳ್ಳ** ಹೊಂದಿದ, ಉಳಿದ, ಇರುವ

**ಉಳ್ಳವ** ಶ್ರೀಮಂತ, ಬಲ್ಲಿದ

**ಉಳ್ಳೆಪೊರೆ** ಉರುಳಿಹೋಗುವ ಗರಿ, ಹುರುಳಿಯ ಸಿಪ್ಪೆ

## ಊ

**ಊಚ** ಉಚ್ಚ, ಎತ್ತರವಾದದ್ದು, ಮೇಲು

**ಊಚುನೀಚ** <**ಉಚ್ಚನೀಚ** ಮೇಲುಕೀಳು, ಮೇಲಿಂದ ಕೆಳಗಿನವರೆಗೆ

**ಊಟಣೆ** ಉರುಟಣೆ

**ಊಟೆ** ಝರಿ

**ಊಡು** ಕುಡಿಸು, ಊಟಮಾಡಿಸು

**ಊರು** ತೊಡೆ; ಗ್ರಾಮ

**ಊರ್ಜಿತ** ಏಳಿಗೆ

**ಊರ್ಣ** ಉಣ್ಣೆ, ಶಾಲು

**ಊರ್ಣಸುವಿಚಿತ್ರವಸನ** ಚಿತ್ರಾಲಂಕಾರಗಳಿಂದ ಕೂಡಿದ ಉಣ್ಣೆ ಶಾಲು

**ಊರ್ಧ್ವಕರ್ಣ** ನಿಮಿರಿರುವ ಕಿವಿ

**ಊರ್ಧ್ವತಿಲಕ** ಉದ್ದ ನಾಮ

**ಊರ್ಧ್ವಪುಂಡ್ರ** ಉದ್ದನಾಗಿ ಧರಿಸುವ ವೈಷ್ಣವ ಚಿಹ್ನೆಗಳು, ಮೇಲು ಮುಖವಾಗಿ ಧರಿಸುವ ನಾಮ

**ಊರ್ಬಿ** ಉರ್ವಿ, ಭೂಮಿ

**ಊರ್ಮಿ** ಅಲೆ

**ಊರ್ವಿ** ಭೂಮಿ

**ಊಷ್ಟ** ಒಂಟೆ

**ಊಳಿಗ** ಸೇವೆ, ಶರಣಾಗತಿ, ಜೀತ

**ಊಳು** ಸಾಗುಮಾಡು; ಕೂಗು, ನಿಂದಿಸು, ನಾಯಿ ನರಿಗಳ ಧ್ವನಿ

Rarest Archive

## ಋ

**ಋಕ್ಷ** ಕರಡಿ; ನಕ್ಷತ್ರ
**ಋಕ್ಷೇಶ** ನಕ್ಷತ್ರಗಳಿಗೆ ಒಡೆಯನಾದ ಚಂದ್ರ
**ಋಚಿಪುತ್ರ** ಅಜಾಮಿಳ
**ಋಜುಗಣ** ಹರಿಗೆ ವಿಧೇಯರಾದ ದೇವತೆಗಳು, ಬ್ರಹ್ಮ ಪಟ್ಟಕ್ಕೆ ಬರುವ ಜೀವಗಣ
**ಋಜುಗಣಾಧಿಪ** ವಾಯುದೇವರು
**ಋಜುಪುಂಗವ** ಋಜುಗಣವೆಂಬ ವಿಶಿಷ್ಟ ದೇವತಾವರ್ಗದಲ್ಲಿ ಶ್ರೇಷ್ಠ – ವಾಯುದೇವರು
**ಋಜುಮನ** ಸ್ಥಿರವಾದ ಮನಸ್ಸು
**ಋಜೋತ್ತಮ** ರುಜುಗಳಲ್ಲಿ ಶ್ರೇಷ್ಠ
**ಋಣತ್ರಯ** ದೇವಋಣ, ಋಷಿಋಣ, ಪಿತೃಋಣ
**ಋತ** ಸತ್ಯ, ಇಂದ್ರ, ಒಬ್ಬ ಗಂಧರ್ವ
**ಋತಂಭರ** ಶ್ರೀಹರಿ
**ಋತು** ಸತ್ಯ
**ಋತುಸತು** ವೇದಗಳಲ್ಲಿ ಹೇಳಿದ ಯಥಾರ್ಥ ರೂಪ
**ಋತ್ವಿಜ** ಯಜ್ಞ ಮಾಡುವವ
**ಋತ್ವಿನುತ** ಸಕಲ ವೇದ ಪ್ರತಿಪಾದ್ಯ
**ಋಭು** ಎಡಗಾಲ ಹೆಬ್ಬೆರಳಲ್ಲಿಯ ದೇವತೆ; ಮಹರ್ಷಿ
**ಋಷಭಜ** ಭರತ
**ಋಷಭದೇವ** ವಿಷ್ಣುವಿನ ಅವತಾರವೆಂದು ಭಾಗವತ ಹೇಳುತ್ತದೆ
**ಋಷಿಪತ್ನಿಯ ಶಾಪ** ಅಹಲ್ಯೆಯ ಶಾಪ

## ಎ

**ಎಂಗ** ಮೂಢ, ತಿಳಿಗೇಡಿ, ಎಗ್ಗ; ಮೋಸ
**ಎಂಗರವಟ್ಟು** ಅವಿವೇಕಿ
**ಎಂಜಲಿತ್ತಅಂಗನೆ** ಶಬರಿ
**ಎಂಟಕ್ಷರ** ಅಷ್ಟಾಕ್ಷರಿ ಮಂತ್ರ, ಓಂ ನಮೋ ನಾರಾಯಣಾಯ
**ಎಂಟಚ್ಚಮ್ಮ** ಕಲಿಯ ಪತ್ನಿಯಾದ ಜ್ಯೇಷ್ಠಾದೇವಿ– ಅಲಕ್ಷ್ಮಿ
**ಎಂಟಾನೆ, ಎಂಟುಆನೆ** ಅಷ್ಟಮದಗಳು
**ಎಂಟುಭಾಗ್ಯ** ಅಷ್ಟಭಾಗ್ಯ
**ಎಂಟೆರಡುವಾಯು** 8+2=10 ಪ್ರಾಣಾದಿ ಹತ್ತು/ ದಶವಾಯು
**ಎಂತು** ಹೇಗೆ, ಯಾವ ಬಗೆ; ಎನಿತು, ಎಷ್ಟು
**ಎಂಬತ್ತನಾಲ್ಕುಲಕ್ಷ ಯೋನಿಗಳ** ವೃಕ್ಷಾದಿ ಯೋನಿ–20ಲಕ್ಷ, ಅಂಡಜ–ಸ್ವೇದಜಯೋನಿ 10ಲಕ್ಷ, ಕ್ರಿಮಿಯೋನಿ 11 ಲಕ್ಷ, ಜಲಜಯೋನಿ 9ಲಕ್ಷ, ಪಶ್ವಾದಿಯೋನಿ 30ಲಕ್ಷ, ಮನುಷ್ಯ ಯೋನಿ 4 ಲಕ್ಷ
**ಎಂಬತ್ತೆಂಟುಸಾಸಿರ** ಎಣಿಕೆಯಿಲ್ಲದಷ್ಟು
**ಎಕಲಾತಿ, ಎಕ್ಕನಾತಿ** ಎಲ್ಲಮ್ಮನ ಪರಂಪರೆಯಲ್ಲಿಯ ದೇವತೆ, ಶಾಕ್ತೇಯ, ಎಲ್ಲಮ್ಮನ ಭಕ್ತ
**ಎಚ್ಚು** ಸವರು, ಬಾಣಬಿಡು, ಏಟು
**ಎಚ್ಚೊಡೆ** ಬಾಣವನ್ನು ಹೊಡೆ
**ಎಜ್ಜ** ವೆಜ್ಜ, ತೂತು, ರಂಧ್ರ
**ಎಟ್ಟ** ಹಠಮಾರಿ, ಮೊಂಡ
**ಎಟ್ಟೆ** ಹಟಮಾರಿ
**ಎಡ** ಸುಂದರ
**ಎಡರು** ತೊಂದರೆ, ವಿಘ್ನ, ಆತಂಕ
**ಎಡಿ, ಎಡೆ** ಬಡಿಸಿದ ಎಲೆ, ನೈವೇದ್ಯ, ಊಟ; ಅವಕಾಶ, ಅಗಲು, ಗುಂಪು
**ಎಡೆಗೊಡು** ನಿವೇದಿಸು, ಅವಕಾಶ ಕಲ್ಪಿಸು

Rarest Archiver

**ಎಡ್ಡು** ಸೊಕ್ಕು, ಅಹಂಕಾರ
**ಎಣಿಕೆ** ಎಣಿಸುವುದು, ಭಾವಿಸುವುದು
**ಎಣಿಸು** ಭಾವಿಸು, ಪರಿಗಣಿಸು
**ಎಣೆ** ಸರಿ, ಸಮಾನ
**ಎಣ್ಣು** ಚಿಂತಿಸು, ಎಣಿಸು
**ಎಣ್ಣೂರಿಗೆ** ಎಣ್ಣೆಯಲ್ಲಿ ಕರಿದು ಮಾಡಿದ ಒಂದು ಭಕ್ಷ್ಯ
**ಎಣ್ಣೆಮಣಿ** ಮುಂಗೈಗಳಿಗೆ ಕಟ್ಟಿದ ಮಣಿಯ ಸರ, ಕೊರಳಹಾರದ ಒಂದು ಮಣಿ
**ಎಣ್ದೆಶೆ** ಎಂಟು ದಿಕ್ಕು
**ಎತ್ತಣ** ಎಲ್ಲಿಯ
**ಎದುರಿಡು** ಎದುರಾಗು, ಸಮ್ಮುಖವಾಗು, ವಿರುದ್ಧವಾಗು
**ಎದೆದಾವರೆ** ಹೃದಯ ಕಮಲ
**ಎದೆಯನಾಡು** ಹೃದಯದೇಶ
**ಎದೆಹಾರು** ಚಿತ್ತ ಚಾಂಚಲ್ಯ, ಗಾಬರಿಯಾಗು
**ಎದ್ದು** ತೋಯಿಸು; ನಿಂತುಕೊಂಡು
**ಎನ್ನೆರೆಯ** ಒಡೆಯ, ದೇವ
**ಎಬಡ** ಮಾತು ಆಡುವಾಗ ಕಷ್ಟಪಡುವವನು, ಉಗ್ಗುವವನು; ದಡ್ಡ, ಮೂರ್ಖ
**ಎಬ್ಬಟ್ಟು** ಎಬ್ಬಿಸಿ ಓಡಿಸು, ಹೊಡೆದಟ್ಟು
**ಎಮ್ಮ** ನಮ್ಮ
**ಎಮ್ಮರ್ಥ** ನಮ್ಮ ಹಣ
**ಎಯ್ದು** ತಲಪು, ಬರು
**ಎರಕ** ಸುರಿ, ತುಂಬು; ಸ್ನೇಹ, ಪ್ರೀತಿ; ಲೋಹವನ್ನು ಕರಗಿಸಿ ಅಚ್ಚಿಗೆ ಹಾಕುವುದು
**ಎರಗು** ನಮಸ್ಕರಿಸು, ಮೆಚ್ಚು; ಮೇಲೆಬೀಳು, ಆಕ್ರಮಿಸು; ಹೊಂದು, ಸಮೀಪಿಸು
**ಎರಡಂಗ** ನರಸಿಂಹ
**ಎರಡನ್ನುಎಣಿಸು** ಕೃತಘ್ನನಾಗು
**ಎರಡಾರುಮಂತ್ರ** ದ್ವಾದಶನಾಮಗಳು
**ಎರಡಾರುಸ್ತೋತ್ರ** ದ್ವಾದಶಸ್ತೋತ್ರ
**ಎರಡಿನ್ನು ಸರಿಯಾಗೋತನಕ** ಪಾಪ ಪುಣ್ಯ ಎರಡೂ ಸರಿಯಾದ ಮೇಲೆಯೇ ನರಜನ್ಮ ಪ್ರಾಪ್ತಿ ಎಂದು ನಂಬಿಕೆ
**ಎರಡು** ಭೇದಬುದ್ಧಿ, ದ್ವಂದ್ವ
**ಎರಡುಕಂದಾಯ** ಎರಡು ಕಂತುಗಳು
**ಎರಡುಕ್ರೋಶ** ದೂರದ ಅಳತೆ, ಎರಡು ಹರದಾರಿ
**ಎರಡುಪ್ರತಿಮೆ** ಚಲ ಮತ್ತು ಅಚಲ
**ಎರಡುಮಡಿ** ಎರಡು ಪಟ್ಟು
**ಎರಡುಮಾರ್ಗ** ದ್ವೈತ ಮಾರ್ಗ
**ಎರಡುವಿಂಶತಿವತ್ಸರ** 2X20=40 ನಲವತ್ತು ವರ್ಷ
**ಎರಡೆಂಟಾಡೆ** ಸುಳ್ಳು ಹೇಳುವುದಿಲ್ಲ
**ಎರಡೊಂದುಯುಗ** 2+1=3 ಮೂರನೆಯ ಯುಗ–ದ್ವಾಪರ
**ಎರಡೊಂದುವಿಧದವರು** 2+1=3 ಸಾತ್ವಿಕ, ರಾಜಸ, ತಾಮಸಗುಣವಿಶಿಷ್ಟ ಜೀವರು
**ಎರಡೊಂದುಶೂಲ** ತ್ರಿಶೂಲ
**ಎರಪು** ದೂರವಾಗು
**ಎರವಲ್ಲ** ಹೊರಗಿನವನಲ್ಲ
**ಎರವಾಗು** ದೂರವಾಗು
**ಎರವಿನಮನೆ** ಬಾಡಿಗೆ ಮನೆ, ಶರೀರ
**ಎರವಿನಸಿರಿ** ನಶ್ವರವಾದ ಸಂಪತ್ತು
**ಎರವು** ಬಿಟ್ಹೋಗುವುದು; ಅಭಾವ, ಸಾಲ; ಪಕ್ಷಪಾತ, ಭೇದ; ತೊಂದರೆ, ಅಪಾಯ
**ಎರವುಮಾಡು** ಭೇದಮಾಡು
**ಎರವೆರವು** ಅತ್ಯಂತ ಭೇದ ಭಾವ
**ಎರಳೆ** ಜಿಂಕೆ
**ಎರಿಮುಂಡೆ** ಒಂದು ಹೀನಾಯದ ಬೈಗಳು
**ಎರೆ** ಸುರಿ; ಬೇಡು, ಪ್ರಾರ್ಥಿಸು, ನಮಸ್ಕಾರ, ಸೇವೆ; ಎಣ್ಣೆ ನೀರಿನ ಮಂಗಳ ಸ್ನಾನ
**ಎರೆಡೊಂದು ನೇತ್ರ** ಮುಕ್ಕಣ್ಣ–ಶಿವ
**ಎರೆದ** ಎರಕ ಹೊಯ್ದ
**ಎಲರ್(ರು)** ಗಾಳಿ, ವಾಯು

Rarest Archiver

**ಎಲರುಣಿ** ಗಾಳಿಯನ್ನು ಆಹಾರವನ್ನಾಗಿಉಳ್ಳದ್ದು–ಸರ್ಪ, ಹಾವು
**ಎಲರುಣಿಪರ್ವತ** ಶೇಷಾದ್ರಿ–ತಿರುಮಲೆ
**ಎಲವ** ದೂದಿಮರ, ಬೂರಗದ ಹತ್ತಿ ಮರ, ಬೂರಲಮರ
**ಎಲು** ಎಲುಬು, ಮೂಳೆ
**ಎಲ್ಲಮ್ಮ** ಸವದತ್ತಿ ಮುಂತಾದ ಕಡೆಗಳಲ್ಲಿರುವ ಪ್ರಸಿದ್ಧ ದೇವತೆ
**ಎವೆ** ಕಣ್ಣುರೆಪ್ಪೆ
**ಎವೆನೋಟ** ಕಣ್ಣು ರೆಪ್ಪೆ ಬಡಿಯುವಷ್ಟು ಸಮಯ
**ಎಸಕ** ಕ್ರಿಯೆ, ಕೆಲಸ
**ಎಸರು** ನೀರು, ಸಾರು
**ಎಸಳುಕಣ್ಣು** ಹೂವಿನ ಎಸಳಿನಂತೆ ಆಕರ್ಷಕವಾದ ಕಣ್ಣು
**ಎಸು** ಬಾಣ ಪ್ರಯೋಗ ಮಾಡು, ಎಚ್ಚು, ಹೊಡೆ
**ಎಸೆ** ಶೋಭಿಸು; ಒಗೆ, ಬಾಣ ಬಿಡು, ಹೊಡೆ
**ಎಳ(ಳೆ)ಗಂದಿ** ಎಳೆಯಕರು, ಹೊಸದಾಗಿ ಕರು ಹಾಕಿರುವ ಹಸು
**ಎಳಗ** ಟಗರು
**ಎಳಲ<ಏಳಿಲ** ತಿರಸ್ಕರಿಸು
**ಎಳಸು** ಅಪೇಕ್ಷಿಸು, ಬಯಸು
**ಎಳಗಾವು** ಕರು
**ಎಳೆ** ಚಿಕ್ಕ; ಸೆಳೆ, ಆಕರ್ಷಿಸು
**ಎಳೆಅರುಣ** ಆಗತಾನೆ ಅರುಣೋದಯವಾಗುವ ಕಾಲ
**ಎಳೆಗೆರೆ** ಬಾಲ್ಯ
**ಎಳೆನೇಸರ** ಬಾಲರವಿ
**ಎಳೆವತ್ಸರ** ಬಾಲಸೂರ್ಯ
**ಎಳ್ಳಿಲ<ಏಳಿಲ** ಅಲಕ್ಷ್ಯ, ಹಾಸ್ಯ

## ಏ

**ಏಕಚತುರ ನವಗ್ರಂಥ** $1+(4\times9)=$ ಮಧ್ವಾಚಾರ್ಯರ 37 ಗ್ರಂಥಗಳು
**ಏಕತ್ರ** ಒಂದೇ ಕಡೆ, ಒಟ್ಟಿಗೆ
**ಏಕದಂತ** ಒಂದೆ ಕೋರೆ ಉಳ್ಳವ, ಗಣಪತಿ
**ಏಕದಮನ** ಜಿತೇಂದ್ರಿಯ ಶ್ರೇಷ್ಠ
**ಏಕಪಿಂಗಳ** ಕುಬೇರ
**ಏಕಪಿಂಗಳಾದಿಗಳ ಪಿರಿಯ** ಕುಬೇರಾದಿಗಳಿಗೆ ಹಿರಿಯ–ಗಣೇಶ
**ಏಕಭಕ್ತಿ** ಹರಿಸರ್ವೋತ್ತಮನೆಂಬ ಏಕೋಪಾಸನೆಯ ಭಕ್ತಿ
**ಏಕಮೂರ್ತಿ** ಸರ್ವೋತ್ತಮ, ಶ್ರೀಹರಿ
**ಏಕವರ್ಣ** ಓಂಕಾರ
**ಏಕವಾಕ್ಯಪ್ರವೀಣ** ಸರ್ವ ಶಾಸ್ತ್ರಗಳ ಸಮನ್ವಯದಲ್ಲಿ ಕುಶಲ–ಗಣಪತಿ
**ಏಕವಿಂಶತಿ** ಮತ ಇಪ್ಪತ್ತೊಂದು ಭಾಷ್ಯಗಳು
**ಏಕಶೃಂಗಧರ** ಒಂದು ಕೊಂಬುಳ್ಳವ–ಗಣಪತಿ
**ಏಕಾಂತಿ** ಅನನ್ಯ ಭಕ್ತ, ವಿಷ್ಣುವಿನ ಹೊರತಾಗಿ ಅನ್ಯರನ್ನು ಭಜಿಸದವ
**ಏಕಾತ್ಮ** ಸರ್ವಾಂತರ್ಯಾಮಿ
**ಏಕಾದಶ** ಹನ್ನೊಂದು
**ಏಕಾದಶ ಹೃಷೀಕ** ಹನ್ನೊಂದು ಇಂದ್ರಿಯಗಳು; ಹನ್ನೊಂದನೆಯ ಇಂದ್ರಿಯ–ಮನಸ್ಸು
**ಏಕಾದಶಿಜಾಗರ** ಏಕಾದಶಿಯಂದು ರಾತ್ರಿಯೆಲ್ಲ ಎಚ್ಚರವಿದ್ದು ಹರಿಧ್ಯಾನ ಮಾಡುವುದು
**ಏಕಾನೇಕ** ಸ್ವರೂಪದಿಂದ ಸ್ವಗತ ಭೇದ ವಿವರ್ಜಿತ
**ಏಕಾರತಿ** ಒಂದು ಹಲಗೆಯಲ್ಲಿ ಮೂರು ಬತ್ತಿಗಳುಳ್ಳ ಆರತಿ
**ಏಕಾರ್ಣವ** ಪ್ರಳಯಕಾಲದ ಮಹಾಸಾಗರ

Rarest Archive

**ಏಕಾವಳಿ** ಒಂದೆಳೆಯಸರ, ಒಂದು ಮುತ್ತಿನ ಸರ
**ಏಕೋತ್ತರಪಂಚಾಶತ್‌ವರ್ಣ** "ಅ" ಕಾರದಿಂದ "ಜ್ಞ" ಕಾರದವರೆಗಿನ ಅಕ್ಷರಗಳು
**ಏಕೋನವಿಂಶತಿ** ಹತ್ತೊಂಬತ್ತು
**ಏಕೋಮಯ** ಒಬ್ಬನೇ ಒಬ್ಬ
**ಏಕೋವಿಷ್ಣು** ವಿಷ್ಣು ಒಬ್ಬನೇ, ಸರ್ವೋತ್ತಮ
**ಏಡ** ಕಿವುಡ; ಮೂರ್ಖ, ಮದಡ
**ಏಡಿಸು** ಅವಹೇಳನಮಾಡು, ನಿಂದಿಸು
**ಏಣ** ಜಿಂಕೆ, ಗಂಡುಜಿಂಕೆ
**ಏಣಕುಣಕ** ಜಿಂಕೆಯ ಮರಿ
**ಏಣನಯನೆ** ಜಿಂಕೆಯ ಕಣ್ಣಿನಂತೆ ಚಂಚಲ ಕಣ್ಣುಳ್ಳವಳು
**ಏಣಭೋಜಮಧ್ಯೆ** ಜಿಂಕೆಯನ್ನು ತಿನ್ನುವ ಸಿಂಹದ ನಡುವುಳ್ಳವಳು, ಸುಂದರಿ
**ಏಣಲಾಂಛನ** ಚಂದ್ರಮ
**ಏಣಲೋಚನೆ** ಜಿಂಕೆಯಂತೆ ಚಂಚಲವಾದ ಕಣ್ಣುಗಳುಳ್ಳವಳು
**ಏಣಸಂಜಾತ** ಜಿಂಕೆ (ವಾಯುವಿನ ವಾಹನ)
**ಏಣಾಂಕ** ಚಂದ್ರ
**ಏಣಾಂಕಧರ** ಶಿವ
**ಏಣಾಂಕಬಿಂಬವದನೆ** ಚಂದ್ರವದನೆ, ಚಂದ್ರ ಮುಖಿ
**ಏಣಾಕ್ಷಿ** ಚಿಗುರೆಗಣ್ಣಿನವಳು, ಸುಂದರಿ
**ಏತತ್ಪೂರ್ವ** ಆ ಪೂರ್ವ, ಆ ಹಿಂದೆ
**ಏರಾಟ** ಒಬ್ಬರಮೇಲೆ ಇನ್ನೊಬ್ಬರು ಹತ್ತಿ ಕುಳಿತು ಕೊಳ್ಳುವ ಆಟ; ಯುದ್ಧ
**ಏಲ(ಳ)** ಏಲಕ್ಕಿ
**ಏಸು** ಎಷ್ಟು
**ಏಸುದಿನ** ಎಷ್ಟುದಿನ, ಬಹಳ ದಿನಗಳಿಂದ
**ಏಸುಬಗೆ** ನಾನಾ ರೀತಿಯಲಿ
**ಏಸೇಸು** ಎಷ್ಟೆಷ್ಟು
**ಏಸೊಂದು** ಎಷ್ಟೊಂದು
**ಏಳಲಿ** ಏಳನೆಯ ತಿಂಗಳಲ್ಲಿ
**ಏಳಾಲ** ನಿಧಾನ
**ಏಳಿದ, ಏಳಿಲ** ಅವಮಾನ, ತಿರಸ್ಕಾರ
**ಏಳು** ನಿಧಾನ; ಒಂದು ಸಂಖ್ಯಾವಾಚಿ
**ಏಳುತಗ್ಗಿನಗುಡ್ಡ** ತಿರುಪತಿ ಬೆಟ್ಟ
**ಏಳುದಿನದ ಕಥೆ** ಭಾಗವತ
**ಏಳುವರ್ಣದಪಟ್ಟಿಕೆ** ಸಪ್ತವ್ಯಸನಗಳು
**ಏಳುಸುತ್ತಿನಕೋಟೆ** ಶರೀರವನ್ನು ಕಾಪಾಡುವ ಸಪ್ತಧಾತುಗಳು
**ಏಳ್ವರು, ಏಳ್‌ವ್ಯಸನ** ಸಪ್ತವ್ಯಸನ

## ಐ

**ಐಗಾರ<ಆಯುಗಾರ** ಆಯುಗಾರ, ಕೆಲಸದ ರಹಸ್ಯವನ್ನು ತಿಳಿದವನು; ವಂಶಪರಂಪರೆ ಯಾಗಿ ಗ್ರಾಮಕ್ಕೆ ಸೇವೆ ಸಲ್ಲಿಸುತ್ತಿರುವ ಸೇವಕ
**ಐತರು** ಬರು, ಬರುವಿಕೆ
**ಐದತ್ವವೈದು** ಪಂಚತ್ವ, ಅಂದರೆ ಮೃತ್ಯುವಶವಾಗು
**ಐದನೆಬೊಕ್ಕಸದಮನೆ** ಆನಂದಮಯವೆಂಬ ಕೋಶ (ಪಂಚಕೋಶಗಳಲ್ಲಿ ಒಂದು)
**ಐದನೆಯವೇದ** ಪಂಚಮವೇದ, ಮಹಾಭಾರತ
**ಐದಲೆ** ಪಂಚಮುಖಿ–ಶಿವ
**ಐದಾವೆ<ಅಯ್ದಾವೆ** ಇವೆ
**ಐದು** ಹೊಂದು, ಸೇರು, ಹೋಗು; ಒಂದು ಸಂಖ್ಯಾವಾಚಿ
**ಐದುಒಂದುಮುಖದವ** ಆರುಮುಖದವ– ಷಣ್ಮುಖ

**ಐದುಕತ್ತಲೆಕೋಣೆ** ಅವಿದ್ಯೆ
**ಐದುತಂದು** ಐದು ತಂತ್ರಗಳಿಂದ
**ಐದುತಲೆಗಳವನು** ಸದ್ಯೋಜಾತ, ವಾಮದೇವ, ಅಘೋರ, ಈಶಾನ, ತತ್ಪುರುಷ ಎಂಬ ಶಿವನ ಐದು ಮೂರ್ತಿಗಳು
**ಐದುನಾಲ್ಕು** ನವದ್ವಾರ
**ಐದುಮಂದಿಬೇರೆ** ಪಂಚಕರ್ಮೇಂದ್ರಿಯ
**ಐದುಮಂದಿಭಾವನವರು** ಶ್ರವಣ, ನಯನ, ಘ್ರಾಣ, ತ್ವಕ್ಕು, ರಸನ ಎಂಬ ಜ್ಞಾನೇಂದ್ರಿಯಗಳು
**ಐದುಮಂದಿಹಾರುವರು** ಪಂಚೇಂದ್ರಿಯಗಳು
**ಐದುಮಡಿ** ಐದು ಪಟ್ಟು
**ಐದುಮುತ್ತುಳ್ಳತನ** ಮುತ್ತೈದೆತನ
**ಐದುಮೈದನರು** ವಾಕು, ಪಾಣಿ, ಪಾದ, ಪಾಯು, ಉಪಸ್ಥಾ ಎಂಬ ಕರ್ಮೇಂದ್ರಿಯಗಳು
**ಐದುಮೌಳಿ** ಐದು ಮುಖವುಳ್ಳ ರುದ್ರ
**ಐದೆ** **ಹೆಚ್ಚಾಗಿ;** ಸುಮಂಗಲಿ, ಮುತ್ತೈದೆ
**ಐದೇನೆ** ಇದ್ದೇನೆ
**ಐದೊಂದಬಲೆಯರು** ಷಣ್ಮಹಿಷಿಯರು
**ಐದೊಕ್ಕಲು** ಪಂಚಜ್ಞಾನೇಂದ್ರಿಯ
**ಐಯ್ವರು** ಪಂಚೇಂದ್ರಿಯಗಳು
**ಐವರನಾರಿ** ದ್ರೌಪದಿ
**ಐವರೀರ್ವರು** 5 ಜ್ಞಾನೇಂದ್ರಿಯಗಳು, 5 ಕರ್ಮೇಂದ್ರಿಯಗಳು
**ಐವರು** ಪ್ರಹ್ಲಾದ, ಕರಿರಾಜ, ಅಜಾಮಿಳ, ವಿಭೀಷಣ, ರುಕ್ಮಾಂಗದ
**ಐಶ್ವರ್ಯದೋಲಗ** ಸಂಪತ್ತಿನ ಸಭೆ
**ಐಸಿರಿ** ಐಶ್ವರ್ಯ, ಸಂಪತ್ತು
**ಐಸು** ಎಲ್ಲ
**ಐಹಿಕ** ಇಹಕ್ಕೆ ಸಂಬಂಧಿಸಿದ, ಪ್ರಾಪಂಚಿಕ, ಲೌಕಿಕ
**ಐಳ** ಭೂ

## ಒ

**ಒಂಚು (?)** ತುಸು, ಒಂದು ಚೂರು (?)
**ಒಂಟಿ** ಒಂದು ಹರಳಿನ ಕಿವಿಯ ಆಭರಣ, ಹತ್ತಕಡಕು
**ಒಂಟೆಡುಬ್ಬದಂಥ ಲೌಕಿಕರು** ನಿಷ್ಪ್ರಯೋಜಕರು
**ಒಂದರೆ** ಬರೇ ಸ್ವಲ್ಪ
**ಒಂದು** ಕೂಡು
**ಒಂದುರೂಪಪ್ರತಿಕರಿಸು** ಆಚರಿಸು
**ಒಂದುಸುರು** ತಡೆರಹಿತ, ವಿಶ್ರಮಿಸದ
**ಒಂದೆಂಟುಸದ್ಭಕ್ತಿ** ನವವಿಧಭಕ್ತಿ
**ಒಂದೆಂದುನಡಿ** ಅದ್ವೈತತತ್ವ ಎಂದು ಆಚರಿಸು
**ಒಂದೆಂದುನುಡಿ** ಮಾಯಾವಾದ
**ಒಂದೆರಡುಭರಿತ** 1+2=3 ಭಕ್ತಿ, ಜ್ಞಾನ, ವೈರಾಗ್ಯ, (ಮೂರು) ಭರಿತ
**ಒಂದೆರಡುರಹಿತ** 1+2=3 ತಾಪತ್ರಯ ರಹಿತ
**ಒಂದೆರಡುರೂಪ** ವಿಶ್ವ, ತೇಜಸ್, ಪ್ರಾಜ್ಞ ರೂಪಗಳು
**ಒಂದೇಳುಭುಜ** 1+7=8 ಎಂಟು ಭುಜ
**ಒಂದೊಂದು** ಸುಖ–ದುಃಖಗಳು
**ಒಂದೊಂದುಭವ** ದ್ವಿಜ
**ಒಂದೊಂದುಮತ**(1+1)ದ್ವೈತ ಮತ
**ಒಂಧತ್ತುಮ್ಯಾಲೊಂದು ವಪುತೇಜ** 1+10+1=12 ಹನ್ನೆರಡು ದೇಹಗಳುಳ್ಳ ದ್ವಾದಶಾದಿತ್ಯರು; ಇವರಂತೆ ಕಾಂತಿಯುಳ್ಳವರು
**ಒಂಬತ್ತು ಅವಸ್ಥೆಗಳು** ನಿಷೇಕ, ಗರ್ಭ, ಜನ್ಮ, ಬಾಲ್ಯ, ಕೌಮಾರ, ಯೌವನ, ವಯೋಮಧ್ಯ, ಜರೆ, ಮೃತ್ಯು
**ಒಂಬತ್ತುಎಜ್ಜ, ಒಂಬತ್ತುಛಿದ್ರ** ದೇಹದ ನವರಂಧ್ರಗಳು, ನವದ್ವಾರಗಳು

Rarest Archiver

**ಒಂಬತ್ತುಛಿದ್ರದನಾವೆ** ಶರೀರ, ಸಾಧನ ಶರೀರ
**ಒಂಬತ್ತುವಿಧ** ಪರಮಾತ್ಮನ ಒಂಬತ್ತು ವಿಭೂತಿ ರೂಪಗಳು
**ಒಂಬತ್ತುಹರಕು, ಒಂಭತ್ತುಬಾಗಿಲು** ದೇಹ, ನವದ್ವಾರಗಳು
**ಒಕ್ಕಡಿಕೆ** ಒಮ್ಮನಸು
**ಒಕ್ಕಣಿಕೆ** ಓಲೆ, ಬರವಣಿಗೆ
**ಒಕ್ಕಣಿಸು** ವಿವರಿಸು, ವ್ಯಾಖ್ಯಾನಿಸು
**ಒಕ್ಕಲು** ನೆಲೆನಿಲ್ಲು, ಸಂಸಾರ; ಪ್ರಜೆಗಳು; ಬೇಸಾಯಗಾರ, ರೈತ
**ಒಕ್ಕಾಳು** ತೆನೆಯಿಂದ ಬೇರ್ಪಡಿಸಿದ ಕಾಳು
**ಒಕ್ಕುಡಿತೆ** ಒಂದು ಬೊಗಸೆ
**ಒಗ(ಗೆ)ತನ** ಸಂಸಾರ, ಸಂಬಂಧ
**ಒಗಡಿಸು** ಧಿಕ್ಕರಿಸು, ಹೇಸು
**ಒಗು** ಉಕ್ಕು, ಸೂಸು; ಚೆಲ್ಲು
**ಒಗುಮಿಗೆ** ಅಧಿಕ, ಹೆಚ್ಚಳ; ಸಂಭ್ರಮ
**ಒಗೆ** ಹುಟ್ಟು
**ಒಗ್ಗು** ಸೇರು; ಸಮೂಹ
**ಒಟ್ಟಿಲು** ರಾಶಿ, ಗುಂಪು
**ಒಟ್ಟು** ರಾಶಿಮಾಡು, ಕೂಡಿಸು
**ಒಡಗೂಡು** ಜೊತೆಯಾಗು, ಕೂಡಿಕೊ
**ಒಡನುಡಿಸು** ಜೊತೆಯಾಗಿ ಮಾತನಾಡುವಂತೆ ಮಾಡು
**ಒಡಬ** ಬಾಡಬಾಗ್ನಿ, ಸಮುದ್ರದೊಳಗಿನ ಬೆಂಕಿ
**ಒಡಮೂಡು** ಹುಟ್ಟು, ಜನಿಸು, ವ್ಯಕ್ತವಾಗು
**ಒಡಲು** ಹೊಟ್ಟೆ, ಗರ್ಭ, ಶರೀರ, ದೇಹ
**ಒಡಲುವೆರಸು** ಮೈದಾಳು
**ಒಡವುತಿದೆ** ಸೀಳಿ ಹೋಗುತ್ತಿದೆ
**ಒಡಹುಟ್ಟಿದೈವರು** ಪಂಚಪ್ರಾಣರು: ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ
**ಒಡೆ** ಸೀಳು, ಬಿರುಕುಬಿಡು
**ಒಡೆಯುಖುಳಿ** ಕಾಲಿನ ಆಭರಣ
**ಒಡ್ಡು** ಜೂಜಿನ ಪಣ; ವ್ಯಾಪಿಸು
**ಒಡ್ಡೋಲಗ** ತುಂಬಿದ ರಾಜಸಭೆ
**ಒಡ್ಯಾಣ** ಡಾಬು
**ಒಣಪಂಟು** ಹರಟೆ, ಬಡಾಯಿ
**ಒತ್ತಿದಬೇಳೆ** ಕೋಸುಂಬರಿ
**ಒತ್ತು** ಹತ್ತಿರ
**ಒತ್ತೆ** ಅಡವು, ಅಧೀನದಲ್ಲಿಡು; ಸೂಳೆಗೆ ಕೊಡುವ ಹಣ
**ಒದರು** ಕೂಗು; ತನಗೆ ತಾನೇ ಮಾತನಾಡಿಕೊಳ್ಳುವುದು
**ಒದವು** ಒದಗು
**ಒದೆ** ಅಪಜಯಗೊಳಿಸು, ನಾಶಮಾಡು
**ಒದೆಕಳಿ** ಕಾಲಿನಿಂದಾಡುವ ಒಂದು ಆಟ, ಚೆಂಡಾಟ
**ಒದ್ದವಿಪ್ರ** ಶ್ರೀಹರಿಯನ್ನು ಒದ್ದ ಭೃಗುಮಹರ್ಷಿ
**ಒನಪು** ಬೆಡಗು, ಬಿನ್ನಾಣ
**ಒಪ್ಪ** ಸಮ್ಮತಿ
**ಒಪ್ಪಣೆ** ಮೆಚ್ಚಿಕೆ
**ಒಪ್ಪಯಿಸು** ಓರಣ, ಅಚ್ಚುಕಟ್ಟು
**ಒಪ್ಪಾಚಾರ** ಒಪ್ಪುವ ಆಚಾರ, ಶಿಷ್ಟಾಚಾರ
**ಒಪ್ಪಿಡಿ** ಒಂದು ಹಿಡಿ
**ಒಪ್ಪು** ಶೋಭಿಸು, ಅನುಮತಿಸು
**ಒಬ್ಬ** ಒಂದೇ ಒಂದಾದ ಬ್ರಹ್ಮತತ್ತ್ವ
**ಒಬ್ಬಎರಡೂವಮಾಡುವ** ತೈಜಸನಾಮಕ ಪರಮಾತ್ಮನು ಕಂಠದಲ್ಲಿದ್ದು ಎಚ್ಚರಿಕೆಯೂ ಅಲ್ಲದ, ನಿದ್ರೆಯೂ ಅಲ್ಲದ ಸ್ವಪ್ನಾವಸ್ಥೆಗೆ ಪ್ರೇರಕ
**ಒಬ್ಬಕತ್ತಲೆಗೈದಿಸುವ** ಪ್ರಾಜ್ಞನಾಮಕ ಪರಮಾತ್ಮನು ಹೃದಯದಲ್ಲಿದ್ದು ಜೀವನಿಗೆ ಕತ್ತಲೆಯೆಂಬ ಗಾಢ ನಿದ್ರೆಗೆ ಪ್ರೇರಕ
**ಒಬ್ಬನಕಾಣದೆ** ಬಿಂಬರೂಪನ ಕಾಣದೆ
**ಒಬ್ಬಬೆಳಕುಮಾಡುವ** ಬಲಗಣ್ಣಿನಲ್ಲಿದ್ದು ವಿಶ್ವನಾಮಕ ಪರಮಾತ್ಮ ಜಾಗ್ರದವಸ್ಥೆಗೆ ಕಾರಣನಾಗಿ ಬೆಳಕನ್ನು ಉಂಟುಮಾಡುವ

Rarest Archiver

**ಒಬ್ಬವೆಂಬ** ಒಂದೇ ಸತ್ಯವೆಂಬವ, ಅದ್ವೈತ ಮತವಾದಿ

**ಒಬ್ಬುಳಿ** ರಾಶಿ, ಒಟ್ಟು

**ಒಬ್ಬೆ** ಒಂದು ಸಲಕ್ಕೆ ಸಾಕೆನಿಸುವಷ್ಟು ಆಹಾರ

**ಒಮ್ಮನ** ಒಂದೇ ಮನಸ್ಸು, ಏಕಾಗ್ರಚಿತ್ತ; ಒಂದು ಅಳತೆ

**ಒಯ್ಯನೆ** ನೆಟ್ಟಗೆ, ವಿಚಾರ ಪೂರ್ವಕ

**ಒರಗು** ಮಲಗು, ಬೆನ್ನಿಗೆ ಆಶ್ರಯಹೊಂದಿ ವಿಶ್ರಮಿಸು

**ಒರತೆ** ನೀರು ಜಿನುಗುವ ಹಳ್ಳ, ಚಿಲುಮೆ

**ಒರಲು** ಕೂಗು, ಅರುಚು, ಒದರು, ಗೋಳಿಡು

**ಒರಲೆ(ಳೆ)** ಗೆದ್ದಲು

**ಒರಸು** ಸಾರಿಸು, ನಾಶಮಾಡು, ಅಳಿಸು

**ಒರಳು** ಒರಳುಕಲ್ಲು

**ಒರೆ** ಹೇಳು, ಇತರರಿಗೂ ಉಪದೇಶಿಸು; ಪರೀಕ್ಷೆ; ಉಜ್ಜು, ಮೆರಗು; ಗುಣ; ಕತ್ತಿಯನ್ನು ಇಡುವ ಸಾಧನ, ತುಂಬು

**ಒರ್ಕುಡಿತೆ** ಒಂದು ಬೊಗಸೆ

**ಒಲಪು** ಒಯ್ಯಾರ, ಬೆಡಗು

**ಒಲುಮೆ** ಒಲುಮೆ, ಪ್ರೀತಿ

**ಒಲೆ, ಒಲೆದಾಡು** ತೂಗಾಡು, ಅಲ್ಲಾಡು

**ಒಸಗೆ** ಅಭಿನಂದನೆ, ಶುಭೇಚ್ಛೆ; ಮದುವೆ, ಸಮಾರಂಭ; ಆಹ್ವಾನ, ಕರೆ; ಸುದ್ದಿ, ಸಂದೇಶ

**ಒಸರು** ಸೋರು, ನೀರುಬಿಡು

**ಒಸೆ** ಪ್ರೀತಿಸು

**ಒಳಗಣ್ಣು** ಅಂತರ್ಮುಖಿ

**ಒಳಗೊಳ್ಳು** ಸಮಾವೇಶ, ಸೇರು

**ಒಳ್ಳೆ** ನೀರಹಾವು, ವಿಷವಿಲ್ಲದ ಹಾವು, ಕಾಳಿಂಗ ನಾಗ

## ಓ

**ಓಂಕಾರ** ಓಂ ಎಂಬ ಮಂತ್ರಾಕ್ಷರ, ಎಲ್ಲಾ ಮಂತ್ರಗಳಿಗೂ ಮೂಲ ಮಂತ್ರ, ಪ್ರಣವ

**ಓಂಕಾರಶಬ್ದವಾಚ್ಯ** ವಿಷ್ಣು

**ಓಕ, ಓಕಸ್, ಓಕಸ** ಮನೆ, ವಾಸಸ್ಥಳ

**ಓಕುಳಿ** ಉತ್ಸವಕಾಲದಲ್ಲಿ ಮೈಮೇಲೆ ಪರಸ್ಪರ ಎರಚುವ ಸುಣ್ಣ-ಅರಿಶಿನದ ನೀರು

**ಓಕುಳಿನಾಮಕ** ವೋಕುಳಿ(ಮಂಗಳ ಜಲ)ಗೆ ನಿಯಾಮಕನಾಗಿ ತನ್ನಾಮಕನಾದವನು–ವಸಂತ

**ಓಗರ** ಅನ್ನ, ಆಹಾರ, ಊಟ

**ಓಜ** ಗುರು

**ಓಜಸ್ಸು** ಸಾಮರ್ಥ್ಯ, ಜಾಣ್ಮೆ

**ಓಜೆ** ಕ್ರಮ, ರೀತಿ, ವರಸೆ

**ಓಡು** ತಲೆಬುರುಡೆ; ಒಡೆದ ಮಡಕೆ ಚೂರು, ಒಂದು ವಿಧದ ಭಿಕ್ಷಾಪಾತ್ರೆ; ಕಾಯಿಯ ಹೊರಗಿನ ತೊಗಟೆ; ಪಲಾಯನಮಾಡು

**ಓತಪ್ರೋತ** ಹಾಸುಹೊಕ್ಕಾಗಿ; ಉದ್ದಗಲ ಹಬ್ಬಿದ

**ಓತಿ** ಓತಿಕೇತ (ಓತಿಕಾಟ), ಗೋಸುಂಬೆ

**ಓದನ** ಪದಾರ್ಥ, ಅನ್ನ, ಓಗರ

**ಓದನಯಾಗ** ಅನ್ನದಾನವೆಂಬ ಯಾಗ

**ಓದಿಕೆ** ವಿದ್ಯೆ

**ಓದು** ಹೇಳು, ಹಾಡು

**ಓನಾಮ** ಓಂ ನಮಃ ಎಂಬ ಮಂತ್ರ; ಓಂಕಾರ ಪೂರ್ವಕ ಆರಂಭ; ಅಕ್ಷರಾಭ್ಯಾಸ ಆರಂಭ ಕ್ರಮ

**ಓಪ** ಸಂರಕ್ಷಿಸುವವ, ಪ್ರಿಯ

**ಓರಂತೆ** ಶೋಭಿಸುತ್ತ; ಚೆನ್ನಾಗಿ; ಒಂದೇ ಪ್ರಕಾರ, ಎಂದಿನಂತೆ, ಒಂದೇಸಮನೆ

**ಓರಗೆ** ಸಮಾನ ವಯಸ್ಸು

**ಓರಡಿ** ಒಂದು ಅಡಿ

**ಓರುಡಿ** ಓರಣವಾದ ಉಡಿ, ಸೊಂಟ

**ಓರೆ** ವಕ್ರ, ಡೊಂಕು

Rarest Archiver

**ಓಲಗ** ಅಗ್ರಪೂಜೆಗಾಗಿ ಕೂಡಿದ, ಸೇವೆ, ದರ್ಬಾರು
**ಓಲಗಶಾಲೆ** ಸಭಾಸದನ
**ಓಲಾಟ** ಹಾರಾಟ
**ಓಲಾಡು** ಹಾರಾಡು, ಸುಖದಿಂದ ಆಡು
**ಓಲು** ಪೇರಿಸು, ಸಾಲಾಗಿರಿಸು, ಹಾಗೆ, ರೀತಿ
**ಓಲೆ** ಕಿವಿಯ ಆಭರಣ; ತಾಳೆಯಗರಿ
**ಓಲೆಗಾರ** ಅಂಚೆಯ ಆಳು
**ಓಲೈಸು** ಸೇವೆಮಾಡು, ಉಪಚರಿಸು
**ಓವರಿ** ಒಳಮನೆ, ದೇವರಮನೆ
**ಓವಿ** ಒಂದು ಪದ್ಯ ಜಾತಿ; ಒಲಿದು, ಪ್ರೀತಿಯಿಂದ
**ಓವು** ರಕ್ಷಿಸು, ಕಾಪಾಡು
**ಓಷಧಿ** ಔಷಧಿ, ವನಸ್ಪತಿ, ಬೆಳೆ
**ಓಷ್ಠ, ಓಷ್ಠ್ಯ** ತುಟಿ
**ಓಸ್** ಪ್ರೀತಿ
**ಓಸರ** ಸಮತೂಕವಿಲ್ಲದಿರುವುದು, ಓರೆಯಾಗುವುದು
**ಓಸರಿಸು** ಓರೆಮಾಡು, ಹಿಂಜರಿ
**ಓಸು** ಎಲ್ಲ, ಒಂದೂ ಬಿಡದೆ
**ಓಹಳಸೋಹಳ** ಮಡಿ ಮೈಲಿಗೆ
**ಓಳಿ** ಸಮೂಹ

## ಔ

**ಔಂಚು** ಅವಚು, ಅಪ್ಪು, ಮುಚ್ಚಿಡು
**ಔಕು<ಅವುಂಕು** ಹಿಸುಕು, ಔರು
**ಔಘ** ಓಘ, ಗುಂಪು, ಸಮೂಹ
**ಔಡಿಲು<ಓಡೆ** ಛಾವಣಿಗೆ ಹೊದಿಸುವ ಹಂಚು
**ಔಡು<ಅವುಡು** ತುಟಿ
**ಔಡೊತ್ತು** ತುಟಿಕಚ್ಚು
**ಔದಾರ್ಯ** ಉದಾರತೆ
**ಔದುಂಬರ, ಔದುಂಬ್ರ** ಅತ್ತಿಮರ, ಅತ್ತಿಹಣ್ಣು
**ಔಪಾಸಕ** ಉಪಾಸನೆಮಾಡುವವ, ಆರಾಧನೆ ಮಾಡುವವ

## ಕ

**ಕ** ಆತ್ಮ, ಬ್ರಹ್ಮ, ವಿಷ್ಣು
**ಕಂ** ನೀರು
**ಕಂಕ** ಒಂದು ಜಾತಿಯ ಹಕ್ಕಿ, ಹದ್ದು
**ಕಂಕಣ** ವಿವಾಹ ಸಂದರ್ಭದಲ್ಲಿ ಕೈಗೆ ಕಟ್ಟುವ ಶುಭದಾರ, ದೀಕ್ಷಾಬದ್ಧತೆಯ ದಾರ
**ಕಂಕಣಕಂಟಕ** ವಿವಾಹಕ್ಕೆ ಅಡ್ಡಿ ಪಡಿಸುವವ
**ಕಂಕಭಟ್ಟ** ವಿರಾಟರಾಜನ ಆಸ್ಥಾನದಲ್ಲಿ ಅಜ್ಞಾತವೇಷದಲ್ಲಿದ್ದ ಧರ್ಮರಾಯನ ಹೆಸರು
**ಕಂಗಳಂಗಳು** ಪೂರ್ಣ ಚಕ್ಷುಸ್ಸು, ಕಣ್ಣುಗಳ ಪೂರ್ಣ ದೃಷ್ಟಿಗೆ, ಒಳಗಣ್ಣು
**ಕಂಗಳಯ್ಯ** ಕುರುಡ; ಕತ್ತಲೆಯ ಒಡೆಯ, ಸೂರ್ಯ
**ಕಂಗಳಿವು** ಅಂಧ್ಯ, ಕುರುಡು
**ಕಂಗಳುಬ್ಬರ** ಸಂಭ್ರಮ, ಸಡಗರ, ಉದ್ವೇಗ
**ಕಂಗೆಡು** ಹತಾಶನಾಗು, ದಿಕ್ಕು ತೋಚದಂತಾಗು
**ಕಂಗೊಳಿಸು** ಕಣ್ಣಿಗೆ ಹಬ್ಬವನ್ನುಂಟು ಮಾಡು
**ಕಂಗೋರೆ** ಗೋಡೆಯಲ್ಲಿ ಮಾಡಿದ ಕೆತ್ತನೆಯ ಅಥವಾ ಬಣ್ಣದ ಅಲಂಕಾರ
**ಕಂಚು** ಕನ್ನಡಿ; ತಾಮ್ರತವರಗಳ ಮಿಶ್ರ ಲೋಹ; ಕುಪ್ಪಸ

Rarest Archiver

**ಕಂಚುಕ** ಕುಪ್ಪಸ, ರವಿಕೆ

**ಕಂಚುಕ(ಗ)ನ್ನಡಿ** ಕಂಚಿನ ಕನ್ನಡಿ (ಈ ತೆರದ ಕಂಚಿನ ಕನ್ನಡಿ ಕೆಲವು ಗುಡಿಗಳಲ್ಲಿ ಮತ್ತು ಪಾರಂಪರಿಕ ಮನೆತನಗಳಲ್ಲಿ ಉಳಿದು ಕೊಂಡಿವೆ)

**ಕಂಚುಕಿ** ಅಂತಃಪುರದ ಅಧಿಕಾರಿ; ದ್ವಾರಪಾಲಕ

**ಕಂಚುಗಾರ** ಕಂಚಿನ ಪಾತ್ರೆಗಳನ್ನು ಮಾಡುವವನು, ಕಂಚಿನ ಪಾತ್ರೆಗಳ ವ್ಯಾಪಾರಿ

**ಕಂಚುಳಿಕೆ** ಕುಪ್ಪಸ, ಅಂಗಿ

**ಕಂಜ** ಕಮಲ, ತಾವರೆ

**ಕಂಜಕರ** ಕಮಲದಂತಹ ಕೈ ಉಳ್ಳವನು, ಕಮಲವನ್ನು ಕೈಯಲ್ಲಿ ಹಿಡಿದವನು–ವಿಷ್ಣು

**ಕಂಜಚಕ್ರ ಗದಾಬ್ಜಧರ** ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ ಶ್ರೀಹರಿಯ ನಾರಾಯಣ ರೂಪ

**ಕಂಜಜ** ಬ್ರಹ್ಮ

**ಕಂಜಜನಯ್ಯ** ವಿಷ್ಣು

**ಕಂಜಜಾತ** ಬ್ರಹ್ಮ

**ಕಂಜಜೇಶ** ಪರಬ್ರಹ್ಮ–ವಿಷ್ಣು

**ಕಂಜದಳಾಕ್ಷ** ಕಮಲದಂತಹ ಕಣ್ಣುಳ್ಳವನು–ವಿಷ್ಣು

**ಕಂಜನಯನ** ತಾವರೆಗಣ್ಣು, ಕಮಲಾಕ್ಷ–ವಿಷ್ಣು

**ಕಂಜನಾಭ** ಕಮಲನಾಭ–ವಿಷ್ಣು

**ಕಂಜನೇತ್ರ** ಕಮಲನೇತ್ರ–ವಿಷ್ಣು

**ಕಂಜಭವ** ಬ್ರಹ್ಮ

**ಕಂಜಭವಾಂಡ** ಬ್ರಹ್ಮಾಂಡ

**ಕಂಜಭವೆ** ಲಕ್ಷ್ಮಿ

**ಕಂಜಮಿತ್ರ** ಸೂರ್ಯ

**ಕಂಜಲೋಚನ** ಕಮಲದಂತೆ ಕಣ್ಣುಳ್ಳವನು–ವಿಷ್ಣು

**ಕಂಜಸಖ** ಸೂರ್ಯ

**ಕಂಜಸಖಸೂನು** ಸೂರ್ಯಪುತ್ರ, ಯಮ, ಸುಗ್ರೀವ, ಕರ್ಣ, ಶನೈಶ್ಚರ

**ಕಂಜಾಕ್ಷ** ಕಮಲನೇತ್ರ–ವಿಷ್ಣು

**ಕಂಜಾಕ್ಷಿ** ಕಮಲದಂತೆ ಕಣ್ಣುಳ್ಳವಳು–ಲಕ್ಷ್ಮಿ

**ಕಂಜಾಸನ** ಬ್ರಹ್ಮ

**ಕಂಜೋದ್ಭವ** ಬ್ರಹ್ಮ

**ಕಂಜೋದ್ಭವನಮ್ಮ** ಲಕ್ಷ್ಮಿ

**ಕಂಟ** ತಾಳೆಗರಿಯ ಮೇಲೆ ಬರೆಯುವ ಲೆಕ್ಕಣಿಕೆ; ಮುಳ್ಳಿನ ಬೇಲಿ

**ಕಂಟಕ** ವಿಪತ್ತು, ಗಂಡಾಂತರ, ಅಡ್ಡಿ, ಮುಳ್ಳು; ಸಾವು

**ಕಂಟಕತರು** ಮುಳ್ಳಿನ ಗಿಡ

**ಕಂಟಕಾರಿ** ಪಾದರಕ್ಷೆ, ಕೆರಹು

**ಕಂಟಕಿ** ಅಡ್ಡಿಪಡಿಸುವವ

**ಕಂಟಲೆ** ಹಸುಬೆ, ಚೀಲ

**ಕಂಟಿ** ಮುಳ್ಳಿನಿಂದ ಕೂಡಿದ ಕಡ್ಡಿ, ಬೇಲಿ

**ಕಂಟೀಪದಕ** ಕತ್ತಿಗೆ ಹಾಕಿಕೊಳ್ಳುವ ಕೊರಳಿನ ಪದಕ

**ಕಂಠಕಾಷ್ಠ** ಕೊರಳದೊಣ್ಣೆ; ಗುದ್ದಿ

**ಕಂಠೀರವ** ಸಿಂಹ, ಮದಿಸಿದ ಆನೆ

**ಕಂಠೀರವೆ, ಕಂಠೀರೆ** ಸಿಂಹಿಣಿ, ಧೀರೆ, ಶೂರೆ

**ಕಂಠೋಪ** ಕೊರಳ ಹತ್ತಿರ

**ಕಂಡಕಲ್ಲು** ದೇವರಮೂರ್ತಿ; ಭರಮಪ್ಪ, ಕರಿಯವ್ವ ಮುಂತಾದುವು

**ಕಂಡವರು** ಅನ್ಯರು, ನೋಡಿದವರು

**ಕಂಡಿ** ರಂಧ್ರ, ತೂತು

**ಕಂಡಿಗಳುಒಂಬತ್ತು** ನವದ್ವಾರಗಳು

**ಕಂತು** ಕಾಮ, ಮನ್ಮಥ; ಅಡಗು; ಆರು, ನಂದು

**ಕಂತುಕ** ಚೆಂಡು

**ಕಂತುಕೇಳಿ** ರತಿಕ್ರೀಡೆ

**ಕಂತುಜನಕ** ಮನ್ಮಥನ ತಂದೆಯಾದ ಶ್ರೀಹರಿ

**ಕಂತುದಹನ** ಕಾಮನನ್ನು ದಹಿಸಿದವ–ಶಿವ

**ಕಂತುನಯ್ಯ, ಕಂತುಪಿತ** ಮನ್ಮಥನ ತಂದೆ–ವಿಷ್ಣು

**ಕಂತುವೈರಿ** ಶಿವ

**ಕಂತುಹರ** ಮನ್ಮಥನನ್ನು ಕೊಂದವ–ಶಿವ

Rarest Archiver

**ಕಂತುಹರಧನು** ಶಿವಧನಸ್ಸು
**ಕಂತೆ** ವ್ಯರ್ಥವಾದದ್ದು; ಕಟ್ಟುಕತೆ; ಹೊರೆ
**ಕಂತೆಕಟ್ಟು** ಸ್ಥಳ ಬಿಟ್ಟು ಹೊರಡು
**ಕಂಥಗೆ** ಹರಕು ಬಟ್ಟೆ; ಪಂಚಭೂತಗಳಿಂದ ನಿರ್ಮಿತ ಶರೀರ
**ಕಂಥಾಪಟ** ಚಿಂದಿಬಟ್ಟೆ
**ಕಂಥೆ** ಹರಕುಮುರುಕು ಬಟ್ಟೆ
**ಕಂದಕ** ತಗ್ಗು, ಹಳ್ಳ
**ಕಂದನಕಾಯ್ದ** ಪ್ರಹ್ಲಾದವರದ ನರಸಿಂಹ
**ಕಂದರ** ಕೊರಳು, ಕುತ್ತಿಗೆ
**ಕಂದರದಶ** ಹತ್ತುತಲೆಯವ, ರಾವಣ
**ಕಂದರ್ಪ** ಮನ್ಮಥ
**ಕಂದರ್ಪಜನಕ** ಕಾಮನ ತಂದೆ–ವಿಷ್ಣು
**ಕಂದರ್ಪನಯ್ಯ** ವಿಷ್ಣು
**ಕಂದರ್ಪಪಿತ** ಮನ್ಮಥನ ತಂದೆ–ವಿಷ್ಣು
**ಕಂದರ್ಪಹರ** ಶಿವ
**ಕಂದಲಿ** ಬಾವುಟ
**ಕಂದಲು** ಚಿಕ್ಕ ನೀರಿನ ಗಡಿಗೆ
**ಕಂದಾಯ** ಸರ್ಕಾರಕ್ಕೆ ಕೊಡುವ ನಿರ್ದಿಷ್ಟ ಹಣ, ತೆರಿಗೆ
**ಕಂದಿಕುಂದಿ** ಬಹಳಷ್ಟು ಕಷ್ಟ ಪಟ್ಟು, ಬಳಲಿ
**ಕಂದು** ಕಳಾಹೀನ; ನೀಲಿಬಣ್ಣ
**ಕಂದುಕ** ಚೆಂಡು
**ಕಂದುಕಂಧರ** ಕಂದು–ಕೆಂಪು ಮಿಶ್ರವಾದ ಕಪ್ಪು ಕೊರಳು; ನೀಲಕಂಠ–ಶಿವ
**ಕಂದುಕೊರಳ, ಕಂದುಗೊರಳ** ವಿಷಕಂಠ, ನೀಲಕಂಠ–ಶಿವ
**ಕಂಧರ** ಕಂಠ, ಕೊರಳು; ಮೋಡ
**ಕಂಬಸೂತ್ರಗೊಂಬೆ** ಕಂಬಿ(ಸಲಾಕೆ)ಯಿಂದ ಆಡಿಸುವ ಸೂತ್ರದ ಗೊಂಬೆ
**ಕಂಬಳಿ ಬುತ್ತಿ** ಕಂಬಳಿಯಲ್ಲಿ ಅನ್ನವನ್ನು ಕಟ್ಟಿದಂತೆ ವ್ಯರ್ಥ
**ಕಂಬಿ** ಬೆತ್ತ, ಕೋಲು, ಅಡ್ಡೆ, ಕಾವಡಿ
**ಕಂಬು** ಶಂಖ; ನೀರು; ಆನೆ; ಬಿಳಿ
**ಕಂಬುಕಂಠ, ಕಂಬುಕಂಧರ, ಕಂಬುಗೊರಳ. ಕಂಬುಗ್ರೀವ** ಶಂಖದಂತಹ ಕೊರಳುಳ್ಳವನು, ಗಣಪತಿ
**ಕಂಬುತುರಂಗಪ** ಶಂಖದಂತೆ ಕೊರಳುಳ್ಳ ಕುದುರೆಯ ಒಡೆಯ–ಕಲ್ಕಿ
**ಕಂಭವಿದಾರಣ** ಕಂಭಒಡೆದು ಬಂದವನು–ನರಸಿಂಹ
**ಕಂಸಘ್ನ** ಕೃಷ್ಣ
**ಕಂಸಾರಿ** ಕಂಸನ ಶತ್ರು–ಕೃಷ್ಣ
**ಕಂಸಾಳ** ಕಂಚಿನ ದೊಡ್ಡ ತಾಳ
**ಕಕಮಕಮಾಡು** ದಿಕ್ಕು ತಪ್ಪಿಸು, ಕಂಗೆಡಿಸು
**ಕಕವಿಕ** ಕಕ್ಕಾಬಿಕ್ಕಿ, ಭ್ರಾಂತಿ
**ಕಕುದಿ** ಡುಬ್ಬುಉಳ್ಳದು, ಗೂಳಿ
**ಕಕುಧ** ಪ್ರಮುಖ
**ಕಕುಭ್, ಕಕುಭ** ಆಕಾಶ, ದಿಕ್ಕು; ಮತ್ತಿ ಮರ
**ಕಕುಭೇಶ** ದಿಕ್ಪಾಲಕ; ಆಕಾಶದಲ್ಲಿ ಹೊಳೆವ ಚಂದ್ರ
**ಕಕುಲಾತಿ** ಚಿಂತೆ, ಕಳವಳ; ಕರುಣೆ, ಹಂಬಲು, ಮೋಹ
**ಕಕ್ಕಡ** ದೀವಟಿಗೆ, ಪಂಜು
**ಕಕ್ಕರ** ಮಾಸಲುಬಣ್ಣ; ಕಷ್ಟ
**ಕಕ್ಕಸ** ಕರ್ಕಶ, ಕಷ್ಟ; ಸೊಕ್ಕು, ಜೋರು
**ಕಕ್ಕಸಬಡು** ದುಃಖಪಡು, ಕಷ್ಟಪಡು
**ಕಕ್ಕುಲತೆ** ಲೋಭ; ಆಸಕ್ತಿ, ಪ್ರೀತಿ; ಚಿಂತೆ
**ಕಕ್ಕುಲಾತಿ** ಕಳವಳ; ಕರುಣೆ, ದಯೆ, ಅಂತಃಕರಣ, ಪ್ರೀತಿ
**ಕಕ್ಷ** ಚರ್ಚೆ; ಅಡವಿ, ಅಂಗಳ; ಕಂಕಳು; ಪಕ್ಷ, ಸ್ಥಾನ, ತರಗತಿ
**ಕಕ್ಷಕ್ರಮ** ತಾರತಮ್ಯದ ಪ್ರಕಾರ
**ಕಕ್ಷಪ್ರಾಣ** ತೈಜಸಾಹಂಕಾರದಿಂದ ಉದ್ಭೂತವಾದ ಪ್ರಾಣ

Rarest Archiver

**ಕಕ್ಷಭುಕ್‌ಜ್ವಾಲೆ** ಬೆಂಕಿಯ ಜ್ವಾಲೆ, ಕಾಡುಗಿಚ್ಚು
**ಕಕ್ಷವಹ್ನಿ** ದಾವಾನಲ
**ಕಕ್ಷಾಂತರ** ರಾಣೀವಾಸ, ಅಂತಃಪುರ
**ಕಕ್ಷಾಶನ** ಅಗ್ನಿ, ಕಾಡಿನ ಬೆಂಕಿ
**ಕಗ್ಗೊರಲೆ** ಕರಿಕೊರಲೆ(ಕೊರಲೆ-ಒಂದು ಸಸ್ಯ ವಿಶೇಷ)
**ಕಚ** ಕೂದಲು; ಬೃಹಸ್ಪತಿ ಪುತ್ರ
**ಕಚಕ** ಕೂದಲನ್ನು ಗಂಟು ಕಟ್ಟಿದವನು
**ಕಚೋರ** ಅರಿವಾಳ
**ಕಚ್ಚು** ಹಲ್ಲಿನಿಂದ ಕಚ್ಚುವುದು; ತುತ್ತು; ಕಲಗಚ್ಚು
**ಕಚ್ಚುಕದತನ** ಚಾಂಚಲ್ಯ; ವಿರೋಧ
**ಕಚ್ಚುಟ** ಕೌಪೀನ, ಲಂಗೋಟಿ
**ಕಚ್ಚೆಹರುಕ** ಕಾಮುಕ, ವ್ಯಭಿಚಾರಿ
**ಕಚ್ಛಪ** ಆಮೆ
**ಕಜ್ಜಲ, ಕಜ್ಜಳ** ಕಾಡಿಗೆ, ಕಪ್ಪು; ಮೋಡ
**ಕಜ್ಜಾಯ** ಒಂದು ಬಗೆಯ ಸಿಹಿ ತಿಂಡಿ, ಅತಿರಸ
**ಕಟಕ** ರಾಜಧಾನಿ; ಸೈನ್ಯ, ಗುಂಪು; ಸೇವೆ; ಚಿನ್ನ; ಬಳೆ; ಏಡಿ
**ಕಟಕಮಕುಟ** ಬಂಗಾರದ ಕಿರೀಟ
**ಕಟಕು** ಕಪ್ಪು ಅಥವಾ ಕೆಂಪಾದ ಜೇಡಿಮಣ್ಣು
**ಕಟಗರಿಸು** ಹಲ್ಲಿಗೆ ಹಲ್ಲು ಕೂಡು
**ಕಟಪಟಿ(ಟೆ)** ಹಿಂಸೆ, ತೊಂದರೆ (ಮರಾಠಿಯ ಖಟಪಟ)
**ಕಟವಾಯಿ** ಬಾಯಿಯ ಕೊನೆಯ ಭಾಗ
**ಕಟಾಕ್ಷ** ದೃಷ್ಟಿ, ಓರೆನೋಟ, ಅನುಗ್ರಹ
**ಕಟಾಹ** ಕಡಾಯಿ, ಕೊಪ್ಪರಿಗೆ
**ಕಟಿ** ಸೊಂಟ, ನಡು; ಬಿರುಸು
**ಕಟಿಕಟಾಂಗ** ದೊಡ್ಡ ಹೊಟ್ಟೆಯುಳ್ಳವ-ಗಣಪತಿ
**ಕಟಿತಟ** ನಿತಂಬ
**ಕಟಿತಟಾಂಚಿತ** ಸೊಂಟಪ್ರದೇಶದಿಂದ ಕೂಡಿದ
**ಕಟಿಹಾರ, ಕಟಿಸೂತ್ರ** ಸೊಂಟದ ಡಾಬು, ಒಡ್ಯಾಣ
**ಕಟು** ಕಹಿ
**ಕಟುಜನ** ದುಷ್ಟಜನ
**ಕಟ್ಟಕದನ** ದುಷ್ಕರ ಹೋರಾಟ
**ಕಟ್ಟಲೆ(ಳೆ)** ಪದ್ಧತಿ, ನಿಯಮ; ಕಾಣಿಕೆ
**ಕಟ್ಟಾಣಿ** ಶ್ರೇಷ್ಠವಾದ ಮುತ್ತು, ಬಲುಬೆಲೆಯ ಮುತ್ತಿನ ಸರ; ಅತಿ ಚೆಲುವೆ
**ಕಟ್ಟಾಹ** ಕೊಪ್ಪರಿಗೆ, ಕಡಾಯಿ
**ಕಟ್ಟಾಳು** ಶೂರ, ಪರಾಕ್ರಮಿ
**ಕಟ್ಟಿಏಳುದಿನ** ಗೋವರ್ಧನೋದ್ಧರಣ, ಏಳು ದಿನಗಳಕಾಲ ಕುಂಭದ್ರೋಣ ಮಳೆ ಹಿಡಿದ ಸಂದರ್ಭ
**ಕಟ್ಟಿಗೆ** ದಂಡಿಗೆ, ಸೌದೆ
**ಕಟ್ಟಿಗೆಯವ** ಪರಿಚಾರಕ, ಬೆಳ್ಳಿಯ ಕೋಲನ್ನು ಹಿಡಿದು ದಾರಿ ಬಿಡಿಸುತ್ತ ಮುಂದೆ ಸಾಗುವವ
**ಕಟ್ಟು** ನಿಯಮ, ಕ್ರಮ; ಬಂಧಿಸು; ಕಂತೆ, ಹಿಡಿ; ಒಂದು ಗೂಡುವುದು
**ಕಟ್ಟುಗ್ರ** ಭಯಂಕರ
**ಕಟ್ಲೆ** ಅವಧಿ, ನಿಯಮ, ಸರದಿ; ಕಟ್ಟಲೆ, ಪದ್ಧತಿ
**ಕಠ** ವೈಶಂಪಾಯನನ ಶಿಷ್ಯ, ವಶಿಷ್ಠಗಣಕ್ಕೆ ಸೇರಿದ ಒಬ್ಬ ಋಷಿ
**ಕಠಾರಿ** ಬಾಕು, ಚೂರಿ, ಕತ್ತಿ
**ಕಡ** ಸಾಲ, ಉದ್ದರಿ; ಕಡೆಯುವುದು, ಮಂಥನ
**ಕಡಂಗು** ಕಂದಕ; ಹುರಿದುಂಬಿಸು, ಸಡಗರಿಸು
**ಕಡಕಲು** ಬೇಲಿಯಲ್ಲಿ ಒಬ್ಬರು ಹಾದು ಹೋಗುವಂತೆ ನೆಟ್ಟಿರುವ ಕವೆ, ಅಕ್ಕಳೆ
**ಕಡಗ** ಕೈ ಮತ್ತು ಕಾಲುಗಳಿಗೆ ಧರಿಸುವ ಆಭರಣ ವಿಶೇಷ
**ಕಡಗು<ಕಡಂಗು** ಕಂದಕ; ಹುರಿದುಂಬಿಸು, ಸಡಗರಿಸು
**ಕಡಲಜಳೊಡೆಯ** ಲಕ್ಷ್ಮಿಯ ಗಂಡ-ವಿಷ್ಣು
**ಕಡಲತನುಜೆ** ಲಕ್ಷ್ಮಿ
**ಕಡಲನಾಲಗೆ** ಸಮುದ್ರದನೊರೆ, ನೀರಿನಬುರಗು
**ಕಡಲವಾಸ** ಶ್ರೀಹರಿ

Rarest Archiver

**ಕಡಲಶಯನ** ಸಾಗರಶಯನ–ವಿಷ್ಣು
**ಕಡಲೊಡೆಯ** ಸಮುದ್ರದೊಡೆಯ–ವಿಷ್ಣು
**ಕಡವರ** ಚಿನ್ನ, ಸುವರ್ಣ
**ಕಡವು** ನಡೆದು ಹೊಳೆ ದಾಟುವ ಸ್ಥಳ, ಕಡ
**ಕಡಹ** ಸ್ನಾನಘಟ್ಟ
**ಕಡಹದಮರ, ಕಡಹಲ್ದಮರ, ಕಡಹಾಯ್ಲುಮರ** ಕದಂಬವೃಕ್ಷ, ತಾಳೆಮರ(ಕಡವಾಲ)
**ಕಡಾರ** ಕೊಪ್ಪರಿಗೆ, ಕಡಾಯಿ
**ಕಡಿ** ತುಂಡುಮಾಡು, ತರಿ
**ಕಡಿಖಂಡ** ಸಣ್ಣ ಚೂರು
**ಕಡಿತ** ಕಡತ, ಬಟ್ಟೆಯ ಮೇಲೆ ಮಡಿಚುವಂತೆ ಬರೆದಿಟ್ಟ ಗ್ರಂಥ
**ಕಡು** ವಿಶೇಷ, ಅಧಿಕ
**ಕಡುಕಂಬ** ಕಡೆಯುವ ಕಂಬ
**ಕಡುಗು** ಶಕ್ತಿಗುಂದು
**ಕಡುಚೆಲ್ವ** ಬಹಳ ಸುಂದರನಾದವನು
**ಕಡುಹು** ಸಾಹಸ, ಹುರುಪು, ಉತ್ಸಾಹ
**ಕಡೆ** ಕಡಗ; ಕೊನೆ
**ಕಡೆಗಣ್ಣು** ನಿರ್ಲಕ್ಷ್ಯದ ದೃಷ್ಟಿ, ಓರೆಗಣ್ಣು
**ಕಡೆಗಾಣು** ಕಡೆಗಣ್ಣಿನಿಂದ ನೋಡು, ಅಲಕ್ಷಿಸು, ತಿರಸ್ಕರಿಸು
**ಕಡೆಗೆಹಾಕು** ದಡ ಮುಟ್ಟಿಸು, ಕಾಪಾಡು
**ಕಡೆಯ** ಕಾಲು ಅಥವಾ ಕೈಗೆ ಹಾಕಿಕೊಳ್ಳುವ ಆಭರಣ, ಕಡಗ
**ಕಡೆಯತೋಡೆ** ಕಡಗ, ಮುಂಗೈಗೆ ತೊಡುವ ಒಂದು ಬಗೆಯ ಆಭರಣ
**ಕಡೆಹಾಯಿಸು** ದಾಟಿಸು, ಮುಟ್ಟಿಸು; ರಕ್ಷಿಸು
**ಕಡ್ಡಿ** ಮರದತುಂಡು, ಕಾಷ್ಠ
**ಕಡ್ಡಿಕೊಟ್ಟು ಪೇಳುವುದು** ಶಾಸ್ತ್ರದ ಪುಸ್ತಕಕ್ಕೆ ಕಡ್ಡಿ ಹಾಕಿ ಶಾಸ್ತ್ರ ಕೇಳುವುದು
**ಕಡ್ಡಿಪುಸ್ತಕ** ಶಾಸ್ತ್ರದ ಪುಸ್ತಕ
**ಕಡ್ಡಿಯಂದದಿ** ತೃಣಸಮಾನ, ನಿಷ್ಪ್ರಯೋಜಕ ವಸ್ತುವಿನಂತೆ
**ಕಡ್ಡೆ** ಕಡೆಯ; ಕಾಲಿಗೆ ತೊಡುವ ಒಂದು ಬಗೆಯ ಒಡವೆ (ಬಿರುದುಗಳ ಸಂಬಂಧದಲ್ಲಿ)
**ಕಣ** ಅಣು, ಸಣ್ಣ ಪದಾರ್ಥ; ವಾದಭೂಮಿ; ರವಕೆ ಬಟ್ಟೆ
**ಕಣಕ, ಕಣಿಕೆ** ಕಲಸಿದ ಗೋಧಿ ಮುಂತಾದವುಗಳ ಹಿಟ್ಟು
**ಕಣಿ** ಭವಿಷ್ಯ; ಗಣಿ, ಆಕರ, ನೆಲೆ; ಕಗ್ಗ
**ಕಣೆ** ಬಾಣ, ಮುಳ್ಳು, ಬಿದಿರು ಕೋಲು
**ಕಣ್ಣಮೀಟು** ಕಣ್ಣುಚಿವುಟು, ಕಣ್ಣುಮುಚ್ಚಿ ಸನ್ನೆ ಮಾಡು
**ಕಣ್ಣಹಾರು** ಕಣ್ಣು ರೆಪ್ಪೆ ಹೊಡೆದುಕೊಳ್ಳುವುದು
**ಕಣ್ಣಿ** ಉರುಳು, ಹಗ್ಗ
**ಕಣ್ಣಿಂದ** ಕೇಳುವವ ಸರ್ಪ
**ಕಣ್ಣಿಲಿ** ಕಣ್ಣಿಲ್ಲದವ
**ಕಣ್ಣಿಲ್ಲದವಳು** ಅಂಜನಾದೇವಿ
**ಕಣ್ಣಿಹಗ್ಗ** ಊರುಗಂಟು ಹಾಕಿದ ಹಗ್ಗ (ಇದು ಜೋಡು ನುಡಿ. ಕಣ್ಣಿಗೂ ಹಗ್ಗವೆಂದೇ ಅರ್ಥ, ಹೆಣ್ಣು ಹೆಂಗಸು ಎಂಬ ಪ್ರಯೋಗದಂತೆ)
**ಕಣ್ಣುಗೆಡು** ಗೊಂದಲಕ್ಕೀಡಾಗು
**ಕಣ್ಣುಮುಚ್ಚಲೊಲ್ಲನು** ಶ್ರೀಹರಿಯ ಮತ್ಸ್ಯಾವತಾರ
**ಕಣ್ಣುಮುಚ್ಚು** ಗುಟ್ಟು, ರಹಸ್ಯ
**ಕಣ್ಣುಮೂಗಿನ ಮಂಚ** ಶೇಷಶಯನ–ಹಾವಿಗೆ ಕಿವಿಗಳಿಲ್ಲವೆಂಬುದು ಇದರಿಂದ ತಿಳಿಯಬೇಕು
**ಕಣ್ಣುಮೂರುಳ್ಳವ** ಶಿವ
**ಕಣ್ಣುಳ್ಳುವ (?)** ಶ್ರೇಷ್ಠ (?)
**ಕಣ್ಣೂನ** ಕುರುಡುತನ
**ಕಣ್ಣೊರತಿ, ಕಣ್ಣೊರತೆ** ಕಣ್ಣೀರಿನ ಧಾರೆ, ಆನಂದಬಾಷ್ಪ
**ಕತ** ಕಾರಣ, ದುಃಖ, ವ್ಯಥೆ
**ಕತಬಿ** ಸಾಲದ ಕರಾರು ಪತ್ರ
**ಕತ್ತರಿಬಾವುಲಿ** ಕಿವಿಯಾಭರಣ
**ಕತ್ತಲು** ಅಂಧಕಾರ, ರಾತ್ರಿ

Rarest Archiver

**ಕತ್ತಲೆದೈತ್ಯ** ತಮನೆಂಬ ದೈತ್ಯ
**ಕತ್ತಾವರೆ** ಕರಿಕಮಲ, ನೈದಿಲೆ
**ಕತ್ತುರಿ** ಕಸ್ತೂರಿ
**ಕಥಕ** ಕತೆಗಾರ
**ಕಥನ** ಹೇಳುವುದು, ಹೊಗಳುವುದು
**ಕಥಾನ್ವಿತ** ಕಥೆಯಿಂದ ತುಂಬಿದ
**ಕಥಾಪ್ರಸಂಗಿ** ಕಥೆ ನಡೆಸಿಕೊಡುವವ, ಭಾಗವತ
**ಕಥಿತ** ಹೇಳಿದ
**ಕದ** ಬಾಗಿಲು
**ಕದಂಬ** ಪರಿಮಳ ವಸ್ತು; ಕಡಹದ ಮರ, ನೀಪ; ಸಮೂಹ, ಗುಂಪು; ಮಿಶ್ರಬಣ್ಣದ ಕಾಂತಿ
**ಕದಂಬವನ** ನೀಪ ವೃಕ್ಷಗಳ ವನ
**ಕದಕ** ಮೋಸಗಾರ; ಚಪ್ಪರ
**ಕದಕನಕೇಳಿಕೆ** ಮೋಸಗಾರನ ಹೇಳಿಕೆ
**ಕದಡಾರತಿ<ಕದಲಾರತಿ** ಅರಿಶಿನ, ಸುಣ್ಣ ಬೆರಸಿ ಮಾಡಿದ ಆರತಿ
**ಕದಡು** ಕಲಕು, ಒಟ್ಟುಗೂಡಿಸು, ಓಕುಳಿ; ಕೆಣಕು, ಕ್ಷೋಭಗೊಳಿಸು
**ಕದನ** ಯುದ್ಧ
**ಕದನಚಾಪು** ಯುದ್ಧರಂಗ, ರಣರಂಗ
**ಕದನಚೌಪಟಮಲ್ಲ** ಮಹಾ ಪರಾಕ್ರಮಿ
**ಕದನ್ನ** ಹಳಸಿದ ಅನ್ನ, ಕೆಟ್ಟ ಅನ್ನ
**ಕದಪು** ಗಲ್ಲ, ಕೆನ್ನೆ
**ಕದಬಾಗಿಲಿರಿಸಿಹ ಕಳ್ಳಮನೆ** ನವರಂಧ್ರಗಳಿಂದ ಕೂಡಿದ ಶರೀರ
**ಕದರಡಕೆ** ಮೃದುವಾದ ಅಡಿಕೆ, ಕಾಚು ಸೇರಿಸಿದ ಅಡಿಕೆ
**ಕದರು** ಕದಡು
**ಕದರೂರು** ಕದರುಮಂಡಲಗಿ
**ಕದಲಾರತಿ** ಅರಿಶಿನ, ಸುಣ್ಣ ಬೆರಸಿ ಮಾಡಿದ ಆರತಿ
**ಕದಶನ** ಹಳಸಿದ ಅನ್ನ, ಕದನ್ನ
**ಕದಳಿ** ಬಾಳೆಹಣ್ಣು, ಬಾಳೆಗಿಡ
**ಕದಾಂಬು** ಕೊಳಚೆ ನೀರು
**ಕದಿರ** ಕಿರಣಗಳನ್ನುಳ್ಳವನು, ಸೂರ್ಯ
**ಕದಿರು** ಕಿರಣ; ರಾಟೆಯಲ್ಲಿ ನೂತ ನೂಲನ್ನು ಸುತ್ತುವ ದಬ್ಬಳದಂತಹ ಲೋಹದ ಕಡ್ಡಿ
**ಕದಿರುಂಡಲೀಶ** ಕದರುಮಂಡಲಗಿಯ ಹನುಮಂತ
**ಕದುವು** ಇಕ್ಕಟ್ಟಾದ ತಗ್ಗು, ಕೆಸರು
**ಕದ್ದಿಕಾರ** ಅಪೇಕ್ಷಿಸುವವನು, ಬಯಸುವವನು
**ಕದ್ರು** ದಕ್ಷಬ್ರಹ್ಮನ ಮಗಳು, ಕಶ್ಯಪಮುನಿಯ ಹದಿಮೂರು ಮಂದಿ ಪತ್ನಿಯರಲ್ಲಿ ಒಬ್ಬಳು
**ಕದ್ರುಜ** ಶೇಷದೇವ, ಸರ್ಪ, ಕಾಳಿಂಗಸರ್ಪ
**ಕದ್ರುಜಧಾರಿ** ಶಿವ
**ಕದ್ರುಜಾದಿ** ಕದ್ರುವಿನ ಮಕ್ಕಳಾದ ಸರ್ಪಗಳು ಮುಂತಾದವು
**ಕದ್ರುವೇಯ** ಕದ್ರು–ಕಶ್ಯಪರಲ್ಲಿ ಜನಿಸಿದ ಸರ್ಪ
**ಕದ್ರುಸುತ** ನಾಗ
**ಕನಕ** ಚಿನ್ನ
**ಕನಕಕಶ್ಯಪ, ಕನಕಕಶಿಪು** ಹಿರಣ್ಯಕಶಿಪು
**ಕನಕಗರಿಸು** ಕನವರಿಸು
**ಕನಕಗರ್ಭ** ಬ್ರಹ್ಮ
**ಕನಕಗರ್ಭತನಯ** ಬ್ರಹ್ಮತನಯನಾದ ನಾರದ
**ಕನಕಗಿರಿ** ಮೇರುಪರ್ವತ; ತಿರುಪತಿಯ ಬೆಟ್ಟ
**ಕನಕತಸ್ಕರ** ಬಂಗಾರದ ಕಳ್ಳ
**ಕನಕನಯನ** ಹಿರಣ್ಯಾಕ್ಷ, ಕನಕಾಕ್ಷ
**ಕನಕಮುನೀಶ್ವರ** ಕನಕವೃಷ್ಟಿ ಮಾಡಿದ ಮುನೀಶ್ವರ–ವಿದ್ಯಾರಣ್ಯ
**ಕನಕಮೃಗ** ಕಾಂಚನ ಮೃಗ
**ಕನಕವಕ್ಕಿ** ಗರುಡ
**ಕನಕವಸನ** ಚಿನ್ನದಂತೆ ಪ್ರಕಾಶಮಾನವಾದ ಪೀತಾಂಬರವನ್ನು ಧರಿಸಿರುವವನು–ವಿಷ್ಣು
**ಕನಕವೃಷ್ಟಿ** ಬಂಗಾರದ ಮಳೆ
**ಕನಕಸುಚೇಲ** ಕನಕಾಂಬರಧಾರಿಯಾದ ಶ್ರೀಹರಿ

Rarest Archiver

**ಕನಕಾಂಕಿತಚೇಲ** ಚಿನ್ನದಿಂದ ಮಾಡಿದ ಬಟ್ಟೆ
**ಕನಕಾಂಬರ** ಪೀತಾಂಬರ
**ಕನಕಾಕ್ಷ** ಹಿರಣ್ಯಾಕ್ಷ
**ಕನಕಾಸುರ** ಹಿರಣ್ಯಕಶಿಪು
**ಕನಕುಮನಕು** ತಬ್ಬಿಬ್ಬು, ಕಕ್ಕಾವಿಕ್ಕಿ
**ಕನಗು** ಒಂದು ಬಗೆಯ ಹುಲ್ಲು; ದುರ್ವಾಸನೆ
**ಕನಲಿಕೆ** ಕಳವಳ, ಕೋಪ; ಭ್ರಮೆ
**ಕನಲು** ಸಂಕಟ ಪಡು; ಕೆರಳು
**ಕನವಿಕೆ** ನಿದ್ದೆ ಮತ್ತು ಎಚ್ಚರದ ನಡುವಿನ ಸ್ಥಿತಿ, ಕನವರಿಸುವುದು
**ಕನಿ** ಮಿಂಚು; ಪಕ್ವ, ಪ್ರೌಢೆ
**ಕನಿಯ** ಕೆಳಮಟ್ಟದ
**ಕನ್ನ** ಕಿಂಡಿ, ತೂತು
**ಕನ್ನಗಾರ** ಕಳ್ಳ
**ಕನ್ನಹೋಗು** ಕಳವು, ಕನ್ನಹಾಕಿ ಕಳವು ಮಾಡು
**ಕನ್ನೆ** ಮದುವೆಯಾಗದವಳು, ಕನ್ಯೆ, ಯುವತಿ
**ಕನ್ನೆಗೊನೆ** ಮೊದಲಗೊನೆ, ಮೀಸಲು ಗೊನೆ
**ಕನ್ಯಪತಿ** ಕನ್ಯಾಕುಮಾರಿ ನಾಮಕಳಾದ ರಮಾ ದೇವಿಯ ಪತಿ–ಶ್ರೀಹರಿ
**ಕನ್ಯೆ** ಮೈನೆರೆಯದ ಹೆಣ್ಣು
**ಕಪಟ** ಸುಳ್ಳು, ಮೋಸ
**ಕಪಟನಾಟಕ** ಸೃಷ್ಟಿ ಮುಂತಾದವುಗಳ ಬಂಧನ ವಿಲ್ಲದೆ, ಅವುಗಳನ್ನು ನಡೆಸುವವ
**ಕಪಟನಾಟಕಸೂತ್ರಧಾರ** ಕೃಷ್ಣ
**ಕಪನಿ** ತೋಳಿಲ್ಲದ ನಿಲುವಂಗಿ
**ಕಪರ್ದಕ** ಕವಡೆ, ಕವಡೆಬೆಲೆ, ಕೀಳು
**ಕಪರ್ದಿ** ಜಟಾಜೂಟವುಳ್ಳವ–ಶಿವ
**ಕಪರ್ದಿಮುನಿ** ರುದ್ರಾವತಾರರಾದ ಋಷಿ–ದೂರ್ವಾಸರು
**ಕಪಾಲ** ತಲೆಯೋಡು, ತಲೆಬುರುಡೆ
**ಕಪಾಲಧರ, ಕಪಾಲಿ** ಬ್ರಹ್ಮನ ತಲೆಯೋಡನ್ನು ಭಿಕ್ಷೆ ಬೇಡುವುದಕ್ಕಾಗಿ ಬಳಸುವವನು–ಶಿವ
**ಕಪಿ** ಕೋತಿ
**ಕಪಿಕುಂಜರ** ವಾನರ ಶ್ರೇಷ್ಠನಾದ ಹನುಮಂತ
**ಕಪಿತ** ಬ್ರಹ್ಮನ ತಂದೆ–ಶ್ರೀಹರಿ
**ಕಪಿತ್ಥ** ಬೇಲದಹಣ್ಣು
**ಕಪಿಪ** ವಾಯುದೇವರು
**ಕಪಿಪ್ಲವನ** ಮರಕೋತಿಯಾಟ
**ಕಪಿಲ** ಕೋತಿಯ ಬಣ್ಣವುಳ್ಳ; ನಸುಗೆಂಪು ಬಣ್ಣದ; ಒಬ್ಬ ಋಷಿಯ ಹೆಸರು; ವಿಷ್ಣುರೂಪ
**ಕಪಿಲದೇವ** ಹರಿಯ ಕಪಿಲಾವತಾರವಾದ ಮಹರ್ಷಿ
**ಕಪೀಂದ್ರಗೊಲಿದ** ಹನುಮಂತನಿಗೊಲಿದ ರಾಮ
**ಕಪೀಶ** ಹನುಮಂತ
**ಕಪೋತ** ಪಾರಿವಾಳ
**ಕಪೋಲ** ಕೆನ್ನೆ
**ಕಪ್ಪ** ರಾಜರಿಗೆ ಕೊಡಬೇಕಾದ ತೆರಿಗೆ
**ಕಪ್ಪರ** ಒಡೆದ ಮಣ್ಣಿನ ಪಾತ್ರೆ, ಭಿಕ್ಷಾಪಾತ್ರೆ, ಕಮಂಡಲ
**ಕಪ್ಪುಕಂಠ** ನೀಲಕಂಠ
**ಕಪ್ಪುಗೊರಲ** ಶಿವ
**ಕಬಂಧ** ರಾಮನಿಂದ ತೋಳು ಕತ್ತರಿಸಲ್ಪಟ್ಟ ರಾಕ್ಷಸ; ದನುನಾಮಕ ಗಂಧರ್ವ; ತಲೆಯಿಲ್ಲದ ಶರೀರದ ಭಾಗ
**ಕಬರಿ** ತುರುಬು, ಕೂದಲು, ಹೆಂಗಳೆ, ಹೆರಳು
**ಕಬ್ಬಲಿಗ** ಕರ್ನಾಟಕದಲ್ಲಿ ಒಂದು ಜಾತಿ, ಬೆಸ್ತ; ಸುಣ್ಣಗಾರ
**ಕಬ್ಬಿಣಪಾಶ** ಕಬ್ಬಿಣದ ಸರಪಣಿ
**ಕಬ್ಬಿನಗಣಿಕೆ** ಕಬ್ಬಿನ ಎರಡು ಗಂಟುಗಳ ನಡುವಿನ ತುಂಡು
**ಕಬ್ಬುಕಾರ್ಮುಕ, ಕಬ್ಬುಬಿಲ್ಲ** ಕಬ್ಬನ್ನೇ ಧನುಸ್ಸಾಗಿ ಉಳ್ಳ ಮನ್ಮಥ
**ಕಭಲೋಕ** ಹದಿನಾಲ್ಕು ಲೋಕ

Rarest Archiver

**ಕಮಂಗ** ಕಮಂಗಿ, ಬುದ್ಧಿಗೇಡಿ
**ಕಮಟು** ಎಣ್ಣೆಯ ವಾಸನೆ
**ಕಮಠ** ಕೂರ್ಮ, ಆಮೆರೂಪಿ; ಅತಿ ಮಲಿನ
**ಕಮಠಾವತಾರ** ಕೂರ್ಮಾವತಾರ
**ಕಮನೀಯ** ಮನೋಹರ, ಸುಂದರ
**ಕಮನೀಯಗಾತ್ರ** ಸುಂದರವಾದ ಶರೀರವುಳ್ಳವನು –ವಿಷ್ಣು
**ಕಮನೀಯವನ** ಸುಂದರವಾದ ಉದ್ಯಾನ, ಬೃಂದಾವನ
**ಕಮರಿ** ಕಂದಕ, ಪ್ರಪಾತ
**ಕಮಲ** ತಾವರೆ
**ಕಮಲಕರ್ಣಿಕೆ** ಕಮಲದ ಹೂವಿನ ಮಧ್ಯ ಭಾಗ
**ಕಮಲಜ** ಬ್ರಹ್ಮ
**ಕಮಲಜನುತಿಪಾತ್ರ** ಬ್ರಹ್ಮನಿಂದ ಸ್ತುತಿಸಲ್ಪಡುವವನು–ಶ್ರೀಹರಿ
**ಕಮಲಜಸತಿ** ಸರಸ್ವತಿ
**ಕಮಲಜಸುತ** ನಾರದ
**ಕಮಲಜಾಂಡ** ಬ್ರಹ್ಮಾಂಡ
**ಕಮಲದಕರತಳದೆ** ತಾವರೆಯಂತಿರುವ ಕೈಗಳಿಂದ (ಅಭಯ ಮುದ್ರೆ)
**ಕಮಲದಳಾಯತಾಂಬಕ** ಕಮಲದಂತಹ ಕಣ್ಣುಳ್ಳವನು–ವಿಷ್ಣು
**ಕಮಲನಾಭ** ವಿಷ್ಣು
**ಕಮಲನಾಭನಚಿಹ್ನೆ** ವಿಷ್ಣುವಿನ ಗುರುತುಗಳಾದ ಶಂಖ, ಚಕ್ರಾದಿಗಳು
**ಕಮಲಭವ** ಕಮಲದಲ್ಲಿ ಹುಟ್ಟಿದವ– ಬ್ರಹ್ಮ
**ಕಮಲಮಾರ್ಗಣ** ಮನ್ಮಥ
**ಕಮಲಮಾರ್ಗಣಪಿತ** ಶ್ರೀಹರಿ
**ಕಮಲಸಂಭವ** ಬ್ರಹ್ಮ
**ಕಮಲಸಂಭವಭವ** ಬ್ರಹ್ಮನ ಬಲನಾಸಾಪುಟದಿಂದ ಹುಟ್ಟಿದ ವರಾಹಾವತಾರ
**ಕಮಲಸಖ** ಸೂರ್ಯ
**ಕಮಲಸಖಾನಂತಕರ** ಸೂರ್ಯನಂತೆ ಅನಂತ ಕಿರಣಗಳುಳ್ಳವ
**ಕಮಲಸುಹೃತ್‌ತನಯ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಕಮಲಾಂಬಕ** ಕಮಲದಂಥ ಕಣ್ಣುಳ್ಳವ–ಶ್ರೀಹರಿ
**ಕಮಲಾಕ್ಷ** ವಿಷ್ಣು
**ಕಮಲಾಯತಾಕ್ಷ** ವಿಷ್ಣು
**ಕಮಲಾರಿ** ಚಂದ್ರ
**ಕಮಲಾರಿಸಮವಕ್ತ್ರ** ಚಂದ್ರನಂತೆ ಮುಖವುಳ್ಳವ
**ಕಮಲಾಲಯ** ಶ್ರೀಮಹಾಲಕ್ಷ್ಮೀನಿಲಯ
**ಕಮಲಾಲಯೆ, ಕಮಲಾಲಿಯ** ಲಕ್ಷ್ಮಿ
**ಕಮಲಾವಿರಚಿತಸ್ತೋತ್ರ** ಲಕ್ಷ್ಮಿಯಿಂದ ಸ್ತುತಿಸಲ್ಪಡುವವನು–ಶ್ರೀಹರಿ
**ಕಮಲಾಸನ** ಬ್ರಹ್ಮ
**ಕಮಲಾಸನನಪಿತ** ಬ್ರಹ್ಮನ ತಂದೆ–ಶ್ರೀಹರಿ
**ಕಮಲೇಂದು** ಕಮಲಕ್ಕೂ ಚಂದ್ರನಿಗೂ ವಿರುದ್ಧ
**ಕಮೀಯ** ಮನೋಹರ
**ಕಮ್ಮ** ಅಳತೆ
**ಕಮ್ಮಗೋಲ** ಪುಷ್ಪ ಬಾಣವುಳ್ಳವ–ಮನ್ಮಥ
**ಕಮ್ಮರಿ** ಪ್ರಪಾತ
**ಕಮ್ಮೆಣ್ಣೆ** ಪರಿಮಳದ ಎಣ್ಣೆ, ನಾರು ಬೇರುಗಳನ್ನು ಹಾಕಿ ಕಾಯಿಸಿದ ಸುಗಂಧ ತೈಲ, ಅಭ್ಯಂಜನ ತೈಲ
**ಕಯಾದುಸುತ** ಪ್ರಲ್ಹಾದ, ಸಲ್ಹಾದ, ಅನುಲ್ಹಾದ, ಅಹ್ಲಾದ
**ಕಯ್ತು** ವೀಳ್ಯದಲ್ಲಿ ಬಳಸುವ ಕಾಚು
**ಕರ** ಹಸ್ತ, ಕೈ; ಆನೆಯ ಸೊಂಡಿಲು; ಕಿರಣ, ರಶ್ಮಿ; ಹೆಚ್ಚಿಸು, ತೆರಿಗೆ
**ಕರಕಂಜ** ಕರಕಮಲ
**ಕರಕಂಪನ** ಅದುರು ರೋಗ, ಕೈ ನಡುಗುವರೋಗ
**ಕರಕರೆ** ಚಿಂತೆ, ಕೊರಗು
**ಕರಕು** ಅಡಿ ಹತ್ತಿದ ಅನ್ನ

Rarest Archiver

**ಕರಗಸ** ಗರಗಸ
**ಕರಚತುಷ್ಟಯ** ನಾಲ್ಕು ಕೈ
**ಕರಜ** ಶಿಷ್ಯ; ಬೆರಳು
**ಕರಜಾಗ್ರ** ಕೈಯ ಕೊನೆಯಲ್ಲಿ ಬೆಳೆದುದು-ಉಗುರು
**ಕರಟ** ತೆಂಗಿನ ಚಿಪ್ಪು; ನಗಾರಿ
**ಕರಟಕ** ಏಡಿ, ನಳ್ಳಿ
**ಕರಡ** ಕಾಡಿನಲ್ಲಿ ಬೆಳೆದು ಒಣಗಿದ ಹುಲ್ಲು
**ಕರಡಿ** ಮೈಎಲ್ಲಾ ಕೂದಲುಳ್ಳಪ್ರಾಣಿ
**ಕರಡಿಗೆ** ಡಬ್ಬಿ, ಭರಣಿ, ಶಿವಲಿಂಗವಿರಿಸುವ ಸಂಪುಟ
**ಕರಡಿಯಮಗಳು, ಕರಡಿಸುತೆ** ಜಾಂಬವತಿ
**ಕರಡು** ಬರಡು, ಒಣಗಿದ್ದು
**ಕರಡೆ** ಒಂದು ಬಗೆಯ ಚರ್ಮವಾದ್ಯ
**ಕರಣ** ಜ್ಞಾನೇಂದ್ರಿಯ, ಕಿವಿ, ಮನಸ್ಸು
**ಕರಣಚೇಷ್ಟೆ** ಇಂದ್ರಿಯಗಳ ಕಾರ್ಯಗಳು
**ಕರಣತ್ರಯ** ತ್ರಿಕರಣ(ಕಾಯಾ, ವಾಚಾ, ಮನಸಾ)
**ಕರಣಪ್ರಪಂಚ** ಇಂದ್ರಿಯ ಸಮೂಹ
**ಕರಣರಹಿತ** ಕಿವಿಇಲ್ಲದ, ಶೇಷ, ಹಾವು
**ಕರಣವೈರಿ** ಅರ್ಜುನ
**ಕರಣಶುದ್ಧಿ** ಮನಸ್ಸಿನ ಶುದ್ಧಿ-ಇತರ ಇಂದ್ರಿಯಗಳ ಶುದ್ಧಿ
**ಕರಣಾಭಿಮಾನಿಸುರರು** ಇಂದ್ರಿಯಾಭಿಮಾನಿಗಳಾದ ದೇವತೆಗಳು
**ಕರಣಾರ್ಥಂಗಳು** ಐದು ಇಂದ್ರಿಯಗಳು, ತನ್ಮಾತ್ರೆಗಳು
**ಕರಣಿಕ** ಲೆಕ್ಕಿಗ, ಶ್ಯಾನುಭೋಗ
**ಕರಣೆ** ಗಡ್ಡೆ; ಊದುವ ಒಂದು ವಾದ್ಯ
**ಕರತಲ(ಳ)** ಅಂಗೈ
**ಕರತಲಾ(ಳಾ)ಮಲಕ** ಅಂಗೈಯಲ್ಲಿನ ನೆಲ್ಲಿಕಾಯಿ, ಸ್ಪಷ್ಟವಾದ
**ಕರದಂಡನಾಮಕ** ಪುಂಡರೀಕ
**ಕರಧೃತ** ಕರದಲ್ಲಿ ಧರಿಸಿದ
**ಕರಧೃತಗೋತ್ರ** ಗೋವರ್ಧನ ಗಿರಿಯನ್ನು ಎತ್ತಿಹಿಡಿದವನು ಕೃಷ್ಣ
**ಕರಪತ್ರ** ಗರಗಸ; ಸೂಚನಾಪತ್ರ
**ಕರಪೀತವಾಸ** ವಿಶೇಷವಾದ ಪೀತಾಂಬರ
**ಕರಪುಟ** ಜೋಡಿಸಿದ ಕೈಗಳು, ಮುಗಿದ ಕೈ
**ಕರಬೋನ** ಅಗಲವಾದ ಬಾಯುಳ್ಳ ಚಿಕ್ಕ ಜಲಪಾತ್ರೆ; ಕೈತುತ್ತು
**ಕರವಲಯ** ಕೈಬಳೆ
**ಕರವಾಳ(ಳ)(ಳು)** ಖಡ್ಗ, ಕತ್ತಿ
**ಕರವಿಡಿ** ಪಾಣಿಗ್ರಹಣ ಮಾಡು
**ಕರವಿಲ್ಲನಾರಿ** ಕೈಯಲ್ಲಿ ಹಿಡಿದ ಧನುಸ್ಸಿನ ಹೆದೆ, ಶಿಂಜಿನಿ
**ಕರವೀರ** ಕಣಗಿಲ ಹೂ
**ಕರವೀರಪುರ** ಕೊಲ್ಹಾಪುರ
**ಕರಸಂಜಾತ** ಕೈಯಿಂದ ಹುಟ್ಟಿದ; ಶಿಷ್ಯ
**ಕರಸಂಪುಟ** ಬೊಗಸೆ
**ಕೈರಾತ<ಕಿರಾತ** ಶಬರ, ಬೇಡ
**ಕರಾಳವದನ** ನೃಸಿಂಹಾದಿ ರೂಪಗಳಲ್ಲಿಯ ಮುಖ
**ಕರಾಳಾಕ್ಷ** ರೌದ್ರ ಮಿಶ್ರಿತ ಕಣ್ಣು, ಕೆಂಗಣ್ಣು
**ಕರಿ** ಆನೆ, ಕಪ್ಪು; ವಿಷ್ಣು
**ಕರಿಕರ** ಆನೆಯ ಸೊಂಡಿಲು
**ಕರಿಕರೋರು** ಆನೆಯ ಸೊಂಡಿಲಿನಂತಿರುವ ತೊಡೆ
**ಕರಿಕಲ(ಳ)ಭಕೇಸರಿ** ಆನೆಯ ಮರಿಗೆ ಸಿಂಹದಂತಿರುವ
**ಕರಿಕೆ<ಗರಿಕೆ** ಹುಲ್ಲು, ತೃಣ
**ಕರಿಕುಂಭ** ಆನೆಯ ನೆತ್ತಿ
**ಕರಿಕೆ** ಗರಿಕೆ, ಹುಲ್ಲು; ಬೆಳೆಯನ್ನು ಹಾಳು ಮಾಡುವ ಕಳೆ
**ಕರಿಗಿರಿ** ದೇವರಾಯನ ದುರ್ಗ
**ಕರಿಗೊರಳ** ಕಂಠದಲ್ಲಿ ಕಪ್ಪು (ವಿಷ)ಉಳ್ಳವ ಶಿವ; ಆನೆಯ ಮುಖದವ-ವಿನಾಯಕ

Rarest Archive

**ಕರಿಚರ್ಮಾಂಬರ** ಆನೆಯ ಚರ್ಮದ ಬಟ್ಟೆಯುಳ್ಳವ–ಶಿವ

**ಕರಿಜನ್ಮ** ಆನೆಯ ಜನ್ಮ

**ಕರಿಣಿ** ಹೆಣ್ಣಾನೆ

**ಕರಿಪುರ** ಹಸ್ತಿನಾವತಿ

**ಕರಿಮುಖ** ಗಣಪತಿ

**ಕರಿಯಅಜಿನ** ಆನೆಯ ಚರ್ಮ

**ಕರಿಯಸಂಘ** ಆನೆಗಳ ಗುಂಪು

**ಕರಿರಾಜ** ಆನೆಗಳರಾಜ, ಗಜರಾಜ

**ಕರಿರಾಜಯಾತ್ರ** ಗಜೇಂದ್ರನಿಗೆ ಆಶ್ರಯವಿತ್ತವನು; ಆನೆಯ ನಡಿಗೆ ಉಳ್ಳವ

**ಕರಿರೂಪ** ಅಶುಭ ಸ್ವರೂಪ

**ಕರಿವರದ** ಗಜೇಂದ್ರನಿಗೆ ಮೋಕ್ಷವನ್ನು ಕರುಣಿಸಿದ ವಿಷ್ಣು

**ಕರಿವಾರಿಜ** ಕೈ ಎಂಬ ಕಮಲ, ಕರಕಮಲ

**ಕರಿಶಾಬಕ** ಆನೆಯಮರಿ

**ಕರೀರ** ಕುಂಭ

**ಕರು** ಉನ್ನತವಾದ, ಎತ್ತರವಾದ; ಚಿಕ್ಕ ದನ

**ಕರುಣಪಾರಾವಾರ** ಕರುಣಸಾಗರ

**ಕರುಣವಾರಿಧಿ** ಕರುಣಾಸಮುದ್ರ

**ಕರುಣಾಂಬಕ** ಕರುಣಾದೃಷ್ಟಿ

**ಕರುಣಾಕರ** ಕರುಣೆಗೆ ಗಣಿಯಾದವನು

**ಕರುಣಾಪಾಂಗ** ಕರುಣಾದೃಷ್ಟಿ

**ಕರುಣಾಲ** ಕರುಣೆಯುಳ್ಳವ

**ಕರುಣಾಲವಾಲ** ದಯಾಮಯಿ, ರಕ್ಷಕ

**ಕರುಣೆ** ದಯೆ, ಗುಪ್ತವಾದ ಕಾರುಣ್ಯಸಾಗರ, ಆಲಿಂಗಿತವಾದ ಕಾರುಣ್ಯ, ದಯಾಲಿಂಗತನ

**ಕರುಬು** ಹೊಟ್ಟೆಕಿಚ್ಚು ಪಡು

**ಕರುಳು** ದೇಹದ ಒಂದು ಅಂಗ, ಅಂತ್ರ; ಮರುಕ, ಪ್ರೀತಿ

**ಕರೆ** ಹಿಂಡು (ಹಾಲನ್ನು), ಒದಗಿಸು; ದಡ, ತೀರ; ಕೂಗು; ಕಲೆ

**ಕರೆಕರೆ** ಹಿಂಸೆ, ಚಿಂತೆ

**ಕರೆಹ** ಹಿಂಡುವಿಕೆ, ಕರಾವು

**ಕರೋಟಿ** ತಲೆಬುರುಡೆಯಮಾಲೆ; ಆನೆ ಅಥವಾ ಹಸುಗಳನ್ನು ಕಟ್ಟುವ ಸ್ಥಳ

**ಕರೋದ್ಧಿತ** ಕರದಿಂದುದಿಸಿದ

**ಕರ್ಕಟಕಿ ಫಲ** ಕರಬೂಜದ ಹಣ್ಣು

**ಕರ್ಕಡೆ** ದೀವಟಿಗೆ, ಕಕ್ಕಡೆ, ಪಂಜು

**ಕರ್ಕಶ** ಕಠಿಣ, ಗಟ್ಟಿಯಾದ, ಒರಟಾದ

**ಕರ್ಣ** ಹಡಗಿನ ಚುಕ್ಕಾಣಿ; ಕಿವಿ; ಸೂರ್ಯಪುತ್ರ

**ಕರ್ಣಕುಂಡಲ** ಕಿವಿಗಳ ಆಭರಣ

**ಕರ್ಣಜನಕ** ಸೂರ್ಯ

**ಕರ್ಣಧಾರ** ಚುಕ್ಕಾಣಿ ಹಿಡಿದವನು, ನಾವಿಕ, ಅಂಬಿಗ

**ಕರ್ಣರಂಧ್ರ** ಕಿವಿಯ ತೂತು

**ಕರ್ಣಶೂನ್ಯ, ಕರ್ಣಹೀನ** ಕಿವಿಯಿಲ್ಲದವನು; ಹಾವು, ಆದಿಶೇಷ

**ಕರ್ಣಹೀನಸುಶಯ್ಯ** ಶೇಷಶಾಯಿ–ವಿಷ್ಣು

**ಕರ್ಣಾಂತ** ಕಿವಿಯವರೆಗೆ

**ಕರ್ಣಿಕ, ಕರ್ಣಿಕಾ, ಕರ್ಣಿಕೆ** ಕಮಲದ ಮಧ್ಯಭಾಗ /ದೇಟು

**ಕರ್ತ** ಸೃಷ್ಟಿಕರ್ತ, ಕಾರ್ಯಕರ್ತ

**ಕರ್ತಜ** ಕರ್ತೃವಾಗಿರುವ

**ಕರ್ತಾರಸ್ವರ** ವೇದಗಳು

**ಕರ್ತೃ** ದೇವರು; ಮಾಡುವವನು, ಕರ್ಮ ಮಾಡುವವ

**ಕರ್ತೃಕ** ನಿಯಾಮಕ, ಜೀವ

**ಕರ್ತೃತ್ವ** ಮಾಡುವಿಕೆ; ಅಹಂಕಾರ

**ಕರ್ದಮ** ಪಾಪ; ಒಬ್ಬ ಋಷಿ

**ಕರ್ದಮದೇವತೆ** ಕರ್ಮಾಭಿಮಾನಿ ಪುಷ್ಕರ

**ಕರ್ದಮಸುತ** ಕಪಿಲನಾಯಕ

**ಕರ್ನಿಕೆ** ಕನ್ನಿಕೆ, ಕನ್ಯೆ

**ಕರ್ಪಟ, ಕಪ್ಪಡ** ಬಟ್ಟೆ, ವಸ್ತ್ರ

Rarest Archiver

**ಕರ್ಪರ**<**ಖರ್ಪರ** ತಲೆಯೋಡು
**ಕರ್ಬುರ** ಬೂದು; ಚಿನ್ನ; ರಾಕ್ಷಸ
**ಕರ್ಬುರಕಶಿಪು** ಹಿರಣ್ಯಕಶಿಪು
**ಕರ್ಬೊಗೆ** ಕಪ್ಪು ಹೊಗೆ
**ಕರ್ಮ** ಕಾರ್ಯದ ಫಲ; ಧರ್ಮ
**ಕರ್ಮಂದಿ**<**ಕರ್ಮಾಂಧ** ಸಂನ್ಯಾಸಿ
**ಕರ್ಮಕತ್ತಲೆ** ಅವಿದ್ಯಾ ಕರ್ಮದಿಂದಾದ ಅಜ್ಞಾನ
**ಕರ್ಮಜ** ಕಾರ್ಯಕರ್ತ
**ಕರ್ಮಜದೇವತೆಗಳು** 19ನೇ ಕಕ್ಷದ ಕರ್ಮಜರು, ಭಕ್ತಿ ಕರ್ಮದಿಂದ ದೈವತ್ವ ಹೊಂದಿದ ಋಷಿಗಳು–ಮನುಗಳು–ರಾಜರು
**ಕರ್ಮಠ** ಜ್ಞಾನ ಮತ್ತು ಭಕ್ತಿ ಶೂನ್ಯನಾದವನು, ಕರ್ಮವೇ ಪ್ರಧಾನವೆಂದು ಗಣಿಸುವವನು
**ಕರ್ಮತಮಂಧ** ಕರ್ಮದ ಕತ್ತಲಿನಲ್ಲಿರುವವನು
**ಕರ್ಮತ್ರಯ** ಸಂಚಿತ, ಆಗಾಮಿಕ ಮತ್ತು ಪ್ರಾರಬ್ಧಗಳು
**ಕರ್ಮದ್ವಯ** ಪಾಪ, ಪುಣ್ಯ
**ಕರ್ಮಪಾಶ** ಕಾರ್ಯಗಳಿಂದ ಉಂಟಾಗುವ ಬಂಧನ
**ಕರ್ಮಮಾರ್ಗ** ಕರ್ತವ್ಯ ನಿರತನಾಗಿದ್ದೇ ಮೋಕ್ಷ ಪಡೆವ ಮಾರ್ಗ
**ಕರ್ಮಮೋಚನ** ಮಾಡಬೇಕಾದ ಆಚರಣೆಗಳನ್ನು ಬಿಡುವುದು; ಕರ್ಮ ಕಳೆಯುವುದು
**ಕರ್ಮಸಾಕ್ಷಿ** ಎಲ್ಲರೂ ಮಾಡುವ ಕರ್ಮಗಳನ್ನೂ ಪ್ರತ್ಯಕ್ಷವಾಗಿನೋಡುತ್ತಿರುವವ–ಸೂರ್ಯ ನಾರಾಯಣ–ಶ್ರೀಹರಿ
**ಕರ್ಮಹರ** ಕರ್ಮನಾಶ ಮಾಡುವವನು
**ಕರ್ಮಾಂಧ** ನಿತ್ಯ ಕರ್ಮಗಳನ್ನು ಮಾಡದವನು, ನಿತ್ಯಕರ್ಮಗಳಲ್ಲೇ ತೊಡಗಿರುವವನು
**ಕರ್ಮಿ** ಮೋಸಗಾರ
**ಕರ್ಮೇಂದ್ರಿಯಗಳು** ವಾಕ್, ಪಾಣಿ, ಪಾದ, ಪಾಯು, ಉಪಸ್ಥಾ
**ಕರ್ಷ** ಆಕರ್ಷಿಸು; ಉಜ್ಜು, ಒರೆ
**ಕಲ** ತಾಳೆಮರ
**ಕಲಂಕ** ಅಪವಾದ, ದೋಷ, ನಿಂದೆ
**ಕಲಕ** ಬೆರಕೆ, ಮಿಶ್ರಣ
**ಕಲಕಲ** ಗದ್ದಲ, ಚೀರಾಟ
**ಕಲಕೀರ** ಹಂಸ
**ಕಲಕು** ಅಲ್ಲಾಡಿಸು, ಬೆರಸು; ಕೆಸರು
**ಕಲಗಡಗಿ, ಕಲ್ಲಗಡಿಗೆ** ಕಲ್ಲಿನಲ್ಲಿ ತಯಾರಿಸಿದ ಅಡಿಗೆ ಪಾತ್ರೆ
**ಕಲತ್ರ** ಹೆಂಡತಿ
**ಕಲಧೌತಾಂಬರ** ಪೀತಾಂಬರ
**ಕಲಪರಟಿ** ಕಲ್ಲಿನ ಪಾತ್ರೆ, ಗಡಿಗೆ
**ಕಲಭ** ಆನೆ ಮರಿ
**ಕಲಭಾಷಣ** ಪ್ರಿಯವಾದ ಮಾತುಗಳು
**ಕಲಭಾಷೆ** ತೊದಲುನುಡಿ
**ಕಲಮದಾನಿ** ಲೆಕ್ಕಣಿಕೆ (ಕಲಮು) ಇರಿಸುವ ಸಂಚಿ ಅಥವಾ ಪಾತ್ರೆ (ದಾನಿ), ದೌತಿ; ಲೆಕ್ಕ ಬರೆಯುವವ
**ಕಲವಿಂಕ** ಗುಬ್ಬಚ್ಚಿ
**ಕಲಶ** ಮಂಗಳಕಾರ್ಯಗಳಲ್ಲಿ ನೀರು ತುಂಬಿ ಅಲಂಕರಿಸಿದ ಬಿಂದಿಗೆ, ಕೊಡ
**ಕಲಶಕಲಶಪಾಣಿ** ನೀರು ಬಡಿಸುವ ಒಂದು ಕಲಶ; ಅಮೃತಪೂರಿತ ಕಲಶವುಳ್ಳವನು
**ಕಲಶಜ, ಕಲಶೋದ್ಭವ** ಅಗಸ್ತ್ಯಋಷಿ, ದ್ರೋಣ
**ಕಲಸನ್ನ** ಕಲಸಿದ ಅನ್ನ, ಚಿತ್ರಾನ್ನ
**ಕಲಸರಪಳಿ** ಹೊಳೆಯುವ ಸರಪಳಿ
**ಕಲಸೋಗರ** ಬುತ್ತಿ; ಚಿತ್ರಾನ್ನ
**ಕಲಹಭೋಕ್ತ** ನಾರದ
**ಕಲಾಪ** ಗುಂಪು, ಸಮೂಹ; ಜಗಳ; ಕಾರ್ಯ, ಕಾರ್ಯಕ್ರಮ; ಚಂದ್ರ
**ಕಲಿ** ಸೇರು; ವೀರ; ಮಹಾಪಾಪ; ಕಲಿಯುಗದ ಅಭಿಮಾನಿ, ಮನೋಭಿಮಾನಿ ದೈತ್ಯ

Rarest Archive

**ಕಲಿಕಿ** ಕಲ್ಕಿ; ಕೆಟ್ಟ ಮನುಷ್ಯ

**ಕಲಿಕಿತನ** ಕಲಿಯುವುದು; ಕಲ್ಕಿಅವತಾರ

**ಕಲಿತ** ಒಡಗೊಂಡ, ಕೂಡಿದ

**ಕಲಿಮಲ** ಕಲಿಕಾಲದ ದುಷ್ಟ ವಾಸನೆಗಳು, ಕಲಿಯುಗದ ನಿಮಿತ್ತ ಬಂದ ಪಾಪವೆಂಬ ಕಶ್ಮಲ

**ಕಲಿಮಲಾಪಕ** ಪಾಪಪರಿಹಾರಕ, ಮುಖ್ಯಪ್ರಾಣ

**ಕಲಿವರದ** ಗಜೇಂದ್ರನಿಗೆ ವರದನಾದವನು–ಶ್ರೀಹರಿ

**ಕಲಿವಿದಾರಣ** ಕಲ್ಕಿ

**ಕಲಿವ್ಯಾಸಂಗ** ದುರ್ನಡತೆ; ಐಹಿಕ ವಿದ್ಯೆಯ ಕಲಿಕೆ

**ಕಲಿಹನ** ಕಲ್ಕಿ(ವಿಷ್ಣು)–ದುಷ್ಟರನ್ನು ಸಂಹರಿಸುವ ಭಗವದ್ರೂಪ

**ಕಲಿಹನುಮ** ವೀರಹನುಮ

**ಕಲಿಹರ್ತ** ಪಾಪನಾಶ ಮಾಡುವವನು; ಮುಖ್ಯಪ್ರಾಣ; ಕಲಿಯನ್ನು ಕೊಂದವನು–ಕಲ್ಕಿ

**ಕಲುಮಣಿ** ಜಾತಿಯದಲ್ಲದ ಮಣಿ, ಕಲ್ಲು

**ಕಲುಶ** ಪಾಪ, ದೋಷ, ಕೊಳೆ, ಕಲ್ಮಶ, ಪಾತಕ

**ಕಲುಶಕರ್ಮ** ದುಷ್ಕರ್ಮ

**ಕಲುಶನಾಶಿನಿ** ಪಾಪನಾಶಿನಿ, ಗಂಗೆ

**ಕಲುಶನಾಳ** ಪಾಪನಾಳ

**ಕಲುಶವರ್ಜಿತ** ದೋಷವರ್ಜಿತ

**ಕಲುಶವಿಭಂಗ** ಮಾಲಿನ್ಯವನ್ನು ಹೋಗಲಾಡಿಸುವವನು, ಪಾಪಗಳನ್ನು ನಾಶ ಮಾಡುವವನು

**ಕಲುಶಾತ್ಮ** ಪಾಪಿ

**ಕಲುಶಿತ** ಶುದ್ಧವಲ್ಲದ

**ಕಲೆ** ಪೂರ್ಣದ ಒಂದು ಭಾಗ; ಲಕ್ಷಣ, ಗುರುತು

**ಕಲೇವರ** ದೇಹ, ಶರೀರ

**ಕಲೋಚ್ಚಾರ** ಮಧುರ ಧ್ವನಿ

**ಕಲ್ಕಿ** ಶ್ರೀಹರಿಯ ದಶಾವತಾರಗಳಲ್ಲಿ ಒಂದು

**ಕಲ್ಕಿತುರಾಯಿ** ಕಿರೀಟ ವಿಶೇಷ: ಕಲ್ಕಿ ಮತ್ತು ತುರಾಯಿ ಎನ್ನುವ ಲಾವಣಿಯ ಎರಡು ಪ್ರಕಾರಗಳು

**ಕಲ್ಪ** ಬ್ರಹ್ಮನ ಒಂದು ದಿವಸ, ಸಹಸ್ರಯುಗ, ಪ್ರಳಯ: ವೇದದ ಷಡಂಗಗಳಲ್ಲಿ ಒಂದು ಅಂಗ

**ಕಲ್ಪಕಲ್ಪಿತ** ಯುಗಯುಗಗಳನ್ನು ಸೃಜಿಸುವ

**ಕಲ್ಪತರು, ಕಲ್ಪದ್ರುಮ, ಕಲ್ಪಭೂ** ದೇವವೃಕ್ಷ, (ದೇವಲೋಕದಲ್ಲಿರುವ) ಬೇಡಿದುದನ್ನು, ಕಲ್ಪಿಸಿಕೊಂಡಿದುದನ್ನು ತಕ್ಷಣ ನೀಡುವ ವೃಕ್ಷ; ತೆಂಗು

**ಕಲ್ಪೋಕ್ತ** ಶಾಸ್ತ್ರೋಕ್ತ

**ಕಲ್ಮಷ** ಕೊಳೆ, ಪಾಪ, ದೋಷ

**ಕಲ್ಯಾಣ** ಮಂಗಳ

**ಕಲ್ಲನಾರಿಯಮಾಡಿದ** ಅಹಲ್ಯೋದ್ಧಾರ ಮಾಡಿದ ರಾಮ

**ಕಲ್ಲಲಿಟ್ಟರು** ಕಲ್ಲಿನಿಂದ ಹೊಡೆದರು

**ಕಲ್ಲಿ** ಹೆಣಿಕೆಯ ಚೀಲ

**ಕಲ್ಲಿಚೀಲ** ಬುತ್ತಿಯ ಗಂಟು

**ಕಲ್ಲಿನ ಕಣ್ಣಿ** ಕಲ್ಲಿನಿಂದ ಮಾಡಿದ ಹಗ್ಗ

**ಕಲ್ಲಿಬೋನಾ** ಬುತ್ತಿ ಊಟ

**ಕಲ್ಲಿಯಕೂಳು, ಕಲ್ಲಿಯೋಗರ** ಹೆಣಿಗೆ ಚೀಲದಲ್ಲಿ ಕಟ್ಟಿಕೊಂಡು ಹೋಗುವ ಬುತ್ತಿ

**ಕಲ್ಲಿವಾಗುರ** ಹೆಣಿಗೆಚೀಲ

**ಕಲ್ಲು** ಶಿಲೆ, ಉಪಲ

**ಕಲ್ಲುಮಣಿ** ಗೊಟ್ಟೆಗುಣಿಯ ಆಟ, ಹರಳುಗುಣಿ ಆಟ

**ಕಲ್ಲೋಳ<ಕಲ್ಲೋಲ** ಮಹಾತರಂಗ, ಅಲೆಗಳು

**ಕಲ್ಹಾರ** ತಾವರೆ ಜಾತಿಯ ಚಿಕ್ಕ ಹೂವು; ನೈದಿಲೆ

**ಕವಚ** ಹೊದಿಕೆ, ಉಕ್ಕಿನ ಅಂಗಿ

**ಕವಡಿಚೆನ್ನೆ** ಚೆನ್ನೆಮಣೆ ಆಟ, ಕವಡೆಯಿಂದಾಡುವ ಗೊಟ್ಟೆಗುಣಿ ಆಟ

**ಕವಣೆ** ಕಲ್ಲಿನಿಂದ ಬೀಸಿ ಹೊಡೆಯಲು ಮಾಡಿದ ಜಾಳಿಗೆಯ ಸಾಧನ

**ಕವತುಕ<ಕೌತುಕ** ಕುತೂಹಲ, ಆಶ್ಚರ್ಯ

Rarest Archive

**ಕವಲುಬುದ್ಧಿ, ಕವಲುಮತಿ** ಚಂಚಲಬುದ್ಧಿ, ಭಿನ್ನಮನಸ್ಸು, ಇಬ್ಬಂದಿ
**ಕವಳ** ಅನ್ನ, ತುತ್ತು; ತಾಂಬೂಲ
**ಕವಳಿ** ಮೂರ್ಛೆ, ಎಚ್ಚರ ತಪ್ಪುವುದು
**ಕವಾಟ** ಬಾಗಿಲು, ಕದ
**ಕವಿ** ಬ್ರಹ್ಮ; ಋಷಿ, ವಿದ್ವಾಂಸ, ಕೃಷ್ಣವಿಷಯ ವಾದಕಾವ್ಯ ಬರೆವವನು, ದೈತ್ಯರ ಗುರು ಶುಕ್ರಾಚಾರ್ಯ; ಮುತ್ತಿಗೆ ಹಾಕು; ಶುಕ್ರ ಗ್ರಹ; ಪಿತೃ
**ಕವಿಗೇಯ** ಜ್ಞಾನಿಗಳಿಂದ/ಕವಿಗಳಿಂದ ಸ್ತುತ್ಯ ನಾದವನು/ಸಂಸ್ತುತ್ಯಮಾನನು, ಬ್ರಹ್ಮಾದಿ ವಂದ್ಯ-ಶ್ರೀಹರಿ
**ಕವಿಜನಗೇಯ** ಕವಿಗಳು ಯಾರನ್ನು ಹಾಡಿ ಹೊಗಳುವರೋ ಅವನು
**ಕವಿತೆವಾಕ್ಯ** ಕಲ್ಪನೆಯ ಮಾತು
**ಕವಿಭಿರೀಡಿತ** ಜ್ಞಾನಿಗಳಾದ ಬ್ರಹ್ಮಾದಿಗಳಿಂದ ಸ್ತುತ್ಯನಾದ ನಾರಾಯಣ
**ಕವಿಲೆ** ಕಪಿಲೆ, ಆಕಳು
**ಕವುರವ<ಕೌರವ** ಕುರು ವಂಶಕ್ಕೆ ಸೇರಿದವನು
**ಕವೇರಕುವರಿ** ಕಾವೇರಿ
**ಕವೇರಜ** ಬ್ರಹ್ಮ
**ಕವ್ಯ** ಪಿತೃಗಳಿಗೆ ಅರ್ಪಿಸುವ ಯಜ್ಞ; ಪಿತೃಕಾರ್ಯ
**ಕಶ** ಚಾವಟಿ
**ಕಶಿಪು** ಹಾಸಿಗೆ
**ಕಶ್ಯಪನಕಂದ, ಕಶ್ಯಪಸಂಭವ** ಗರುಡ
**ಕಷ್ಟನಿರ್ಧೂಮ** ಕಷ್ಟ ಪರಿಹಾರಕ
**ಕಷ್ಟನಿವಿಷ್ಟ** ದುಃಖದಲ್ಲಿಯೂ ಜೊತೆಗಿರುವ ನಿತ್ಯಸಖ
**ಕಷ್ಟಸೆರೆ** ದುಃಖ ಮತ್ತು ಬಂಧನ
**ಕಸಗೌಡಿ** ಕಸ ಹೊರಲು ನೇಮಿಸಿಕೊಂಡ ಆಳು
**ಕಸರುಕರ್ಮ** ಪ್ರಾರಬ್ಧಕರ್ಮ
**ಕಸೆಗೋಲು** ಚಬಕ, ಬೆತ್ತ
**ಕಸೆಪು** ಹಾಸಿಗೆ
**ಕಸ್ತುರಿಬಟ್ಟು** ಕಸ್ತೂರಿಯಿಂದ ಇಟ್ಟ ತಿಲಕ
**ಕಸ್ತೂರಿತಿಲಕ** ನಾಮದೋಪಾದಿಯಲ್ಲಿ ಇಡುವ ಒಂದು ಬಗೆಯ ಸುವಾಸಿತ/ವಿಶಿಷ್ಟ ತಿಲಕ
**ಕಳ** ರಣರಂಗ
**ಕಳಕಳಿಸು** ಪ್ರಕಾಶಮಾನವಾಗು, ನಗು
**ಕಳಕಾಂಚಿ** ಡಾಬು
**ಕಳತ<ಕಳಿತ** ಪೂರ್ಣ ಹಣ್ಣಾದ
**ಕಳತ್ರ** ಪತ್ನಿ, ಹೆಂಡತಿ
**ಕಳತ್ರದ್ರೋಹಿ** ಹೆಂಡತಿಗೆ ದ್ರೋಹ ಮಾಡುವವನು; ನಳ ಚಕ್ರವರ್ತಿ
**ಕಳಧೌತ** ಚಿನ್ನ, ಬೆಳ್ಳಿ; ಬಿಳಿಬಣ್ಣ
**ಕಳಬಂಟರೈವರು<ಕಳ್ಳಬಂಟ** ಪಂಚೇಂದ್ರಿಯಗಳು
**ಕಳರು** ಭಯಪಡು
**ಕಳಲು** ಮಜ್ಜಿಗೆ, ಅಳೆ, ಮೊಸರು
**ಕಳವಳ** ಚಿಂತೆ, ಚಡಪಡಿಕೆ
**ಕಳವಿಕ್ಕು** ಕಳ್ಳತನ ಹೊರಿಸು
**ಕಳವೆ** ಭತ್ತ; ಅಂಜಿ ಹೇಳುವ ಮಾತು
**ಕಳಶಸಂಭವ, ಕಳಸಜ** ಅಗಸ್ತ್ಯ, ದ್ರೋಣಾಚಾರ್ಯ
**ಕಳಾವಿಶೇಷ** ಕಲೆ, ಬೆಳಕು, ಪ್ರಭೆ
**ಕಳಿತ** ಪೂರ್ಣ ಹಣ್ಣಾದ
**ಕಳಿಯಡಕೆ** ಚೆನ್ನಾಗಿ ಮಾಗಿದ ಅಡಕೆ
**ಕಳೆ** ಕಾಂತಿ, ತೇಜ, ಸ್ವರೂಪ, ಸೌಂದರ್ಯ
**ಕಳೆಮಳೆ** ಕಾಂತಿವೃಷ್ಟಿ
**ಕಳೆವರ, ಕಳೇವರ<ಕಲೇವರ** ಶರೀರ, ದೇಹ
**ಕಳ್ಳಕಪಟ** ಒಳಸಂಚು
**ಕಳ್ಳು** ಮದ್ಯ, ಹೆಂಡ
**ಕಾಂಕ್ಷಾ, ಕಾಂಕ್ಷೆ** ಆಸೆ
**ಕಾಂಗಡಿ** ಚಾವಣಿಯಿಂದ ನೇತು ಬಿಟ್ಟ ಚೌಕಾ ಕಾರದ ತೊಟ್ಟಿಲು
**ಕಾಂಚನ** ಚಿನ್ನ, ಬಂಗಾರ
**ಕಾಂಚನಗಿರಿ** ಸುವರ್ಣಗಿರಿ, ಮೇರು ಪರ್ವತ
**ಕಾಂಚನನಯನ** ಹಿರಣ್ಯಾಕ್ಷ

Rarest Archiver

**ಕಾಂಚನವಿಮಾನ** ಚಿನ್ನದ ವಿಮಾನ ಗೋಪುರ

**ಕಾಂಚನೀಮಾಲಿಕಾ** ಬಂಗಾರದ ಸರ

**ಕಾಂಚಿ** ಡಾಬು

**ಕಾಂಚಿಯದಾಮ** ಡಾಬು ಒಡವೆ, ನಡುಪಟ್ಟಿ, ಉಡದಾರ, ಒಡ್ಯಾಣ

**ಕಾಂಚೀಕಟಿಸ್ಥಾನ** ಉಡುದಾರವಿರುವ ಸೊಂಟದ ಸ್ಥಾನ

**ಕಾಂಡ** ನೀರು; ಗಿಡ ಮರದ ಮಧ್ಯಭಾಗ

**ಕಾಂತಲಜ್ಜೆ** ಪ್ರಿಯಕರನಲ್ಲಿ ನಾಚಿಕೆ

**ಕಾಂತಾರ** ಅಡವಿ, ಕಾಡು

**ಕಾಂತೇಶ** ಕದರುಮಂಡಲಗಿಯ ಹನುಮಂತ

**ಕಾಂತೇಶಪುರ** ಕದರುಮಂಡಲಗಿ

**ಕಾಂಶ<ಕಾಂಸ್ಯ** ಕಂಚು, ಕಂಚಿನ ಪಾತ್ರೆ

**ಕಾಂಶುಕ, ಕಾಶೂಕ** ಕಾಚು, ಖದಿರ, ಕಯ್ರು

**ಕಾಂಸ್ಯಕ** ಕಂಚಿನ ಪಾತ್ರೆ

**ಕಾಕ** ಕ್ಷುಲ್ಲಕ, ನೀಚ; ಕಾಗೆ

**ಕಾಕಧಾವಂತರು** ಆತುರ ಪಡಿಸುವ ವ್ಯಾಪಾರಿಗಳು

**ಕಾಕಪಕ್ಷ** ತಲೆಗೂದಲಿನ ಚಂಡಿಕೆ; ಕಾಗೆಯ ರೆಕ್ಕೆ

**ಕಾಕಬಲಿ** ಕಾಗೆಗೆ ಹಾಕುವ ಹಿಡಿ ಅನ್ನದ ಬಲಿ

**ಕಾಕಬುದ್ಧಿ** ದುಷ್ಟ ಬುದ್ಧಿ

**ಕಾಕರಟನ** ಕಾಗೆಗಳ ಕೂಗಾಟ

**ಕಾಕರಣ** ನೀಚ ಜನರ ವಲಯ

**ಕಾಕಲಾಪ** ಹರಟೆ

**ಕಾಕವಿಷ್ಟ** ಕಾಗೆಯ ಮಲ

**ಕಾಕಿಯ** ಹೆಣ್ಣು ಕಾಗೆಯ ಸ್ವಭಾವದವಳು

**ಕಾಕು** ಕಿಡಿಗೇಡಿತನ; ವ್ಯಂಗ್ಯ, ಕೊಂಕು, ಕೀಳು ಮಾತು; ನಾಶ, ಕೆಟ್ಟ

**ಕಾಕುಗೊಳಿಸು** ನೀಚನನ್ನಾಗಿಸು; ನಿವಾರಿಸು

**ಕಾಕುಜನ** ದುಷ್ಟಜನ

**ಕಾಕುದೇವತೆ** ಕ್ಷುದ್ರ ದೇವತೆ

**ಕಾಕುಪೋಕ** ದುಷ್ಟ, ಕೆಟ್ಟಜನ

**ಕಾಕುಪೋಕು** ಹುಡುಗಾಟಿಕೆ

**ಕಾಕುಬುದ್ಧಿ, ಕಾಕುಮತಿ** ನೀಚಬುದ್ಧಿ, ದುರ್ಬುಧ್ಧಿ

**ಕಾಕುಮಾಡು** ತೊಂದರೆ ಕೊಡು, ನಿರ್ಲಕ್ಷಿಸು

**ಕಾಕುಸ್ಥ** ಕಾಕುಸ್ಥ ವಂಶದಲ್ಲಿ ಜನಿಸಿದವನು–ರಾಮ

**ಕಾಕುಸ್ಥತಿಲಕ** ಕಾಕುಸ್ಥ ವಂಶಕ್ಕೆ ತಿಲಕಪ್ರಾಯ ನಾದವನು–ರಾಮ

**ಕಾಕುಸ್ಥಾನ್ವಯ** ಕಾಕುಸ್ಥ ವಂಶದಲ್ಲಿ ಹುಟ್ಟಿದ ರಾಮ, ಲಕ್ಷ್ಮಣ ಮುಂತಾದವರು

**ಕಾಕೋದರ** ಹಾವು, ಸರ್ಪ

**ಕಾಕೋದರಗಿರಿ** ಶೇಷಾಚಲ, ತಿರುಪತಿ

**ಕಾಕೋದರನಯ್ಯ** ಶೇಷನ ಅಯ್ಯ–ಅಧಿಪತಿ, ಶೇಷಶಾಯಿ–ವಿಷ್ಣು

**ಕಾಕೋದರಾಳಿಪತಿ** ಆದಿಶೇಷ

**ಕಾಕೋಲ** ಹಾವನ್ನು ಕೊರಳ ಒಡವೆಯಾಗಿ ಉಳ್ಳವನು–ಶಿವ

**ಕಾಕೋಲಕಂಧರ** ಸರ್ಪ ಅಥವಾ ವಿಷವನ್ನು ಧರಿಸಿದವ–ಶಿವ

**ಕಾಗದ** ಬರೆಯಲು ಉಪಯೋಗಿಸುವ ಹಾಳೆ; ಆದೇಶ, ಶಾಸ್ತ್ರ, ಶಂಸನ, ಶಾಸನ

**ಕಾಗಿ(ಗೆ)ನೆಲೆ** ಕನಕದಾಸರ ಸಾಧನಾ ಸ್ಥಳ, ಹಾವೇರಿಯ ನೈಋುತ್ಯಕ್ಕೆ ಹತ್ತು ಮೈಲು ದೂರದಲ್ಲಿದೆ

**ಕಾಗಿಕೂಗಿ** ಕಾಗೆಗೂಗೆ, ಚಂಡಾಲ ಪಕ್ಷಿಗಳು

**ಕಾಜು** ಗಾಜು

**ಕಾಟ** ತೊಂದರೆ; ಕಿರಾತ ದೇವತೆ

**ಕಾಟದೆಮ್ಮೆ** ಕಾಡೆಮ್ಮೆ

**ಕಾಟಿ** ಜೋಳದ ಅಥವಾ ರಾಗಿಯ ಗಂಜಿ, ಅನ್ನ, ಅಂಬಲಿ; ಕಾಡುಕೋಣ

**ಕಾಟಿನವ, ಕಾಟೀನವ** ಪೋಲಿತಿರುಗುವವ, ಕೋಲಿನವ; ಬೇಡ

**ಕಾಟು** ಕಾಡುದೇವತೆ; ಪೋಲಿತಿರುಗುವವ

**ಕಾಡು** ಅರಣ್ಯ; ಒತ್ತಾಯಮಾಡು, ಹಿಂಸಿಸು

Rarest Archiver

**ಕಾಡುದಾಡೆ** ಕಪ್ಪು ಬಣ್ಣದ ಹಲ್ಲು, ಕೊಂಕಾದ ಕೋರೆ ಹಲ್ಲು
**ಕಾಣದಸೂರ್ಯ** ಉದಯವಾಗದ ಸೂರ್ಯ
**ಕಾಣಬಾರದ ವಸ್ತು** ಕಾಣಲುಬಾರದ, ಇಂದ್ರಿಯ ಗೋಚರವಲ್ಲದ
**ಕಾಣಾಚಿ** ಉಂಬಳಿ, ಇನಾಮು, ಹಿರಿಯರಿಂದ ಬರುವ ಸೊತ್ತು, ದ್ರವ್ಯ
**ಕಾಣಿ** ಒಂದು ಚಿಕ್ಕ ನಾಣ್ಯ, ದುಡ್ಡು, ಕಾಣಿಕೆ, ಆಸ್ತಿ
**ಕಾಣಿಕೆ** ನೋಟ; ದಕ್ಷಿಣೆ
**ಕಾಣಿಲಾಭ** ಒಂದು ಕಾಸಿನ ಲಾಭ
**ಕಾತರಿ** ಕಾತರ; ಕಾಯಿಯ ಹೆಸರು
**ಕಾತರಿಸು** ತವಕಗೊಳ್ಳು
**ಕಾತು** ಕಾಯಿಬಿಟ್ಟು
**ಕಾತ್ಯಾಯಿನಿ** ಪಾರ್ವತಿ
**ಕಾದಂಬಿನಿ** ಮೋಡ, ಮೇಘಮಾಲೆ
**ಕಾದಲ** ಪ್ರಿಯ
**ಕಾದಾರಿದ** ಕಾಯ್ದು ಆರಿದ
**ಕಾದು** ಹೋರಾಟ, ಯುದ್ಧ
**ಕಾದ್ರವೇಯ<ಕದ್ರುವೇಯ** ಕದ್ರುವಿನ ಮಗನಾದ ಸರ್ಪರಾಜ
**ಕಾದ್ರವೇಯಶಯನ** ಕದ್ರುವಿನ ಮಗನಾದ ಸರ್ಪದ ಮೇಲೆ ಪವಡಿಸಿದವನು–ವಿಷ್ಣು
**ಕಾನನ** ಅಡವಿ
**ಕಾನನಚರ** ಋಷಿಗಳು; ಬೇಡ, ಬೇಟೆಗಾರ
**ಕಾನೀನ** ಕನ್ಯೆಯಮಗ, ಕರ್ಣ, ವ್ಯಾಸ
**ಕಾನು** ಕಾಡು
**ಕಾಪಥ** ಕೆಟ್ಟದಾರಿ, ಕಷ್ಟಕರವಾದ ಮಾರ್ಗ
**ಕಾಪಿಡು** ಕಾವಲನ್ನು ಇಡು
**ಕಾಪು** ಕಾವಲು
**ಕಾಪುರುಷ** ಹೀನ ಮನುಷ್ಯ, ಕೆಟ್ಟ ಮನುಷ್ಯ, ನೀಚ
**ಕಾಬಾಯ** ನಿಲುವಂಗಿ, ಕಸೆಅಂಗಿ
**ಕಾಮ** ಮನ್ಮಥ; ಇಚ್ಛೆ, ಬಯಕೆ
**ಕಾಮಚಾರಜ** ಅನಿರ್ಬಂಧಿತ ಸಂಚಾರ ಶಕ್ತಿಯುಳ್ಳ ಪ್ರದ್ಯುಮ್ನನ ಮಗ ಅನಿರುದ್ಧ
**ಕಾಮಜನಕ** ಮನ್ಮಥನ ತಂದೆ–ವಿಷ್ಣು
**ಕಾಮದ** ಬಯಸಿದ್ದನ್ನು ನೀಡುವವನು–ಶ್ರೀಹರಿ
**ಕಾಮಧೇನು** ಬಯಸಿದ್ದನ್ನು ಕೊಡುವ ದೇವ ಲೋಕದ ಹಸು, ಆಕಳು
**ಕಾಮನಯ್ಯ** ಶ್ರೀಹರಿ
**ಕಾಮನಾ, ಕಾಮನೆ** ಇಚ್ಛೆ
**ಕಾಮಪಾಲ** ಕಾಮಧೇನುವಿನ ರಕ್ಷಕ–ಪರಶುರಾಮ
**ಕಾಮಪಿತ** ಕಾಮನ ತಂದೆ–ವಿಷ್ಣು
**ಕಾಮಲ** ಇಚ್ಛೆಯುಳ್ಳ, ಬಯಸಿದ
**ಕಾಮವಿಲ್ಲದ** ಫಲೇಚ್ಛಾರಹಿತ, ನಿಷ್ಕಾಮ
**ಕಾಮಾಕ್ಷಿ** ಪಾರ್ವತಿ
**ಕಾಮಾದಿ** ಅರಿಷಡ್ವರ್ಗಗಳು
**ಕಾಮಾರಿ** ಶಿವ
**ಕಾಮಿತ** ಬಯಸಿದ, ಅಪೇಕ್ಷಿಸಿದ
**ಕಾಮಿತದಾತೆ** ಬೇಡಿದ್ದನ್ನು ಕೊಡುವವಳು–ಲಕ್ಷ್ಮಿ
**ಕಾಮಿತಪ್ರದ** ಇಷ್ಟಾರ್ಥ ಕೊಡುವವನು–ವಿಷ್ಣು
**ಕಾಮಿತಾರ್ಥ** ಬೇಡಿದ ಇಷ್ಟಾರ್ಥ, ಮೋಕ್ಷ
**ಕಾಮಿನಿ** ಸ್ತ್ರೀ
**ಕಾಮಿನೀಚೋರ** ಹೆಂಗಸನ್ನು ಕದ್ದವನು, ರಾವಣ
**ಕಾಮುಕಭಕ್ತಿ** ಫಲಾಪೇಕ್ಷೆಯುಳ್ಳ ಭಕ್ತಿ
**ಕಾಮ್ನಪ್ಪ** ಮನ್ಮಥನ ತಂದೆ–ವಿಷ್ಣು
**ಕಾಮ್ಯ** ಮನೋರಥ, ಬಯಸಿದ, ಇಷ್ಟಾರ್ಥ, ಐಹಿಕ
**ಕಾಮ್ಯಕರ್ಮ** ವಿಷಯಾಭಿಲಾಷೆಯಿಂದ ಮಾಡುವ ಕೆಲಸಗಳು, ಫಲಾಪೇಕ್ಷೆಯಿಂದ ಮಾಡುವ ಕರ್ಮ
**ಕಾಮ್ಯಯಜ್ಞ** ಪ್ರಯೋಜನಕ್ಕಾಗಿ ಮಾಡಿದ ಯಜ್ಞ
**ಕಾಯ** ದೇಹ, ಶರೀರ
**ಕಾಯಜ** ಮನ್ಮಥ; ಮಗ
**ಕಾಯಜಜನಕ, ಕಾಯಜನಯ್ಯ** ಮನ್ಮಥನ ತಂದೆ–ವಿಷ್ಣು

Rarest Archiver

**ಕಾಯನಿರ್ಮಲಿನ** ಶರೀರದ ಶುದ್ಧಿ
**ಕಾಯಸಲ್ಲ** ಕಾಯುವುದು ಬೇಡ, ನೀಚರನ್ನು ಯಾಚಿಸದಿರು
**ಕಾಯಸೌಖ್ಯ** ದೇಹಸುಖ
**ಕಾಯಾಸ** ಊಹೆ, ಅಂದಾಜು
**ಕಾಯ್ವ** ಕಾಯುವ, ಕಾಪಾಡುವ
**ಕಾರಂಡ** ಒಂದು ಬಗೆಯ ನೀರುಹಕ್ಕಿ
**ಕಾರಕಭ್ರಮ** ಎಲ್ಲವೂ ತನ್ನ ಆಧೀನವೆಂಬ ಭ್ರಾಂತಿ
**ಕಾರಚರ್ವಣೆ** ಕಾರ ತಿನ್ನುವವಳು, ಬಾಣಂತಿ
**ಕಾರಣ** ಮೂಲ ಕಾರಣ, ಸ್ವತಂತ್ರ ಕಾರಣ
**ಕಾರಣಾತ್ಮಕ** ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣನಾದವನು
**ಕಾರಣಾರ್ಥ** ಶುಭಕಾರ್ಯ
**ಕಾರಣಿ** ಕಾವಿಯಲ್ಲಿ ಗೋಡೆಯ ಕೆಳಭಾಗದಲ್ಲಿ ಬರೆಯುವ ಗೆರೆ
**ಕಾರಣಿಕ** ಅವತಾರ ಪುರುಷ, ಮಹಿಮಾಪುರುಷ; ಪರೀಕ್ಷಕ
**ಕಾರುಕ** ಶಿಲ್ಪಿ, ಕೈ ಕೆಲಸಗಾರ
**ಕಾರುಕನ ತಿತ್ತಿ** ಕೈಕೆಲಸಗಾರನ ತಿದಿ; ಕಮ್ಮಾರನು ಬಳಸುವ ಚರ್ಮದ ಗಾಳಿ ಯಂತ್ರ
**ಕಾರುಕುರುಳು** ಕಪ್ಪುಕುರುಳು, ಕಪ್ಪಾದ ಕೂದಲು
**ಕಾರುಣ್ಯಸಿಂಧು** ಕರುಣಾಸಮುದ್ರ
**ಕಾರೊಡಲ** ಕೃಷ್ಣ
**ಕಾರೊಡೆಯ** ಮಳೆಯ ದೇವತೆ, ಇಂದ್ರ
**ಕಾರ್ಗಾಲ** ಮಳೆಗಾಲ
**ಕಾರ್ತಸ್ವರ** ಬಂಗಾರ
**ಕಾರ್ತಿಕೇಯ** ಸುಬ್ರಹ್ಮಣ್ಯ
**ಕಾದ್ರ್ರವೇಯ** ಕದ್ರುವಿನ ಮಗನಾದ ಸರ್ಪ, ಶೇಷ
**ಕಾದ್ರ್ರವೇಯಭೂಷಣ** ಸರ್ಪಭೂಷಣ–ಶಿವ
**ಕಾರ್ಪಣ್ಯ** ಕ್ಷುದ್ರಮನಸ್ಸು; ನಾಚಿಕೆ
**ಕಾರ್ಪರ· ಕೊಪ್ಪರ** ನರಸಿಂಹ ಕ್ಷೇತ್ರ
**ಕಾರ್ಪಾಸ** ಬೀಜ ಸಹಿತ ಹತ್ತಿ
**ಕಾರ್ಬೊಗೆ** ಕಪ್ಪಾದ ಹೊಗೆ
**ಕಾರ್ಮುಕ** ಬಿಲ್ಲು
**ಕಾಲ** ಸಮಯ, ಯಮ; ಕಪ್ಪುಬಣ್ಣ; ವಿಷ್ಣು
**ಕಾಲಕರ್ಮ** ಸಾವಿನಕಾಲ ಮತ್ತು ಹಣೆಬರಹ
**ಕಾಲಕಾಲ** ಜನ್ಮಜನ್ಮಾಂತರ; ನರಸಿಂಹ, ಶಿವ
**ಕಾಲಕಾಲಸಖ** ಬುದ್ಧರೂಪಿ ಭಗವಂತ
**ಕಾಲಗಾಣದ** ಮೊದಲಿಲ್ಲದ, ಅನಾದಿಯಾದ
**ಕಾಲಘಳಿಗೆ** ಸಾಯುವ ಗಳಿಗೆ; ಗಳಿಗೆ(ಇಪ್ಪತ್ತನಾಲ್ಕು ನಿಮಿಷ)
**ಕಾಲತ್ರಯ** ಮೂರು ಕಾಲಗಳು– ಭೂತ, ವರ್ತಮಾನ, ಭವಿಷ್ಯತ್
**ಕಾಲನದೂತ, ಕಾಲನವ** ಯಮದೂತ
**ಕಾಲನಿವರ್ತಕ** ಕಾಲವನ್ನು ನಿವೃತ್ತಿ ಪಡಿಸುವವ– ಶ್ರೀಹರಿ
**ಕಾಲನೇಮಿ** ಅಹಂಕಾರಮಾನಿ ದೈತ್ಯ
**ಕಾಲನ್ನಪುರ** ನರಕ
**ಕಾಲಪಾಶ** ಯಮಪಾಶ
**ಕಾಲಪುರುಷ** ಕಲಿಪುರುಷ; ಯಮ
**ಕಾಲಪ್ರವರ್ತಕ** ಕಾಲವನ್ನು ನಡೆಸತಕ್ಕವನು– ಶಿಂಶುಮಾರರೂಪಿ ಶ್ರೀಹರಿ
**ಕಾಲಬಂಟ** ಯಮದೂತ
**ಕಾಲಮೂರ್ತಿ** ಕಾಲಸ್ವರೂಪ–ಶ್ರೀಹರಿ
**ಕಾಲಮೊದಲು** ಈ ಮೊದಲು; ಸಾವಿನ ಮೊದಲು
**ಕಾಲಲವ** ಅತ್ಯಲ್ಪ ವೇಳೆ, ಸ್ವಲ್ಪ ಸಮಯ
**ಕಾಲಹತ್ಯ** ಕಾಲಾಗ್ನಿ, ಶಿವ
**ಕಾಲಹೆಡೆ** ಆದಿಶೇಷನ ಹೆಡೆ
**ಕಾಲಾಂತಕ** ಯಮನಿಗೆ ಮೃತ್ಯುವಾದವನು (ಮೃತ್ಯುನಾಶಕ), ನರಸಿಂಹ, ಶಿವ
**ಕಾಲಾತೀತ** ಕಾಲವನ್ನು ದಾಟಿದವ–ಶ್ರೀಹರಿ
**ಕಾಲಾರ್ಚಿತ** ಕಾಲನಾಮಕ ಬ್ರಹ್ಮ–ವಾಯು–ರುದ್ರಾದಿಗಳಿಂದ ಸೇವಿತನಾದ ಶ್ರೀಹರಿ

Rarest Archiver

**ಕಾಲಾಹಿವೇಣಿ** ಕಾಳಸರ್ಪದಂತೆ ಜಡೆಯುಳ್ಳವಳು, ನಾಗವೇಣಿ

**ಕಾಲಾಹ್ವಯ** ಸರ್ವ ಸಂಹಾರಕನಾದುದರಿಂದ ಕಾಲನೆನಿಸಿದವನು–ವಿಷ್ಣು

**ಕಾಲಿಂದಿ** ಯಮುನಾ ನದಿ

**ಕಾಲೀಯಮರ್ದನ** ಕಾಳಿಂಗ ಸರ್ಪವನ್ನು ಕೊಂದವನು–ಕೃಷ್ಣ

**ಕಾಲು** ಪಾದ, ಅಂಘ್ರಿ; ಮೂಲಾಧಾರ ಚಕ್ರ

**ಕಾಲುಕೆದರು** ಜಗಳಮಾಡು, ನೆಪಮಾಡು

**ಕಾಲುಗಗ್ಗರಿಪೆಂಡೆಯ** ಕಾಲಿಗೆ ಹಾಕಿಕೊಳ್ಳುವ ಬಿರುದಾವಳಿಯ ಕಡಗ ಮತ್ತು ಅಂದುಗೆಗಳು

**ಕಾಲುರಹಿತ** ಮತ್ಸ್ಯ, ಮೀನು, ಹಾವು

**ಕಾಲುಹೊಳೆ** ನಡೆದು ದಾಟಲು ಬರುವ ಹೊಳೆಯಜಾಗ

**ಕಾಲೋತ್ಪಾದಕ** ಕಾಲವನ್ನುಂಟು ಮಾಡುವವ–ಶ್ರೀಹರಿ

**ಕಾಲ್ನಿಗಳ** ಕಾಲಿಗ ಹಾಕುವ ಸರಪಣಿ

**ಕಾವ** ಕಾಮ

**ಕಾವಡಿ** ಎರಡು ತುದಿಗಳಲ್ಲೂ ಭಾರ ಎತ್ತುವುದಕ್ಕೆ ಅನುಕೂಲವಾದ ಹೆಗಲಮೇಲೆ ಹೊತ್ತು ತರುವ ಬಿದುರಿನ ಗಣೆ, ಕಂಬಿ ಅಥವಾ ಕೋಲು

**ಕಾವನಯ್ಯ** ಮನ್ಮಥನ ತಂದೆ–ವಿಷ್ಣು

**ಕಾವರದಾಳಿ** ತತ್ತ್ವಾಭಿಮಾನಿ ದೇವತೆಗಳ ದಾಳಿ

**ಕಾವಲ** ಕತ್ತಲೆ, ಕಾವಳ

**ಕಾವಲಿ** ಕಾಲುವೆ

**ಕಾವಲಿಗರೈವರು** ಪಂಚೇಂದ್ರಿಯಗಳು

**ಕಾವಲು** ಸೆರೆಮನೆ, ಕಾಯುವಿಕೆ; ರಕ್ಷಿಸುವಿಕೆ

**ಕಾವಳ** ಅಂಧಕಾರ, ಕತ್ತಲೆ, ಮಂಜು

**ಕಾವೇರಿಮಧ್ಯ** ಶ್ರೀರಂಗಪಟ್ಟಣ, ಶ್ರೀರಂಗ, ಮಧ್ಯರಂಗ

**ಕಾಶ** ಪ್ರಕಾಶ; ಜೊಂಡು ಹುಲ್ಲು

**ಕಾಶಿ** ಕಾಶಿಕ್ಷೇತ್ರ; ಕಾಸಿ–ಮುಷ್ಟಿ, ಅಂದರೆ ತನ್ನ ತೋಳಿನಲ್ಲಿನ ಬಲವನ್ನುತೋರಿಸುವುದು; ಹೊಳಪು, ಕಾಣಿಸಿಕೊಳ್ಳುವುದು

**ಕಾಶೀಜಾಧವ** ಕಾಶೀರಾಜನ ಮಗಳು ಕಾಳಿಯ ಗಂಡ, ವಾಯುದೇವರು

**ಕಾಶೀಬಿಂದುಮಾಧವ** ವಿಷ್ಣು

**ಕಾಶೀಶ** ಶಿವ

**ಕಾಶ್ಯಪಿ** ಸೂರ್ಯ ಸಾರಥಿ ಅರುಣ; ಭೂಮಿ

**ಕಾಷಾಯಾಂಬರ** ಕಾವಿಬಟ್ಟೆ, ಕೆಂಪು ಬಟ್ಟೆ

**ಕಾಷ್ಟಭುಕ್‌ಜ್ವಾಲೆ** ಬೆಂಕಿಯ ಜ್ವಾಲೆ

**ಕಾಷ್ಠ** ಕಟ್ಟಿಗೆ, ಕಡ್ಡಿ, ಹೋಮದ ಕಡ್ಡಿಗಳು; ಅರಣಿ

**ಕಾಸ** ಕೆಮ್ಮು

**ಕಾಸಶ್ವಾಸ** ದಮ್ಮುರೋಗ, ಗೂರಲು ರೋಗ

**ಕಾಸಾರ** ಕೊಳ, ಪುಷ್ಕರಣಿ

**ಕಾಸು** ಹಣ, ನಾಣ್ಯ; ಬಿಸಿ ಮಾಡು

**ಕಾಸುವೀಸ** ಸಣ್ಣಮೌಲ್ಯದ ಹಣ

**ಕಾಸೆ** ಕಚ್ಚೆಪಂಚೆ; ಕೆಮ್ಮು

**ಕಾಸೋಸಿ**<ಕಸಿವಿಸಿ ಸಂಕಟ

**ಕಾಸ್ತಾರ** ಕುದುರೆ ಸವಾರ

**ಕಾಹುರ** ಆವೇಶ, ಸೊಕ್ಕು, ಕೋಪ

**ಕಾಳ** ಕತ್ತಲೆ, ಕಪ್ಪು

**ಕಾಳಂಜಿ** ಪನ್ನೀರುದಾನಿ; ಅಗಲಬಾಯಿಯ ಪಾತ್ರೆ, ಉಗುಳುವ ಪಾತ್ರೆ(ಪೀಕದಾನಿ)

**ಕಾಳಕೂಟ** ಕಾಲಕೂಟ, ಘೋರವಿಷ

**ಕಾಳಗ** ಯುದ್ಧ

**ಕಾಳಗದಮನ** ಜಗಳಗಂಟ ಮನಸ್ಸು

**ಕಾಳಪುರುಷ** ಕಾಲಪುರುಷ, ಕಲಿಪುರುಷ

**ಕಾಳಬೆಳದಿಂಗಳು<ಕಾಡಬೆಳದಿಂಗಳು** ಕಾಡಿನ ಬೆಳದಿಂಗಳು; ವ್ಯರ್ಥವಾದ ಬೆಳದಿಂಗಳು

**ಕಾಳಮೂಳ** ಮೂರ್ಖ

**ಕಾಳವ್ಯಾಳ** ಕಾಳಿಂಗಸರ್ಪ, ವಿಷಸರ್ಪ

**ಕಾಳವ್ಯಾಳ್ಯ** ವ್ಯರ್ಥವಾದಕಾಲ

Rarest Archiver

**ಕಾಳಾಗು** ಕಂಗೆಡು

**ಕಾಳಾಹಿ** ಕಾಳಸರ್ಪ, ಕಾಳಿಂಗಸರ್ಪ

**ಕಾಳಾಹಿವೇಣಿ** ಕಾಳಸರ್ಪದಂತೆ ಕಪ್ಪಾದ ಕೂದಲುಳ್ಳವಳು

**ಕಾಳಿ** ಕಾಶಿರಾಜನ ಮಗಳು (ಭಾರತಿಯ ಮತ್ತೊಂದು ಅವತಾರ-ಭೀಮಸೇನನ ಪತ್ನಿ)

**ಕಾಳಿಂಗಭಂಗ** ಕಾಳೀಯ ಸರ್ಪವನ್ನು ಸೋಲಿಸಿದವನು-ಕೃಷ್ಣ

**ಕಾಳಿಂಗಮರ್ದನ** ಕೃಷ್ಣ

**ಕಾಳಿಂದಿ** ಯಮುನೆ

**ಕಾಳಿಂದೀಕೂಲ** ಯಮುನಾ ನದಿಯ ದಂಡೆ

**ಕಾಳಿಂದೀಕೂಲವನಕಂಠೀರವ** ಯಮುನಾ ನದಿಯ ತೀರದ ಅರಣ್ಯದಲ್ಲಿ ಸಂಚರಿಸುವ ಸಿಂಹ; ಯಮುನಾತೀರವಿಹಾರಿ-ಕೃಷ್ಣ

**ಕಾಳು** ಕತ್ತಲೆ; ಕೇಡು, ವ್ಯರ್ಥ

**ಕಾಳುಮಾಡು** ಕೇಡು ಮಾಡು, ಹಾಳು ಮಾಡು

**ಕಾಳೆ, ಕಾಳೆಯ** ಕಹಳೆ, ಒಂದು ಬಗೆಯ ವಾದ್ಯ

**ಕಾಳೆ<ಕಹಳೆ** ಒಂದು ಬಗೆಯ ವಾದ್ಯ

**ಕಾಳೋದರ** ಕಾಗೆ

**ಕಾಳೋರಗ** ಭಯಂಕರ ವಿಷವುಳ್ಳ ಕೃಷ್ಣಸರ್ಪ, ಕಾಳಿಂಗ ಸರ್ಪ

**ಕಿಂಕರ** ಸೇವಕ, ಹರಿಭಕ್ತ

**ಕಿಂಕಾಪು** ಚಿನ್ನದ ಎಳೆ ಸೇರಿಸಿ ನೆಯ್ದ ರೇಶ್ಮೆ ಬಟ್ಟೆ, ಜರತಾರಿ ಬಟ್ಟೆ

**ಕಿಂಕಿಣಿ** ಗೆಜ್ಜೆ

**ಕಿಂಚ, ಕಿಂಚಿತ್** ಅಲ್ಪ, ಸ್ವಲ್ಪ, ಕೊಂಚ

**ಕಿಂಜಲ್ಕ** ಹೂವಿನ ಕುಸುರು

**ಕಿಂಪುರುಷ** ಮನುಷ್ಯ ಶರೀರವನ್ನುಳ್ಳ ಒಂದು ದೇವತೆ, ಕಿನ್ನರ; ಅಗ್ನೀಂಧ್ರ ರಾಜನ ಮಕ್ಕಳಲ್ಲೊಬ್ಬ

**ಕಿಂಪುರುಷಖಂಡ** ಹಿಮಾಲಯದ ಉತ್ತರ ಭಾಗದಲ್ಲಿದೆ, ಇಲ್ಲಿ ಚಿರಂಜೀವಿಯಾದ ಹನುಮಂತನು ಇರುವನೆಂದು ಪುರಾಣಗಳು ಹೇಳುತ್ತವೆ

**ಕಿಂಶುಕ** ಮುತ್ತುಗದ ಮರ

**ಕಿಕ್ಕಿರಿ** ಒತ್ತಾಗಿ ಸೇರು

**ಕಿಚ್ಚು** ಅಗ್ನಿ

**ಕಿಟಿ** ವರಾಹ, ಸೂಕರ, ಕಾಡುಹಂದಿ

**ಕಿಟಿಜೆ** ತುಂಗಭದ್ರೆ

**ಕಿಟಿರದಭವ** ವರಾಹರೂಪಿ ಭಗವಂತನ ಹಲ್ಲಿನಿಂದ ಹುಟ್ಟಿದ ತುಂಗಭದ್ರಾ ನದಿ

**ಕಿಟ್ಟ** ತುಕ್ಕು, ಕೊಳೆ; ಅಯೋಗ್ಯಕರ್ಮ

**ಕಿಟ್ಟಗಟ್ಟು** ತುಕ್ಕುಹಿಡಿ

**ಕಿತವ** ವಂಚಕ, ಮೋಸಗಾರ, ಸುಳ್ಳುಗಾರ

**ಕಿನ್ನರ** ದೇವತೆಗಳ ಒಂದುವರ್ಗ, ಕುಬೇರನ ಪ್ರಜೆ, ಮನುಷ್ಯ ದೇಹ-ಕುದುರೆಯ ಮುಖವುಳ್ಳ ದೇವತೆ, ವರುಣನ ಭೃತ್ಯಗಣ, ಕಿಂಪುರುಷ

**ಕಿನ್ನರಿ** ಒಂದು ತಂತೀವಾದ್ಯ

**ಕಿಮ್ಮೀರ, ಕಿರ್ಮೀರ** ಮಿಶ್ರವರ್ಣ; ಜಲಾಭಿಮಾನಿ ದೈತ್ಯ, ಬಕಾಸುರನ ತಮ್ಮ

**ಕಿರ** ಹಂದಿ

**ಕಿರಾತ** ಬೇಡ

**ಕಿರಿಡೊಳ್ಳಿನುದರ** ಬೊಜ್ಜುಳ್ಳ ಹೊಟ್ಟೆ; ಗಣಪತಿ

**ಕಿರಿಪಿಲ್ಲಿ** ಚಿಕ್ಕ ಪಿಲ್ಲಿ, ಕಾಲುಂಗುರದ ಪ್ರಭೇದ

**ಕಿರಿಯಯ್ಯ** ಚಿಕ್ಕಪ್ಪ

**ಕಿರೀಟಿ** ಅರ್ಜುನ

**ಕಿರೀಟಿಸಖ** ಕೃಷ್ಣ

**ಕಿರುನುಡಿ** ಸಣ್ಣಮಾತು, ನಿಂದೆಮಾತು, ಅಸಮಾಧಾನದಮಾತು

**ಕಿರುಬೆವರೋದಕ** ಸಣ್ಣ ಬೆವರು ಹನಿ

**ಕಿಲ್ಬಿಷ, ಕಿಲ್ಮಿಷ** ಕೊಳೆ, ಕಲಂಕ, ಕಳಂಕ; ಮೋಸ; ವಿಷ; ಪಾಪ, ಅಪರಾಧ

**ಕಿಲ್ಲೆ** ಕೋಟೆ, ದುರ್ಗ

Rarest Archiver

**ಕಿಳ್ಳೆಯೊಳಗೆ ಏಳು ಚರಣವ** ಅವಿದ್ಯೆಯ ಏಳು ಪ್ರಕಾರಗಳು

**ಕಿವಿಯೂದು** ಕರ್ಣೋಪದೇಶಮಾಡು, ಮೂಲ ಮಂತ್ರೋಪದೇಶವನ್ನು ಕೊಡು

**ಕಿಸರು** ಅಸಹ್ಯ, ಮತ್ಸರ, ಕೋಪ; ತಾಮ್ರ ಕೆಂಪುಬಣ್ಣ; ಮತ್ಸರದ ದೃಷ್ಟಿ ದೋಷ

**ಕಿಸಲಯ** ಚಿಗುರು

**ಕಿಸು** ಕೆಂಪು, ತಾಮ್ರ; ಪದ್ಮರಾಗ; ಗಟ್ಟಿ

**ಕಿಸುಕದರಿವೆ** ಕೆಂಪು ಬಟ್ಟೆ

**ಕಿಸುಕೆಲೆ** ಗಟ್ಟಿಯಾಗಿ ಅರಚು, ಅಬ್ಬರಿಸು

**ಕಿಸುರು** ಕೆಟ್ಟ ಕಣ್ಣು, ದೃಷ್ಟಿದೋಷ

**ಕೀಚಕ** ವಿರಾಟರಾಜನ ಮೈದುನ

**ಕೀಚಕಾರಿ** ಭೀಮ

**ಕೀಚಕಾರಿಗೀಶ** ಭೀಮನ ಒಡೆಯ–ಕೃಷ್ಣ

**ಕೀಟ** ಹುಳು, ಹಸಿರು ಹುಳು

**ಕೀಟಕಾಂತಕ** ಕಾಳಿಂಗನಾಗರವನ್ನು ಕೊಂದವನು –ಕೃಷ್ಣ

**ಕೀತ** ಕೀವು ತುಂಬಿದ, ಕೊಳೆತ

**ಕೀನೀಶ** ಯಮದೇವ

**ಕೀರ** ಗಿಳಿ, ಶುಕ

**ಕೀರದೇರ** ಗಿಳಿರಥವುಳ್ಳ ಮನ್ಮಥ

**ಕೀರನಾಮಕ** ಶುಕದ ಹೆಸರುಳ್ಳ ಶುಕಾಚಾರ್ಯ

**ಕೀರವಾಣಿ** ಗಿಳಿಮಾತು

**ಕೀರುತಿ<ಕೀರ್ತಿ** ಪ್ರಸಿದ್ಧಿ, ಯಶಸ್ಸು

**ಕೀರ್ಣ** ಕೆತ್ತಿದ, ಕೊರೆದ; ಗುಂಪು; ಮುಚ್ಚಲ್ಪಟ್ಟ

**ಕೀರ್ತಿ** ಯಶಸ್ಸು, ಖ್ಯಾತಿ

**ಕೀರ್ತಿಸು** ಹೊಗಳು

**ಕೀಲ** ರಹಸ್ಯ, ಮರ್ಮ, ಗುಟ್ಟು

**ಕೀಲಪರಿ** ರಹಸ್ಯವನ್ನು ಭೇದಿಸು

**ಕೀಲಾಲ** ಅಮೃತ, ಜೇನುತುಪ್ಪ; ನೀರು, ಸಮುದ್ರ; ನೆತ್ತರು, ರಕ್ತ; ಕೆಂಪುಬಣ್ಣ

**ಕೀಲಾಲಜ** ಕಮಲ

**ಕೀಲಾಲಭವ** ಬ್ರಹ್ಮನತಾಯಿ ರಮಾದೇವಿ; ಗಂಗಾ ಪುತ್ರ ಭೀಷ್ಮ

**ಕೀಲಿ** ಬೀಗದಕೈ

**ಕೀಲಿಸು** ಚುಚ್ಚು; ಜೋಡಿಸು, ಕೂಡಿಸು; ಇಡು, ನೆಡು

**ಕೀಲು** ಮರ್ಮ, ಗುಟ್ಟು; ತಿರುಗಣಿ, ಅಗುಳಿ

**ಕೀಶ** ಕೋತಿ, ಹನುಮಂತನ ಒಡೆತನವುಳ್ಳ ಮಂಗಗಳ ಗುಂಪು

**ಕೀಶೇಶ** ಹನುಮಂತನ ತಂದೆ, ವಾಯುದೇವರು

**ಕೀಸು** ಕೆತ್ತು; ಉಜ್ಜು

**ಕೀಳು** ಕೆಳಮಟ್ಟ, ನೆಲಮಟ್ಟ

**ಕೀಳ್ವಾಯ** ಸಣ್ಣ ಮಾತುಗಳನ್ನು ಆಡುವವನು, ಚಾಡೀಕೋರ

**ಕು, ಕುಃ** ಕೆಟ್ಟ

**ಕುಂಕುಮವಸನ** ಕೆಂಪು ವಸ್ತ್ರವುಳ್ಳವ

**ಕುಂಕುಮ್ಮ<ಕುಂಕುಮ** ಸ್ತ್ರೀಯರು ಹಣೆಗೆ ಧರಿಸುವ ಕೆಂಪು ಬಣ್ಣದ ಪುಡಿ

**ಕುಂಗು** ಬಾಗು, ನೀರವತೆ, ಮೌನ

**ಕುಂಚ** ಚಾಮರ

**ಕುಂಚನ** ಬಾಗಿದ, ನಮನ ಮಾಡುತ್ತಿರುವ ಭಂಗಿ; ಚೌರಿ

**ಕುಂಚಿಕೆ** ಕುಂಚ; ಬೀಗದ ಕೈ

**ಕುಂಚಿಗೆ** ಕುಲಾವಿ; ಮೂಲೆ

**ಕುಂಚಿಗೆ ಮಾಡು** ಮೂಲೆಮಾಡು

**ಕುಂಚಿತನೀಲಕುಂತಳೆ** ಗುಂಗುರು ಕೂದಲುಳ್ಳವಳು, ವಕ್ರವಾದ, ಕಪ್ಪಾದ ತಲೆಗೂದಲುಳ್ಳವಳು

**ಕುಂಚಿತಮತಿ** ಕೀಳು ಮನಸ್ಸಿನವನು

**ಕುಂಜ** ಲತಾಗೃಹ, ಬಳ್ಳಿ ಮಾಡ

**ಕುಂಜನೇಭಮೃಗರಾಜ** ದುರ್ಜನರೆಂಬ ಆನೆಗೆ ಸಿಂಹದಂತಿರುವವನು

**ಕುಂಜರ** ಆನೆ

Rarest Archiver

**ಕುಂಜರಗಮನೆ** ಗಜಗಮನೆ, ಆನೆಯಂಥ ಗಂಭೀರ ನಡಿಗೆಯ ಹೆಣ್ಣು
**ಕುಂಜರಗಿರಿ** ಹಸ್ತಿಗಿರಿ, ಕಂಚಿ, ಕರಿಗಿರಿ, ದೇವ ರಾಯನ ದುರ್ಗ
**ಕುಂಜರದಾರುಣ** ಕುವಲಯಾಪೀಡವೆಂಬ ಕಂಸನ ಆನೆಯನ್ನು ಸಂಹರಿಸಿದ ಶ್ರೀಕೃಷ್ಣ
**ಕುಂಜರಪುರ** ಹಸ್ತಿನಾಪುರ
**ಕುಂಜರಾರಿಯ ಪೀಠ** ಸಿಂಹಾಸನ
**ಕುಂಜರಿ** ಹೆಣ್ಣಾನೆ
**ಕುಂಜು** ಹಾರು
**ಕುಂಟಣಿ, ಕುಂಟನಿ** ತಲೆಹಿಡುಕಿ, ಅನೈತಿಕವಾಗಿ ಗಂಡು ಹೆಣ್ಣು ಹೊಂದಿಸುವವಳು
**ಕುಂಟಸುದ್ದಿ** ಹಾಳು ಹರಟೆ
**ಕುಂಟಾ<ಕುಲಟೆ** ಸ್ತ್ರೀ, ನೀಚ ಹೆಂಗಸು
**ಕುಂಟಿ** ಹೆಳವಿ, ಕಾಲು ಕುಂಟುವವಳು
**ಕುಂಟೆ** ಬೆಳೆಯನ್ನು ಹರಗುವ ಉಪಕರಣ; ಕಟ್ಟಿಗೆ ತುಂಡು; ನೀರುನಿಲ್ಲುವ ಹೊಂಡ
**ಕುಂಡ** ಅಗ್ನಿ ಕುಂಡ, ಹೋಮದ ಗುಳಿ
**ಕುಂಡಗೋಳಕರು** ಗಂಡನಿರುವಾಗ ಜಾರತನಕ್ಕೆ ಹುಟ್ಟಿದ ಮಕ್ಕಳು ಕುಂಡರು ಮತ್ತು ಗಂಡ ಸತ್ತಮೇಲೆ ಹಡೆದ ಮಕ್ಕಳು ಗೋಳಕರು; ಕುಟುಂಬದ ಹೊರಗೆ ಹುಟ್ಟಿದವರು; ವರ್ಣ ಬಾಹಿರರು; ಪಾಂಡವರು
**ಕುಂಡಲ** ಕಿವಿಯ ಆಭರಣ, ಸರ್ಪ
**ಕುಂಡಲಗಿರಿ** ಸರ್ಪಗಿರಿ, ತಿರುಪತಿ, ಶೇಷಾಚಲ
**ಕುಂಡಲರಾಯ** ಶೇಷಾಚಲದ ಒಡೆಯ–ವೇಂಕಟೇಶ
**ಕುಂಡಲಿ** ಸರ್ಪ
**ಕುಂಡಲಿನ್** ರೆಕ್ಕೆಯಲ್ಲಿ ಕುಂಡಲ(ವೃತ್ತ) ಚಿಹ್ನೆ ಯುಳ್ಳ ನವಿಲು
**ಕುಂಡಲಿಶಯನ** ವಿಷ್ಣು
**ಕುಂಡಿನಿ** ಕುಂಟಣಿ
**ಕುಂಡಿನೇಶ** ಕುಂಡಿನಪುರದ ರಾಜ–ಭೀಷ್ಮಕರಾಜ
**ಕುಂಡಿಲಿ** ಸರ್ಪ
**ಕುಂಡೆ** ನಿತಂಬ, ಕುಂಡಿ
**ಕುಂತ** ಒಂದು ಬಗೆಯ ಆಯುಧ, ಈಟಿ, ಭರ್ಜಿ
**ಕುಂತಲ, ಕುಂತಳ** ಕೂದಲು; ಕುಂತಳ ದೇಶ
**ಕುಂತಳಪುರ** ಕುಂತಳದೇಶದ ರಾಜಧಾನಿ
**ಕುಂತಳೇಶ್ವರ** ಕುಂತಳ ದೇಶದ ಅರಸು
**ಕುಂತಿಕುಮಾರ** ಕುಂತಿಯಮಗ, ಪಂಚಪಾಂಡವ ರಲ್ಲಿ ಯಾರಾದರೂ ಒಬ್ಬ
**ಕುಂದ** ಬೆಟ್ಟ; ಕೊರತೆ; ಕೋಲು ಮಲ್ಲಿಗೆ. ಬಿಳಿಯ ಮಲ್ಲಿಗೆ ಹೂ, ಮೊಲ್ಲೆ
**ಕುಂದಕುಟ್ಮಲ** ಮಲ್ಲಿಗೆಮೊಗ್ಗು
**ಕುಂದಕುಸುಮ** ಮಲ್ಲಿಗೆ ಹೂ
**ಕುಂದಕೇದಗೆ** ಕುಂದದ ಸುವಾಸನೆಯ ತಾಳೆ ಹೂ
**ಕುಂದಕೋರಕ** ಮಲ್ಲಿಗೆ ಮೊಗ್ಗು
**ಕುಂದಣ** ವಜ್ರ, ಬಂಗಾರ, ಅಪರಂಜಿ, ಅಪ್ಪಟ ಚಿನ್ನ; ಚಿನ್ನದಲ್ಲಿ ಹರಳನ್ನು ಕೂಡಿಸುವುದು
**ಕುಂದಣಗಿಂಡಿ** ಚಿನ್ನದ ಗಿಂಡಿ
**ಕುಂದಣಹಾರ** ವಜ್ರದ ಹಾರ
**ಕುಂದನವನ** ಮಲ್ಲಿಗೆಯವನ
**ಕುಂದರದನ** ಅರಳಿದ ಮಲ್ಲಿಗೆಯಂತೆ ಶುಭ್ರವಾದ ದಂತ ಪಂಕ್ತಿಯುಳ್ಳವನು
**ಕುಂದರದನೆ** ಅರಳಿದ ಮಲ್ಲಿಗೆಯಂತೆ ಶುಭ್ರವಾದ ದಂತ ಪಂಕ್ತಿಯುಳ್ಳವಳು
**ಕುಂದವಕುಳ** ಮಲ್ಲಿಗೆಮೊಗ್ಗು
**ಕುಂದು** ಕಳಂಕ, ತಪ್ಪು, ದೋಷ; ಬಾಡು, ಒಣಗು, ಕಡಿಮೆಯಾಗು
**ಕುಂದ್ಯ** ದುಃಖಿ
**ಕುಂಬೆ** ಗೋಡೆಯ ತಲೆ ಕಟ್ಟಡ, ದಿಂಡು
**ಕುಂಭ** ಮಡಿಕೆ, ಕೊಡ, ಕಲಶ; ಉನ್ನತ, ಎತ್ತರ
**ಕುಂಭಕ** ಪ್ರಾಣಾಯಾಮ ಮಾಡುವ ಉದ್ದೇಶ ದಿಂದ ಗಾಳಿಯನ್ನು ಒಳಗೆ ಹಿಡಿದಿಟ್ಟುಕೊಳ್ಳು ವುದು

Rarest Archiver

**ಕುಂಭಜ** ಅಗಸ್ತ್ಯ, ದ್ರೋಣ
**ಕುಂಭನಿಕುಂಭ** ಕುಂಭಕರ್ಣನ ಮಕ್ಕಳು
**ಕುಂಭಪುರನಿವಾಸ** ಕುಂಭೇಶ್ವರ
**ಕುಂಭಶ್ರವಣ** ರಾವಣನ ಒಬ್ಬ ತಮ್ಮ; ಕುಂಭಕರ್ಣ
**ಕುಂಭಸಂಭವ** ಅಗಸ್ತ್ಯಮುನಿ, ದ್ರೋಣಾಚಾರ್ಯ
**ಕುಂಭಿ** ಆನೆ, ಮಡಕೆ
**ಕುಂಭಿಣಿ** ಹೆಣ್ಣಾನೆ; ಭೂಮಿ
**ಕುಂಭಿಣಿಜೆ** ಸೀತೆ
**ಕುಂಭಿಣಿತಲ** ಭೂಮಿ, ಭೂತಲ
**ಕುಂಭಿಣಿಪ, ಕುಂಭಿಣಿಸುರ** ಭೂಸುರ, ವಿಪ್ರ, ಬ್ರಾಹ್ಮಣ
**ಕುಂಭಿಣೀತಲ** ಭೂಮಿ, ಭೂತಲ
**ಕುಂಭಿಣೀಧರ** ಪರ್ವತ
**ಕುಂಭಿನಿ** ಭೂಮಿ, ಹೆಣ್ಣಾನೆ
**ಕುಂಭಿನಿಜಾ** ಸೀತೆ
**ಕುಂಭಿನಿಜಾರಮಣ** ರಾಮ
**ಕುಂಭಿನಿಸುತೆ** ಭೂಮಿಸುತೆ–ಸೀತೆ
**ಕುಂಭಿನೀಶ್ವರ** ಭೂಧರ
**ಕುಂಭೀಪಾಕ** ಜೀವ ಹಿಂಸೆ ಮಾಡಿದವರು ಈ ಮಹಾನರಕಕ್ಕೆ ಹೋಗುತ್ತಾರೆ
**ಕುಂಭೀಶ್ವರ** ಗಜರಾಜ
**ಕುಕಿಲಿರಿ** ಕೇಕೆಹಾಕು
**ಕುಕ್ಕಡಿ** ಉಂಡೆ; ನೂತ ನೂಲಿನ ಒಂದು ವಿಶಿಷ್ಟ ಆಕಾರದ ಉಡುಗೆ
**ಕುಕ್ಕಡಿನೂಲು** ಮಧ್ಯದಲ್ಲಿ ದಪ್ಪವಾಗಿದ್ದು ಎರಡೂ ಕಡೆ ಸಣ್ಣಗಿರುವ ದಾರದ ಉಂಡೆ
**ಕುಕ್ಕುಟ** ಹುಂಜ, ಕೋಳಿ; ಮೋಸ
**ಕುಕ್ಕುರ** ನಾಯಿ
**ಕುಕ್ಷಿ** ಬಸಿರು, ಹೊಟ್ಟೆ, ಗುಹೆಯಂತಿರುವ ಭಾಗ
**ಕುಕ್ಷಿಂಭರ** ದಪ್ಪಹೊಟ್ಟೆಯವ; ಗಣಪತಿ
**ಕುಕ್ಷಿಂಭರವಿದ್ಯೆ** ಹೊಟ್ಟೆ ತುಂಬಿಸುವ ವಿದ್ಯೆ
**ಕುಕ್ಷಿಭರಣ** ಉದರ ಪೋಷಣೆ
**ಕುಕ್ಷಿಮಹ** ದೊಡ್ಡ ಹೊಟ್ಟೆ
**ಕುಚ** ಮೊಲೆ
**ಕುಚೇಲ** ಸುದಾಮ; ಹರಿದ ವಸ್ತ್ರ ಧರಿಸಿದವ
**ಕುಚ್ಛಿತ** ಕೀಳಾದದ್ದು, ಅಲ್ಪ, ನೀಚ
**ಕುಚ್ಛೇತ** ಅಲ್ಪ, ಹೀನ
**ಕುಜ** ಮರ, ವೃಕ್ಷ; ಕೆಟ್ಟಬುದ್ಧಿ; ಮಂಗಳ ಗ್ರಹ
**ಕುಜನ** ಕೆಟ್ಟಜನ, ದುಷ್ಟ
**ಕುಜನಕುಠಾರ** ದುಷ್ಟರಿಗೆ ಕೊಡಲಿಯಂತಿರುವವನು–ವಿಷ್ಣು
**ಕುಜನವನ** ದುಷ್ಟಜನ ಸಮೂಹ
**ಕುಜನೇಭ** ದುರ್ಜನರೆಂಬ ಆನೆ
**ಕುಜರೆ** ಕುತ್ಸಿತವಾದ ಮುಪ್ಪು, ಅತಿಮುಪ್ಪು
**ಕುಜೀವ** ಕೆಟ್ಟಜೀವ
**ಕುಟಿಲ** ಮೋಸ, ವಂಚನೆ
**ಕುಟಿಲಕುಂತಲ(ಳ)** ಗುಂಗುರು ಕೂದಲು
**ಕುಟಿಲಮನ** ವಕ್ರವಾದ/ವಂಚನೆ ಮಾಡುವ ಮನಸ್ಸು
**ಕುಟಿಲಾರಿ** ಅಪ್ರಾಮಾಣಿಕರ ಶತ್ರು, ವಿಷ್ಣು
**ಕುಟಿಲಾಳಕ** ಗುಂಗುರು ಕೂದಲು, ವಕ್ರಗಳಾದ ಮುಂಗುರುಳು
**ಕುಟೀರ** ಗುಡಿಸಲು, ಮನೆ
**ಕುಟ್ಟಿಕೊಂಡುಅಳು** ಬಹಳ ದುಃಖ ಪಡು, ಹೊಟ್ಟೆ ಬಡಿದುಕೊಂಡು, ಹಣೆ ಚಚ್ಚಿಕೊಂಡು ಅಳು
**ಕುಟ್ಮಲ** ಅರೆಬಿರಿದ ಮೊಗ್ಗು
**ಕುಠ** ಮರ
**ಕುಠಾರ** ಕೊಡಲಿ
**ಕುಡ** ನೇಗಿಲಿಗೆ ಅಳವಡಿಸುವ ಕಬ್ಬಿಣದ ತುಂಡು; ಬರೆ ಹಾಕಲು ಬಳಸುವ ಕಬ್ಬಿಣದ ತುಂಡು
**ಕುಡಿ** ತುದಿ, ಕೊನೆ
**ಕುಡಿಕುಡಿನಾಮ** ಚೂಪಾಗಿ ತಿದ್ದಿದ ತೆಳುನಾಮ
**ಕುಡಿತೆ** ಗುಟುಕು, ಬೊಗಸೆ, ಸೇರೆ

Rarest Archiver

**ಕುಡಿತೆಗಂಗಳು** ಬೊಗಸೆಗಂಗಳು, ದೊಡ್ಡ ಕಣ್ಣುಗಳು

**ಕುಡಿನೀರು** ಕುಡಿಯುವ ನೀರು

**ಕುಡು** ಕೊಡು

**ಕುಡುತೆ** ಬೊಗಸೆ

**ಕುಡುತೆಗಂಗಳು** ಬೊಗಸೆ ಕಣ್ಣುಗಳು

**ಕುಡುದಾಡೆ** ಡೊಂಕಾದ ಕೋರೆಹಲ್ಲು

**ಕುಡುನೀರು** ಒಂದು ಗುಟುಕು ನೀರು

**ಕುಡುಮ** ಧರ್ಮಸ್ಥಳದ ಹಿಂದಿನ ಹೆಸರು

**ಕುಣಕ** ಮರಿ

**ಕುಣಪ** ಹೆಣ

**ಕುಣಿ** ಗುಂಡಿ, ಹಳ್ಳ

**ಕುಣಿಕೆ** ಹಗ್ಗದ ತುದಿಯಲ್ಲಿ ಹಾಕಿದ ಗಂಟು, ಜೀರುಣಿಕೆ

**ಕುಣಿಗಲ್ಲ** ಗುಳಿ ಬಿದ್ದಗಲ್ಲ, ಕುಳಿಗಲ್ಲ

**ಕುಣುಕ, ಕುಣುಕು** ಔಷಧಿಯ ಗಿಡಮೂಲಿಕೆ; ಕುಟ್ಟುವುದು

**ಕುತಪ** ಅಪರಾಹ್ನ, ಸಂಜೆ; ದರ್ಭೆ; ವ್ರತಭ್ರಷ್ಟವಾದುದು; ಅಂಜಲಿ, ಬೊಗಸೆ; ಒಂದು ವಾದ್ಯ ವಿಶೇಷ

**ಕುತುಪ** ಚರ್ಮದಿಂದ ಮಾಡಿದ ಎಣ್ಣೆಯ ಚೀಲ

**ಕುತುಪಕಾಲ** ಅಪರಾಹ್ನಕಾಲ, ಪಿತೃಗಳಿಗೆ ತರ್ಪಣ ಕೊಡಲು ಯೋಗ್ಯ ವಾದ ಕಾಲ

**ಕುತ್ತ** ರೋಗ, ಆಪತ್ತು

**ಕುತ್ತನಿಅಂಗಿ** ಕುತನಿ/ಕಸೂತಿ ಕೆಲಸ ಮಾಡಿದ ಅಂಗಿ, ದೇವರ ಉಡುಗೆ, ಕುತ್ನಿ

**ಕುತ್ತರಿಸು<ಕುಸ್ತರಿಸು** ಉಪಚರಿಸು

**ಕುತ್ತು** ವಿಪತ್ತು, ಕಷ್ಟ

**ಕುತ್ನಿ** ಕುತನಿ, ಹತ್ತಿ ಮತ್ತು ರೇಷ್ಮೆ ಮಿಶ್ರಿತ ಬಟ್ಟೆ

**ಕುತ್ಸಿತ** ನಿಂದೆ, ನಿಂದ್ಯವಾದ, ದೂಷಣೆ; ಕೆಟ್ಟ, ದುಷ್ಟ, ಕೆಟ್ಟನಡತೆಯವ

**ಕುದಿ** ಕೋಪಗೊಳ್ಳು

**ಕುದ್ದಾಲ** ಗುದ್ದಲಿ

**ಕುಧರ** ಪರ್ವತ; ಭೂಮಿಯನ್ನು ಧರಿಸಿದ: ವರಾಹ, ಪರಮಾತ್ಮ

**ಕುಧರಾರಿ** ಇಂದ್ರ

**ಕುಧ್ರಜಾಧವ** ಪರ್ವತದ ಮಗಳಾದ ಪಾರ್ವತೀಪತಿ –ಶಿವ

**ಕುನ್ನಿ** ನಾಯಿಮರಿ; ಕ್ಷುದ್ರ

**ಕುಪತಿ** ಕು–ಭೂಮಿ; ಭೂಮಿಪತಿ, ರಾಜ

**ಕುಪಥ** ಕೆಟ್ಟದಾರಿ, ದುರ್ಮಾರ್ಗ

**ಕುಪಿತ** ಸಿಟ್ಟು, ಕೋಪಗೊಂಡ

**ಕುಬುಜರೂಪ, ಕುಬ್ಜಬ್ರಾಹ್ಮಣ** ವಾಮನಾವತಾರ

**ಕುಬ್ಜಕಾಯ** ಕುಳ್ಳಾದ ದೇಹ, ಗಿಡ್ಡಶರೀರ

**ಕುಬ್ಜೆ** ಗೂನಿ, ಬೆನ್ನುಬಾಗಿದವಳು; ಗಂಧರ್ವ ಕನ್ಯೆ

**ಕುಭವ** ಪ್ರಾರಬ್ಧಕರ್ಮ

**ಕುಭಾರ** ಭೂಭಾರ

**ಕುಭಾವ** ಕೆಟ್ಟಭಾವ

**ಕುಮಂತ್ರ** ದುರಾಲೋಚನೆ

**ಕುಮತ** ಕೆಟ್ಟಭಿಪ್ರಾಯ, ದುರ್ಮತ

**ಕುಮತಿ** ಅಜ್ಞಾನಿ; ದುರ್ಬುದ್ಧಿ

**ಕುಮದ** ಕೆಟ್ಟ, ಗರ್ವ, ಸೊಕ್ಕು

**ಕುಮರಿ, ಕುಮ್ಮರಿ** ಹೊಲ–ಗದ್ದೆ, ಕಾಡನ್ನು ಕಡಿದು ಸಾಗುವಳಿ ಮಾಡಿದ ಪ್ರದೇಶ

**ಕುಮಾರ** ಬ್ರಹ್ಮಚಾರಿ, ವೇದವ್ಯಾಸ, ಷಣ್ಮುಖ

**ಕುಮಾರಪಿತ** ಷಣ್ಮುಖನ ತಂದೆ–ಶಿವ

**ಕುಮುದ** ಕನ್ನೈದಿಲೆ, ನೀಲೋತ್ಪಲ, ನೀಲಕಮಲ, ಕೆಂದಾವರೆ; ದಿಗ್ಗಜಗಳಲ್ಲಿ ಒಂದು

**ಕುಮುದ ಕೋರಕ** ಕರೇಕಮಲದ ಮೊಗ್ಗು

**ಕುಮುದಮಿತ್ರ, ಕುಮುದಾಪ್ತ** ಚಂದ್ರ

**ಕುಮುದೇಂದು** ಕನ್ನೈದಿಲಿಗೆ ಚಂದ್ರನಂತೆ ಇರುವವನು

**ಕುಯೋನಿ** ನೀಚಜನ್ಮ, ಕೀಳುಜನ್ಮ

**ಕುರಂಗ** ಜಿಂಕೆ

Rarest Archiver

**ಕುರಂಗಧರ** ಚಂದ್ರ

**ಕುರಂಗಧರಧರ** ಚಂದ್ರಮೌಳಿ–ಶಿವ

**ಕುರಂಗನಯನೆ, ಕುರಂಗನೇತ್ರೆ** ಜಿಗರೆಯಂತೆ ಚಂಚಲವಾದ ಕಣ್ಣುಳ್ಳವಳು

**ಕುರರಿ** ಹೆಣ್ಣು ಮರಕುಟಕ ಪಕ್ಷಿ

**ಕುರವಕ** ಗೋರಂಟಿಮರ

**ಕುರುಂಬಾಳೆ** ಹೊಂಬಾಳೆ

**ಕುರುಕು** ಸ್ವಲ್ಪ ಸ್ವಲ್ಪವಾಗಿ ಅಗಿದು ಅಗಿದು ತಿನ್ನುವುದು; ಕರಿದ ತಿಂಡಿ, ಹುರಿಗಾಳು

**ಕುರುಜಮಹಾಟವಿ** ಕೌರವರೆಂಬ ಮಹಾರಣ್ಯ

**ಕುರುಜು** ಗೋಪುರ, ಬುರುಜು, ತೇರಿನ ತುದಿ; ಅಲಂಕರಿಸಿದ ಮಂಟಪ

**ಕುರುಡನಣುಗ** ಕುರುಡ ಧೃತರಾಷ್ಟ್ರನ ಮಗ, ದುರ್ಯೋಧನ

**ಕುರುಪ, ಕುರುಪತಿ** ಕೌರವೇಶ್ವರ, ದುರ್ಯೋಧನ

**ಕುರುಪಿತಾಮಹ** ಭೀಷ್ಮ

**ಕುರುವ** ಕುರುವಂಶದವ, ಕೌರವ

**ಕುರುವರಸೂತ** ಕುರುವಂಶದ ಅರ್ಜುನನ ಸಾರಥಿಯಾದ ಕೃಷ್ಣ

**ಕುರುವಿಂದ** ಮಾಣಿಕ್ಯ, ಕೆಂಪು, ಹವಳ

**ಕುರುವಿಂದಾಧರ** ಹವಳದಂಥ ತುಟಿಯುಳ್ಳವನು

**ಕುರುವೀರ** ಕುರುವಂಶದ ಅರ್ಜುನ

**ಕುರುವೀರಸೂತ** ಕುರುವಂಶದ ಅರ್ಜುನನ ಸಾರಥಿ–ಕೃಷ್ಣ

**ಕುರುಹು** ಚಿಹ್ನೆ, ಗುರುತು, ವಿಷ್ಣುಭಕ್ತರ ಚಿಹ್ನೆ

**ಕುರುಳಕೂದಲು** ಗುಂಗುರು ಕೂದಲು

**ಕುರುಳು** ಕೂದಲು, ಗುಂಗುರು ಕೂದಲು; ಒಣಗಿದ ಸೆಗಣಿ, ಬೆರಣಿ

**ಕುರ್ತು** ಕುರಿತು

**ಕುಲಗಿರಿ** ಕುಲಾಚಲ, ನೀಲ, ನಿಷಧ, ವಿಂಧ್ಯ, ಪಾರಿಯಾತ್ರ ಮೊದಲಾದ ಎತ್ತರದ ಪರ್ವತಗಳು

**ಕುಲಜ** ಶ್ರೇಷ್ಠ, ಸುಸಂಸ್ಕೃತ

**ಕುಲಜಾತ** ಚಂದ್ರವಂಶದಲ್ಲಿ ಜನಿಸಿದ ಕೃಷ್ಣ

**ಕುಲನಾಶ** ಪರಶುರಾಮಾವತಾರ

**ಕುಲಪ** ಮನೆಯ ಯಜಮಾನ

**ಕುಲಶರಿ** ಮಂದರಾದ್ರಿ

**ಕುಲಸತಿ** ಸತ್ಕುಲ ಪ್ರಸೂತೆ, ಪತಿವ್ರತೆ

**ಕುಲಾದ್ರಿ** ಕುಲಪರ್ವತ

**ಕುಲಾಯ** ಕುಲಾವಿ–ಟೋಪಿ

**ಕುಲಾಲ** ಕುಂಬಾರ

**ಕುಲಾಲಭೀಮಗೊಲಿದ, ಕುಲಾಲಭೀಮಸಂರಕ್ಷಕ, ಕುಲಾಲವರದ** ಭೀಮನೆಂಬ ಕುಂಬಾರ ಜಾತಿಯ ಭಕ್ತನಿಗೆ ಒಲಿದವನು–ವೇಂಕಟೇಶ

**ಕುಲಾವಿ** ಟೋಪಿ

**ಕುಲಿಶ** ವಜ್ರ, ವಜ್ರಾಯುಧ; ಬೆಟ್ಟ

**ಕುಲಿಶಧರ, ಕುಲಿಶಧರಾಹ್ವಯ** ವಜ್ರಾಯುಧ ಧಾರಿ–ಇಂದ್ರ

**ಕುಲಿಶಪಾಣಿ** ಇಂದ್ರ

**ಕುಲಿಶಾಂಗ** ವಜ್ರದೇಹಿ, ವಾಯುದೇವರು

**ಕುಲೀನ** ಉತ್ತಮವಂಶಸ್ಥ

**ಕುಲ್ಲ**<**ಖುಲ್ಲ** ನೀಚ, ಕ್ಷುದ್ರ; ಕಿರಿದಾದ

**ಕುವನ** ಕಗ್ಗಾಡು, ದುಷ್ಟ ಪ್ರಾಣಿಗಳಿಂದ ಕೂಡಿದ ಕಾಡು

**ಕುವರತನು** ಹುಡುಗತನದ ರೂಪುಳ್ಳವನು–ಕೃಷ್ಣ

**ಕುವಲಯ** ಭೂಮಂಡಲ; ತಾವರೆ, ಕನ್ನೈದಿಲೆ

**ಕುವಾದ** ನಾಸ್ತಿಕವಾದ

**ಕುವ್ವಾಡ** ಹಾಸ್ಯ, ಕುಚೋದ್ಯ

**ಕುಶ** ದರ್ಭೆ, ಒಂದು ಜಾತಿಯ ಹುಲ್ಲು; ನೀರು; ಲವನ ಅಣ್ಣ

**ಕುಶಲಗತಿ** ಕ್ಷೇಮಕರವಾದ ನಡೆ

**ಕುಶಲವಾಡು** ವಿನೋದವಾಡು, ಮಾತಾಡು

**ಕುಶಶಾಯಿ** ದರ್ಭಶಯನ–ರಾಮ

Rarest Archiver

**ಕುಶಸ್ಥಳ** ದ್ವಾರಕೆ
**ಕುಶಾಗ್ರ** ದರ್ಭೆಯತುದಿ; ತೀಕ್ಷ್ಣವಾದ
**ಕುಶಾಸ್ತರಣ** ದರ್ಭಾಸನ, ದರ್ಭೆಯ ಹಾಸಿಗೆ
**ಕುಶಾಸ್ತ್ರ** ದುಷ್ಟಶಾಸ್ತ್ರ
**ಕುಶಿಕಪುತ್ರ, ಕುಶಿಕಸುತ** ಕುಶಿಕರಾಜನ ವಂಶದಲ್ಲಿ ಜನಿಸಿದ ಕೌಶಿಕ–ವಿಶ್ವಾಮಿತ್ರ
**ಕುಷ್ಠಿತೋದ** ಕೊಳೆನೀರು
**ಕುಸಿಕಿರಿ** ಕುಕ್ಕು, ಸಣ್ಣದಾಗಿ ಒಡೆ
**ಕುಸುಕಾಡು** ಒದ್ದಾಡು
**ಕುಸುಕು** ಮೆತ್ತಗೆ ಕುಕ್ಕು; ಸಣ್ಣಗೆ ಅಳು, ಮೆಲ್ಲನೆ ಶಬ್ದಮಾಡು
**ಕುಸುಬೆ** ಒಂದು ಬಗೆ ಧಾನ್ಯ; ಒಂದು ಬಗೆಯ ಮುಳ್ಳಿನ ಗಿಡ, ಕುಸುಮೆ
**ಕುಸುಮ** ಹೂವು
**ಕುಸುಮಗಂಧಿನಿ** ತಾವರೆಯ ವಾಸನೆಯುಳ್ಳವಳು, ಪದ್ಮಿನಿ ಜಾತಿ ಸ್ತ್ರೀ
**ಕುಸುಮಪೀಠ** ಬ್ರಹ್ಮ
**ಕುಸುಮಬಾಣ, ಕುಸುಮಶರ** ಮನ್ಮಥ
**ಕುಸುಮರಥ** ಪುಷ್ಪಕವಿಮಾನ
**ಕುಸುಮಸಂಭವ** ಬ್ರಹ್ಮ
**ಕುಸುಮಾಸ್ತ್ರ** ಮನ್ಮಥ
**ಕುಸುಮೆ** ಹೊಲಗಳಲ್ಲಿ ಬೆಳೆವ ಧಾನ್ಯ ಮತ್ತು ಗಿಡ, ಕುಸುಬೆ
**ಕುಸುರದಚೆಂಡು** ದೋರಗಾಯಿಗೆ ಬಟ್ಟೆ ಸುತ್ತಿ ಮಾಡಿದ ಚೆಂಡು
**ಕುಸುರಿ** ಬಂಗಾರ–ಬೆಳ್ಳಿ ಚೌಕಟ್ಟಿನಲ್ಲಿ ಹೂವಿನ ಕೇಸರದಂತೆ ಸೂಕ್ಷ್ಮವಾದ ಕೆಲಸ ಮಾಡಿರುವುದು, ನಾಜೂಕಾದ ಕೆಲಸ
**ಕುಸುರಿದರಿ** ಕೊಚ್ಚು, ಸಣ್ಣದಾಗಿ ತರಿ
**ಕುಸ್ತರಿಸು** ಬೋಳೈಸು, ಸಮಾಧಾನಗೊಳಿಸು
**ಕುಸ್ಥ** ಭೂಭೂತದಲ್ಲಿರುವವನು
**ಕುಹಕ** ಮೋಸ, ವಂಚನೆ
**ಕುಳಿ** ತಗ್ಗು, ಕುಸಿ, ಕುಣಿ
**ಕುಳಿಂದ** ಚಂದ್ರಹಾಸನ ಸಾಕು ತಂದೆ
**ಕುಳ್ಳಿರು** ಕುಳಿತುಕೋ
**ಕೂಕ** ಕುಹಕ
**ಕೂಕರ್ಮ** ಕೆಟ್ಟಕರ್ಮ, ಮೋಸ, ವಂಚನೆ, ಸುಳ್ಳು
**ಕೂಟ** ಒಡನಾಟ; ಗುಂಪು, ಸಮೂಹ; ಮೋಸ, ವಂಚನೆ
**ಕೂಟಕೊಳ್ಳು** ಮೋಸಹೋಗು
**ಕೂಟಜನ** ಸಂಸ್ಕಾರವಿಲ್ಲದವರು, ವಿವೇಕಬುದ್ಧಿ ಸಾಲದವರು, ಪಾಮರರು
**ಕೂಟಸ್ಥ** ಯಜಮಾನ, ಎಲ್ಲರಿಗೂ ಶ್ರೇಷ್ಠವಾಗಿ ಮೇಲಿದ್ದವ
**ಕೂಣ, ಕೂನ** ಕುರುಹು, ಗುರುತು
**ಕೂಪ** ಗುಂಡಿ, ಬಾವಿ; ಹರಿತವಾದ ಬಾಣ
**ಕೂಪಕರ್ಣ** ರಸಾಭಿಮಾನಿ ದೈತ್ಯ
**ಕೂಪಲೋಕ** ಕೆಳಗಿನ ಲೋಕ, ಪಾತಾಳ
**ಕೂಪಾರ** ಸಮುದ್ರ, ಬಾವಿ
**ಕೂಬ<ಖೂಬ** ಸುಂದರ
**ಕೂಬರ** ಬಂಡಿಯ ಈಸು; ಒಬ್ಬ ಗಂಧರ್ವ
**ಕೂರ್** ಪ್ರೀತಿಸು, ಮೆಚ್ಚು
**ಕೂರ(ರು)ಮ <ಕೂರ್ಮ** ಆಮೆ
**ಕೂರಂಬು** ಹರಿತವಾದ ಬಾಣ
**ಕೂರಿಗೆ** ಬಿತ್ತನೆಯ ಸಾಧನ
**ಕೂರು** ಪ್ರೀತಿ, ಮೆಚ್ಚು; ಗುರಾಣಿ, ಹರಿತ
**ಕೂರುಗುರು** ಹರಿತವಾದ ಉಗುರು
**ಕೂರ್ಗಣೆ** ಹರಿತವಾದ ಬಾಣ
**ಕೂರ್ಚ** ಹೆಬ್ಬೆರಳು ತೋರ್ಬೆರಳುಗಳ ತುದಿ; ಮುಂದಿನ ತುದಿಯಲ್ಲಿ ಗಂಟುಹಾಕಿದ ದರ್ಭೆ
**ಕೂರ್ತು** ಪ್ರೀತಿಸಿ, ಮೆಚ್ಚಿ
**ಕೂರ್ಮೆ** ಪ್ರೀತಿ, ಒಲುಮೆ
**ಕೂರ್ಮ** ಆಮೆ, ಕೂರ್ಮಾವತಾರ ತಾಳಿರುವ ವಿಷ್ಣು

Rarest Archiver

**ಕೂರ್ಮಪ್ರಪದ** ಆಮೆಯ ಚಿಪ್ಪಿನಾಕಾರದ ಮುಂಗಾಲು

**ಕೂಲ** ದಡ

**ಕೂವಾದ<ಕುವಾದ** ನಾಸ್ತಿಕವಾದ

**ಕೂಷ್ಮಾಂಡ** ಕುಂಬಳಕಾಯಿ, ಬೂದುಗುಂಬಳ, ಸಂಡಿಗೆಗುಂಬಳ

**ಕೂಸುಮಾಸು** ಗರ್ಭದ ಪರೆ, ಮಗುವಿನ ಕೊಳೆ

**ಕೂಳು** ಅನ್ನ, ಬೋನ

**ಕೃಂತ** ಅಗೆಯುವ ಸಾಧನ, ಗುದ್ದಲಿ

**ಕೃಕಳ** ಸೀನುವ ಕಾರ್ಯ ನಿರ್ವಾಹಕ; ಉಪ ವಾಯುಗಳಲ್ಲೊಬ್ಬ

**ಕೃಚ್ಛ್ರವ್ರತ** ಸಾಂತಪನಾದಿ ವ್ರತ, ದೇಹವನ್ನು ಸೊರಗಿಸುವ ಕಠಿಣ ಆಚರಣೆ, ಆಹಾರ ಸೇವನೆ ವ್ರತ

**ಕೃತಕ** ಮೋಸ, ಅಸಹಜ

**ಕೃತಕರ್ಮಕೃತಾಗಮ** ಕರ್ಮ ಮಾಡಿದವರಿಗೆ ಶಾಸ್ತ್ರಗಳನ್ನು ಮಾಡಿದವ(ಸತ್ಕರ್ಮ ಮಾಡಿದ ವರನ್ನುದ್ಧರಿಸಲು)–ಶ್ರೀಹರಿ

**ಕೃತಕೃತ್ಯ** ಕೃತಾರ್ಥ, ಸಫಲನಾದವ

**ಕೃತಘ್ನ** ಉಪಕಾರವನ್ನು ನೆನೆಯದವ

**ಕೃತಾಂತ** ಯಮ

**ಕೃತಾರ್ಥ** ಮಾಡಬೇಕಾದ ಕೆಲಸವನ್ನು ಮಾಡಿ ಸಫಲತೆಯನ್ನು ಹೊಂದಿದವ, ಧನ್ಯ

**ಕೃತಿ** ಸೃಷ್ಟಿಕರ್ತ ಪ್ರದ್ಯುಮ್ನ ರೂಪಿ ಶ್ರೀಹರಿಯ ಪತ್ನಿ–ಲಕ್ಷ್ಮಿ

**ಕೃತಿಕಾಂತ** ಅನಿರುದ್ಧರೂಪಿ ಪರಮಾತ್ಮ

**ಕೃತಿಜಯಾಶ್ರದ್ಧೇಶ** ಕೃತಿಪತಿ ಪ್ರದ್ಯುಮ್ನ, ಜಯಾಪತಿ ಸಂಕರ್ಷಣ, ಶ್ರದ್ಧಾಪತಿ ಮುಖ್ಯ ಪ್ರಾಣ

**ಕೃತಿಪತಿ** ಪ್ರದ್ಯುಮ್ನ

**ಕೃತಿರಮಣ** ಶ್ರೀಹರಿ

**ಕೃತ್ತಿ** ಚರ್ಯ: ಅಭಿಚಾರದ/ಮಾಟದ/ದುಷ್ಟ ಶಕ್ತಿ ಉಳ್ಳ ಬೊಂಬೆ/ಆಕೃತಿ; ಚಿಗರಿ ಚರ್ಮ

**ಕೃತ್ತಿವಾಸ** ಜಿಂಕೆಯ ಚರ್ಮ ಹೊದ್ದವ–ಶಿವ

**ಕೃತ್ಯಾಭಿಮಾನಿಗಳು** ಕ್ರಿಯೆ ತತ್ತ್ವಕಾರ್ಯಮಾಡುವ ತತ್ತ್ವಾಭಿಮಾನಿ ದೇವತೆಗಳು

**ಕೃದ್ಧ** ಕೋಪಿಷ್ಠ, ಕೋಪಗೊಂಡ

**ಕೃದ್ಧೋಲ್ಕ** ಶ್ರೀಹರಿಯ ರೂಪ

**ಕೃಧ್ಭಯ** ಪಾಪಭಯ

**ಕೃಪಣ** ದೀನ, ಜಿಪುಣ, ಭಕ್ತರು ಪುಣ್ಯವನ್ನು ಕೊಂಚವೂ ಕಳೆದು ಕೊಳ್ಳದಂತೆ ಜೀವಿಸುವುದ ರಿಂದ ಅವರನ್ನು ಪುಣ್ಯ ಜಿಪುಣರೆನ್ನುತ್ತಾರೆ; ಬಡವ, ದುರ್ಬಲ

**ಕೃಪಣವತ್ಸಲ** ಕೃಪಣರಲ್ಲಿ ವಾತ್ಸಲ್ಯವುಳ್ಳವ

**ಕೃಪಣವತ್ಸಲೆ** ಕೃಪಣರಲ್ಲಿ ವಾತ್ಸಲ್ಯವುಳ್ಳವಳು

**ಕೃಪಾಂಗಿಅಪಾಂಗಿ** ತನ್ನ ಕಡೆಗಣ್ಣಿನಿಂದ ಕರುಣೆ ಯನ್ನು ಸೂಸುವವಳು

**ಕೃಪಾಂಬು, ಕೃಪಾಂಬುಧಿ** ಕೃಪಾಸಾಗರ–ವಿಷ್ಣು

**ಕೃಪಾನಿಧಿ** ದಯಾನಿಧಿ–ವಿಷ್ಣು

**ಕೃಪಾವಾರಿಧಿ** ವಿಷ್ಣು

**ಕೃಪೀಟ** ಹೊಟ್ಟೆ, ಗರ್ಭಿಣಿ; ನೀರು; ಸೌದೆ; ಕಂಚು; ಕಾಡು; ಬರಗಾಲ

**ಕೃಪೀಟಯೋನಿ** ಬೆಂಕಿ, ಅಗ್ನಿ, ಪ್ರಳಯಾಗ್ನಿ

**ಕೃಪೆ** ದಯೆ

**ಕೃಪೆಸಿಂಧು** ಕೃಪಾಸಿಂಧು, ದಯಾ ಸಮುದ್ರನಾದ ಪರಮಾತ್ಮ–ವಿಷ್ಣು

**ಕೃಪೇಕ್ಷಣ** ದಯಾಪೂರ್ಣದೃಷ್ಟಿ/ನೋಟ

**ಕೃಪ್ತ** ಯೋಗ್ಯ

**ಕೃಶಾನು** ಬೆಂಕಿ

**ಕೃಶಾನುನೇತ್ರ** ಶಿವ

**ಕೃಶಾನುಸಖ** ಅಗ್ನಿ ಗೆಳೆಯ–ವಾಯು

**ಕೃಷಿಕ** ವ್ಯವಸಾಯಗಾರ, ರೈತ

**ಕೃಷ್ಣ** ಕಪ್ಪು; ವಿಷ್ಣುವಿನ ಅವತಾರಗಳಲ್ಲಿ ಒಂದು

Rarest Archive

**ಕೃಷ್ಣತನುರುಹ** ಕಪ್ಪು ಬಣ್ಣದ ಶರೀರ, ಶ್ರೀಹರಿಯ ಹೆಸರು
**ಕೃಷ್ಣಮೃಗ** ಜಿಂಕೆ
**ಕೃಷ್ಣವರ್ತ್ಮ** ಕಪ್ಪು ದಾರಿಯವನು–ಅಗ್ನಿ
**ಕೃಷ್ಣವೇಣಿ** ಕಪ್ಪಾದ ಸುಂದರ ಜಡೆಯುಳ್ಳವಳು; ಕೃಷ್ಣಾನದಿ
**ಕೃಷ್ಣಸಾರ** ಚಿಗರೆ
**ಕೃಷ್ಣಾ** ದ್ರೌಪದಿ
**ಕೃಷ್ಣಾಜಿನ** ಜಿಂಕೆಯ ಚರ್ಮ
**ಕೃಷ್ಣೆ** ದ್ರೌಪದಿ
**ಕೆಂಗಿಡಿ** ಕೆಂಪಾದ ಕಿಡಿ
**ಕೆಂಚಿ** ಕೆಂಪನೆಯವಳು, ಚಲುವೆ, ಸುಂದರಿ
**ಕೆಂಜಡೆ** ಶಿವ
**ಕೆಂಡರೊಟ್ಟಿ** ಕೆಂಡದಮೇಲೆ ಬೇಯಿಸುವ ರೊಟ್ಟಿ
**ಕೆಂದಟ** ಕೆಂಪಾದ ತೀರ, ಸಂಧ್ಯಾಕಾಲದ ಆಕಾಶ
**ಕೆಂದಾವರೆ** ಕೆಂಪು ಕಮಲ
**ಕೆಂಪುಮೂಗು** ರಜೋಗುಣದಲ್ಲಿ ತೊಡಗಿದ ಮನಸ್ಸು
**ಕೆಂಬಣ್ಣದಮರ** ಪಾರಿಜಾತ ವೃಕ್ಷ
**ಕೆಂಬರಳು** ಕೆಂಪು ಹರಳು, ಮಾಣಿಕ್ಯ, ಪದ್ಮರಾಗ
**ಕೆಂಬಾಳೆ** ಚಂದ್ರಬಾಳೆ
**ಕೇರಿಯಬಸವ** ಗೂಳಿ, ಊರಿನ ಬಸವ
**ಕೆಚ್ಚು** ದಿಂಡು
**ಕೆಟ್ಟೋಗರ** ಹಳಸಿದ ಅನ್ನ
**ಕೆಡದಸುಖ** ಮೋಕ್ಷ
**ಕೆಡೆನುಡಿ** ಕೆಟ್ಟದಾಗಿ ಮಾತನಾಡುವುದು, ಕೋಪದ ಮಾತು
**ಕೆಪ್ಪ** ಕಿವುಡ
**ಕೆರಿ<ಕೆರೆ** ಕೊಳ, ತಟಾಕ
**ಕೆಲ** ಮಗ್ಗುಲು ಬದಿ
**ಕೆಲಕಾಲ** ಅತ್ಯಲ್ಪಕಾಲ
**ಕೆಲಬಲ** ಅಕ್ಕಪಕ್ಕ, ಎಡಬಲ
**ಕೆಲವುಉಪನಿಷತ್** ಮೂಲ ದಶೋಪನಿಷತ್
**ಕೆಲಸಾರು** ದೂರ ಹೋಗು, ಪಕ್ಕಕ್ಕೆ ಹೋಗು; ಕುಲಗೋತ್ರಗಳಿಂದ ಹತ್ತಿರವಿರು
**ಕೆಸರುಕರ್ಮ** ಪ್ರಾರಬ್ಧಕರ್ಮ
**ಕೆಸರುಘಟ** ಸುಡದ ಮಣ್ಣಿನ ಪಾತ್ರೆ, ಹಸಿ ಮಡಕೆ
**ಕೆಳದಿ** ರಾಣಿ; ಗೆಳತಿ; ಮೋಹಿನಿ
**ಕೇಕಾಪಕ್ಷಿ, ಕೇಕಿ** ನವಿಲು
**ಕೇಣ** ಕೋಪ, ದ್ವೇಷ, ಹೊಟ್ಟೆ ಕಿಚ್ಚು
**ಕೇಣಿ** ಪ್ರತಿ; ಏಣಿ; ಪಾಲು; ಭಾಗ; ಗೇಣಿ, ಗುತ್ತಿಗೆ; ಮೈತ್ರಿ; ಸಾಲು; ತೊಂದರೆ
**ಕೇಣಿಗ** ಗುತ್ತಿಗೆದಾರ
**ಕೇತಕಿ** ಕೇದಗೆ, ತಾಳೆ ಹೂವು
**ಕೇತನ** ಬಾವುಟ; ತೇಜಸ್ಸು, ಕಾಂತಿ
**ಕೇತು** ಬಾವುಟ
**ಕೇದಾರ** ಹಿಮಾಲಯದ ಒಂದು ಪವಿತ್ರ ಕ್ಷೇತ್ರ; ಬತ್ತದ ಗದ್ದೆ
**ಕೇಮ, ಕೇಮೆ** ಧೈರ್ಯ
**ಕೇಯೂರ** ಭುಜಕೀರ್ತಿ, ತೋಳಬಂದಿ
**ಕೇರ** ವಾಯು
**ಕೇರಕುಮಾರ** ವಾಯುಪುತ್ರ ರುದ್ರ
**ಕೇರಳಭೂವರ** ಚಂದ್ರಹಾಸನ ತಂದೆ ಸುಧಾರ್ಮಿಕ
**ಕೇರು** ಸ್ವಚ್ಛಮಾಡು
**ಕೇಲಿ** ಮಣ್ಣಿನ ಗಡಿಗೆ, ಗುಡಾಣ
**ಕೇಶಖಂಡನ** ಕೂದಲು ಕತ್ತರಿಸುವಿಕೆ, ಜಾವಳ, ಚೂಡಾಕರ್ಮ
**ಕೇಶಘ್ನಿ** ಕೃಷ್ಣಾವತಾರದಲ್ಲಿ ಕುದುರೆಯ ರೂಪ ತಾಳಿ ಬಂದ ಕೇಶಿ ಎಂಬ ದೈತ್ಯನನ್ನು ಸಂಹರಿಸಿದವನು–ವಿಷ್ಣು
**ಕೇಶವ** ಸರ್ವರ ರಕ್ಷಕ; ಬ್ರಹ್ಮ, ರುದ್ರ, ಲಕ್ಷ್ಮಿಯನ್ನು ವಶದಲ್ಲಿಟ್ಟುಕೊಂಡವನು–ವಿಷ್ಣು
**ಕೇಶವಾದಿರೂಪ** ಕೇಶವನಿಂದ ಕೃಷ್ಣನ ಪರಿಯಂತ ಇಪ್ಪತ್ತುನಾಲ್ಕು ರೂಪ

Rarest Archive

**ಕೇಶಿ** ಒಬ್ಬ ದೈತ್ಯ, ಕಂಸನ ಹಸ್ತಕ
**ಕೇಶಿಖಳಮರ್ದನ** ಕೇಶಿ ಎಂಬ ರಾಕ್ಷಸನನ್ನು ಕೊಂದವನು–ಕೃಷ್ಣ
**ಕೇಸಕ್ಕಿ** ಕೆಂಪು ಅಕ್ಕಿ
**ಕೇಸರ** ಸಿಂಹದ ಕುತ್ತಿಗೆಯ ಮೇಲಿನ ಕೂದಲು, ಪರಾಗ, ಕೇಸರಿ ಎಸಳು
**ಕೇಸರಿ** ಸಿಂಹ
**ಕೇಸರಿಕ್ಷೇತ್ರ** ಕೇಸರಿ ಎಂಬ ಕಪಿಯ ಪತ್ನಿ ಅಂಜನಾದೇವಿ; ಸಿಂಹಾಚಲ
**ಕೇಳಿ** ಕ್ರೀಡೆ, ವಿನೋದ
**ಕೇಳಿಕೆ** ನಾಟಕ, ಆಟ; ಶಾಸ್ತ್ರ ಕೇಳುವುದು
**ಕೇಳೀಮೇಳ** ಶೃಂಗಾರ ಲೀಲೆ
**ಕೈಕಾಣಿಕೆ** ಉಡುಗೊರೆ
**ಕೈಕೊಡು** ಸಹಾಯ ಮಾಡು; ಮೋಸ ಮಾಡು
**ಕೈಗಾಯ್** ರಕ್ಷಿಸು
**ಕೈಗೂಡು** ನೆರವೇರು, ಸಫಲವಾಗು
**ಕೈಜಿತ** ಕೈತಪ್ಪಿದ, ಮುಟ್ಟಲಾಗದ
**ಕೈಜೀತ** ಪಡೆದುಕೊಂಡ ಸಂಬಳ
**ಕೈಟಭರಿಪು, ಕೈಟಭಾರಾತಿ, ಕೈಟ** ಕೈಟಭನೆಂಬ ರಾಕ್ಷಸನ ಶತ್ರು–ವಿಷ್ಣು
**ಕೈತವ** ವಂಚನೆ, ಮೋಸ
**ಕೈದಣಿಸು** ಕೊಟ್ಟು ತೃಪ್ತಿಪಡಿಸು; ಕೈಗಳಲ್ಲಿರುವ ಶಕ್ತಿಯನ್ನು ಅನುಸರಿಸು
**ಕೈದು** ಕತ್ತಿ
**ಕೈಧಾರೆಎರೆಸಿಕೊ** ಕನ್ಯಾಪಿತೃವಿನಿಂದ ಕನ್ಯಾದಾನ ಮಾಡಿಕೊಟ್ಟೆನೆಂದು ಧಾರೆ ಎರಿಸಿಕೊಂಡು
**ಕೈಬರು** ಸಿದ್ಧವಾಗು
**ಕೈಯಾನು** ಕೈಯೊಡ್ಡು, ಬೇಡು
**ಕೈರಗುಳಿಗೆ** ಕಾಚು ಅಥವಾ ಖದಿರದ ಗುಳಿಗೆ, ತಾಂಬೂಲದೊಡನೆ ಸೇವಿಸುವ ಸುಗಂಧದ ಮಾತ್ರೆ
**ಕೈರವ** ಬಿಳಿಯ ನೈದಿಲೆ, ನೀಲಕಮಲ
**ಕೈಲಾಗು, ಕೈಲಾಘವ** ಕೈಕುಲುಕು, ಹಸ್ತಲಾಘವ
**ಕೈಲೆಕಡ್ಡಿಯನಿಡು** ಕಡ್ಡಿ ಮುರಿದು ಹೇಳುವು, ನಿಶ್ಚಯವಾಗಿ, ಪ್ರತಿಜ್ಞೆಮಾಡಿ ಹೇಳು
**ಕೈವಲ್ಯ, ಕೈವಲ್ಯಪದ** ಮುಕ್ತಿ, ಮೋಕ್ಷ, ಸ್ವರ್ಗ
**ಕೈವಾರ** ಹೊಗಳಿಕೆ, ಸ್ತೋತ್ರ
**ಕೈಹರತೆ** ಕಡಿಮೆ, ನ್ಯೂನ
**ಕೊ<ಕೊಳ್ಳು** ತೆಗೆದುಕೊ
**ಕೊಂಕ** ಕಪಟ, ಕೀಳು, ಅಸತ್ಯ
**ಕೊಂಗ** ಕಪಿ, ಒಂದು ಜಾತಿ ಕುದುರೆ, ಕೊಕ್ಕರೆ; ತಮಿಳು ದೇಶದವನು
**ಕೊಂಚಗಾರ** ನಾಡಾಡಿ, ಸಾಮಾನ್ಯ ಮನುಷ್ಯ
**ಕೊಂಚಗಾರರು ಆರುಮಂದಿ** ಅರಿಷಡ್ವರ್ಗ
**ಕೊಂಡ** ವೀರಭದ್ರ; ಸುಡಗಾಡು; ಚಾಡಿ; ಅಗ್ನಿ ಕುಂಡ; ಕೆರೆ
**ಕೊಂಡಾಟ** ಸ್ತುತಿ, ಹೊಗಳಿಕೆ
**ಕೊಂಡಾಲತಿಮ್ಮ** ಕೃಷ್ಣನ ಗೆಳೆಯರಲ್ಲಿ ಒಬ್ಬ (ಕಾಲ್ಪನಿಕ ವ್ಯಕ್ತಿ); ತಿರುಪತಿ ವೇಂಕಟೇಶ
**ಕೊಂಡಿಗ** ಚಾಡಿಕೋರ
**ಕೊಂಡೀರ್ಯಾ** ಕೊಂಡುಕೊಂಡೀರಾ
**ಕೊಂಡುಕೊನೆ** ಸ್ತುತಿಸು, ಹೊಗಳು
**ಕೊಂಡೆ** ವಿಗ್ರಹಾಭರಣ; ಚಾಡಿ; ಕೊಕ್ಕೆ
**ಕೊಂಡೆಗಾರ** ಚಾಡಿಕೋರ
**ಕೊಂಡೆಯ** ಚಾಡಿ, ಚಾಡಿಕೋರ
**ಕೊಂಪೆ** ಕಸಕಡ್ಡಿಗಳ ರಾಶಿ; ಹಾಳೂರು; ಕುಗ್ರಾಮ; ದೇಹ
**ಕೊಂಬು** ಒಂದು ಬಗೆಯ ವಾದ್ಯ
**ಕೊಕೊಕೊಯನ್ನು** ಕೋಳಿಯ ಧ್ವನಿಮಾಡು, ಗುಲ್ಲೆಬ್ಬಿಸು, ಲೇವಡಿ ಮಾಡು
**ಕೊಕ್ಕ** ಕೋಳಿ, ಚಕ್ರವಾಕ ಪಕ್ಷಿ
**ಕೊಕ್ಕು** ಕೊಕ್ಕೆಂದು ಸಪ್ಪಳ ಮಾಡು
**ಕೊಗುವಕುಂಡಲ** ನರಸಿಂಹ
**ಕೊಚ್ಚೆ** ಕೊಳಚೆ

Rarest Archiver

**ಕೊಟ್ಟಣಕುಟ್ಟು** ಬತ್ತ ಕುಟ್ಟು
**ಕೊಟ್ಟದಾಸ** ಕೊಡುಗೈದಾನಿ, ಬಲಿಚಕ್ರವರ್ತಿ
**ಕೊಟ್ಟಿಗೆಂಟೊಳಗೆ ಎಂಟುಆನೆ** ದೇಹದ ಅಷ್ಟಮದಗಳು
**ಕೊಡ** ಕೊಡುವುದಿಲ್ಲ; ಮಣ್ಣಿನ ಅಥವಾ ಲೋಹದ ಪಾತ್ರೆ
**ಕೊಡಗೂಸು** ಇನ್ನೂ ಮದುವೆಯಾಗದಿರುವ ಹುಡುಗಿ, ಕನ್ಯೆ
**ಕೊಡಧನ** ಕೊಡತುಂಬ ದ್ರವ್ಯ–ಹಣ
**ಕೊಡನಅಂಧಕ** ಕುರುಡನು ಕೊಡವನ್ನು
**ಕೊಡಲಿಧರಿಸು** ಕೊಡಲಿ ಹಿಡಿ, ಪರಶುರಾಮ
**ಕೊಡುಕೊಳೆ** ಆಪ್ತತ್ವ; ಕೊಡುವುದು ತೆಗೆದುಕೊಳ್ಳುವುದು, ವ್ಯವಹಾರ
**ಕೊಡುವಧರ್ಮ** ದಾನಗುಣ, ಕೊಡುವ ಮನೋಧರ್ಮ
**ಕೊಣ** ಕೊಳ, ಪುಷ್ಕರಿಣಿ
**ಕೊತ್ತಿ** ಬೆಕ್ಕು
**ಕೊತ್ತು** ಕೊಚ್ಚು, ತರಿ
**ಕೊನಬು** ಬೆಡಗು, ತುಂಟತನ
**ಕೊನಬುಗಾರ** ಬೆಡಗುಗಾರ, ಲಂಡ, ತುಂಟ
**ಕೊನರ್, ಕೊನರು** ಚಿಗುರು
**ಕೊನೆಚಿಣ್ಣ** ಕೊನೆದ ಚಿಣ್ಣ; ತನ್ನ ಬಯಕೆ ಕೈಗೂಡಿ ಸಂತೋಷಪಟ್ಟ ಸಣ್ಣ ಕೂಸು
**ಕೊನೆಯತಾವು** ಮುಕ್ತಿ, ಮೋಕ್ಷ
**ಕೊಪ್ಪು** ಕಿವಿಯ ಮೇಲ್ಭಾಗದಲ್ಲಿ ಹಾಕುವ ಆಭರಣ; ಬಿಲ್ಲಿನ ತುದಿ
**ಕೊಪ್ಪೆ** ತಲೆಬೆನ್ನುಗಳ ಮೇಲೆ ಮಳೆನೀರು ಬೀಳದಂತೆ ಹಾಕಿಕೊಳ್ಳುವ ಮುಸುಕು, ಗೊರಬು
**ಕೊಮರ** ಕುಮಾರ
**ಕೊಯಿಲಿ** ಕೋಲಿ, ಬೆಳೆ ಕೊಯ್ದು ನಂತರ ಭೂಮಿಯಲ್ಲಿ ಉಳಿದ ಕಾಂಡಭಾಗ; ಕುಯಿಲು, ಕುಯ್ಯಲು ಸಿದ್ಧವಾಗಿರುವ ಬೆಳೆ
**ಕೊರಚ್ಚಮ್ಮ** ಕೊರಚ ಜನಾಂಗದ ಹೆಂಗಸು
**ಕೊರಡು** ಜಡ, ಒಣಗಿದ ಮರದ ತುಂಡು
**ಕೊರಪ** ಸಾಧು; ಬಾಚಣಿಗೆ, ಕುದುರೆ ಮೈ ತಿಕ್ಕುವ ಖರಾರು
**ಕೊರಮ** ಕೊರಮ ಎಂಬ ಜಾತಿ, ಕೋತಿ ಆಡಿಸುವ ಜನ, ಕಣಿ ಹೇಳುವ ಜನ
**ಕೊರವ** ಕೊರಮ, ಬುಟ್ಟಿ ಹೆಣೆಯುವ ಜಾತಿಯ ಜನ
**ಕೊರವಂಜಿ** ಕಣಿ ಹೇಳುವವಳು, ಭವಿಷ್ಯ ಹೇಳುವವಳು
**ಕೊರವಿ** ಕೊರವಂಜಿ
**ಕೊರವಿತಿ** ಕಣಿಹೇಳುವವಳು, ಕೊರವಂಜಿ
**ಕೊರಳುಕುಯ್** ಕತ್ತನ್ನು ಕತ್ತರಿಸು
**ಕೊರೆ** ತೂತುಮಾಡು
**ಕೊರೆಕುಲಾವಿ** ಒಂದು ಬಗೆಯ ಕುಲಾವಿ
**ಕೊರ್ಲಾಣೆ<ಕೊರಳಾಣೆ** ಕತ್ತು ಮುಟ್ಟಿ ಮಾಡುವ ಪ್ರಮಾಣ
**ಕೊಲವ<ಕೊಲಪ** ನೆಯ್ಗೆಯವ, ನೇಕಾರ
**ಕೊಲಿಮೆ** ಕುಲುಮೆ, ಅಗ್ಗಿಷ್ಟಿಕೆ
**ಕೊಲ್ಲಿ** ತಗ್ಗು, ತೊಂಡುದನ
**ಕೊಸರು** ಬಿಡಿಸಿಕೊಳ್ಳಲು ಯತ್ನಿಸು, ಮರುಳು ಮಾಡು
**ಕೊಳಗ** ಒಂದು ಅಳತೆ, ನಾಲ್ಕು ಬಳ್ಳಗಳ ಅಳತೆಯ ಪಾತ್ರೆ
**ಕೊಳಗು** ದನಗಳ ಪಾದದ ಗೊರಸು
**ಕೊಳವೆರೋಗ** ಭತ್ತದ ಪೈರು ಕೊಳೆಯುವಂತೆ ಮಾಡುವ ರೋಗ
**ಕೊಳುಗುಳ** ರಣರಂಗ, ಯುದ್ಧಭೂಮಿ, ಯುದ್ಧ
**ಕೊಳ್ಳೆ** ಕೊಳ್ಳೆ ಹೊಡೆಯುವುದು, ದೋಚುವುದು
**ಕೊಳ್ಳೆನಾಯಕ** ದರೋಡೆಕೋರ
**ಕೋಕ** ಚಕ್ರವಾಕ
**ಕೋಕನ, ಕೋಕನದ** ಕೆಂಪುಕಮಲ, ಕೆಂದಾವರೆ

Rarest Archiver

**ಕೋಕನದಹಿತ** ಕಮಲಕ್ಕೆ ಹಿತಕರನಾಗಿರುವವನು–ಸೂರ್ಯ
**ಕೋಕೆಮಾತು** ಅಶ್ಲೀಲ ಮಾತು; ಕೊಂಕು ನುಡಿ
**ಕೋಗಿಲೆ** ಒಂದುಬಗೆಯ ಹಕ್ಕಿ, ಪಿಕ; ಕಾಬಾಳೆ ಗಿಡ, ಕುಪ್ಪೆಗಿಡ
**ಕೋಚು** ವಕ್ರಸ್ವಭಾವ, ಅಣಕಿಸು
**ಕೋಟರ** ಡೊಗರು, ಪೊಟರೆ
**ಕೋಟಲಿ(ಲೆ)** ತೊಂದರೆ, ಕಷ್ಟ, ಕಿರುಕುಳ
**ಕೋಟೀರ** ಕಿರೀಟ
**ಕೋಟೆ** ಊರಿನ ರಕ್ಷಣೆಗಾಗಿ ಕಟ್ಟಿದ ಗೋಡೆ; ದೇಹ
**ಕೋಠಿ** ಉಗ್ರಾಣ
**ಕೋಡಂಗಿ** ಮಂಗ, ಕಪಿ
**ಕೋಡಗ** ಕಪಿ
**ಕೋಡಮುಖಜಾತಿಲಕ** ವರಾಹದೇವರ ಮುಖದಿಂದ ಹುಟ್ಟಿದ ತುಂಗಭದ್ರಾ ತೀರ
**ಕೋಡು** ಕೊಂಬು; ಕೀರ್ತಿ, ಹೆಸರು
**ಕೋಡುಗಲ್ಲು** ಬೆಟ್ಟದ ತುದಿಯ ಕಲ್ಲು, ಪರ್ವತ ಶಿಖರ
**ಕೋಣೆ** ಕೊಠಡಿ
**ಕೋದಂಡ** ಆಯುಧ, ಬಿಲ್ಲು, ಶಿವಧನುಸ್ಸು, ರಾಮನ ಬಿಲ್ಲು
**ಕೋದಂಡದೀಕ್ಷಾಚಾರ್ಯ** ರಾಮ
**ಕೋದ್ರವ** ಹಾರಕ, ಕ್ಷುದ್ರ ಧಾನ್ಯಗಳಲ್ಲೊಂದು
**ಕೋನೇರಿ** ಸುತ್ತಲೂ ಪಾವಟಿಗೆಗಳಿರುವ ಕಲ್ಯಾಣಿ, ಸ್ವಾಮಿ ಪುಷ್ಕರಿಣಿ
**ಕೋನೇರಿತಿಮ್ಮ** ತಿರುಪತಿಯ ಸ್ವಾಮಿ ಪುಷ್ಕರಿಣಿ ತಿಮ್ಮಪ್ಪ–ವೇಂಕಟೇಶ
**ಕೋಪಪ್ರಸಾದ** ಕೋಪ ಮತ್ತು ಪ್ರಸಾದ (ಕೋಪದಿಂದ ಸಜ್ಜನ ವಿರೋಧಿಗಳಿಗೆ ಕೇಡು, ಪ್ರಸಾದದಿಂದ ಸಜ್ಜನರಿಗೆ ಸ್ಥೈರ್ಯ), ಸಿಟ್ಟು ಮತ್ತು ಕರುಣೆ
**ಕೋರಕ** ಮೊಗ್ಗು, ನನೆ
**ಕೋರಿ<ಕುವರಿ** ತುಂಡುಸೀರೆ; ಮಗಳು
**ಕೋರಿಶೆಟ್ಟಿ** ಸಂಚಾರ ಮಾಡುತ್ತ ಹಸುಬೆಚೀಲ ಹಿಡಿದು ವ್ಯಾಪಾರ ಮಾಡುವವ
**ಕೋರೆ** ಉದ್ದನೆಯ ಹಲ್ಲು
**ಕೋಲ** ಕಾಡುಹಂದಿ, ವರಾಹ; ಮುಖವಾಡ; ಹರಿಗೋಲು
**ಕೋಲಗಿರಿ** ವರಾಹಗಿರಿ, ತಿರುಮಲೆ
**ಕೋಲತನಯೆ** ವರಾಹದೇವರ ಮಗಳು ತುಂಗಾ ನದಿ
**ಕೋಲನಂದನ** ವರಾಹಪುತ್ರ; ವಾಸ್ತುಪುರುಷ, ನರಕಾಸುರ ಮತ್ತು ಕುಜ
**ಕೋಲರೂಪ** ವರಾಹರೂಪ–ವಿಷ್ಣು
**ಕೋಲಾಚಲ** ವರಾಹಪರ್ವತ, ತಿರುಪತಿ
**ಕೋಲು** ಹಾವು, ಫಣಿ
**ಕೋಲುಗಾರ** ಕಟ್ಟಿಗೆಕಾರ; ತೆರಿಗೆ ವಸೂಲು ಮಾಡುವವ
**ಕೋವಳ** ಕೋಮಲತೆ, ಮೃದು
**ಕೋವಿದ** ವಿದ್ವಾಂಸ, ಪಂಡಿತ
**ಕೋವಿದಾರ** ಮದ್ದು ಗುಣಿಕೆಯ ಗಿಡ, ಕಂಚುವಾಳದ ಗಿಡ
**ಕೋಶ** ಖಜಾನೆ, ಭಂಡಾರ; ಕತ್ತಿ ಒರೆ
**ಕೋಶಗಳು** ಪಂಚಕೋಶಗಳು
**ಕೋಷ್ಠ** ಪ್ರಾಕಾರ, ಗೂಡು, ಹಗೇವು, ಉಗ್ರಾಣ; ಕೆಳಹೊಟ್ಟೆ
**ಕೋಳ** ಸಂಕೋಲೆ, ಬೇಡಿ
**ಕೋಳಿಕೆ** ಪೀಠ
**ಕೋಳಿವೃಕ್ಷ** ಕೋಳಿಕುಟುಮದ ಬಳ್ಳಿ, ಒಂದು ಜಾತಿಯ ಹೂವು ಬಿಡುವ ಗಿಡ
**ಕೋಳು** ಹಾವು; ಪೆಟ್ಟು, ಹೊಡೆತ, ಕೈಸೆರೆ; ಕೊಳ್ಳೆ, ಲೂಟಿ, ಸೂರೆ
**ಕೋಳುವೋಗು** ಸೂರೆಹೋಗು
**ಕೋಳ್ವಿಡಿ** ಸೆರೆಹಿಡಿ, ಬಂಧಿಸು

Rarest Archive

**ಕೋಳ್ಕೋಗು** ಸೆರೆ ಸಿಕ್ಕು
**ಕೌಂತೇಯ** ಕುಂತಿಯ ಮಗ
**ಕೌಂಶಿಕಾಪತಿ** ಕೌಶಿಕನಾಮಕ ನದಿಯ ಪತಿ–ವರುಣ
**ಕೌತುಕ** ಆಶ್ಚರ್ಯ, ಕತೂಹಲ
**ಕೌಪ, ಕೌಪೀನ, ಕೌಪು** ಲಂಗೋಟಿ
**ಕೌಮಾರ** ಶೈಶವದಿಂದ ಹದಿನಾರು ವರ್ಷದೊಳಗಿನ ವಯಸ್ಸಿನ ಯೌವನ, ಕುಮಾರಾವಸ್ಥೆ
**ಕೌಮುದಿ** ಬೆಳದಿಂಗಳು
**ಕೌಮೋದಕಿ** ವಿಷ್ಣುವಿನ ಗದೆ
**ಕೌರವ** ಕುರುವಂಶದಲ್ಲಿ ಹುಟ್ಟಿದವನು
**ಕೌಶಲ್ಯ** ಜಾಣತನ, ಚದುರು
**ಕೌಶಿಕ** ಕುಶಿಕ ವಂಶದಲ್ಲಿ ಹುಟ್ಟಿದ ವಿಶ್ವಾಮಿತ್ರ; ಒಂದು ಗೋತ್ರ, ಇಂದ್ರ
**ಕೌಶೇಯ** ರೇಶ್ಮೆಯ ಬಟ್ಟೆ, ಪೀತಾಂಬರ
**ಕೌಸ್ತುಭ** ವಿಷ್ಣುವಿನ ಎದೆಯನ್ನು ಅಲಂಕರಿಸಿರುವ ಒಂದು ರತ್ನ, ಸಮುದ್ರಮಥನಕಾಲದಲ್ಲಿ ಉದಿಸಿದ ರತ್ನ
**ಕೌಸ್ತುಭಭೂಷಿತ** ವಿಷ್ಣು
**ಕೌಸ್ತುಭವೈಜಯಂತಿ** ವಿಷ್ಣುವು ಧರಿಸಿರುವ ಒಂದು ರತ್ನ ಮತ್ತು ತುಳಸೀಮಾಲೆ
**ಕೌಳಿಕ** ಮೋಸ, ವಂಚನೆ, ಮೋಸಗಾರ, ವಂಚಕ; ಶಕ್ತಿಯನ್ನು ಪೂಜಿಸುವವನು
**ಕ್ಯಾದಗಿ** ಕೇದಗೆ, ತಾಳೇಗರಿ
**ಕ್ರಕರ** ಪಂಚವಾಯುಗಳಲ್ಲೊಂದು
**ಕ್ರತು** ಯಜ್ಞ, ಯಾಗ
**ಕ್ರತುಕೋಟಿ** ಒಂದು ಕೋಟಿ ಯಜ್ಞ
**ಕ್ರತುಧ್ವಂಸಿ** ದಕ್ಷಯಜ್ಞ ಧ್ವಂಸಮಾಡಿದ ವೀರಭದ್ರ
**ಕ್ರತುಪತಿ** ವಿಷ್ಣು, ಯಜ್ಞವರಾಹ
**ಕ್ರತುಪುರುಷ** ಯಜ್ಞಪುರುಷ–ವಿಷ್ಣು
**ಕ್ರಥು** ಅಗ್ನಿಪುತ್ರ
**ಕ್ರಮತತ್ತ್ವ** ತಾರತಮ್ಯತತ್ತ್ವ
**ಕ್ರಮುಕ** ಅಡಿಕೆ, ಒಂದು ಜಾತಿ ಗಿಡ
**ಕ್ರಿಯಾಮಾಣ** ಕರ್ಮ ಭೇದಗಳು, ಆಗಾಮಿ ಕರ್ಮಗಳು
**ಕ್ರೋಡ** ಹಂದಿ, ವರಾಹ; ವರಾಹ ಅವತಾರ ತಾಳಿರುವ ವಿಷ್ಣು; ಎದೆ
**ಕ್ರೋಡದಂಷ್ಟ್ರಜೆ** ವರಾಹನ ದಾಡೆಯಿಂದ ಹುಟ್ಟಿದವಳು–ತುಂಗಭದ್ರೆ
**ಕ್ರೋಡಾಲಯ** ವರಾಹಕ್ಷೇತ್ರ, ತಿರುಪತಿ
**ಕ್ರೋಡೀಕರಿಸು** ಒಟ್ಟುಗೂಡಿಸು, ಸಂಗ್ರಹಮಾಡು
**ಕ್ರೋಧಿನೃಪ** ಸಿಟ್ಟಿಗೆದ್ದ ರಾಜ, ಶತ್ರುರಾಜ
**ಕ್ರೋಶ** ಹರದಾರಿ
**ಕ್ರೌಂಚ** ಕೊಂಚೆ, ನೀರುಕೊಕ್ಕರೆ
**ಕ್ರೌಂಚಸೂದನ** ಕ್ರೌಂಚನೆಂಬ ಮಾಯಾದೈತ್ಯ ಸುತನನ್ನು ಸಂಹರಿಸಿದ ಸ್ಕಂದ, ಕಾರ್ತಿಕೇಯ
**ಕ್ಲಿನ್ನ** ತೇವ, ಒದ್ದೆ
**ಕ್ಲಿನ್ನಚಿತ್ತ** ತೊಯ್ದ ಮನಸ್ಸು
**ಕ್ಲಿಪುತ, ಕ್ಲಿಪ್ತ, ಕ್ಲುಪ್ತ** ಕ್ಲುಪ್ತ, ಗೊತ್ತುಪಡಿಸಿದ, ನಿಗದಿಯಾದ, ವಿಧಿನಿಯಮದಂತೆ
**ಕ್ಲುಪ್ತಿ** ಮಿತಿ
**ಕ್ಲೇಶ** ಸಂಕಟ, ದುಃಖ, ನೋವು
**ಕ್ಲೇಶಪಂಚಕ** ಐದು ಬಗೆಯ ದುಃಖಗಳು[ಅವಿದ್ಯೆ, ಅಸ್ಮಿತೆ(ಅಹಂಕಾರ), ರಾಗ, ದ್ವೇಷ, ಅಭಿನಿವೇಶ(ಮರಣ ಭಯ)], ವಿಷಯ ಪಂಚಕಗಳು; ಅವಶ್ಯ, ಆಕಸ್ಮಿಕ, ರಾಗ, ದ್ವೇಷ, ಅಭಿನಿವೇಶಗಳು
**ಕ್ಲೇಶಪಾಶ** ದುಃಖಗಳ ನೇಣು, ಬಂಧನ
**ಕ್ಲೇಶಹ** ಕಷ್ಟವನ್ನು ಕಳೆಯುವವನು
**ಕ್ವಚಿತ್ತು** ಸ್ವಲ್ಪ; ಅಪರೂಪ; ರಹಸ್ಯ
**ಕ್ವಣಿತ** ಕಣಕಣ ಸಪ್ಪಳ ಮಾಡುವ, ಸುಸ್ವರ ವಾದ್ಯ, ಧ್ವನಿ, ಒಡವೆಗಳ ಧ್ವನಿ
**ಕ್ಷಣ** ಕಾಲ ಪರಿಮಾಣ, ಸರಿಯಾದ ಸಮಯ
**ಕ್ಷಣಚಿತ್ತ** ಚಂಚಲವಾದ ಮನಸ್ಸು

Rarest Archiver

**ಕ್ಷಣಭಂಗುರ** ನಾಶ ಹೊಂದತಕ್ಕ, ಅಶಾಶ್ವತ
**ಕ್ಷಣಮುನ್ನರಿಯದೆ** ಏನೂ ವಿಚಾರಮಾಡದೆ, ಹಿಂದುಮುಂದು ನೋಡದೆ
**ಕ್ಷಣಿಕ** ಅಶಾಶ್ವತವಾದ, ಕ್ಷಣಕಾಲ ಇರುವ
**ಕ್ಷತ** ಗಾಯ
**ಕ್ಷತಜ** ರಕ್ತ
**ಕ್ಷತಿ** ನೋವು, ಗಾಯ, ನಷ್ಟ
**ಕ್ಷತ್ರಕುಲ** ಕ್ಷತ್ರಿಯರ ವಂಶ, ರಾಜರ ಕುಲ
**ಕ್ಷತ್ರಿಯ** ನಾಲ್ಕು ವರ್ಣಗಳಲ್ಲಿ ಒಂದು, ಆ ವರ್ಣಕ್ಕೆ ಸೇರಿದವನು
**ಕ್ಷಪೆ** ರಾತ್ರಿ; ಅರಶಿನ
**ಕ್ಷಮ** ಭೂಮಿ; ಮನ್ನಿಸುವಿಕೆ
**ಕ್ಷಮಾತಳ** ಭೂಮಿ
**ಕ್ಷಮೆ** ಭೂದೇವಿ
**ಕ್ಷಯ** ನಾಶ
**ಕ್ಷರಪುರುಷರು** ನಶ್ವರರು, ದೇಹನಾಶವುಳ್ಳವರು–ಜೀವರು
**ಕ್ಷರರು** ನಾಶಹೊಂದತಕ್ಕವರು, ದೇಹನಾಶವುಳ್ಳ ಬ್ರಹ್ಮಾದಿ ದೇವತೆಗಳು
**ಕ್ಷಾಂತಿ** ತಾಳ್ಮೆ, ಸೈರಣೆ, ಸಹನೆ
**ಕ್ಷಾತ್ರಕುಲಾಂತಕ** ಪರಶುರಾಮ
**ಕ್ಷಾಲನ** ತೊಳೆಯುವಿಕೆ
**ಕ್ಷಿತಿ** ಭೂಮಿ
**ಕ್ಷಿತಿಅಮರ** ಬ್ರಾಹ್ಮಣ
**ಕ್ಷಿತಿಜದೇವಿ** ಸೀತಾದೇವಿ
**ಕ್ಷಿತಿಜನಪಾಲ** ಲೋಕಸಂರಕ್ಷಕ, ಭೂಪಾಲ, ರಾಜ
**ಕ್ಷಿತಿಧರದೇವನಸುತೆ** ವರಾಹಾವತಾರಿ ವಿಷ್ಣುವಿನ ಮಗಳು–ತುಂಗಭದ್ರೆ ನದಿ
**ಕ್ಷಿತಿಪ** ರಾಜ, ಅರಸ
**ಕ್ಷಿತಿಪತಿ** ಭೂಮಿಯ ಒಡೆಯ, ಅರಸ, ಭಗವಂತ
**ಕ್ಷಿತಿಪರಿಪಾಲ** ಭೂಮಿರಕ್ಷಕ–ವರಾಹ, ರಾಜ
**ಕ್ಷಿತಿಪೇಶ** ಚಕ್ರವರ್ತಿ
**ಕ್ಷಿತಿಭೃತ್** ಬೆಟ್ಟ
**ಕ್ಷಿತಿಯಕದ್ದೊಯ್ದವ** ಹಿರಣ್ಯಾಕ್ಷ
**ಕ್ಷಿತಿಸುತಳಂಘ್ರಿ** ಸೀತಾದೇವಿಯ ಚರಣ
**ಕ್ಷಿತಿಸುತೆ** ಸೀತೆ
**ಕ್ಷಿಪ್ರ** ಬೇಗನೆ, ತ್ವರಿತವಾಗಿ
**ಕ್ಷಿಪ್ರಪ್ರಸಾದ** ಬೇಗ ವರವನ್ನು ಕೊಡುವವ–ಗಣಪತಿ
**ಕ್ಷಿಪ್ರಮನದ** ತ್ವರಿತವಾದ ಮನಸ್ಸನ್ನು ನೀಡುವವ–ಗಣಪತಿ
**ಕ್ಷೀಣದೈವ** ಕೈಲಾಗದ ದೈವ, ಶಕ್ತಿಯಿಲ್ಲದ ದೈವಗಳು, ಕ್ಷುದ್ರ ದೈವಗಳು
**ಕ್ಷೀಣಶಾಸ್ತ್ರ** ಕ್ಷುದ್ರ, ಅಲ್ಪದೃಷ್ಟಿಯ ಶಾಸ್ತ್ರ
**ಕ್ಷೀರ** ಹಾಲು
**ಕ್ಷೀರನದಿ** ಹಾಲಿನಹೊಳೆ; ವಿರಜಾನದಿ
**ಕ್ಷೀರವಾರಿಧಿ** ಹಾಲಿನಸಮುದ್ರ, ಕ್ಷೀರಸಾಗರ
**ಕ್ಷೀರವಾರಿಧಿಕನ್ನಿಕೆ** ಹಾಲಿನ ಕಡಲಲ್ಲಿ ಅವತರಿಸಿದವಳು–ಲಕ್ಷ್ಮಿ
**ಕ್ಷೀರವಾರಿಧಿಶಯನ** ವಿಷ್ಣು
**ಕ್ಷೀರಸಾಗರ** ಸಪ್ತಸಾಗರಗಳಲ್ಲಿ ಒಂದು
**ಕ್ಷೀರಸಾಗರಶಯನ** ವಿಷ್ಣು
**ಕ್ಷೀರಾಂಬುಧಿ** ಹಾಲಿನ ಸಮುದ್ರ
**ಕ್ಷೀರಾನ್ನ** ಹಾಲು–ಅನ್ನ, ಹಾಲಿನಿಂದ ಸಿದ್ಧಪಡಿಸಿದ ಅನ್ನ
**ಕ್ಷೀರಾಬ್ಧಿಕನ್ನಿಕೆ** ಲಕ್ಷ್ಮಿ
**ಕ್ಷೀರಾಬ್ಧಿಶಾಯಿ** ವಿಷ್ಣು
**ಕ್ಷೀರೋದಕ** ಹಾಲು–ನೀರು
**ಕ್ಷುತ್ತೃಷೆ** ಹಸಿವೆ–ಬಾಯಾರಿಕೆ
**ಕ್ಷುದ್ಬಹಳ** ತುಂಬ ಹಸಿವೆ
**ಕ್ಷುದ್ರ** ಅಲ್ಪ, ಕೀಳು
**ಕ್ಷುಧಾತುರ** ಹಸಿವೆಯಿಂದ ವ್ಯಾಕುಲನಾದವ
**ಕ್ಷುಧೆ, ಕ್ಷುಧಾ** ಹಸಿವು

Rarest Archiver

**ಕ್ಷುರಶೃಂಗ** ಚೂಪಾದ ಕೋಡುಳ್ಳವನು
**ಕ್ಷುರಾಂತ** ಸಣ್ಣ ಕತ್ತಿಯ ಅಲಗು
**ಕ್ಷುಲ್ಲಕ** ಅಲ್ಪ, ನೀಚ
**ಕ್ಷೋಣಿ** ಭೂಮಿ, ಪ್ರಪಂಚ
**ಕ್ಷೋಣಿಗೆರಗು** ಭೂಮಿಯಲ್ಲಿ ಬೀಳು
**ಕ್ಷೋಣಿಜ** ಮಂಗಳ
**ಕ್ಷೋಣಿಜಾ** ಸೀತೆ
**ಕ್ಷೋಣಿಪತಿ, ಕ್ಷೋಣೀಪತಿ** ರಾಜ
**ಕ್ಷೇತ್ರ** ಶರೀರ
**ಕ್ಷೇತ್ರಜ್ಞ** ಪರಮಾತ್ಮ, ಶರೀರದಲ್ಲಿರುವವನು, ಆತ್ಮ, ಬಲ್ಲವನು, ಚತುರ
**ಕ್ಷೌಮ** ರೇಷ್ಮೆ ವಸ್ತ್ರ; ಅಟ್ಟ

## ಖ

**ಖ** ಆಕಾಶ, ಬುದ್ಧಿ, ಬ್ರಹ್ಮ
**ಖಂಡ** ತುಂಡು, ಚೂರು; ಮೂಳೆಯಿಲ್ಲದ ಮಾಂಸ; ಭೂಪ್ರದೇಶ
**ಖಂಡದಿಂಡ** ಮಾಂಸ ಮತ್ತು ದೇಹ; ಒಡೆಯುವುದು
**ಖಂಡನ** ಇನ್ನೊಬ್ಬರ ಅಭಿಪ್ರಾಯವನ್ನು ಖಂಡಿಸುವುದು; ಮುರಿಯುವುದು
**ಖಂಡಪರಶು** ಶಿವ, ಪರಶುರಾಮ
**ಖಂಡಬೇಡಿ** ವಾಮನಾವತಾರ
**ಖಂಡಮಂಡಲ** ಅರ್ಧಂಬರ್ಧ, ಅಲ್ಲಿಷ್ಟು ಇಲ್ಲಿಷ್ಟು
**ಖಂಡಸಕ್ಕರೆ** ಕಲ್ಲುಸಕ್ಕರೆ
**ಖಂಡಾರ್ಥ** ಟಿಪ್ಪಣಿ
**ಖಂಡಿ** ಒಂದು ಬಗೆಯ ತೂಕ
**ಖಂಡಿಕೆ** ವೇದಗ್ರಂಥವನ್ನು ಭಾಗಭಾಗವಾಗಿ ಓದುವುದು, ಗುರುವಿಗೆ ಕೊಡುವ ಸಂಭಾವನೆ, ಗುರುದಕ್ಷಿಣೆ
**ಖಂಡುಗ** ಒಂದು ಅಳತೆ
**ಖಂಡೆಯ** ಕತ್ತಿ
**ಖಂಡ್ರಿಸು<ಖಂಡಿಸು** ನಿವಾರಿಸು, ಹೋಗಲಾಡಿಸು
**ಖಗ** ಆಕಾಶದಲ್ಲಿಚರಿಸುವ, ಗರುಡ; ಖಳ; ಆಕಾಶ, ಸೂರ್ಯ
**ಖಗತುರಂಗ** ಗರುಡನನ್ನು ಕುದುರೆಯಾಗುಳ್ಳವ–ವಿಷ್ಣು
**ಖಗಪ, ಖಗಪತಿ** ಪಕ್ಷಿಗಳ ಒಡೆಯ–ಗರುಡ
**ಖಗಪತಿವಾಹನ** ವಿಷ್ಣು
**ಖಗಯುಗ** ಪಕ್ಷಿಗಳ ಜೋಡಿ
**ಖಗರಾಜ** ಪಕ್ಷಿರಾಜ–ಗರುಡ
**ಖಗರಾಜಗಮನ** ಗರುಡಗಮನ–ವಿಷ್ಣು
**ಖಗರ್ಥ** ಶ್ರೀಹರಿಯ ಪರವಾದ ಅರ್ಥ
**ಖಗವರ** ಪಕ್ಷಿಶ್ರೇಷ್ಠ, ಗರುಡ
**ಖಗವಾಹ, ಖಗವಾಹನ** ಪಕ್ಷಿವಾಹನನಾದ ಶ್ರೀಹರಿ
**ಖಗೇಂದ್ರ** ಗರುಡ
**ಖಚರ** ಆಕಾಶದಲ್ಲಿ ಸಂಚರಿಸುವವ, ಗಂಧರ್ವ
**ಖಚಿತ** ಕೂಡಿಸಿದ, ಕುಂದಣಿಸಿದ, ನಿಶ್ಚಿತ
**ಖಟ್ವಾಂಗ** ತಲೆಬುರುಡೆಯ ತುದಿಯನ್ನುಳ್ಳ ಶಿವನ ಗದೆ; ಒಬ್ಬ ಮಹಾರಾಜನ ಹೆಸರು, ದಿಲೀಪ
**ಖಟ್ವಾಂಗರಾಯ** ಸೂರ್ಯವಂಶದ ರಾಜ–ದಿಲೀಪ
**ಖಡಕು** ತೀವ್ರ
**ಖಡಿಯ<ಕಡೆಯ** ಕಡಗ
**ಖತಿ** ಕೋಪ, ದೋಷ, ದುಃಖ
**ಖದ್ಯೋತ** ಸೂರ್ಯ; ಮಿಂಚುಹುಳ, ಇಂದ್ರಗೋಪ

Rarest Archive

**ಖದ್ಯೋತನಂದನ** ಯಮ, ಸುಗ್ರೀವ, ಕರ್ಣ, ಶನೈಶ್ಚರ, ಸೂರ್ಯಪುತ್ರ

**ಖನಿ** ಗಣಿ

**ಖಪತಿ** ಭಗವದ್ರೂಪ, ಇಂದ್ರಿಯಗಳಿಗೆ ಪ್ರೇರಕ

**ಖರ** ಕತ್ತೆ

**ಖರಟು** ಒರಟು, ಗಟ್ಟಿ

**ಖರದೂಷಣ** ರಾವಣನ ಬಲತಾಯಿ ರಾಕೆ ಎಂಬುವಳ ಮಕ್ಕಳು–ಶೂರ್ಪಣಖಿಯ ಸೋದರರು

**ಖರಮಥನ** ಖರನೆಂಬ ರಾಕ್ಷಸನನ್ನು ಕೊಂದವನು –ರಾಮ

**ಖರವಾದಿ** ಒರಟು ಮಾತನಾಡುವವನು

**ಖರಾರಿ** ರಾಮ

**ಖರೆ** ನಿಜ, ಸತ್ಯ

**ಖರ್ಪಟ** ಚಿಪ್ಪು–ಹೊರಗಿನ ಭಾಗ

**ಖರ್ಪರ** ತಲೆಯೋಡು

**ಖಲ** ನೀಚ, ದುಷ್ಟ; ಒರಳು, ಧಾನ್ಯ ಒಕ್ಕುವ ಕಣ; ಯುದ್ಧ

**ಖಲವು<ಕಲಬತ್ತು** ಔಷಧ ದ್ರವ್ಯಗಳನ್ನು ಸೇರಿಸಿ ಅರೆಯುವ ಸಾಧನ

**ಖಲಾಳಿ** ದುಷ್ಟಸಮೂಹ

**ಖಷ್ಠ** ಆಕಾಶದಲ್ಲಿರುವವ, ಸೂರ್ಯ

**ಖಳ** ಕ್ರೂರ, ದುಷ್ಟ, ರಾಕ್ಷಸ

**ಖಳಕಮಲ** ರಾತ್ರಿಯಲ್ಲಿ ಅರಳುವ ಕಮಲ, ಕನ್ನೈದಿಲೆ

**ಖಳಕಮಲೇಂದು** ರಾತ್ರಿಯಲ್ಲಿ ಅರಳುವ ನೈದಿಲೆಗೆ ಚಂದ್ರ

**ಖಳನಅನುಜ** ದುಷ್ಟನ ತಮ್ಮ, ದುಶ್ಶಾಸನ

**ಖಳರವನ** ಅಶೋಕ ವನ

**ಖಳಧ್ವಂಶಕುಠಾರಿ** ರಾಕ್ಷಸರ ಕುಲವನ್ನು ನಾಶ ಮಾಡುವವ–ವಿಷ್ಣು

**ಖಳವಿದಾರಣ, ಖಳಹ** ದುಷ್ಟರನ್ನು ನಾಶ ಮಾಡುವವನು

**ಖಳಾರಾತಿ** ದುಷ್ಟರ ಶತ್ರು, ದೈತ್ಯವೈರಿ, ರಾಕ್ಷಸರ ವೈರಿ–ವಿಷ್ಣು

**ಖಾತ** ಕೊಳ, ಪುಷ್ಕರಿಣಿ

**ಖಾಸ** ಕಫ, ಕೆಮ್ಮು

**ಖಿಲ** ಜೀರ್ಣವಾದ; ಬಿಟ್ಟು ಹೋಗುವುದು, ಶೇಷ, ಉಳಿದದ್ದು; ಮುಟ್ಟ; ಗ್ರಂಥಕ್ಕೆ ಪೂರಕವಾಗಿ ಸೇರಿಸಿದ ಭಾಗ, ಅನುಬಂಧ

**ಖೀರಾನ್ನ<ಕ್ಷೀರಾನ್ನ** ಹಾಲುಅನ್ನ

**ಖುದರಜೆ** ಗಂಗೆ, ನದಿ

**ಖುದ್ರತನ<ಕ್ಷುದ್ರತನ** ವಂಚಕತನ

**ಖುಲಾಸು** ಬಿಡುಗಡೆ, ಮುಕ್ತಿ, ಖಾಲಿ

**ಖುಲ್ಲ** ದುಷ್ಟ, ನೀಚ, ರಾಕ್ಷಸ

**ಖುಲ್ಲರರಿ** ರಾಕ್ಷಸರ ಶತ್ರು–ಕೃಷ್ಣ

**ಖೂನ<ಕೂನ** ಗುರುತು, ಪರಿಚಯ; ಅರಿವು, ತಿಳಿವು

**ಖೂಳ** ದುಷ್ಟ, ಅಲ್ಪ, ನೀಚ

**ಖೇಚರ** ಗಗನದಲ್ಲಿ ಸಂಚರಿಸುವವ, ಗಂಧರ್ವ, ದೇವತೆ

**ಖೇಚರೇಂದ್ರ** ಇಂದ್ರ

**ಖೇಟ** ಪಕ್ಷಿ, ಗರುಡ; ಬೆಟ್ಟದ ತಪ್ಪಲು

**ಖೇಟಕ** ಗುರಾಣಿ

**ಖೇಟವಾಹನ** ಪಕ್ಷಿವಾಹನನಾದ ಶ್ರೀಹರಿ

**ಖೇದ** ದುಃಖ

**ಖೇಶ** ಆಕಾಶಕ್ಕೆ ಅಭಿಮಾನಿ–ಗಣಪತಿ

**ಖೇಳ<ಖೇಲ್** ಕ್ರೀಡೆ, ಆಟ

**ಖೇಳಮೇಳಾಟ** ಆಟಪಾಟ, ವಿನೋದ ಗೋಷ್ಠಿ

**ಖೈರು** ಒಳ್ಳೆಯ

**ಖೊಟ್ಟಿ** ಕೃತ್ರಿಮ, ಕೆಟ್ಟ, ನಿಜವಲ್ಲದ

**ಖೋಡಿ** ಕೆಟ್ಟವನು, ಕ್ಷುಲ್ಲಕ, ದರಿದ್ರ, ಉತ್ತರ ಕರ್ನಾಟಕದಲ್ಲಿ ಬಳಕೆಯಿರುವ ಪ್ರೀತಿಯ ಬೈಗುಳ

Rarest Archiver

**ಖೋಡಿಲಿಖಿತ** ಕೆಟ್ಟ ಬರಹ, ಕೆಟ್ಟ ಹಣೆಬರಹ
**ಖೋಡಿವಿನೋದ** ಮಂಗಚೇಷ್ಟೆ
**ಖೌಟ** ಖವಟ, ಕೆಟ್ಟ ವಾಸನೆಯ
**ಖ್ಯಾತ** ಹೆಸರಾದ, ಪ್ರಸಿದ್ಧವಾದ
**ಖ್ಯಾತಮತ್ಸ್ಯ** ವಿರಾಟರಾಜ
**ಖ್ಯಾತಿ** ಕೀರ್ತಿ, ಪ್ರಸಿದ್ಧಿ
**ಖ್ಯಾಲ್<ಖಯಾಲ್** ಲಹರಿ, ಹಿಂದುಸ್ಥಾನಿ ಸಂಗೀತದಲ್ಲಿ ರಾಗದ ನಡೆ; ಎಚ್ಚರ, ಗಮನ
**ಖ್ಯಾಲಮೇಲ** ಕ್ಷಣಿಕ; ಆಟದಮೇಳ
**ಖ್ಯಾಳ** ನೃತ್ಯನಾಟಕ
**ಖ್ಯಾಳಮ್ಯಾಳ<ಖೇಳಮೇಳ** ಆಟಪಾಟ, ವಿನೋದ ಗೋಷ್ಠಿ

# ಗ

**ಗ** ಗಣಪತಿ
**ಗಂಗಾಚರಣ** ಗಂಗೋದ್ಭವವಾದ ಪಾದವುಳ್ಳವನು –ವಿಷ್ಣು
**ಗಂಗಾಜನಕ** ವಿಷ್ಣು
**ಗಂಗಾಧರ** ಜಡೆಯಲ್ಲಿ ಗಂಗೆಯನ್ನು ಧರಿಸಿದವ– ಶಿವ
**ಗಂಗಾಪಿತ** ಗಂಗೆಯನ್ನು ತನ್ನ ಉಂಗುಷ್ಠದಲ್ಲಿ ಪಡೆದವ, ತ್ರಿವಿಕ್ರಮ–ಶ್ರೀಹರಿ
**ಗಂಗಾಶಿರ** ಶಿವ
**ಗಂಗಾಸುತ, ಗಂಗಾಸೂನು** ಭೀಷ್ಮ
**ಗಂಗಾಳ** ತಟ್ಟೆ, ಊಟದ ತಟ್ಟೆ; ಅಗಲವಾದ ದುಂಡನೆಯ ಲೋಹದ ಪಾತ್ರೆ, ಸ್ನಾನ ಮಾಡಲು ಇಡುವ ಪಾತ್ರೆ
**ಗಂಜರು<ಗದರು** ರೇಗು, ರೊಚ್ಚು
**ಗಂಟಲಗಾಣ** ಗಂಟಲಿಗೆ ಗಾಣ, ಮೃತ್ಯುವಿನೋಪಾದಿಯಲ್ಲಿರುವವನು
**ಗಂಟಲಮುರಿ** ಕೊಲ್ಲು, ಸಾಯಿಸು
**ಗಂಟಲೌಕು** ಗಂಟಲನ್ನು ಒತ್ತು
**ಗಂಟಿನೊಲ್ಲಿ** ದಪ್ಪ ನೂಲಿನ ಹಚ್ಚಡದಂತಹ ವಸ್ತ್ರ ಹೆಣಿಗೆ ಬಟ್ಟೆ, ಬಂಗಾರದ ಸಣ್ಣ ಗಂಟುಗಳನ್ನಳವಡಿಸಿ ಮಾಡಿದ ಮೇಲುಹೊದಿಕೆ
**ಗಂಟು** ಹಣ
**ಗಂಡ** ಪತಿ, ವೀರ; ಕೆನ್ನೆ; ವಿಪತ್ತು
**ಗಂಡ(ಡಾ)ಮಾಲೆ** ಗಂಟಲು ಗ್ರಂಥಿಗಳಿಗೆ ಬರುವ ರೋಗ, ಕೊರಳಲ್ಲಿ ಉಬ್ಬಿಕೊಳ್ಳುವ ಗಂಟು
**ಗಂಡಕತ್ತರಿ** ಅರ್ಧ ಚಂದ್ರಾಕೃತಿಯ ಒಂದು ಆಯುಧ
**ಗಂಡಕಿಶಾಲಗ್ರಾಮ** ನೇಪಾಳದ ಗಂಡಕಿ ನದಿಯಲ್ಲಿ ದೊರೆಯುವ ಶಾಲಗ್ರಾಮ ಶಿಲೆ, ಸಾಲಿಗ್ರಾಮ
**ಗಂಡಮಂಡಲಯುಗ್ಮ** ಕಪೋಲ(ಕೆನ್ನೆ)ಗಳು
**ಗಂಡಸ್ಥಳ** ಕಪೋಲ, ಕೆನ್ನೆ
**ಗಂಡಿಕೆಶಿಲೆ** ಸಾಲಿಗ್ರಾಮ
**ಗಂಡುಗೊಡಲಿ** ಚಪ್ಪಗೊಡಲಿ, ಪರಶು
**ಗಂಡುಹೆಣ್ಣಿನರೂಪ** ವಿಷ್ಣುವಿನ ಮೋಹಿನೀರೂಪ
**ಗಂಡೂಷಣೋದಕ** ಬಾಯಿ ಮುಕ್ಕಳಿಸುವ ನೀರು
**ಗಂತಿ<ಗ್ರಂಥಿ** ಹುಣ್ಣು
**ಗಂಧಮಾದನ** ಒಂದು ಪರ್ವತದ ಹೆಸರು, ಒಂದು ಕಪಿಯ ಹೆಸರು
**ಗಂಧವಹ** ಸುವಾಸನೆಯ ಗಾಳಿಯನ್ನು ಹೊತ್ತು ತರುವವನು, ಗಾಳಿ, ವಾಯುದೇವರು
**ಗಂಧಾಕ್ಷತೆ** ಗಂಧ ಮತ್ತು ಅಕ್ಷತೆ
**ಗಂಬೂರ** ಒಂದು ಸುಗಂಧ ದ್ರವ್ಯ, ಕರ್ಪೂರ
**ಗಂಭೀರರಸ** ಗಂಭೀರಭಾವ, ಗಾಂಭೀರ್ಯ
**ಗಂವ್ಹರ, ಗಂಹರ** ಗವಿ, ಗುಹೆ
**ಗಕ್ಕನೆ** ಒಮ್ಮೆಲೆ
**ಗಗನ** ಆಕಾಶ

Rarest Archiver

**ಗಗನಧುನಿ, ಗಗನನದಿ** ಗಂಗಾನದಿ
**ಗಗನಮಣಿ** ಸೂರ್ಯ
**ಗಗ್ಗರ<ಗರ್ಗರ** ಗೆಜ್ಜೆಗಳಿರುವ ಕಾಲಿನ ಆಭರಣ
**ಗಗ್ಗರಿ** ಕಾಲುಬಳೆ
**ಗಜ** ಕರಿರಾಜ, ಆನೆ
**ಗಜಗಮನೆ** ಆನೆಯಂತೆ ಮಂದವಾದ ನಡಿಗೆ ಉಳ್ಳವಳು
**ಗಜಗಹ್ವರ** ಆನೆಗೊಂದಿ
**ಗಜಚರ್ಮಧರ, ಗಜಚರ್ಮಾಂಬರ, ಗಜಚರ್ಮಾಂಬರಧರ** ಆನೆಯ ಚರ್ಮ ಧರಿಸಿದವನು–ಶಿವ
**ಗಜಪತಿ** ಕಳಿಂಗ ದೇಶದ ಅರಸು
**ಗಜಪುರ** ಹಸ್ತಿನಾವತಿ
**ಗಜಪುರಪ** ಧರ್ಮರಾಜ
**ಗಜಮುಖನಯ್ಯ** ಗಣಪತಿಯ ತಂದೆ–ಶಿವ
**ಗಜರಾಜಗಾಮಿನಿ** ಆನೆಯಂತೆ ಗಂಭೀರ ನಡಿಗೆ ಉಳ್ಳವಳು
**ಗಜರಾಜಪುರ** ಆನೆಗುಂದಿ
**ಗಜವಕ್ತ್ರ** ಆನೆಯ ಮುಖವುಳ್ಳ ಗಣಪತಿ
**ಗಜವರದ** ಗಜೇಂದ್ರನನ್ನು ಅನುಗ್ರಹಿಸಿದ ವಿಷ್ಣು
**ಗಜವರಭಾವಿತ** ಗಜೇಂದ್ರನ ಸ್ತುತಿಗೆ ಪಾತ್ರನಾದವನು–ವಿಷ್ಣು
**ಗಜವೈರಿ** ಸಿಂಹ
**ಗಜಶಾರ್ದೂಲಚರ್ಮಧರ** ಶಿವ
**ಗಜಹಾನ** ಸಿಂಹ
**ಗಜಾನನ** ಆನೆಯ ಮುಖ
**ಗಜುಗ<ಗಜ್ಜುಗ** ಕಣ್ಣಿನಲ್ಲಿ ಬೆಳೆಯುವ ದುರ್ಮಾಂಸದ ಗ್ರಂಥಿ; ಒಂದು ಬಗೆಯ ಬೀಜ
**ಗಜೇಂದ್ರ** ಕರಿರಾಜ, ಆನೆ
**ಗಜೇಂದ್ರವರದ** ಗಜೇಂದ್ರನನ್ನು ಅನುಗ್ರಹಿಸಿದ ವಿಷ್ಣು
**ಗಟ್ಟಿಕಂಕಣ** ಪಾಟ್ಲಿ, ಗೋಟು
**ಗಟ್ಟಿವಳ** ಗಂಧ ತೇಯುವವನು, ಸುಗಂಧ ದ್ರವ್ಯದ ವರ್ತಕ
**ಗಡ** ಅಲ್ಲವೆ; ತ್ವರಿತವಾಗಿ; ಸಂತೋಷ, ಆಶ್ಚರ್ಯ ಮುಂತಾದುವನ್ನು ಸೂಚಿಸುವ ಶಬ್ದ
**ಗಡಕ** ತೊಡಗು, ಸೇರು
**ಗಡಗಡ** ಬೇಗನೆ, ಭಯದಿಂದ ನಡುಗು
**ಗಡಣ** ಸಮೂಹ
**ಗಡಣೆ** ಸರಣಿ; ಆಲೋಚನೆಯ ರೀತಿ
**ಗಡಾರ** ದೊಡ್ಡ ಹಾರೆ
**ಗಡಿಯಾರ** ಕಾಲಮಾಪಕ ಯಂತ್ರ, ಘಟಿಕಾಗಾರ; ಹಿಂದಿನಕಾಲದಲ್ಲಿ ಜೋತಿಷ್ಕರು ಊರ ಹೆಬ್ಬಾಗಿಲ ಮೇಲಿರುವ ಮನೆಯಲ್ಲಿ (ಘಟಿಕಾಗಾರ) ಗಳಿಗೆ ಬಟ್ಟಲು ಹಾಕಿ, ಪ್ರಹರಕ್ಕೊಮ್ಮೆ ಗಂಟೆ ಬಾರಿಸುತ್ತಿದ್ದರು
**ಗಡುಮ** ಗುಡಾಣ (ಮಣ್ಣಿನ ದೊಡ್ಡ ಬಾನಿ)
**ಗಡ್ಡಕೆತ್ತಿಪನ್ನೆಯತೆಗೆದೆ** ಗಂಡಸರ ಕೆನ್ನೆಯಲ್ಲಿ ಅಲಂಕಾರಕ್ಕಾಗಿ ಕಿವಿಯ ಕೆಳನೇರದವರೆಗೆ ವಿಶಿಷ್ಟರೀತಿಯಲ್ಲಿ ನಾಜೂಕಿನಿಂದ ಕತ್ತರಿಸಿದ ಮೀಸೆಗೆ 'ಪನ್ನೆ' ಎಂದು ಹೆಸರು; 'ಅಹಂಕಾರವನ್ನು ಮುರಿದೆ' ಎಂಬ ಅರ್ಥದಲ್ಲಿ ಮೀಸೆ ಬೋಳಿಸಿದೆ ಎಂಬ ಮಾತಿದು
**ಗಣ** ಗುಂಪು
**ಗಣಕೂಟರಾಶಿಗಳು** ಜಾತಕದಲ್ಲಿಯ ಗಣ, ರಾಶಿ, ನಕ್ಷತ್ರಾದಿಗಳು
**ಗಣನೆ** ಲೆಕ್ಕ
**ಗಣರಾಜ** ಗಣಗಳಿಗೆ ಒಡೆಯ–ಗಣಪತಿ
**ಗಣಿಕೆ** ಸೂಳೆ, ವೇಶ್ಯೆ
**ಗಣಿತಜ್ಞ** ಗಣಿತವನ್ನು ಬಲ್ಲವನು, ಜ್ಯೋತಿಷಿ
**ಗಣೆ** ಬಾಣ
**ಗತ** ಹೋದ
**ಗತಆಗತ** ಹಿಂದಿನದು–ಮುಂದಿನದು, ಭೂತ ಭವಿಷ್ಯ

Rarest Archiver

**ಗತಭೀತ** ಅಂಜಿಕೆ ಇಲ್ಲದವ

**ಗತಲೋಚನ, ಗತವಿಲೋಚನ** ಕಣ್ಣಿಲ್ಲದವನು, ಧೃತರಾಷ್ಟ್ರ

**ಗತಶ್ರವಣ** ಕಿವಿ ಇಲ್ಲದವ–ಶೇಷ

**ಗತಾಕ್ಷ** ಕುರುಡ

**ಗತಿ** ಲಯ, ಮೋಕ್ಷ, ದಾರಿ, ದಿಕ್ಕು, ತಾಲಗತಿ, ಚಲನೆ

**ಗತಿಗೋತ್ರ** ದಿಕ್ಕುದೆಸೆ; ಕುಲಬಾಂಧವರು, ಬಾಂಧವ್ಯ

**ಗತಿತಪ್ಪು** ತಪ್ಪು ದಾರಿ ಹಿಡಿ; ಮರಣವೊದಗು

**ಗತಿದರ್ಶಕ** ಮಾರ್ಗದರ್ಶಕ

**ಗತಿದಾಯಕ** ಮೋಕ್ಷದಾಯಕ–ವಿಷ್ಣು

**ಗತಿಪ್ರದ** ಮುಕ್ತಿಯನ್ನು ಕೊಡುವವನು

**ಗತಿವಿದೂರ** ದಿಕ್ಕುತಪ್ಪಿದವನು

**ಗತ್ತು** ಠೀವಿ, ವೈಖರಿ, ದರ್ಪ

**ಗದಾಭೃತ** ಗದೆಯನ್ನು ಹಿಡಿದ

**ಗದ್ದ** ಹೆಡ್ಡ

**ಗದ್ದಿಗಿ, ಗದ್ದುಗೆ** ಪೀಠ, ಸಿಂಹಾಸನ

**ಗದ್ದೆ** ನೀರಾವರಿ ಭೂಮಿ

**ಗದ್ಯಾಣ** ಒಂದು ಚಿನ್ನದ ನಾಣ್ಯ, ನಿಷ್ಕ

**ಗನ್ನಗತಕ** ಮೋಸ, ವಂಚನೆ, ಮಹಾಮೋಸಗಾರ

**ಗನ್ನಗಾರ** ಮೋಸಗಾರ

**ಗಬಕು** ನುಂಗು, ಕಬಳಿಸು

**ಗಬ್ಬಿ, ಗಬ್ಬಿ** ಗರ್ವಿ, ಅಹಂಕಾರಿ; ಸಮರ್ಥ

**ಗಭಸ್ತಿ** ಕಿರಣ, ರಶ್ಮಿ, ಸೂರ್ಯ

**ಗಭೀರ** ಗಂಭೀರ, ಆಳವಾದ, ರಹಸ್ಯವಾದ, ಪರಿಚಯಕ್ಕೆ ಅಸಾಧ್ಯವಾದ

**ಗಭೀರಾತ್ಮ** ಜ್ಞಾನಾನಂದ ಶರೀರ; ಸಮಗ್ರವಾಗಿ ತಿಳಿಯಲು ಅಶಕ್ಯವಾದ ಶರೀರ ಉಳ್ಳವನು–ಶ್ರೀಹರಿ

**ಗಮಕ** ಸೌಂದರ್ಯಸೂಚಕ ಕ್ರಿಯೆ; ಠೀವಿ, ಗಾಂಭೀರ್ಯ, ಸೊಗಸು; ರಾಗಬದ್ಧವಾಗಿ ಅರ್ಥಪೂರ್ಣವಾಗಿ ಕಾವ್ಯವನ್ನು ಓದುವುದು

**ಗಮನ** ಚಲನೆ, ಓಡಾಟ

**ಗಮನಾಗಮನ** ಹೋಗುವುದು, ಬರುವುದು, ಓಡಾಟ

**ಗಮ್ಮನೆ** ಕೂಡಲೆ

**ಗಮ್ಯ** ಹೋಗಬೇಕಾದ ಸ್ಥಳ, ಗುರಿ

**ಗಯ್ಯಾಳಿ** ಬಾಯಿಬಡಕಿ, ದುಷ್ಟಸ್ವಭಾವದವಳು, ಧೂರ್ತೆ

**ಗರ** ವಿಷ; ಗ್ರಹ; ಪಿಶಾಚಿ, ದೆವ್ವ

**ಗರಕನೆ** ಕೂಡಲೆ

**ಗರಜರ** ಗರ್ಜರ, ಬೆಳ್ಳುಳ್ಳಿ

**ಗರವು** ಎಲ್ಲವನ್ನೂ ತನ್ನಕಡೆಗೆ ಎಳೆದುಕೊಳ್ಳುವುದು

**ಗರಳ** ವಿಷ

**ಗರಳಕಂಧರ** ವಿಷಕಂಠ–ಶಿವ

**ಗರಳದಂತ** ಹಾವು

**ಗರಳಪುರ** ನಂಜನಗೂಡು

**ಗರಳಭುಕ್** ಶಿವ, ಮೃತ್ಯುಂಜಯ

**ಗರಳವರಸುವರತ್ನ** ವಿಷನಾಶಕ ರತ್ನ, ಗರುಡಮಣಿ

**ಗರಿಮಾ** ಅಣಿಮಾದಿ ಅಷ್ಟಸಿದ್ಧಿಗಳಲ್ಲಿ ಒಂದು

**ಗರಿಮೆ** ಗೌರವ, ಘನತೆ, ಹಿರಿಮೆ

**ಗರುಡಕೇತನ** ಗರುಡಧ್ವಜ–ವಿಷ್ಣು

**ಗರುಡಗಮನ** ಗರುಡನನ್ನು ವಾಹನ ಮಾಡಿಕೊಂಡವನು–ವಿಷ್ಣು

**ಗರುಡತುರಂಗ** ಗರುಡನನ್ನು ಕುದುರೆಯಂತೆ ಬಳಸುವವ–ವಿಷ್ಣು

**ಗರುಡಧ್ವಜ** ಗರುಡಲಾಂಛನದ ಧ್ವಜವುಳ್ಳವ–ವಿಷ್ಣು

**ಗರುಡಪಕ್ಷಿ** ವಿಷ್ಣುವಿನ ವಾಹನ

**ಗರುಡಾಂಕ** ಗರುಡಧ್ವಜ–ವಿಷ್ಣು

**ಗರುಡಾಗ್ರಜ** ಅರುಣ

**ಗರುಡಾಯುಧ** ಗರುಡಧ್ವಜನಾದ ವಿಷ್ಣು

**ಗರುಡಾರೂಢಶೋಭಿತ** ವಿಷ್ಣು

**ಗರುತ್ಮಂತ** ಗರುಡ

Rarest Archiver

**ಗರುವ** ಶ್ರೇಷ್ಠ, ಮಾಹಾತ್ಮ್ಯವುಳ್ಳವನು
**ಗರುವರಾಯ** ಶ್ರೇಷ್ಠರಲ್ಲಿ ಶ್ರೇಷ್ಠ
**ಗರುವರೇಯ** ಠೀವಿಯಿಂದ ಬರುವ ರಾಯ
**ಗರುವಿಕೆ** ದರ್ಪ, ಗರ್ವ, ಜಂಭ
**ಗರ್ಕ** ಮಗ್ನ
**ಗರ್ಗ** ಗಾರ್ಗ್ಯ ಋಷಿ
**ಗರ್ಗಾಚಾರ್ಯ** ಬಲರಾಮಕೃಷ್ಣರಿಗೆ ನಾಮಕರಣ ಮಾಡಿದ ಪುರೋಹಿತ
**ಗರ್ಜಿಸು** ಆರ್ಭಟಿಸು, ದೊಡ್ಡ ಶಬ್ದಮಾಡು
**ಗರ್ದಭ** ಕತ್ತೆ, ರಾಸಭ
**ಗರ್ಭ** ಬಸಿರು, ಕೂಸು
**ಗರ್ಭಗೃಹ** ಒಳಗಿನಕೋಣೆ; ದೇವಾಲಯದಲ್ಲಿ ಮೂಲ ವಿಗ್ರಹವನ್ನು ಇಟ್ಟಿರುವ ಒಳಭಾಗ
**ಗರ್ಭವಾಸ** ಇಕ್ಕಟ್ಟಾದ ಆದರೂ ವಾಸಯೋಗ್ಯ ವಾದ ಪ್ರದೇಶ
**ಗವಹೂಡು** ಎತ್ತನ್ನು ಕಟ್ಟು, ಎತ್ತುಹೊಡಿ
**ಗವಿ** ಗುಹೆ, ನೆಲೆ
**ಗವುಡ<ಗೌಡ** ಗ್ರಾಮದ ಮುಖ್ಯಸ್ಥ
**ಗವ್ಯಾಮೃತ** ಹಾಲು
**ಗವ್ವಳಿಕೆ** ಶಕ್ತಿ ಕುಗ್ಗುವಿಕೆ
**ಗಸಣಿ(ನಿ), ಗಸಣೆ** ಘರ್ಷಣೆ, ತಿಕ್ಕಾಟ, ಬವಣೆ, ನೋವು, ಜಂಜಾಟ, ಕೋಟಲೆ, ತೊಂದರೆ
**ಗಹ್ವರ** ಅಗಮ್ಯವಾದ, ಆಳವಾದ; ಕಾಡು, ಗುಹೆ
**ಗಳ** ಕಂಠ, ಕೊರಳು, ಕುತ್ತಿಗೆ
**ಗಳರವ** ಕಲರವ, ಪಕ್ಷಿಗಳ ಚಿಲಿಪಿಲಿಧ್ವನಿ
**ಗಳಶ್ಯು** ಶುದ್ಧವಾದ ಧ್ವನಿ
**ಗಳಹು** ಪ್ರಲಾಪಿಸು, ಹೇಳು
**ಗಳಿಗೆಬಟ್ಟಲು** ಕಾಲಸೂಚಕ ಬಟ್ಟಲು
**ಗಳಿತ** ಬಿದ್ದ
**ಗಳಿಯಿಸು** ಜೋತುಬೀಳು, ನೇತುಬೀಳು
**ಗಳು** ಬಿದಿರ ಸಣ್ಣ ಬೊಂಬು, ಬಿದಿರುಕೋಲು; ಕಡೆಯುವಕೋಲು, ಮಂತು; ಬಾಣ
**ಗಳೆ** ಮೀನನ್ನು ಹಿಡಿಯಲು ಬಳಸುವ ಕೋಲು
**ಗಾಂಗೇಯ** ಗಂಗಾಪುತ್ರ-ಭೀಷ್ಮ; ಚಿನ್ನ
**ಗಾಂಗೇಯಕೃತಸ್ಮರಣ** ಭೀಷ್ಮರಿಂದ ಮಾಡಲ್ಪಟ್ಟ ಸ್ತುತಿ
**ಗಾಂಗೇಯಚೇಲ** ಚಿನ್ನದ ಬಣ್ಣದ ಬಟ್ಟೆ, ಪೀತಾಂಬರ, ಬಿಳಿಯ ಬಟ್ಟೆ
**ಗಾಂಗೇಯನಾಥ** ಸ್ಕಂದನ ಸ್ವಾಮಿ
**ಗಾಂಗೇಯಶಯ್ಯುಜ** ಹಿರಣ್ಯಕಶಿಪುವಿನ ಮಗ-ಪ್ರಹ್ಲಾದ
**ಗಾಂಗೇಯಸಮಾಭಾಂಗ** ಬಂಗಾರದ ಹೊಳಪಿನಂತೆ ಹೊಳೆವ ಶರೀರವುಳ್ಳವನು
**ಗಾಂಡೀವಿ** ಅರ್ಜುನ (ಗಾಂಡೀವ ಎಂಬ ಬಿಲ್ಲುಳ್ಳವನು)
**ಗಾಂಡು** ಬುದ್ಧಿಯಿಲ್ಲದ ಟೊಣಪ
**ಗಾಡಿ** ಸೌಂದರ್ಯ
**ಗಾಡಿಕಾತಿ, ಗಾಡಿಕಾರ್ತಿ** ಚೆಲುವೆ, ಸುಂದರಿ
**ಗಾಡಿಕಾರ** ಸುಂದರ, ಸೊಗಸುಗಾರ; ಬಂಡಿ ನಡೆಸುವವ, ಸಾರಥಿ
**ಗಾಢ** ಅತಿಶಯವಾದ, ದೃಢವಾದ; ಸುಷುಪ್ತಿ; ಉದ್ದೇಶಪೂರ್ಣ; ಉತ್ತೇಜಿತ
**ಗಾಣ** ಗಾಳ, ಬಲೆಯ ಕೊಕ್ಕು; ಎಣ್ಣೆಕಾಳು ಅರೆಯುವ ಯಂತ್ರ
**ಗಾತುರ<ಗಾತ್ರ** ದೇಹ, ಶರೀರ, ಅವಯವ, ಆಕಾರ
**ಗಾಥಕ** ಸ್ತುತಿಸುವ, ಸ್ತುತಿಪಾಠಕ, ಗಾಯಕ
**ಗಾಥಾ** ಹಾಡು, ಪದ್ಯ
**ಗಾಥೆ** ಕಥೆ
**ಗಾದಿ** ವಿಶ್ವಾಮಿತ್ರ ಋಷಿಯ ತಂದೆ
**ಗಾದಿತನಯ** ವಿಶ್ವಾಮಿತ್ರ
**ಗಾದೆ** ನಾಣ್ಣುಡಿ, ಲೋಕೋಕ್ತಿ
**ಗಾನ** ನಾಮ ಸಂಕೀರ್ತನೆ, ಹರಿ ಕೀರ್ತನೆ, ಹಾಡು
**ಗಾನಲೋಲ** ಹಾಡಿಗೆ ಮರುಳಾಗುವವ, ಸಂಗೀತದಿಂದ ಮಾಡುವ ಸ್ತುತಿಗೆ ಪ್ರೀತನಾಗುವವ

Rarest Archiver

**ಗಾರಾಗು** ದಿಗಿಲುಗೊಳ್ಳು

**ಗಾರು** ಹಿಂಸೆ, ನಿಂದೆ, ಕಾಡು, ಹಾಳು ಮಾಡು; ಒರಟು, ನಯವಿಹೀನ

**ಗಾರುಗೆಡಿಸು** ತೊಂದರೆ ಕೊಡು

**ಗಾರುಗೊಳ್ಳು** ಕಷ್ಟಕ್ಕೆ ಸಿಲುಕು

**ಗಾರುಡ** ಮೋಡಿ ವಿದ್ಯೆ, ಮಾಯಗಾರ; ಡಂಭಾಚಾರ

**ಗಾರುಡಿಗ** ಗಾರುಡಿಗಾರ, ಮಾಂತಾವಿ, ಮಾಯಕಾರ, ಮೋಡಿಮಾಡುವವನು

**ಗಾರುಪಳ್ಳಿ** ತೀರ ಸಾಮಾನ್ಯ ಹಳ್ಳಿ, ಕುಗ್ರಾಮ

**ಗಾರುಮಾಡು** ನಿರಾಶೆಗೊಳಿಸು, ತೊಂದರೆಮಾಡು

**ಗಾರ್ದಭ** ಕತ್ತೆ

**ಗಾಲಿಸು** ಉರುಳಿಸು, ಜಾಲಿಸು

**ಗಾಲ್ವ<ಗಾಲವ** ಒಬ್ಬ ಋಷಿಯ ಹೆಸರು

**ಗಾವಿಲ<ಗ್ರಾಮೀಣ** ಹಳ್ಳಿಯವ; ಮೂರ್ಖ, ದಡ್ಡ

**ಗಾವುದ** ನಾಲ್ಕು ಹರದಾರಿ, ಹನ್ನೆರಡು ಮೈಲಿಗಳು

**ಗಾಸಿ** ತೊಂದರೆ, ಕಷ್ಟ, ದಣಿವು

**ಗಾಹು** ಮೋಸ, ವಂಚನೆ; ಗುರಿ, ಪ್ರಭಾವ

**ಗಾಳಿ** ವಾಯು; ಪಿಶಾಚಿ, ದೆವ್ವ

**ಗಾಳಿಅಸುರ** ತೃಣಾವರ್ತ–ಕೃಷ್ಣನು ಕೊಂದ ಒಬ್ಬ ಅಸುರ

**ಗಾಳಿನಂದನ** ಆಂಜನೇಯ

**ಗಾಳಿನುಂಗುವಮಂಚ** ಶೇಷಶಯನ–ಹಾವು ಗಾಳಿಕುಡಿದು ಜೀವಿಸುವುದೆಂದು ನಂಬುಗೆಯಿದೆ

**ಗಾಳಿಬೀಸಲುಪೊಂದದಂತೆ** ವಾಯುವೇಗವನ್ನು ಮೀರಿ

**ಗಿಂಡಿ** ಕಿರಿದಾದ ಬಾಯುಳ್ಳ ಪಾತ್ರೆ

**ಗಿಡವೆಲ್ಲನೆಂಟರು** ಎಲ್ಲರೂ ನೆಂಟರು, ಮರಗಿಡಗಳೆಲ್ಲ ಬಂಧುಗಳು

**ಗಿಡಿಗಿಡಿ** ಸಡಿಲವಾದ, ಶಿಥಿಲವಾದ

**ಗಿಡಿಬಿಡಿ, ಗಿಡಿಮಡಿ** ಒಂದು ಬಗೆಯ ವಾದ್ಯ

**ಗಿಣ್ಣುಗೊಳ್ಳು** ಗಣಿಕೆಯಾಗಿರು

**ಗಿಮ್ಮನೆ** ವೇಗವಾಗಿ

**ಗಿರ** ಶ್ರೀಭಾರತೀದೇವಿ, ಶ್ರೀಸರಸ್ವತಿ, ವಾಗ್ದೇವಿ; ಮಾತು

**ಗಿರಿಜೆ** ಪಾರ್ವತಿ

**ಗಿರಿದುರ್ಗಗಳುಐದು** ಪಂಚೇಂದ್ರಿಯಗಳು

**ಗಿರಿಧಾರಿ** ಮಂದರಪರ್ವತವನ್ನು ಹೊತ್ತ ಕೂರ್ಮ, ಗೋವರ್ಧನಪರ್ವತ ಎತ್ತಿದ ಕೃಷ್ಣ

**ಗಿರಿಯೊಡತಿಯಪತಿ** ಕೈಲಾಸ ಪರ್ವತದ ಒಡತಿ ಉಮೆಯ ಪತಿ–ಶಿವ

**ಗಿರಿರಾಜ** ಹಿಮವಂತರಾಜ

**ಗಿರಿವರ** ಗೋವರ್ಧನಗಿರಿ, ಮೇರುಪರ್ವತ

**ಗಿರಿವೈರಿ** ಇಂದ್ರ

**ಗಿರಿಶ** ಶಿವ, ಶ್ರೀನಿವಾಸ

**ಗಿರಿಸುತಪಾಲಕ** ವಾಯುದೇವರು

**ಗಿರೀಶ** ಶಿವ

**ಗಿರು** ಭಾವಿಸು, ಭ್ರಮಿಸು, ತಿರುಗು

**ಗಿಲೀಟು** ಲೇಪನ, ಲೋಹಕ್ಕೆ ಬಳಿಯುವ ಚಿನ್ನದ ಅಥವ ಬೆಳ್ಳಿಯ ಮುಲಾಮು

**ಗಿಳಿನಾಯಿಯಪೆಸರಿನವರು** ಶುಕ ಮತ್ತು ಶೌನಕ ಋಷಿಗಳು

**ಗಿಳಿಬೋದು** ಗಿಳಿಯಾಕೃತಿಯ ಬೋದಿಗೆ, ಕಂಬದ ಮೇಲೆ ತೊಲೆ ನಿಲ್ಲಿಸಲು ಗಿಳಿಯಾಕೃತಿಯಲ್ಲಿ ಮಾಡಿದ ಸಾಧನ

**ಗಿಳಿವಿಂಡು** ಕಾಮನ ಶೃಂಗಾರ ಪರಿವಾರ–ಗಿಳಿಗಳ ಗುಂಪು, ಕೋಗಿಲೆಯ ಇಂಚರ, ವಸಂತ ಮಾಸದ ತಂಗಾಳಿ, ಹೂವಿನ ಬಂಡುಂಡು ಹಾಡುವ ದುಂಬಿ

**ಗೀಟುಗೈ** ನಿಶ್ಚಯ ಮಾಡು

**ಗೀತಪ್ರಸಂಗ** ಗಾಯನಗೋಷ್ಠಿ

**ಗೀರ್ಗಂಧ** ಗಂಧದ ಗೀರು (ಹಣೆಯ ಮೇಲೆ)

**ಗೀರ್ವಾಣ** ದೇವತೆ

Rarest Archiver

**ಗೀರ್ವಾಣಪತಿ** ದೇವತೆಗಳ ಒಡೆಯ–ಇಂದ್ರ
**ಗೀರ್ವಾಣಮುನಿ** ನಾರದ
**ಗೀರ್ವಾಣಾದ್ಯಮರರು** ಬ್ರಹ್ಮ ಮೊದಲಾದ ದೇವತೆಗಳು
**ಗೀಶ** ಬ್ರಹ್ಮ
**ಗುಂಗಾಡು** ಒಂದು ಜಾತಿಯ ಸೊಳ್ಳೆ, ಕೀಟ; ಕೀಳು, ದುಷ್ಟ
**ಗುಂಗು** ಗೀಳು, ಯೋಚನೆ
**ಗುಂಜ** ಗುಲಗಂಜಿ
**ಗುಂಜಕಂಬಸರ** ಗುಲಗಂಜಿ ಸರ
**ಗುಂಜಿ** ಗುಲಗಂಜಿ; ತಿತ್ತಿ–ಮೌರಿ–ಕೊಂಬು–ಬೇರೆ ಬೇರೆ ವಾದ್ಯಗಳ ಹೆಸರು; ಗೂಟ; ಜಗ್ಗಿ ಎಳೆ
**ಗುಂಜಿದಂಡೆ** ಗುಲಗಂಜಿಯ ಸರ
**ಗುಂಡಒಡೆಯಲು** ಎದೆಯನ್ನು ಸೀಳಲು
**ಗುಂಡಕ್ರಿ** ಕರ್ನಾಟಕ ಸಂಗೀತದ ಒಂದು ಘನರಾಗ
**ಗುಂಡಕ್ರಿಯೆ** ಮಹಿಮಾಪೂರ್ಣ ಲೀಲೆಗಳು; ಶ್ರೀ ವಾದಿರಾಜರ ಕೃತಿ
**ಗುಂಡಿಗೆ** ಎದೆ, ಧೈರ್ಯ; ಕುಂಡಿಕೆ, ಸಣ್ಣ ಪಾತ್ರೆ
**ಗುಂಡುಮುಳಕ(ಗ)** ಒಂದು ಜಾತಿಯ ಹಕ್ಕಿ, ಜಾಲಗಾರಹಕ್ಕಿ
**ಗುಂಭ** ರಹಸ್ಯ, ಗಹನ, ಆಳ, ಗುಟ್ಟು
**ಗುಕ್ಕ** ಉಗ್ಗ, ಉಗ್ಗುತ್ತ ಮಾತನಾಡುವವನು
**ಗುಕ್ಕು** ಉಗ್ಗು
**ಗುಜ್ಜ** ಕುಳ್ಳ, ಗಿಡ್ಡ
**ಗುಜ್ಜರ<ಗೂರ್ಜರ** ಗುಜರಾತು
**ಗುಜ್ಜಿ, ಗುಜ್ಜೆ** ಕುಬ್ಜೆ, ಕುಳ್ಳ ಹುಡುಗಿ, ಕನ್ಯೆ
**ಗುಜ್ಜೆಯಲೂರು** ಕೆಳಗಡೆಗೆ ಹೂಳು, ಭೂಮಿಯಲ್ಲಿ ಊರುವಂತೆ ಮಾಡು
**ಗುಟುಕು** ಒಂದು ಸಲ ಕುಡಿಯುವಷ್ಟು, ಕುಟುಕು
**ಗುಟುಕ್ಕಿಕ್ಕು** ಸಾಧನ ಮಾಡಿಕೊಳ್ಳಲು ಬೇಕಾದ ಪರಿಕರಗಳನ್ನು ಒದಗಿಸು
**ಗುಟ್ಟಂಗುಡಿಸು** ಗುಡ್ಡೆ ಮಾಡು, ಗುಂಪು ಕೂಡಿಸು
**ಗುಟ್ಟು** ರಹಸ್ಯ, ಗೌಪ್ಯ
**ಗುಡ** ಬೆಲ್ಲ
**ಗುಡಾಕೇಶ** ಅರ್ಜುನ
**ಗುಡಾಳಕ** ಮೇಲೆತ್ತಿ ಕಟ್ಟಿದ ಜುಟ್ಟು, ಗುಂಗುರು ಗುಂಗುರಾದ ಮುಂಗುರುಳು; ಋಷಿಮುನಿ
**ಗುಡಿಕಟ್ಟು** ಕಾಲುಗಳನ್ನು ಕಟ್ಟು
**ಗುಡಿಗಾರ** ಗಂಧ ಮತ್ತು ದಂತದಲ್ಲಿ ಕುಸುರಿ ಕೆಲಸ ಮಾಡುವವನು
**ಗುಡುಗ** ಗುಡುಗು
**ಗುಣ** ತತ್ತ್ವ, ಸ್ವಭಾವ; ದಯೆ, ಧರ್ಮ; ಹಗ್ಗ, ಸರಪಳಿ; ಬೆಲೆ
**ಗುಣಗಳತ್ರಯಮಾನಿ** ಲಕ್ಷ್ಮಿ
**ಗುಣಗಳೇವೆ** ಗುಣಗಳನ್ನೆ
**ಗುಣಗುರ್ಲ** ಗೋಳಾಕಾರದ ಬಿದಿರಿನ ವಂದರಿ
**ಗುಣಜ** ಗುಣದಿಂದ ಉದ್ಭವಿಸಿದ
**ಗುಣತ್ರಯ** ಸತ್ವ, ರಜ, ತಮ
**ಗುಣಪೂರ್ಣ** ಜ್ಞಾನ ಆನಂದ ಗುಣಗಳಿಂದ ತೃಪ್ತ/ಪೂರ್ಣನಾದವನು
**ಗುಣರನ್ನ** ಒಳ್ಳೆಯ ಗುಣಗಳನ್ನುಳ್ಳವ
**ಗುಣವಲ್ಲಿ** ಗುಣದಬಳ್ಳಿ
**ಗುಣವ್ರಾತ** ಗುಣಸಮೂಹ
**ಗುಣಸಾಂದ್ರ** ಹೆಚ್ಚು ಒಳ್ಳೆಯ ಗುಣಗಳು ಒಂದೆಡೆಯಲ್ಲಿ ಕೂಡಿದವ–ವಿಷ್ಣು
**ಗುಣಹಾರ** ಗುಣವನ್ನೇ ಮಾಲೆಯಾಗಿ ಧರಿಸಿದವನು–ವಿಷ್ಣು
**ಗುಣಾಂಬುಧಿ** ಗುಣಸಮುದ್ರ–ವಿಷ್ಣು
**ಗುಣಾರ್ಣವ** ಗುಣಸಾಗರ–ವಿಷ್ಣು
**ಗುಣಿ** ಹಗ್ಗ, ದಾರ; ಗುಣಉಳ್ಳವ
**ಗುಣಿಸು** ಲೆಕ್ಕ ಹಾಕು, ಗುಣಾಕಾರ ಮಾಡು

Rarest Archiver

**ಗುತ್ತಿಯಎಲ್ಲಮ್ಮ** ಚಂದ್ರಗುತ್ತಿಯ ದೇವತೆ
**ಗುದಿಕಟ್ಟು** ಕಾಲುಗಳನ್ನು ಕಟ್ಟು
**ಗುದ್ದು** ಬಿಲ, ತಗ್ಗು; ಏಟುಹಾಕು
**ಗುಪಿತ, ಗುಪುತ, ಗುಪ್ತ** ಮುಚ್ಚಿದ, ರಹಸ್ಯ
**ಗುಪ್ತಕಂಠಸ್ವರ** ಕುಗ್ಗಿದ ದನಿ
**ಗುಪ್ಪವಡೆ** ಗುಂಪಾಗು
**ಗುಪ್ಪು** ಮುಸುಕು, ಗುಬುರು
**ಗುಮಾನ** ಸೊಕ್ಕು, ಅಹಂಕಾರ; ಸಂದೇಹ
**ಗುಮ್ಮ** ಮಕ್ಕಳಿಗೆ ಭಯವನ್ನು ಹುಟ್ಟಿಸಲು ಹೇಳುವ ಒಂದು ಕಾಲ್ಪನಿಕ ಭೂತ, ಬವ್ವ
**ಗುರು** ಉಪಾಧ್ಯಾಯ, ಪುರೋಹಿತ, ಹಿರಿಯ; ಬೃಹಸ್ಪತಿಗ್ರಹ; ಭಾರವಾದ, ಬೆಲೆಯುಳ್ಳ
**ಗುರುಗುರಿಸು** ಬಡಬಡಿಸು, ಗೊಣಗು
**ಗುರುತರ** ಬಹಳ ಹಿರಿದಾದ, ಪ್ರಭಾವಶಾಲಿಯಾದ
**ಗುರುತಲ್ಪಗಾಮಿ** ಚಂದ್ರ
**ಗುರುತಲ್ಪದವನಕಾಲದಲ್ಲಿ** ಚಂದ್ರವಂಶದಲ್ಲಿ; ಬೆಳುದಿಂಗಳ ಕಾಲದಲ್ಲಿ, ಶುಕ್ಲಪಕ್ಷದಲ್ಲಿ
**ಗುರುತಿಗೆಬಾಹೋರಂಥವರು** ತನ್ನ ದಿಟವಾದ ಸ್ವರೂಪವನ್ನು ಅರಿತು ಕೊಳ್ಳುವವರು
**ಗುರುತು** ಕುರುಹು, ಪರಿಚಯ, ನಿಶ್ಚಯ
**ಗುರುತುತೋರು** ನೆನಪು ಮಾಡು, ಎಚ್ಚರಿಸು
**ಗುರುಮಂತ್ರಧೃತ** ಗುರುಗಳು ಉಪದೇಶಿಸಿದ ಮಂತ್ರಗಳಿಂದ ದೊರಕುವವ-ಶ್ರೀಹರಿ
**ಗುರುಲಿಂಗಜಂಗಮ** ವೀರಶೈವಾಗಮದಲ್ಲಿ ಹೇಳಿದ ಅಷ್ಟಾವರಣಗಳಲ್ಲಿ ಮುಖ್ಯವಾದುವು ಇವು ಮೂರು
**ಗುರುವ** ಅಹಂಕಾರ
**ಗುರುವಾದ** ಜಡವಾದ; ಭಾರವಾದ
**ಗುರುಸುತ** ಅಶ್ವತ್ಥಾಮ
**ಗುರುಳೆ** ಗುಳ್ಳೆ
**ಗುಲಗುಂಜಿಮಾಧವ** ಹಂಪೆಯ ವಿರೂಪಾಕ್ಷೇಶ್ವರನ ದೇವಾಲಯದೊಳಗಿರುವ ಮಾಧವ
**ಗುಲ್ಫ** ಹೆಜ್ಜೆಯ ಮಗ್ಗುಲಲ್ಲಿರುವ ಗಂಟು; ಕಾಲಿನ ಹರಡು
**ಗುಲ್ಮ** ಪ್ಲೀಹ, ಪ್ಲೀಹರೋಗ, ಗಡ್ಡೆರೋಗ; ಕಂಟಿ
**ಗುಲ್ಲಕುಂದ** ಗುಲಕುಂದ, ಗುಲಾಬಿ ಪಕಳೆಗಳಿಂದ ತಯಾರಾದ ಪಾಕ
**ಗುಲ್ಲಿ** ಗೋಲಿ
**ಗುಲ್ಲು** ಗದ್ದಲ, ಪುಕಾರು
**ಗುಷ್ಟ** ಕೊಳಕು, ಕೆಟ್ಟ
**ಗುಷ್ಟುನಾರು** ಕೆಟ್ಟ ವಾಸನೆ
**ಗುಹ** ಕುಮಾರ(ಸ್ಕಂಧ), ರಾಮಾಯಣದಲ್ಲಿ ಒಂದು ಪಾತ್ರ
**ಗುಹಪಿತ** ಶಿವ
**ಗುಹಪಿತಸಖ** ವಿಷ್ಣು
**ಗುಹ್ಯ** ಯೋನಿ, ರಹಸ್ಯ
**ಗುಹ್ಯಗೊಪೆ** ರಹಸ್ಯವಾದ, ಗುಟ್ಟಾದ ಗುಹೆ
**ಗುಳಿ** ಗುಂಡಿ, ತಗ್ಗು
**ಗುಳಿಗೆ** ಒಂದು ನಾಣ್ಯ; ಮಾತ್ರೆ
**ಗುಳ್ಳ** ತ್ರಿಕೋಣಾಕಾರದಲ್ಲಿ ಮಾಡಿರುವ ತಂಬಿಟ್ಟು; ಉತ್ತರಕನ್ನಡ ಜಿಲ್ಲೆ ಸೋಂದಾ/ಸೋದೆ ಹತ್ತಿರ ಬೆಳೆವ ಗುಂಡು ಬದನೇಕಾಯಿ
**ಗುಳ್ಳೆಗೊರಜೆ** ಕಡಲೆಕಾಯಿಬೀಜ ಮೊದಲಾದ ಕುರುಕು ತಿನಿಸು
**ಗೂಗೆ** ಗೂಬೆ
**ಗೂಟನಾಮ** ಊರ್ಧ್ವಪುಂಡ್ರ, ಮೇಲ್ಮುಖವಾದ ನಾಮ
**ಗೂಡಿನಜಾಡು** ಭಗವಂತನ ಹಿರಿಮೆಯ ಅರಿವು, ಮಾಹಾತ್ಮ್ಯಜ್ಞಾನ, ಮೋಕ್ಷಮಾರ್ಗ
**ಗೂಡು** ಗೋಡೆಯಲ್ಲಿ ಮಾಡಿದ ಮಾಡು, ಪಂಜರ; ದೇಹ; ಮನೆ
**ಗೂಡೆ** ನೀರನ್ನು ಎತ್ತುವ ಸಾಧನೆ, ದೊಡ್ಡ ಬುಟ್ಟಿ; ಹುಡುಗಿ
**ಗೂಢಪ** ಶೇಷ, ಹಾವು

Rarest Archiver

**ಗೂಢಪದ** ಸರ್ಪ; ರಹಸ್ಯಪದ
**ಗೂಢಪದಾದ್ರಿ** ಹಾವಿಗೆ ಕಾಲಿಲ್ಲ, ಶೇಷಾದ್ರಿ
**ಗೂಢಪಾಪಿ** ಗುಪ್ತಪಾಪಿ (ಇತರರಿಗೆ ತಿಳಿಯದೆ ಪಾಪಕಾರ್ಯ ಮಾಡುವವನು)
**ಗೂಢಲಿಂಗ** ಗೋವರ್ಧನಗಿರಿ
**ಗೂನಣ್ಣ** ಕೂರ್ಮಾವತಾರ
**ಗೂಹನ** ಗೋಪ್ಯ, ಮುಚ್ಚಿಡುವುದು
**ಗೂಳೆ** ಮುಚ್ಚಳ, ಆವರಣ; ಧಾಳಿಯ ಸಂದರ್ಭ ಅಥವಾ ಕ್ಷಾಮಕಾಲದಲ್ಲಿ ಸಾಮೂಹಿಕವಾಗಿ ಊರು ಬಿಟ್ಟು ಹೋಗುವುದು
**ಗೃಹ** ಮನೆ
**ಗೃಹಪಾಲ** ಮನೆ ಯಜಮಾನ; ನಾಯಿ
**ಗೃಹಮೇಧಿ** ಗೃಹಸ್ಥಾಶ್ರಮಿ
**ಗೆಡೆ** ಪ್ರೀತಿ, ಸ್ನೇಹ, ಗೆಳೆತನ, ಎಣೆ, ಸಮ
**ಗೆಣೆತನ** ಗೆಳೆತನ
**ಗೆಯ್** ಮಾಡು
**ಗೆಲವಿಸು** ಗೆಲ್ಲಿಸು
**ಗೇಣೇಳುನಿಟ್ಟಣಿಕೆ** ಏಳು ಗೇಣಿನ ಏಣಿ, ದೇಹ
**ಗೇಯ** ಗಾಯನ, ಹಾಡಲು ಬರುವ
**ಗೇಲಿ** ಅಪಹಾಸ್ಯ
**ಗೇಹ** ಮನೆ; ದೇಹ
**ಗೈರು** ಕಾವಿ; ಜಾದು; ಚಿನ್ನ
**ಗೊಂಟು** ಸೀರೆ ಅಥವಾ ಪಂಚೆಗಳ ಅಂಚು, ದಡಿ
**ಗೊಂಡು (?)** ಮುದ್ದೆಯಾಗು (?)
**ಗೊಂಡ್ಯ, ಗೊಂಡೆಯ** ದಟ್ಟವಾದ; ಹೆರಳಿಗೆ ಅಲಂಕಾರಕ್ಕೆ ಬಳಸುವ ವಸ್ತು, ಕುಚ್ಚು
**ಗೊಂತು** ಗೊತ್ತು, ದನಕರುಗಳಿಗೆ ಮೇವು ಹಾಕುವ ತೊಟ್ಟಿ
**ಗೊಂದಣ, ಗೊಂದಳ** ಗುಂಪು, ಮೇಳನೃತ್ಯ, ಗಲಾಟೆ
**ಗೊಂದೆ** ವೃಷಭ, ಎತ್ತು
**ಗೊಂದೆವಳವಿಗ** ವೃಷಭಧ್ವಜ–ಶಿವ
**ಗೊಗ್ಗಯ್ಯ** ಮೈಲಾರದೇವನ ಭಕ್ತ; ಎಳೆ ಮಕ್ಕಳನ್ನು ಅಂಜಿಸುವ ಒಂದು ಕಾಲ್ಪನಿಕ ದೆವ್ವ
**ಗೊಜ್ಜಿಲು** ಕೆಸರು
**ಗೊಡವೆ** ಸಂಬಂಧ, ಸಂಪರ್ಕ; ಗೋಜು, ಉಸಾಬರಿ
**ಗೊಡ್ಡಾವು** ಗೊಡ್ಡು ಆಕಳು, ಗಬ್ಬವಾಗದ ಹಸು
**ಗೊಡ್ಡು** ಬಂಜೆ, ನಿಷ್ಫಲತೆ
**ಗೊಣಸು** ಹಸು ಎತ್ತು ಮುಂತಾದುವುಗಳ ಕೊಂಬಿಗೆ ಹಾಕುವ ಒಡವೆ
**ಗೊತ್ತು** ಉದ್ದೇಶ; ಕುರುಹು; ದನಗಳನ್ನು ಕಟ್ಟುವ ಜಾಗ; ನಿಶ್ಚಿತವಾದ ಸ್ಥಳ
**ಗೊಪೆ** ಗುಹೆ, ಗೌಪ್ಯವಾದ ಸ್ಥಳ
**ಗೊಬ್ಬುತನ**<**ಗಬ್ಬಿತನ** ಸೊಕ್ಕು
**ಗೊರಲೆ** ಗೆದ್ದಲು
**ಗೊರವ** ಗುರು; ಭಿಕ್ಷುಕ; ಶೈವ ಸಂನ್ಯಾಸಿ, ಮೈಲಾರನ ಭಕ್ತ
**ಗೊರಸು** ಗೊರಕೆ ಹೊಡೆ
**ಗೊಲ್ಲವ** ಗೋವಳ, ಕೃಷ್ಣ
**ಗೊಲ್ಲು** ಕೊಳೆ; ಮೈ
**ಗೊಲ್ಹಾಟ** ಯೋಗಶಾಸ್ತ್ರದಲ್ಲಿ ಬರುವ ಮೂರು ಅನುಭವ ವರ್ಣನೆಗಳಲ್ಲಿ ಒಂದು
**ಗೋ** ಹಸು, ಎತ್ತು; ನೀರು; ಕಿರಣ; ವಜ್ರಾಯುಧ; ವೇದ; ಆಕಾಶ, ಬ್ರಹ್ಮಾಂಡ, ವೈಕುಂಠ
**ಗೋಕುಲ** ಗೋಸಮೂಹ, ವೇದಸಮೂಹ
**ಗೋಕುಲನಂದನ** ಕೃಷ್ಣ
**ಗೋಖರ**<**ಗೋಕ್ಷುರ** ಭೂಮಿಯ ಮೇಲಿರುವ ಕತ್ತೆ; ಕತ್ತೆಕಿರುಬ, ಆನೆನೆಗ್ಗಿಲು ಬಳ್ಳಿ
**ಗೋಖುರ** ದನಗಳ ಗೊರಸು
**ಗೋಘೃತ** ಹಸುವಿನ ಹಾಲಿನಿಂದ ತಯಾರಿಸಿದ ತುಪ್ಪ
**ಗೋಚರ** ಕಾಣುವುದು, ಮಾಡಬಹುದಾದ; ಹುಲ್ಲು ಗಾವಲು

Rarest Archiver

**ಗೋಜ** ನೀರಿನಲ್ಲಿ ಹುಟ್ಟಿದುದು, ತಾವರೆ; ಸ್ವರ್ಗದಲ್ಲಿ ಹುಟ್ಟಿದವನು, ದೇವತೆ

**ಗೋಜು** ವೇದಗಳನ್ನು ಪಾಲನೆ ಮಾಡುವ; ತೊಂದರೆ, ಗಂಟು, ಬಂಧನ

**ಗೋಟಂಚುಧೋತರ** ಗೋಟು ಅಂದರೆ ಮರದ ಕಾಂಡ–ಅದರಂತೆ ದಪ್ಪವಾದ ಅಂಚುಳ್ಳ ಪಂಚೆ, ದಪ್ಪ ಅಂಚಿನ ಪಂಚೆ

**ಗೋಣಿ** ಸೆಣಬಿನ ನಾರು; ಚೀಲ; ಹಂದಿ, ವರಾಹ

**ಗೋಣು** ಕಂಠ, ಕುತ್ತಿಗೆ

**ಗೋತತಿ** ವೇದಗಳ ಸಮೂಹ; ಹಸುಗಳ ಮಂದೆ

**ಗೋತ್ರ** ಹಸುಗಳ ಮಂದೆ; ವಂಶ; ನೆಲೆ, ಭೂಮಿ, ಬೆಟ್ಟ; ಸೂರ್ಯ

**ಗೋತ್ರಧರಮುಖ** ಭೂಮಿಯನ್ನು ಧರಿಸಿದ ವರಾಹನ ಮುಖವುಳ್ಳವ

**ಗೋತ್ರಾರಿ** ಪರ್ವತಗಳ ಶತ್ರು–ಇಂದ್ರ

**ಗೋದಲಿ(ಲೆ)** ಜಗದಂಬೆಯ ಪ್ರೀತಿಗಾಗಿ ಹಾಕುವ ಗೊಂದಲ; ಹಸುಗಳಿಗೆ ಮೇವು ಹಾಕುವ ತಾವು

**ಗೋದಿಕಲ್ಲು** ಬೀಸುವ ಕಲ್ಲು

**ಗೋದೋಹನ** ಆಕಳು ಕರೆಯುವುದು, ಹಸುವಿನ ಹಾಲು ಕರೆಯುವುದು

**ಗೋಧತತ್ವ** ರಹಸ್ಯಮಯ ಅದ್ವೈತ ತತ್ವ

**ಗೋಧರಾತಪತ್ರ** ಗೋವರ್ಧನ ಗಿರಿಯನ್ನು ಛತ್ರಿಯಾಗಿ ಮಾಡಿಕೊಂಡವ–ಕೃಷ್ಣ

**ಗೋಧುಮಚೂರ್ಣ** ಗೋಧಿಹಿಟ್ಟು

**ಗೋನ** ಗೋಣಿಮರ

**ಗೋಪ** ದನಗಾಹಿ, ಗೋಪಾಲಕೃಷ್ಣ; ನಂದಿ; ಹಾವು; ದೇವೇಂದ್ರ; ಸೂರ್ಯ

**ಗೋಪಕುಮಾರ** ಕೃಷ್ಣ

**ಗೋಪತಿ** ಎತ್ತು; ಚಂದ್ರ

**ಗೋಪಾದ, ಗೋಷ್ಪಾದ** ಆಕಳ ಹೆಜ್ಜೆ, ಹಸುವಿನ ಪಾದ

**ಗೋಪಾಲ** ಭೂಪಾಲ, ದನಗಾಹಿ, ಕೃಷ್ಣ

**ಗೋಪಾಲಕ, ಗೋಪಾಲಕೃಷ್ಣ** ದನಗಾಹಿ, ಕೃಷ್ಣ

**ಗೋಪಾಲನೆಂಬಪೆಣ್ಣಿಗೆ** ವಿಷ್ಣುವಿನ ಮೋಹಿನೀ ರೂಪ

**ಗೋಪಾಲು** ಹಸುವಿನ ಹಾಲು

**ಗೋಪಾಳ** ಭಿಕ್ಷೆ, ಭಿಕ್ಷಾಪಾತ್ರೆ, ಹರಿದಾಸರು ಬೇಡಲು ಹಿಡಿಯುವ ಬಿದಿರ/ ಲೋಹದ ಬುಟ್ಟಿ

**ಗೋಪಾಳಿ** ಗೊಲ್ಲರ ಸಮೂಹ, ಗೊಲ್ಲತಿ, ಗೋಪಳ್ಳಿ, ಗೋವಿನ ಹಳ್ಳಿ, ಗೋಕುಲ

**ಗೋಪಿ** ನಂದಗೋಪನ ಹೆಂಡತಿ ಯಶೋದೆ, ಗೊಲ್ಲತಿ

**ಗೋಪಿಚಂದನ** ವೈಷ್ಣವರು ಮುದ್ರೆಗಳನ್ನು ಧರಿಸಲು ಬಳಸುವ ಒಂದು ಬಗೆಯ ಹಳದಿ ಬಣ್ಣದ ಮಣ್ಣು

**ಗೋಪಿದೇವಿ** ಯಶೋದಾ

**ಗೋಪೀಜಾರ, ಗೋಪೀಜನಜಾರ** ಕೃಷ್ಣ

**ಗೋಪ್ತ, ಗೋಪ್ತಾ** ರಕ್ಷಕ

**ಗೋಮಯ** ಸಗಣಿ

**ಗೋಮಾಯ** ಜಂಬುಕ, ನರಿ

**ಗೋಮಿನಿ** ಲಕ್ಷ್ಮಿ, ಭೂದೇವಿ

**ಗೋಮೇಧಿಕ** ನೇರಳೆಬಣ್ಣದ ರತ್ನ, ಕೆಂಪು ಛಾಯೆಯ ರತ್ನ

**ಗೋರಸ** ಹಾಲು

**ಗೋರಾಟ್** ಎತ್ತು

**ಗೋರ್ಕಲ್ಲು** ಕಠಿಣವಾದ ಕಲ್ಲು, ಬೆಣಚು ಕಲ್ಲು

**ಗೋಲಾಮಚಿ** ಕೆಂಪು ಹರಳಿನ ಒಡವೆ

**ಗೋಲ್ಲಾಟ** ಷಟ್‌ಚಕ್ರಭೇದನ

**ಗೋವ** ದನಗಾಹಿ; ಮೂರ್ಖ

**ಗೋವತ್ಸ** ಕರು, ಕೊಟ್ಟಿಗೆಯಲ್ಲಿ ದನಗಳನ್ನು ಕಟ್ಟುವ ಸ್ಥಳ; ಗೊತ್ತು

**ಗೋವತ್ಸಪಥ** ಆಕಳ ಹಿಂದೆ ಕರು ಹೋಗುವುದು

**ಗೋವತ್ಸಪದ** ಕರುವಿನಪಾದ, ಆಕಳ ಹೆಜ್ಜೆಯಲ್ಲಿ ನಿಂತ ನೀರು, ಆಳವಿಲ್ಲದ ಜಲಾಶಯ

Rarest Archiver

**ಗೋವರ್ಧನಧಾರಿ** ಗೋವರ್ಧನ ಬೆಟ್ಟ ಹೊತ್ತವ–ಕೃಷ್ಣ
**ಗೋವರ್ಧನೋದ್ಧಾರಿ** ಕೃಷ್ಣ
**ಗೋವಳ** ಗೋಪಾಲ, ದನಗಾಹಿ, ಕೃಷ್ಣ
**ಗೋವಳೆ** ಗೊಲ್ಲತಿ
**ಗೋವಳೇಶ** ಕೃಷ್ಣ
**ಗೋವಾಡಿ** ದನಗಳಿರುವ ಸ್ಥಳ, ಗೋಕುಲ
**ಗೋವಿಂದ** ಗೋವುಗಳನ್ನು ಹೊಂದಿದವನು, ಗೊಲ್ಲ; ಉಡುಪಿ ಕೃಷ್ಣನಿಗೆ ಸೋಮವಾರದ ಗೋಪಾಲಬಾಲನ ಅಲಂಕಾರ
**ಗೋವಿಂದಸುತ** ಪ್ರದ್ಯುಮ್ನ, ಸಾಂಬ
**ಗೋವಿದಾಂಪತಿ** ದೇವದೇವೋತ್ತಮ ಶ್ರೀಹರಿ
**ಗೋವಿಸು** ಆಕಳನ್ನು ಮೇಯಿಸು
**ಗೋವೆ** ಗೊಲ್ಲಸ್ತ್ರೀ
**ಗೋವ್ರಜ** ಆಕಳ ಹಿಂಡು, ಆಕಳ ದೊಡ್ಡಿ; ಹಸುಗಳ ಕಾಲ ಧೂಳು
**ಗೋಷ್ಠ** ಕೊಟ್ಟಿಗೆ; ಗೋಕುಲ, ದನಕರುಗಳ ಮಂದೆ
**ಗೋಷ್ಠಿ** ಕೂಟ, ಸಭೆ, ಒಡನಾಟ
**ಗೋಸತಿ** ಗೊಲ್ಲಸತಿ ಗೊಲ್ಲತಿ
**ಗೋಸಾಯಿ** ಬೈರಾಗಿ, ಸಂನ್ಯಾಸಿ
**ಗೋಸ್ಥ** ಜ್ಞಾನೇಂದ್ರಿಯಗಳಲ್ಲಿರುವವನು, ವೇದಪ್ರತಿಪಾದ್ಯ
**ಗೋಳಕ** ಗುಂಡಾದುದು, ಬ್ರಹ್ಮಾಂಡ; ಇಂದ್ರಿಯ ದ್ವಾರಗಳು
**ಗೋಳಕತ್ರಯ** ಸ್ವರ್ಗ, ಮರ್ತ್ಯ, ಪಾತಾಳ
**ಗೌಣ** ಪ್ರಧಾನವಲ್ಲದ, ಅಮುಖ್ಯ; ಕೆಳಮಟ್ಟದ, ಕೀಳಾದ
**ಗೌಣಾಂಡ** ತ್ರಿವಿಧ ಗುಣಗಳಿಂದ ನಿರ್ಮಿತ ಬ್ರಹ್ಮಾಂಡ; ಸಾಮಾನ್ಯವಾದ ಬ್ರಹ್ಮಾಂಡ
**ಗೌತಮಸತಿ** ಅಹಲ್ಯೆ
**ಗೌತಮಿ** ಗೋದಾವರಿ
**ಗೌರ** ಹೊಂಬಣ್ಣ, ನಸುಗೆಂಪು, ಬಿಳಿಪು; ಸುಂದರ; ಬಂಗಾರ
**ಗೌರವರ್ಣ** ಬಿಳಿಬಣ್ಣ, ಹೊಂಬಣ್ಣ
**ಗೌರಾಂಗ** ಹೊಂಬಣ್ಣದ ದೇಹಕಾಂತಿಯವನು; ಬಿಳಿಯ ಉಡುಗೆ
**ಗೌರಾಂಗಿ** ಹೊಂಬಣ್ಣದ ದೇಹಕಾಂತಿಯವಳು
**ಗೌರಿ** ಪಾರ್ವತಿ
**ಗೌರಿಮನೋಹರ** ಶಿವ
**ಗೌಳಿ** ಹಲ್ಲಿ
**ಗ್ರಂಥಿ** ಗಂಟು (ಕರ್ಮದ ಗಂಟು)
**ಗ್ರಾಮಣ್ಯ<ಗ್ರಾಮೀಣ** ಸಣ್ಣತನ, ಕೀಳು ತಂತ್ರ
**ಗ್ರಾಮನಂದಿ** ನಂದಿಗ್ರಾಮ–ರಾಮ ಭರತರು ಮತ್ತೆ ಒಡಗೂಡಿದ ಸ್ಥಳ
**ಗ್ರಾಮಸುಖ** ಲೌಕಿಕ ಸುಖ
**ಗ್ರಾವ** ಕಲ್ಲು, ಬೆಟ್ಟ, ಗ್ರಾಮ; ಧೈರ್ಯ; ಮೋಡ
**ಗ್ರಾಸ** ತುತ್ತು, ಆಹಾರ, ಊಟ
**ಗ್ರೀವ** ಕಂಠ, ಗಂಟಲು, ಕತ್ತು
**ಗ್ರೀವಸ್ಥೆ** ಕಂಠಸ್ಥಾನದಲ್ಲಿರುವವಳು–ಲಕ್ಷ್ಮಿ
**ಗ್ಲೌ** ಚಂದ್ರ, ಶಶಿ

## ಘ

**ಘಂಟಾ** ಗಂಟೆ, ಅರವತ್ತು ನಿಮಿಷಗಳ ಅವಧಿ; ಒಂದು ಜಾತಿ ಮರ
**ಘಟ** ಕುಂಭ (ವಿಷ್ಣುವಿನ ಸಹಸ್ರನಾಮಗಳಲ್ಲೊಂದು); ಅಮೃತಕಲಶ, ಗಡಿಗೆ, ಮಣ್ಣಿನ ಪಾತ್ರೆ; ದೇಹ
**ಘಟಕರ್ಣ** ಕುಂಭಕರ್ಣ(ರಾವಣನ ತಮ್ಮ)
**ಘಟಜ** ಕೊಡದಿಂದ ಹುಟ್ಟಿದವನು–ಅಗಸ್ತ್ಯ, ದ್ರೋಣ
**ಘಟಣೆ** ಘಟನೆ, ಆಗುವುದು
**ಘಟನಕಾರ್ಯ** ಸಾಧ್ಯವಾಗುವ ಕೆಲಸ

Rarest Archive

**ಘಟನಾಘಟನಕಾರ್ಯ** ಮಾಡಲು ಸಾಧ್ಯವಾದ ಹಾಗೂ ಮಾಡಲಸಾಧ್ಯವಾದ ಕೆಲಸ
**ಘಟಸಂಭವ** ಅಗಸ್ತ್ಯಋಷಿ, ದ್ರೋಣಾಚಾರ್ಯ
**ಘಟಿ** ಗಳಿಗೆ (ಇಪ್ಪತ್ತನಾಲ್ಕು ನಿಮಿಷ)
**ಘಟಿಕ** ಸಮರ್ಥ
**ಘಟಿಸು** ಸಂಭವಿಸು, ಉಂಟಾಗು
**ಘಟೆ** ಸಮೂಹ
**ಘಟ್ಟಿಸಿಕೊ** ಹೊಡೆದುಕೊ, ಚಚ್ಚಿಕೊ
**ಘಟ್ಟಿಸು** ಹೊಡೆ; ಶಕ್ತಿಯುಕ್ತವಾಗು
**ಘಡಣೆ** ಗಡಣೆ; ಸೇರುವಿಕೆ, ಹೊಂದುವಿಕೆ, ಪ್ರಾಪ್ತಿ
**ಘಣಮಣಿಸು** ಚೆನ್ನಾಗಿ ಸೋಲಿಸು
**ಘನ** ಮೋಡ; ದೊಡ್ಡ,ಶ್ರೇಷ್ಠ ಪರಮಾತ್ಮ; ಶ್ರೀಗಂಧ
**ಘನಘಾಯ** ದೊಡ್ಡದೇಹ; ಹೆಚ್ಚಾದ ಹುಣ್ಣು
**ಘನಮರುತ** ಬಿರುಗಾಳಿ, ಪ್ರಳಯಕಾಲದ ಗಾಳಿ; ಮುಖ್ಯಪ್ರಾಣ
**ಘನಮೊತ್ತ** ಮೋಡದ ಸಮೂಹ
**ಘನಯೀರ** ಮೋಡಗಳನ್ನು ಚದುರಿಸುವ ವಾಯುವಿನಂತಿದ್ದವ, ಬಿರುಗಾಳಿ
**ಘನರಾಗ** ಜನಕರಾಗಗಳು
**ಘನಸಾರ** ಶ್ರೀಗಂಧ
**ಘನಾಚಲ** ದೊಡ್ಡ ಬೆಟ್ಟ, ಮಂದರಾದ್ರಿ
**ಘನೇಭಕಾಯ** ಮೇಘವರ್ಣದ ಶರೀರವುಳ್ಳವನು
**ಘನ್ನ**<ಘನ ಘನವಂತ, ಅಧಿಕ, ವಿಶೇಷ
**ಘಮ್ಮ** ಅಹಂಕಾರ
**ಘಮ್ಮವಾಗು** ಮಂಕಾಗು, ಸುಮ್ಮನಾಗು, ಅಡಗು
**ಘರಟ್ಟ** ಬೀಸುವ ಕಲ್ಲು
**ಘರ್ಮ** ಬಿಸಿ, ಸೆಖೆ
**ಘರ್ಮಿ** ಬೆವರು
**ಘವಘವಿಸು** ಹೊಳೆ
**ಘಳಿಗೆ** ಇಪ್ಪತ್ತು ನಾಲ್ಕು ನಿಮಿಷಗಳ ಅವಧಿ; ಮಡಿಕೆ
**ಘಳಿಲನೆ** ಬೇಗನೆ

**ಘಾತ** ಹೊಡೆತ, ಪೆಟ್ಟು, ಸಂಹಾರ
**ಘಾತಿಸು** ಹೊಡೆ, ಕೊಲ್ಲು
**ಘಾತೀತಿ** ಕೊಲೆಗಡುಕ
**ಘಾಸಿ** ಆಯಾಸ, ದಣಿವು; ತೊಂದರೆ, ಹಿಂಸೆ, ಕಷ್ಟ, ಯಾತನೆ, ವಿಘ್ನ
**ಘಾಸೆ** ಹಿಂಸೆ; ಶ್ರಮ
**ಘೀಳಿಸು** ಮೊರೆ, ಚೀರು, ಆರ್ಭಟಿಸು
**ಘುಂಘುರ** ಗೆಜ್ಜೆ, ಕಿರುಗಂಟೆ
**ಘೂಕ** ಗೂಬೆ
**ಘೃಣಿ** ಕಿರಣ, ಸೂರ್ಯ
**ಘೃತ** ತುಪ್ಪ
**ಘೃತಪಯೋದಧಿ** ತುಪ್ಪ, ಹಾಲು, ಮೊಸರು
**ಘೃಪ್ರತೀಕ** ಘೃತಮಾನಿ ಲಕ್ಷ್ಮಿ
**ಘೇರಿ** ಮೂರ್ಛೆ
**ಘೈಣಿ** ದೀಪ್ತಿಮಾನ ಕಿರಣ ಪ್ರಕಾಶವುಳ್ಳವನು, ಸೂರ್ಯ
**ಘೋಟ, ಘೋಟಕ** ಕುದುರೆ
**ಘೋಟಕಾಸ್ಯ** ಕುದುರೆ ಮುಖವುಳ್ಳವನು, ಹಯವದನ
**ಘೋಣಿ** ಹಂದಿ, ವರಾಹ
**ಘೋರ** ಭಯಂಕರ
**ಘೋರದಅಳಿಯ** ನರಸಿಂಹ
**ಘೋರಿಸು** ತೊಂದರೆಕೊಡು, ಹಿಂಸಿಸು, ಹೆದರಿಕೆಯನ್ನುಂಟು ಮಾಡು
**ಘೋರೈಸು** ಕಾಡು
**ಘೋಷ** ಧ್ವನಿ, ಶಬ್ದ; ಗೊಲ್ಲರ ಹಟ್ಟಿ
**ಘೋಷಕ** ಪ್ರಕಟನೆಮಾಡುವವನು, ಸಾರುವವನು
**ಘ್ರಾಣ** ಮೂಗು, ಮೂಸುವಿಕೆ
**ಘ್ರಾಣೇಂದ್ರಿಯ** ಮೂಗು
**ಘ್ರುತವರ್ತಿ** ತುಪ್ಪದ ಬತ್ತಿ

Rarest Archiver

## ಚ

**ಚಂಗು** ಹಾರು, ನೆಗೆ; ಒಂದು ಬಗೆಯ ವಾದ್ಯ; ಡೊಂಕಾದ
**ಚಂಚರೀಕ** ದುಂಬಿ, ಭ್ರಮರ; ಸರ್ಪ
**ಚಂಚಲಾತ್ಮ** ಚಂಚಲವಾದ ಮನಸ್ಸು
**ಚಂಚು, ಚಂಚುಪುಟ** ಹಕ್ಕಿಯ ಕೊಕ್ಕು
**ಚಂಡ** ಕ್ರೂರ, ಪ್ರಚಂಡ, ವೀರ, ತೀಕ್ಷ್ಣ
**ಚಂಡಕಿರಣ** ಪ್ರಖರ ತೇಜಸ್ಸುಳ್ಳವ, ಸೂರ್ಯ
**ಚಂಡವಿಕ್ರಮ** ಮಹಾಪರಾಕ್ರಮಿ
**ಚಂಡಾಂಶು** ಸೂರ್ಯ
**ಚಂಡಾರ್ಕ** ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯ
**ಚಂಡಿಕೆ** ಜುಟ್ಟು, ಶಿಖೆ
**ಚಂಡೀಶ** ಪಾರ್ವತಿಯಪತಿ–ಶಿವ
**ಚಂಡ್ಯಮನೋರು** ಪ್ರಚಂಡ ಯಮದೂತರು
**ಚಂದ** ಚಂದ್ರ; ಅಂದ; ಕ್ಷೇಮ
**ಚಂದನಚರ್ಚಿತ** ಗಂಧವನ್ನು ಹಚ್ಚಿದ
**ಚಂದ್ರಕಾಂತಿ** ಬೆಳುದಿಂಗಳು
**ಚಂದ್ರಗಾವಿ** ಕೆಂಬಣ್ಣ
**ಚಂದ್ರಗಾವಿಸೀರೆ** ಸಿಂಧೂರಬಣ್ಣದ ಸೀರೆ
**ಚಂದ್ರಗುಪ್ತ** ಮಲ್ಲಿಕಾ ನಾಮಕಳಾದ ಪಾರ್ವತಿಯ ತಂದೆ
**ಚಂದ್ರಚೂಡ, ಚಂದ್ರಜೂಟ** ಶಿವ
**ಚಂದ್ರನತಂದೆ** ಕ್ಷೀರಸಾಗರ
**ಚಂದ್ರಮುರುವು** ಮೂಗಿನ ಆಭರಣ
**ಚಂದ್ರಮೌಳಿ** ತಲೆಯಲ್ಲಿ ಚಂದ್ರನನ್ನು ಧರಿಸಿದವ–ಶಿವ
**ಚಂದ್ರವೈರಿ** ರಾಹು; ಹಾವು
**ಚಂದ್ರಶಾಲೆ** ಪಡಸಾಲೆ, ಉಪ್ಪರಿಗೆ; ಬೆಳುದಿಂಗಳು ಬೀಳುವಂತೆ ಚಂದ್ರಕಾಂತ ಶಿಲೆಯಿಂದ ನಿರ್ಮಿತವಾದ ಭವನ
**ಚಂದ್ರಶೇಖರ** ಶಿವ
**ಚಂದ್ರಸಹೋದರಿ** ಲಕ್ಷ್ಮಿ
**ಚಂದ್ರಾಯವರ್ಣಪ್ರಭ** ಬೆಳುದಿಂಗಳ ಕಾಂತಿ
**ಚಂದ್ರಿಕಾಚಾರ್ಯರು** ವ್ಯಾಸರಾಜರು
**ಚಂದ್ರಿಕಾನಿಭ** ಬೆಳುದಿಂಗಳಿನಂತೆ/ಬೆಳುದಿಂಗಳ ಕಾಂತಿಯಂತೆ
**ಚಂದ್ರಿಕೆ** ಬೆಳುದಿಂಗಳು
**ಚಂಪಕ** ಸಂಪಿಗೆ
**ಚಂಪಕನಾಸ** ಸಂಪಿಗೆಯಂತಿರುವ ಮೂಗು
**ಚಕೋರ** ಬೆಳುದಿಂಗಳನ್ನು ಸೇವಿಸಿ ಬದುಕುವುದೆಂದು ನಂಬಲಾಗಿರುವ ಪಕ್ಷಿ
**ಚಕೋರಸಖ** ಚಂದ್ರ
**ಚಕ್ಕನೆ** ಬೇಗ, ತಕ್ಷಣ; ಅಚ್ಚುಕಟ್ಟಾಗಿ
**ಚಕ್ಕಮಲಕು** ಕಪಟ, ಮೋಸ
**ಚಕ್ರತೀರ್ಥಸರ** ಹಂಪೆಯಲ್ಲಿರುವ ಚಕ್ರತೀರ್ಥ ಸರೋವರ
**ಚಕ್ರಧರ, ಚಕ್ರಪಾಣಿ** ಕೈಯಲ್ಲಿ ಸುದರ್ಶನ ಚಕ್ರ ಧರಿಸಿದವನು–ವಿಷ್ಣು
**ಚಕ್ರವರ್ತಿಗಳಾರುಮಂದಿ** ನಳ, ಹರಿಶ್ಚಂದ್ರ, ಪುರುಕುತ್ಸ, ಪುರೂರವಸ್, ಸಗರ, ಕಾರ್ತವೀರ್ಯ
**ಚಕ್ರವಾಕ** ಒಂದು ಜಾತಿಯ ಹಕ್ಕಿ, ರಥಾಂಗ ಪಕ್ಷಿ, ಕೋಕಪಕ್ಷಿ
**ಚಕ್ರಹಸ್ತ** ಚಕ್ರಹಿಡಿದ ಹಸ್ತ–ವಿಷ್ಣು
**ಚಕ್ರಾಂಕಿತ** ಚಕ್ರದ ಗುರುತು, ತಪ್ತಮುದ್ರೆ
**ಚಕ್ರಿ** ವಿಷ್ಣು
**ಚಕ್ರಿಪುರಿ** ವೈಕುಂಠ
**ಚಕ್ರೇಶ** ಮಹಾರಾಜ, ವಿಷ್ಣು
**ಚಕ್ಷು** ಕಣ್ಣು
**ಚಕ್ಷುಪುಟ** ಕಣ್ಣು, ಕಣ್ಣಿನ ಪಾಪೆ
**ಚಕ್ಷುರಾಜಿ** ಕಣ್ಣುಗಳ ಸಮೂಹ
**ಚಕ್ಷುಶ್ರವಣ** ಕಣ್ಣೇ ಕಿವಿಯಾಗಿ ಉಳ್ಳ ಶೇಷ, ಹಾವು
**ಚಕ್ಷುಶ್ರವಣಗಿರೀಶ** ಶೇಷಾಚಲ ಪರ್ವತಕ್ಕೆ ಒಡೆಯ–ವೇಂಕಟೇಶ

Rarest Archiver

**ಚಕ್ಷುಶ್ರವಣಶಾಯಿ** ಶೇಷಶಾಯಿ–ವಿಷ್ಣು
**ಚಚ್ಚರ** ಎಚ್ಚರಿಕೆ; ಪ್ರತ್ಯಕ್ಷ; ಶೀಘ್ರ, ಬೇಗ
**ಚಟಾಕು** ಒಂದು ಅಳತೆ, ಸೇರಿನ ಹದಿನಾರನೇ ಒಂದು ಭಾಗ
**ಚಟುಲ** ತೀವ್ರ, ತ್ವರೆ, ವೇಗ, ಸುಂದರವಾದ, ಥಳಥಳಿಸುವ
**ಚಟುಲಂಧಕಾರ** ದಟ್ಟವಾದ ಕತ್ತಲೆ; ಮಹಾ ಅಜ್ಞಾನ
**ಚಟ್ಟಿ, ಚಟ್ಟಿಗೆ, ಚಟ್ಟಿಕ್ಕು, ಚಟ್ಟುಬಡಿ** ಮಣ್ಣಿನ ಗಡಿಗೆ, ಮಡಕೆ; ಋತುಮತಿಯಾದ ಬಾಲೆಯ ಕೈಗೆ ಜಿಕಳಿ ಹಚ್ಚಿ ಕೈ ಗುರುತು ಮಾಡುವುದು
**ಚಡಾಳಿಸು** ವೃದ್ಧಿಹೊಂದು, ಅಧಿಕವಾಗು
**ಚಡಿ** ಬಾರುಕೋಲು
**ಚಣ** ಕ್ಷಣ–ಪಿತೃಗಳಿಗೆ ಆಹ್ವಾನ ಕೊಡುವುದು
**ಚಣಕ** ಕಡಲೆ
**ಚಣಿಸು** ತಿಳಿ, ಬಲ್ಲವನಾಗು, ನಿಪುಣನಾಗು
**ಚತುಕ್ಷಸ್ಸಾಧನ** ಧರ್ಮ, ಅರ್ಥ, ಕಾಮ, ಮೋಕ್ಷ
**ಚತುರ** ನಾಲ್ಕು, ಜಾಣ, ನಿಪುಣ
**ಚತುರಂಗ** ಸೈನ್ಯದ ಆನೆ, ಕುದುರೆ, ರಥ ಮತ್ತು ಕಾಲಾಳು ಎಂಬ ನಾಲ್ಕು ಅಂಗ
**ಚತುರಕುಲ** ಶೂದ್ರ; ಯಾದವ
**ಚತುರಕುಲಜ** ಕೃಷ್ಣ
**ಚತುರನಾಶ** ನಾಲ್ಕು ವಿಧವಾದ ನಾಶ, ಅನಿತ್ಯತ್ವ, ದೇಹಹಾನಿ, ದುಃಖಾವಾಪ್ತಿ, ಅಪೂರ್ಣತೆ ಗಳೆಂಬ ನಾಲ್ಕು ವಿಧ ನಾಶಗಳು
**ಚತುರಮುಖ, ಚತುರ್ಮುಖ** ಬ್ರಹ್ಮ
**ಚತುರಮುಖನಯ್ಯ** ವಿಷ್ಣು
**ಚತುರಮೂರುತಿ** ರಾಮ, ಕೃಷ್ಣ, ನರಹರಿ, ವೇದವ್ಯಾಸ ಎಂಬ ವಿಷ್ಣುವಿನ ನಾಲ್ಕು ರೂಪ ಗಳು, ಅಥವಾ ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ (ತತ್ತ್ವಾಭಿಮಾನಿ ಸುರರು)
**ಚತುರವಿಧಮುಕ್ತಿ, ಚತುರ್ಮುಕ್ತಿ** ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಮತ್ತು ಸಾಯುಜ್ಯ
**ಚತುರಶೀತಿಲಕ್ಷ** ಎಂಭತ್ತನಾಲ್ಕು ಲಕ್ಷ
**ಚತುರಾಕ್ಷರಸ್ಥ** ವೇಂಕಟೇಶ ಎಂಬ ನಾಲ್ಕು ಅಕ್ಷರಗಳಿಂದ ಪ್ರಸಿದ್ಧನಾದ ನಾರಾಯಣ
**ಚತುರಾತ್ಮ** ಆತ್ಮ, ಅಂತರಾತ್ಮ, ಪರಾತ್ಮ, ಜ್ಞಾನಾತ್ಮ ಗಳು
**ಚತುರಾನನ** ನಾಲ್ಕು ಮುಖವುಳ್ಳ ಬ್ರಹ್ಮ
**ಚತುರಾಯುಧ** ಶಂಖ, ಚಕ್ರ, ಗದೆ, ಪದ್ಮ
**ಚತುರಾವಸ್ಥೆ** ಬಾಲ್ಯ, ಕೌಮಾರ, ಯೌವನ, ವಾರ್ಧಕ್ಯ
**ಚತುರಾಸ್ಯ** ಚತುರ್ಮುಖ ಬ್ರಹ್ಮ
**ಚತುರಾಸ್ಯನಪಿತ** ಬ್ರಹ್ಮನ ತಂದೆ–ವಿಷ್ಣು
**ಚತುರಾಸ್ಯನುತ** ಚತುರ್ಮುಖ ಬ್ರಹ್ಮನಿಂದ ಕೊಂಡಾಡಿಸಿ ಕೊಂಡವ–ವಿಷ್ಣು
**ಚತುರೋತ್ತರಶತ** ಒಂದುನೂರು ನಾಲ್ಕು–ವಿಜಯೀಂದ್ರಕೃತ ಗ್ರಂಥಸಂಖ್ಯೆ
**ಚತುರೋಪಾಯ** ಸಾಮ, ದಾನ, ಭೇದ, ದಂಡ
**ಚತುರ್ಜಾವ** ರಾತ್ರಿಯ ನಾಲ್ಕು ಜಾವಗಳು
**ಚತುರ್ದಶ** ಹದಿನಾಲ್ಕು
**ಚತುರ್ದಶಭುವನ** ಹದಿನಾಲ್ಕು ಲೋಕಗಳು
**ಚತುರ್ಮುಖವಾಣಿ** ವೇದವಾಣಿ
**ಚತುರ್ವಿಂಶತ್ಯಕ್ಷರ** 4+20=24 ಇಪ್ಪತ್ತನಾಲ್ಕು ಅಕ್ಷರ
**ಚತುರ್ವಿಧ ಪುರುಷಾರ್ಥ** (ಅರ್ಥಚತುಷ್ಟಯ) ಧರ್ಮ, ಅರ್ಥ, ಕಾಮ, ಮೋಕ್ಷ
**ಚತುರ್ವಿಧ ಫಲ** ಧರ್ಮ, ಅರ್ಥ, ಕಾಮ ಮೋಕ್ಷ ಗಳಿಂದ ದೊರೆಯುವ ಫಲ
**ಚತುರ್ವಿಧ ಮುಕ್ತಿ**ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ

Rarest Archiver

**ಚತುರ್ವಿಧ** ಸ್ತ್ರೀಜಾತಿ ಹಸ್ತನಿ, ಶಂಖಿನಿ, ಪದ್ಮಿನಿ, ಚಿತ್ತಿನಿ
**ಚತುಷ್ಕ** ನಾಲ್ಕು
**ಚತುಷ್ಟಯ** ನಾಲ್ಕು ಪುರುಷಾರ್ಥಗಳು
**ಚತ್ರಶಾಲೆ** ಛತ್ರ
**ಚತ್ವಾರಿ** ಯಜ್ಞಕ್ಕಾಗಿ ಚೌಕವಾಗಿ ಸಮತಟ್ಟು ಮಾಡಿದ ನೆಲ
**ಚದುರ** ಚತುರ, ಜಾಣ
**ಚದುರನುಡಿ** ಜಾಣತನದಮಾತು, ಜಾಣ್ನುಡಿ
**ಚಪ್ಪಗೊಡಲಿ** ಅಗಲವೂ ಹರಿತವೂ ಆದ ಕೊಡಲಿ, ಪರಶು, ಪರಶುರಾಮನ ಕೊಡಲಿ
**ಚಪ್ಪರಿಸು**ಸವಿ, ರುಚಿನೋಡು
**ಚಪ್ಪಳೆ** ಚಪ್ಪಾಳೆ
**ಚಮು** ಸೈನ್ಯ, ಪಡೆ
**ಚಮೂರು** ಒಂದು ಜಾತಿಯ ಜಿಂಕೆ
**ಚಮ್ಮಟಿಗೆ** ಚಾವಟಿ, ಬಾರುಕೋಲು
**ಚಮ್ಮಳಿಗಿ, ಚಮ್ಮಾಳಿಗೆ** ಚರ್ಮದ ಚಪ್ಪಲಿ, ಪಾದರಕ್ಷೆ
**ಚಮ್ಮೊನೆಮಾಡು** ತನ್ನ ಸೈನ್ಯದ ಮುಂಭಾಗದಲ್ಲಿ ನಿಲ್ಲಿಸು
**ಚಯ** ಸಮೂಹ
**ಚರ** ಗೂಢಚಾರ, ದೂತ; ಓಡಾಡು
**ಚರಗೇಡಿ** ಆಚರಣೆಗಳನ್ನು ಹಾಳು ಮಾಡುವವನು
**ಚರಜೀವಿ** ಚಲನೆಯುಳ್ಳ ಪ್ರಾಣಿ
**ಚರಣ** ಪಾದ; ಪಲ್ಲವಿಯ ನಂತರ ಬರೆಯುವ ಪದ್ಯ ಭಾಗ
**ಚರಣತೊಡರು** ಕಾಲಿಗೆ ಧರಿಸುವ ಆಭರಣ; ಬಿರುದಿನ ಸಂಕೇತವಾಗಿ ಧರಿಸುವ ಕಾಲುಬಳೆ, ಪೆಂಡೆಯ
**ಚರಣದಿಂದುದಿಸಿದವಳು** ವಿಷ್ಣುವಿನ ಪಾದದಿಂದ ಉದಿಸಿದ ಗಂಗೆ
**ಚರಣನಖಾಗ್ರ** ಕಾಲುಗುರಿನ ತುದಿ
**ಚರಣನಾಲ್ಕು** ದನಗಳು
**ಚರಣರಕ್ಷೆ** ಪಾದರಕ್ಷೆ
**ಚರಣರಜ** ಕಾಲುಧೂಳು
**ಚರಣರತಿ** ಪಾದದಲ್ಲಿ ಆಸಕ್ತಿ, ಭಕ್ತಿ
**ಚರಣವನಜ** ಅಡಿದಾವರೆ, ಪಾದಪದ್ಮ
**ಚರಣಾಂಬು** ಪಾದತೀರ್ಥ
**ಚರಣಾಬ್ಜ, ಚರಣಾರವಿಂದ, ಚರಣಾಂಬುರುಹ** ಪಾದಕಮಲ
**ಚರಣೇಂದೀವರಯುಗ್ಮ** ಅಡಿದಾವರೆಗಳೆರಡು
**ಚರಮ** ಕೊನೆ, ಅಂತ್ಯ
**ಚರಮದೇಹ** ಕೊನೆಯ ಜನ್ಮ
**ಚರವಾಚರ** ಜಡಚೇತನಗಳು
**ಚರಸುರತರು** ಚಲಿಸುವಂಥ ಕಲ್ಪವೃಕ್ಷ–ಕೃಷ್ಣ
**ಚರಾಚರ** ಚಲಿಸುವ–ಚಲಿಸದಿರುವ, ಜೀವವಿರುವ ಮತ್ತು ಇಲ್ಲದಿರುವ
**ಚರಾಚರದೀಕ್ಷಿ** ಚೇತನಾಚೇತನಗಳ ಹೊಣೆಯನ್ನು ಹೊತ್ತಿರುವ ದೇವರು
**ಚರಿ** ಆಚರಣೆ; ಚರ್ಯೆ; ಭಿಕ್ಷೆ
**ಚರಿಗೆ** ಚೊಂಬು; ಊಟ
**ಚರಿಪ** ಸಂಚರಿಸುವ, ಆಚರಿಸುವ
**ಚರಿಯ, ಚರಿಯೆ<ಚರ್ಯೆ** ನಡತೆ, ಆಚಾರ; ಕಾರ್ಯ; ಇರುವಿಕೆ, ಸ್ಥಿತಿ
**ಚರಿಸು** ನಡೆ, ಸಂಚರಿಸು
**ಚರು** ಹವಿಸ್ಸನ್ನು ಸಿದ್ಧಪಡಿಸುವ ಪಾತ್ರೆ
**ಚರುಪು** ದೇವರಿಗೆ ಅರ್ಪಿಸುವ ನೈವೇದ್ಯ, ಆಹುತಿ
**ಚರ್ಚಿತ** ಲೇಪಿಸಿದ
**ಚರ್ಮ** ತೊಗಲು, ಗುರಾಣಿ
**ಚರ್ಯ** ಚರಿತ್ರೆ
**ಚರ್ವಣ** ಅಗಿದು ತಿನ್ನುವುದು
**ಚಲತ್** ಚಲಿಸುವ
**ಚಲತಮದ** ಅರೇ ಚಂಚಲವಾದ
**ಚಲತ್ಕುಂಡಲ** ಅಲ್ಲಾಡುವ ಕಿವಿಯ ಆಭರಣ, ಲೋಲಾಕು

Rarest Archiver

**ಚಲದಂಕ<ಛಲದಂಕ** ಹಟವಾದಿ

**ಚಲದ್ಗಾತ್ರ** ನಡುಗುವ ಶರೀರ, ಶಿಥಿಲಗೊಂಡ ದೇಹ

**ಚಲನೆ** ಅಲ್ಲಾಡುವುದು, ಮುಂದೆ ಸಾಗುವುದು

**ಚಲಿತ** ಹರಿದ, ಹಾದುಹೋದ

**ಚಲಿಪಿಲಿ** ಚೆಲ್ಲಾಪಿಲ್ಲಿ

**ಚಲುವನ್ನಪಾರ** ಅಪಾರ ಚೆಲುವನ

**ಚಲ್ಲಣ** ತೊಡೆ ಮುಚ್ಚುವ ಚೆಡ್ಡಿ

**ಚಲ್ಲಿಕ** ಗಂಭೀರವಲ್ಲದ್ದು, ತುಚ್ಛ

**ಚಲ್ಲು** ಹರಡು

**ಚಲ್ಲೆಗಂಗಳು** ಬೊಗಸೆ ಗಣ್ಣುಗಳು

**ಚಲ್ಲೆಗಣ್** ವಿಲಾಸವನ್ನು ಸೂಸುವ ನೋಟ

**ಚವಲು** ಚಾಮರ, ಕೂದಲು

**ಚಷಕ** ಮದ್ಯವನ್ನು ಕುಡಿಯುವ ಬಟ್ಟಲು, ಪಾನ ಪಾತ್ರೆ

**ಚಹಡಿ, ಚಾಡಿ, ಚೌಹಡಿ** ಪಿಸುಣು, ಕೊಂಡೆಯ, ಚಾಡಿಮಾತು

**ಚಳ** ಅಲುಗುವ

**ಚಳಕಿ** ತೋಳಿನ ಆಭರಣ, ಬಂದಿ, ತೋಳುಬಳೆ

**ಚಳತುಂಬು** ಓಲೆಯೊಂದಿಗೆ ಹಾಕಿಕೊಳ್ಳುವ ಒಂದು ಬಗೆಯ ಮುತ್ತಿನ ಆಭರಣ

**ಚಳಿಗಿರೀಶ** ಹಿಮವಂತರಾಜ, ಶಿವ

**ಚಳಿಯಮಗಳು** ಹಿಮವಂತನ ಮಗಳು–ಪಾರ್ವತಿ

**ಚಳಿವೆಟ್ಟ** ಹಿಮಾಚಲ

**ಚಳೆಯ** ಸಿಂಪಡಿಸುವುದು, ಚುಮುಕಿಸುವುದು

**ಚಳ್ಳ** ಕಿವಿಯ ಒಂದು ಆಭರಣ, ಚಳತುಂಬು, ಜುಮುಕಿ

**ಚಳ್ಳಪಿಳ್ಳಿಗೊಂಬೆ** ಚೆಲುವಾದ (ಪ್ರೀತಿಯ) ಮಗು ವಿನಂತಿರುವ ಗೊಂಬೆ, ಶೆಲ್ಲಪಿಳ್ಳೆ, ಚೆಲುವ ನಾರಾಯಣ

**ಚಾಂದ್ರಮ, ಚಾಂದ್ರಮಾನ** ಚಂದ್ರನ ಗತಿಯನ್ನು ಅನುಸರಿಸಿ ದಿನ ಮತ್ತು ಮಾಸಗಳನ್ನು ಲೆಕ್ಕ ಮಾಡುವ ಕ್ರಮ

**ಚಾಂದ್ರಾಯಣ** ಚಂದ್ರನ ವೃದ್ಧಿ, ಕ್ಷಯಗಳಿಗನುಸಾರವಾಗಿ ಆಹಾರವನ್ನು ಸ್ವೀಕರಿಸುವ ಒಂದು ವ್ರತ

**ಚಾಂಪ<ಚಾಪ** ಧನುಸ್ಸು, ಬಿಲ್ಲು

**ಚಾಂಪೇಯ** ಸಂಪಿಗೆ; ಕರ್ಣ; ಚಿನ್ನ

**ಚಾಕ್ಷುಷಿ** ಚಾಕ್ಷುಷ ಮನ್ವಂತರದ ಮನು

**ಚಾಗು** ಕೊಂಡಾಟದ ನುಡಿ, ಹೊಗಳಿಕೆ

**ಚಾಚಿ** ಮೊಲೆಹಾಲು (ಬಾಲಭಾಷೆ)

**ಚಾಟುಗಾರ** ಮುಖಸ್ತುತಿ ಮಾಡುವವ, ಪ್ರಿಯವಾದ ಮಾತುಗಳನ್ನಾಡುವವ

**ಚಾಟುಮಾತು, ಚಾಟುವಚನ** ಬಣ್ಣದ ಮಾತು, ಪ್ರಿಯವಾದ ಮಾತು, ಬುದ್ಧಿವಂತಿಕೆಯ ಮಾತು

**ಚಾಡಿ** ಪಿಸುಣ, ಕೊಂಡೆಯ

**ಚಾಣೂರಾರಿ** ಚಾಣೂರ ಎಂಬ ರಾಕ್ಷಸನ ಶತ್ರು–ಕೃಷ್ಣ

**ಚಾತಕ** ಮಳೆಯ ನೀರನ್ನು ಮಾತ್ರ ಕುಡಿದು ಜೀವಧಾರಣೆ ಮಾಡುವುದೆಂದು ಭಾವಿಸಲಾದ ಹಕ್ಕಿ

**ಚಾಪಕುಠಾರಿ** ಬಿಲ್ಲುಹಿಡಿದ ಕ್ಷತ್ರಿಯರನ್ನು ಕೊಲ್ಲುವವನು, ಪರಶುರಾಮ

**ಚಾಪಚಿನ್ಮುದ್ರೆ** ಬಿಲ್ಲು ಹಿಡಿದುಕೊಂಡಿರುವಂತೆ ತೋರುವ ಮುದ್ರೆ, ನರ್ತನ ಶಾಸ್ತ್ರದ ಒಂದು ಭಂಗಿ

**ಚಾಪಧರಾಗ್ರಣಿ** ಕೋದಂಡರಾಮ

**ಚಾಮೀಕರ** ಬಂಗಾರ, ಚಿನ್ನ

**ಚಾಯಗಾರ** ಸೊಗಸುಗಾರ, ಸುಂದರ

**ಚಾರ** ರಾಜದೂತ, ವಾರ್ತಾವಾಹಕ

**ಚಾರಣ** ಕುಬೇರನ ಭೃತ್ಯಗಣ, ಸ್ತೋತ್ರ, ಸ್ತುತಿ

**ಚಾರಿ** ಚಲಿಸುವುದು; ಪಗಡೆಕಾಯಿ

**ಚಾರಿವರಿ** ಹಂಬಲಿಸು, ಚಾಲುವರಿ, ಯುಕ್ತಿಯಿಂದ ಮುನ್ನುಗ್ಗುವಿಕೆ

**ಚಾರು** ಸುಂದರ, ಮನೋಹರ

Rarest Archive

**ಚಾರುತರ** ಸುಂದರವಾದ

**ಚಾರುದೇಷ್ಣ** ಗಣಪತಿಯ ಅವತಾರಗಳಲ್ಲಿ ಒಂದು, ಕೃಷ್ಣರುಕ್ಮಿಣಿಯರಲ್ಲಿ ಹುಟ್ಟಿದ ಗಣೇಶಾವತಾರ

**ಚಾರುಮತಿ** ಜ್ಞಾನವಂತೆ, ಹರಿಯ ಗುಣರೂಪಗಳ ಶ್ರೇಷ್ಠವಾದ ಜ್ಞಾನವುಳ್ಳ–ಲಕ್ಷ್ಮೀದೇವಿ

**ಚಾರುರೂಪ** ಮೂವತ್ತೆರಡು ಲಕ್ಷಣಲಕ್ಷಿತ ದೇವತಾರೂಪ; ಸುಂದರರೂಪ

**ಚಾರುವದನೆ** ಚಲುವಾದಮುಖದವಳು

**ಚಾರುವರ್ಣ** ದ್ವಿಜ; ಸುಂದರವಾದ ಬಣ್ಣ

**ಚಾರ್ವಾಂಗ** ಚಿನ್ಮಯದೇಹ, ಸುಂದರಶರೀರ

**ಚಾರ್ವಾಕ** ನಾಸ್ತಿಕ ಮತ ಸ್ಥಾಪಕ

**ಚಾಲವರಿ, ಚಾಲುವರಿ, ಚಾಲ್ವರಿ** ಹಂಬಲಿಸು; ಯುಕ್ತಯಿಂದ ಮುನ್ನುಗ್ಗು

**ಚಾಲಿತದುರಿತ** ವಂದರಿ ಆಡಿದ ಪಾಪ, ಸುಖಿ

**ಚಾಲುವರಿ** ಹಂಬಲಿಸು, ಬೇಡು

**ಚಾವಡಿ** ಓಲಗಶಾಲೆ, ಸಭಾಸ್ಥಾನ; ಮನೆಯ ಮುಂದಿನ ಜಗಲಿ

**ಚಾಳಿ** ನಡತೆ; ಚಟ, ದುರಭ್ಯಾಸ

**ಚಿಂಚಿತಿ** ಬೇಡರವಳು, ಬೇಡಿತಿ

**ಚಿಂತಾಕ, ಚಿಂತಾಕು** ಕೊರಳಲ್ಲಿ ಧರಿಸುವ ಒಂದು ಆಭರಣ, ಅಡ್ಡಿಕೆ

**ಚಿಂತಾದಾಂಯುಕ** ಚಿಂತೆ/ಕಳವಳ ಉಂಟು ಮಾಡುವವನು

**ಚಿಂತಾಮಣಿ** ಬೇಡಿದುದನ್ನು ಕೊಡುವ ದೇವ ಲೋಕದ ದಿವ್ಯರತ್ನ–ವಿಷ್ಣು

**ಚಿಂತಾಯುಕ** ಸದಾ ಭಕ್ತರ ಚಿಂತೆಯನ್ನೇ ಮಾಡುವವನು–ವಿಷ್ಣು

**ಚಿಂತಾಯತ** ಚಿಂತಿಸಿದಂತೆ ಮಹಿಮೆ ವಿಸ್ತಾರ ಗೊಳ್ಳುವವನು, ಚಿಂತಿಸಿದಷ್ಟು ವ್ಯಾಪಕವಾಗಿ ತೋರುವವನು

**ಚಿಂತಾರತ್ನ** ಚಿಂತಾಮಣಿ

**ಚಿಂತಾಲು** ಒಂದು ಬಗೆಯ ದೊಡ್ಡ ತಕ್ಕಡಿ

**ಚಿಂದಿ** ಹರಕಲು ಬಟ್ಟೆ

**ಚಿಕಟಾಯಿಸು** ಚುಡಾಯಿಸು, ಕೀಟಲೆಮಾಡು, ಕೆಣಕು

**ಚಿಕುರ** ತಲೆಗೂದಲು

**ಚಿಕುರೆ** ಚಂಚಲೆ; ಸುಂದರವಾದ ಕೂದಲುಳ್ಳ ಸ್ತ್ರೀ

**ಚಿಕ್ಕನುಡಿ** ನಿಂದೆ, ಸಣ್ಣಮಾತು

**ಚಿಗಿ** ನೆಗೆ, ಹಾರು

**ಚಿಗಿಚಿಗಿದಾಡು** ಆನಂದ ಮತ್ತು ಆತುರದಿಂದ ಜಿಗಿದಾಡು

**ಚಿಗಿಳು** ಚಿಮ್ಮು

**ಚಿಟ್ಟಕೊಳ್ಳು** ಬೇಸರ ಮಾಡಿಕೊಳ್ಳುವುದು

**ಚಿಟ್ಟೆ** ಪಗಡೆಯದಾಳ, ದುಂಬಿ, ಅಟ್ಟಣೆ

**ಚಿಟ್ಟೆಬೆಲ್ಲ** ಸಣ್ಣ ಬೆಲ್ಲದ ಅಚ್ಚು, ಸಣ್ಣ ತುಂಡು; ಒಂದು ಅಳತೆ

**ಚಿಣ್ಣ(ನ್ನ)** ಬಾಲಕ, ಮಗು, ಚಿಕ್ಕವ, ಮಿಡಿ; ಬಂಗಾರ

**ಚಿತ್** ಜ್ಞಾನ

**ಚಿತ್ತ** ಒಳ ಮನಸ್ಸು (ಮನಸ್ಸಿನ ಪ್ರಭೇದ); ಪ್ರೇಮ; ಗಮನ

**ಚಿತ್ತಕ್ಷೋಭೆ** ದುಃಖ, ದುಗುಡ

**ಚಿತ್ತಜ** ಕಾಮ, ಮನ್ಮಥ

**ಚಿತ್ತಜನ ಕೇಳಿ** ರತಿಕ್ರೀಡೆ

**ಚಿತ್ತಜನಯ್ಯ** ಕೃಷ್ಣ

**ಚಿತ್ತಜನೈಯನಸಭೆ** ವೈಕುಂಠ

**ಚಿತ್ತಜಾತ** ಮನ್ಮಥ

**ಚಿತ್ತದೊಲ್ಲಭ** ಚಿತ್ತದ ವಲ್ಲಭ, ಗಂಡ

**ಚಿತ್ತಶಿಖಿ** ಮನಸ್ಸೆಂಬ ನವಿಲು

**ಚಿತ್ತಸುಖದಾತ** ಮನಸ್ಸಿಗೆಸಮಾಧಾನ ಕೊಡುವವ –ವಿಷ್ಣು

**ಚಿತ್ತಾಭಿಮಾನಿ** ಮನಸ್ಸಿಗೆ ಅಭಿಮಾನಿಯಾದ ಲಕ್ಷ್ಮಿ

**ಚಿತ್ತಾರ** ಚಿತ್ರ

**ಚಿತ್ತಾಶಿಖಿ** ಮನಸ್ಸೆಂಬ ನವಿಲು

Rarest Archiver

**ಚಿತ್ತಿಣಿ, ಚಿತ್ತಿನಿ** ಕಾಮಶಾಸ್ತ್ರದ ಪ್ರಕಾರ ನಾಲ್ಕು ಸ್ತ್ರೀ ಜಾತಿಗಳಲ್ಲಿ ಒಂದು

**ಚಿತ್ತೈಸು** ಹೋಗು, ಚಿತ್ತವಿಟ್ಟು ಕೇಳು, ದಯ ಮಾಡು, ಆಗಮಿಸು, ಅನುಗ್ರಹಿಸು

**ಚಿತ್ಪ್ರಕೃತಿ** ಮೂಲ ಪ್ರಕೃತಿಯ ಅಭಿಮಾನಿ–ಲಕ್ಷ್ಮಿ

**ಚಿತ್ರಗಾತ್ರ** ಸುಂದರವಾದ ಶರೀರ ಉಳ್ಳವ

**ಚಿತ್ರಚರಿತ, ಚಿತ್ರಚರಿತ್ರ** ಅನೇಕ ರೀತಿಯ–ಅನಂತ ಮಾಹಾತ್ಮ್ಯವುಳ್ಳವ

**ಚಿತ್ರಜ** ಮನ್ಮಥ

**ಚಿತ್ರಭಾನು** ಸಂವತ್ಸರದ ಹೆಸರು

**ಚಿತ್ರಸೇನ** ಒಬ್ಬ ಗಂಧರ್ವ

**ಚಿತ್ರಾಂಗದಾ** ರತಿಯ ಬಭ್ರು ಅವತಾರ, ಬಭ್ರುವಾಹನನ ಮಾತೆ, ಅರ್ಜುನನ ಪತ್ನಿ

**ಚಿತ್ಸುಖ** ಮನಃಶಾಂತಿ, ಆನಂದ, ಪರಮಾತ್ಮ, ಮೋಕ್ಷಾನಂದ

**ಚಿತ್ಸುಖದಾಯಿ** ಮೋಕ್ಷಾನಂದವನ್ನು ಕೊಡುವ ಪರಮಾತ್ಮ

**ಚಿತ್ಸುಖಮಯವಪುಷ** ಜ್ಞಾನಾನಂದಮಯ ಶರೀರ

**ಚಿತ್‌ಸ್ವಭಾವ** ಮನಸ್ಸಿಗೆ ಸ್ಮರಣ ಶಕ್ತಿ ನೀಡುವವನು, ಜ್ಞಾನಿ; ಸೂಕ್ಷ್ಮ ಸ್ವಭಾವ

**ಚಿದಂಬರ** ಮನೋಹರ, ಶಿವ

**ಚಿದಚಿದ್ವಿಲಕ್ಷಣ** ಚೇತನಾಚೇತನಾತ್ಮಕವಾದ ಜಗದ್ವಿಲಕ್ಷಣ

**ಚಿದಚಿತ್** ಜ್ಞಾನಾನಂದ

**ಚಿದಾತ್ಮಕ** ಜ್ಞಾನ ಸ್ವರೂಪವಾದುದು

**ಚಿದಾನಂದ** ಚಿತ್ತದ (ಮನಸ್ಸಿನ) ಆನಂದ; ಭಗವಂತನ ಹೆಸರು

**ಚಿದುಕು** ಸತಾಯಿಸು

**ಚಿದ್ಘನ** ಪರಮಾತ್ಮ, ಪರವಸ್ತು; ಮನಸ್ಸಿನ ಇಚ್ಛಿತ ವಸ್ತುವಾದ ಬ್ರಹ್ಮ

**ಚಿದ್ದೀಪ** ಆತ್ಮಪ್ರಕಾಶ

**ಚಿದ್ರೂಪ** ಚೈತನ್ಯಸ್ವರೂಪ, ಸೂಕ್ಷ್ಮರೂಪ, ಜ್ಞಾನವೇ ರೂಪಗೊಂಡದ್ದು, ಪರಮಾತ್ಮ

**ಚಿನಗಡಿ** ತುಂಡುತುಂಡಾಗಿ ಕತ್ತರಿಸು

**ಚಿನಿಪಾಲು** ಚೆನ್ನಾಗಿ ಕಾಯಿಸಿದ ಹಾಲು; ಹಾಲು–ಸಕ್ಕರೆ

**ಚಿನಿವಾರ(ಲ)** ಚಿನ್ನದ ವ್ಯಾಪಾರಿ

**ಚಿನ್ನಗಣ್ಣಿನವ, ಚಿನ್ನದಕಣ್ಣ** ಹಿರಣ್ಯಾಕ್ಷ

**ಚಿನ್ನಗರ್ಭ** ಬ್ರಹ್ಮ

**ಚಿನ್ನದಸೂತ್ರ** ಬಂಗಾರದ ಜನಿವಾರ

**ಚಿನ್ನವತ್ಸ** ಎಳೆಗರು; ಶ್ರೀವತ್ಸ

**ಚಿನ್ನವರದ** ಚಿನಿವಾಲ, ಚಿನ್ನದ ವ್ಯಾಪಾರಿ

**ಚಿನ್ನವಾರ** ಅಕ್ಕಸಾಲಿ

**ಚಿನ್ನಾಟ** ಹುಡುಗಾಟ, ಚೆಲ್ಲಾಟ

**ಚಿನ್ನಾದ್ಯರು** ಹಿರಣ್ಯಾಕ್ಷ ಮುಂತಾದ ದೈತ್ಯರು

**ಚಿನ್ಮಣಿ** ಬಂಗಾರದ ಗೆಜ್ಜೆ

**ಚಿನ್ಮಯ** ಚೈತನ್ಯಪೂರ್ಣ ಚಿತ್ ಸ್ವರೂಪದಿಂದ ಕೂಡಿದ, ಪರಬ್ರಹ್ಮ, ಜ್ಞಾನ ಸ್ವರೂಪನಾದ, ಆನಂದಾತ್ಮಕ, ಪರಮಾತ್ಮ, ಶ್ರೀಹರಿ

**ಚಿನ್ಮಯಾಧರ** ಕೃಷ್ಣ

**ಚಿನ್ಮಾತ್ರ(ತ್ರೆ)** ಕೇವಲಜ್ಞಾನ ಸ್ವರೂಪ; ಅಂಗುಷ್ಠ ಮತ್ತು ತರ್ಜನೀ ಸೇರಿಸಿ ತೋರುವ ಮುದ್ರೆ

**ಚಿನ್ಮೋದಮಯ** ಜ್ಞಾನಾನಂದಮಯ

**ಚಿಪ್ಪಾರ** ಒಂದು ಚಮಚದಷ್ಟು

**ಚಿಪ್ಪಿಗ** ಶಿಲ್ಪಿಗ

**ಚಿಪ್ಪು** ತಲೆಯ ಓಡು, ಬುರುಡೆ; ತೆಂಗಿನ ತುರಿ ತೆಗೆದು ಉಳಿದ ಕರಟ

**ಚಿಮುಟ(ಟಿ)** ಇಕ್ಕಳದಂತಹ ಒಂದು ಸಾಧನ

**ಚಿಮ್ಮುರಿ** ಹಿಂಗಟ್ಟು; ತಲೆಯುಡುಗೆ, ವೀರಗಚ್ಚೆ

**ಚಿರಜ್ಞಾನ** ಶಾಶ್ವತ ಜ್ಞಾನ, ವಿಪುಲವಾದ ಜ್ಞಾನ

**ಚಿರವಾದಿ** ತಾರ್ಕಿಕ

**ಚಿರಸ್ವಭಾವ** ಸ್ಥಿರವಾದ ಮನಸ್ಸು

**ಚಿಲುಪಾಲು** ಚೆನ್ನಾಗಿ ಕಾಯಿಸಿದ ಹಾಲು

Rarest Archive

**ಚಿಲುಮೆ** ಒರತೆ, ನೀರಿನ ಬುಗ್ಗೆ

**ಚಿಲ್ಲರೆದೈವತ** ಕ್ಷುದ್ರ ದೇವತೆ

**ಚಿಲ್ಲರೆಮಾರ್ಗ** ಕನಿಷ್ಠದಾರಿ, ಸಣ್ಣತನ

**ಚಿಲ್ಲಿಕಾಯಿ** ನೀರನ್ನು ತಿಳಿಮಾಡಲು ಬಳಸುವ ಬೀಜ, ಕತಕದಕಾಯಿ

**ಚಿಲ್ಲು** ಕದರಿನ ಚರ್ಮದ ಕಿವಿ: ಚೂರು, ನಿಷ್ಪ್ರಯೋಜಕ

**ಚಿಹಿ–ಛೀ–ಹಳಿ–ಥೂ** ತಿರಸ್ಕಾರಾರ್ಥ ಶಬ್ದ ಸಮುಚ್ಚಯ

**ಚಿಳ್ಳೆ** ಸಣ್ಣದು, ಮರಿ, ಪುಟ್ಟ

**ಚೀನಾಂಬರ** ರೇಷ್ಮೆ ಬಟ್ಟೆ

**ಚೀನಿ** ಸಿಹಿ, ಸಕ್ಕರೆ; ರೇಷ್ಮೆ ಬಟ್ಟೆ

**ಚೀನಿಕೋಲು** ಕಬ್ಬಿನ ಜಲ್ಲೆ; ಗಿಲ್ಲಿ ದಂಡ

**ಚೀರ** ವಸ್ತ್ರ, ಹರಕು ಬಟ್ಟೆ, ನಾರು ಬಟ್ಟೆ, ರೇಷ್ಮೆ

**ಚೀರಾಂಬರ** ನಾರು ಬಟ್ಟೆ, ವಸ್ತ್ರ

**ಚೀರು** ಕಿರಚು, ಕೂಗು, ಉಗುರಿನಿಂದ ಪರಚು

**ಚುಂಗಡಿ** ಚಿಲ್ಲರೆ ಹಣ, ಬಡ್ಡಿ; ಪಂಚೆಯ ತುದಿ; ಒಂದು ಬಗೆಯ ಹೊಳೆಯುವ ಬಟ್ಟೆ

**ಚುಂಚು** ಪಕ್ಷಿಯ ಕೊಕ್ಕು

**ಚುಚ್ಚುನುಡಿ** ವಕ್ರ ಮಾತುಗಳು

**ಚುದುಕು** ನಿಂದೆ

**ಚುನ್ನ, ಚುನ್ನಾಟ** ಅಪಹಾಸ್ಯ, ಕೊಂಕು, ನಿಂದೆ

**ಚುನ್ನವಾಡು** ಚೇಡಿಸು, ಅಪಹಾಸ್ಯಮಾಡು

**ಚುಪ್ಪಾಣಿ<ಸುಪ್ಪಾಣಿ** ಶ್ರೇಷ್ಠವಾದ ಮುತ್ತಿನ ಆಭರಣ; ಸಿಹಿಯಾದ ಮುತ್ತು

**ಚುಬುಕ** ಗಲ್ಲ

**ಚುಬುಕಾಗ್ರ** ಗಲ್ಲ, ಗಲ್ಲದ ತುದಿ

**ಚುಮ್ಮನ** ಮುತ್ತು

**ಚುಲ್ಲಿ** ಒಲೆ, ಅಶ್ಮಂತಕ

**ಚುಳಕ** ಬೊಗಸೆ

**ಚೂಕರ** ತಪ್ಪು ಮಾಡುವವ

**ಚೂಕು** ತಪ್ಪು, ಲೋಪ

**ಚೂಟ** ಉಪಾಯ

**ಚೂಟಿ** ಚುರುಕು

**ಚೂಡ** ಶಿಖರ, ಮಂಟಪದ ಮೇಲ್ಭಾಗದ ಕಲಶ, ನವಿಲಿನ ಶಿಖೆ, ಪೇಟ, ವಂಕಿ

**ಚೂಡಾಮಣಿ, ಚೂಡಾರತುನ** ತಲೆಯಲ್ಲಿ ಧರಿಸುವ ರತ್ನದ ಆಭರಣ, ಜಡೆ ಹೂ, ಶ್ರೇಷ್ಠ, ಸೀತಾದೇವಿಯ ಶಿರೋಮಣಿ

**ಚೂಡ್ಯವಂಕಿ** ಒಂದು ಆಭರಣ, ಜಡೆಹೂ

**ಚೂಣಿ** ಮೊದಲು

**ಚೂಣಿ–ಅಂತ** ಮೊದಲು ಹಾಗೂ ಕೊನೆ

**ಚೂಣಿಮಳಿ(ಳೆ)** ಮೊದಲ ಮಳೆ

**ಚೂತ** ಮಾವು

**ಚೂತತರು** ಮಾವಿನಮರ

**ಚೂತಪಲ್ಲವ** ಮಾವಿನ ಚಿಗುರು

**ಚೂರ್ಣ** ಪುಡಿ

**ಚೂರ್ಣಿಸು** ಸಣ್ಣಗೆ ಮಾಡು, ಪುಡಿಮಾಡು, ನಾಶಮಾಡು

**ಚೂಲಿ** ತುದಿ, ಶಿಖರ

**ಚೂಳಂಯ** ಬೈತಲೆಯ ಮುತ್ತಿನ ತೊಡವು, ಹಣೆಬಟ್ಟು

**ಚೂಳಿ** ಆರಂಭ, ಸೈನ್ಯದ ಮುಂಭಾಗ

**ಚೆಂಗಹಳೆ** ತಾಮ್ರದ ಕಹಳೆ

**ಚೆಂಡಿಕೆ** ಜುಟ್ಟು, ಶಿಖೆ

**ಚೆಂಡುರತುನ** ಉರುಟುಮಣಿ, ದುಂಡುಮಣಿ

**ಚೆಂಬೊನ್ನು** ಚಿನ್ನ, ತಾಮ್ರ

**ಚೆನ್ನ** ಚೆಂದ, ಸೊಗಸು; ಚೆನ್ನಕೇಶವ

**ಚೆನ್ನತಳಿಯಹಾಕು** ಕೆಚ್ಚಲಿಗೆ ನೀರು ಚಿಮುಕಿಸು

**ಚೆನ್ನಾರ, ಚೆನ್ನಿಗ** ಸುಂದರವಾದ ಬಾಲಕ, ಚೆಲುವ

**ಚೆನ್ನಿಗತನ** ರಸಿಕತನ, ಬೆಡಗುಗಾರಿಕೆ

**ಚೆನ್ನು** ಚೆಂದ, ಸೊಗಸು

**ಚೆಳ್ಳುಗುರು** ಚೂಪಾದ ಉಗುರು, ಸುಂದರ ಉಗುರು, ತೆಳುವಾದ ಉದ್ದವಾದ ಉಗುರು

Rarest Archiver

**ಚೇಕಿತಾನ** ಯಾದವರಲ್ಲಿಯ ರಾಜ
**ಚೇತ** ಮನಸ್ಸು
**ಚೇತಿಸು** ಚೈತನ್ಯದಿಂದಿರು
**ಚೇತೋದ್ಭವಜನನಿ** ಲಕ್ಷ್ಮಿ
**ಚೇಲ** ಬಟ್ಟೆ, ವಸ್ತ್ರ; ಶಿಷ್ಯ
**ಚೇಷ್ಟಕ** ಪ್ರೇರಕ
**ಚೇಷ್ಟಿತ** ತಾಕಲಾಡುವ ಚೇಲ, ವಸ್ತ್ರ
**ಚೈತನ್ಯಮರೆ** ಮೈಮರೆ; ಶಕ್ತಿಗುಂದು
**ಚೈತನ್ಯಸತ್ರಾಣಿ** ಜೀವರೊಳಗೆ ಅತಿ ಬಲವಂತ (ಜೀವೋತ್ತಮ)
**ಚೈದ್ಯ, ಚೈದ್ಯರಾಜ** ಚೇದಿದೇಶದ ರಾಜ, ಶಿಶುಪಾಲ
**ಚೈಲ** ಬಟ್ಟೆ, ವಸ್ತ್ರ
**ಚೈಲಭೂಷಿತ** ಚರ್ಮದ ಉಡುಗೆ ತೊಟ್ಟವ–ಶಿವ
**ಚೊಂಗ, ಚೊಂಗು, ಚೊಂಗಿ** ವಕ್ರಸ್ವಭಾವದವನು; ಚೆಲುಮೆ
**ಚೊಕ್ಕತನ** ಪಾವಿತ್ರ್ಯ, ಸೌಂದರ್ಯ
**ಚೊಗೆ** ಕವಚ, ಅಂಗಿ
**ಚೊಲ್ಲೆಯ** ತುರುಬಿನ ಕೊನೆ, ದಂಡೆ
**ಚೋದ್ಯ** ಆಶ್ಚರ್ಯ, ಸೋಜಿಗದ ವಿಷಯ, ವಿಚಿತ್ರ
**ಚೋಷ್ಯ** ನೆಕ್ಕುವ ಪದಾರ್ಥ
**ಚೋಹ** ಚೋದ್ಯ, ಅಚ್ಚರಿ
**ಚೋಳಿ** ಹೋಳಿ
**ಚೌಕುಳಿ** ನಾಲ್ಕು ಮುತ್ತಿನಿಂದ ಮಾಡಿದ ಕಿವಿಯ ಆಭರಣ, ನಾಗಕೇಸರ
**ಚೌಡಿ** ಚಾಮುಂಡಿಯ ಅವತಾರ
**ಚೌದಂತ** ನಾಲ್ಕು ದಂತಗಳುಳ್ಳದು, ಐರಾವತ
**ಚೌಪಟಮಲ್ಲ** ನಾಲ್ಕು ದಿಕ್ಕಿನಲ್ಲಿಯೂ ಯುದ್ಧ ಮಾಡುವವನು, ವೀರ
**ಚೌರ** ಚೌರಿಯ ಕೂದಲಿನಿಂದ ಮಾಡಿದ ಚಾಮರ
**ಚೌರಿ** ಚೌರಿಯ ಕೂದಲು, ಗಂಗಾವನ
**ಚೌಷಷ್ಠಿ** ಅರವತ್ತನಾಲ್ಕು
**ಚೌಹಡಿ** ಚಹಡಿ, ಚಾಡಿ
**ಚ್ಯವನಚಾವನ** ಅಗ್ನಿಪುತ್ರರ ಹೆಸರು
**ಚ್ಯುತ** ನಾಶ
**ಚ್ಯುತರಹಿತಪ್ರೇಕ್ಷ** ಮಧ್ವಾಚಾರ್ಯರ ಗುರುಗಳಾದ ಅಚ್ಯುತಪ್ರೇಕ್ಷರು
**ಚ್ಯುತಿದೂರ** ಅಚ್ಯುತ, ನಾಶವಿಲ್ಲದವ

## ಛ

**ಛಂದ<ಚಂದ** ಅಂದ, ಸುಂದರ, ಆನಂದ, ಸಂತೋಷ
**ಛಂದಸ್ಸು** ವೇದಮಂತ್ರ
**ಛತ್ತರಿಗೆ** ಕೊಡೆ
**ಛತ್ರೇರು** ಕ್ಷತ್ರಿಯರು
**ಛದ್ಮ** ಮೋಸ, ವೇಷಾಂತರ; ಕಪ್ಪು, ಅಜ್ಞಾನ
**ಛದ್ಮಿ** ಮೋಸಗಾರ
**ಛಪ್ಪನ್ನ, ಛಪ್ಪನ್ನೈವತ್ತಾರು** ಐವತ್ತಾರು
**ಛಪ್ಪನ್ನದೇಶ** ಐವತ್ತಾರು ದೇಶಗಳು (ವಿವರಗಳಿಗೆ ಗ್ರಂಥ [134] ನೋಡಿ)
**ಛಲದಂಕ** ದೃಢ ನಿಶ್ಚಯದ ಶೂರ, ಚಾರಿತ್ರ್ಯದಲ್ಲಿ ಸ್ಥೈರ್ಯವುಳ್ಳ ಮನುಷ್ಯ
**ಛಲಮಹೋಗ್ರ** ದೊಡ್ಡದಾದ ಭಯಾನಕವಾದ ಹಠ
**ಛಲಿಸು** ಹಟಹಿಡಿ
**ಛವಿ** ಕಿರಣ, ಕಾಂತಿ, ಹೊಳಪು, ಶೋಭ
**ಛಾತಿ** ಧೈರ್ಯ, ಎದೆಗಾರಿಕೆ, ಕೆಚ್ಚು
**ಛಾತ್ರ** ಶಿಷ್ಯ, ವಿದ್ಯಾರ್ಥಿ
**ಛಾದರ** ಚಾದರ, ಹೊದಿಕೆ; ರೇಷ್ಮೆಯ ಜರತಾರಿಯಿಂದ ಕೂಡಿದ ಪಂಚೆ, ಶಾಲು ಮುಂತಾದುವು

Rarest Archiver

**ಛಾನಸ** ಮಡಿವಂತಿಕೆ; ನಿಧಾನ ಪ್ರವೃತ್ತಿ

**ಛಾಯಮಾಯ** ಮಾಟ ಮಂತ್ರ

**ಛಾಯಾಗ್ರಹ** ನೆರಳು

**ಛಾಯೆ** ನೆರಳು, ಸೂರ್ಯನ ಹೆಂಡತಿ

**ಛಾಯೇಶ** ಸೂರ್ಯ

**ಛಿದ್ರ** ಹುಳುಕು, ದೌರ್ಬಲ್ಯ, ತೂತು; ವಿರಸ

**ಛಿನ್ನ** ಕತ್ತರಿಸಲ್ಪಟ್ಟ, ತುಂಡುಮಾಡಿದ

**ಛಿನ್ನಭಕ್ತ** ಅಪೂರ್ಣ ಭಕ್ತಿಯುಳ್ಳವ

**ಛುಲಕ** ಕ್ಷುಲ್ಲಕ

**ಛೇಕರ** ಧೂರ್ತತನ; ಜಾಣತನ; ರಸಿಕ

**ಛೇತ** ನಾಶಮಾಡಿದವನು, ಕತ್ತರಿಸುವವನು

**ಛೇದಿಸು** ಸಂಹರಿಸು, ಕತ್ತರಿಸು

## ಜ

**ಜಂಗಮ** ವೀರಶೈವ ಸಂಪ್ರದಾಯದ ವಿರಕ್ತ; ಚಲಿಸುವವ–ಜೀವಿ

**ಜಂಗಮಮೂರುತಿ** ಉತ್ಸವಮೂರ್ತಿ, ಒಂದು ನೆಲೆಯಲ್ಲಿ ನಿಲ್ಲದ; ವಿಷ್ಣು ಭಕ್ತ

**ಜಂಗಲಿ** ಕಾಡಿಗೆ ಸೇರಿದ

**ಜಂಗುಳಿ** ಹಿಂಡು, ಸಮೂಹ

**ಜಂಘಾಲ** ಶೀಘ್ರ ಓಟದ, ಚಿಗರೆ

**ಜಂಘೆ** ಕಿರುದೊಡೆ, ತೊಡೆಯ ಕೆಳಭಾಗ

**ಜಂಜಡ** ಕಷ್ಟ

**ಜಂಝಾವಾತ** ಬಿರುಗಾಳಿ

**ಜಂತು** ಜೀವವನ್ನುಳ್ಳುದು, ಜೀವಿ

**ಜಂತುನಿಂದಿತ** ಬೌದ್ಧಾವತಾರ

**ಜಂತ್ರ** ಯಂತ್ರ, ವಾದ್ಯ

**ಜಂಬಾಳಗಟ್ಟೆ** ಕೆಸರಿನ ಭೂಮಿ

**ಜಂಬೀರ** ಸಕ್ಕರೆಲಿಂಬೆ, ನೀಲದ ಹಣ್ಣು

**ಜಂಬು** ನೇರಿಳೆ, ನೇರಲ, ನೀರಲ

**ಜಂಬುಕ, ಜಂಬೂಕ** ನರಿ

**ಜಂಬುಫಲ** ನೇರಿಲೆ ಹಣ್ಣು

**ಜಂಭ** ತಾರಕಾಸುರನ ಪ್ರಧಾನಿ

**ಜಂಭಭೇ(ವೇ)ದಿ, ಜಂಭವೈರಿ,** ಜಂಭಾಸುರನನ್ನು ಭೇದಿಸಿದ ಇಂದ್ರ

**ಜಂಭಾರಿಕುಜ** ಕಲ್ಪವೃಕ್ಷ

**ಜಂಭಾರಿಧೃತ** ಇಂದ್ರನನ್ನು ಹಿಡಿದವ; ಪರ್ವತಧರ

**ಜಂಭಾರಿವೈರಿ** ಇಂದ್ರಜಿತ್

**ಜಕ್ಕಣಿ** ಉತ್ತರ ಕರ್ನಾಟಕದಲ್ಲಿ ಬಹುತೇಕ ಮನೆಗಳ ಶುಭಪ್ರಸಂಗಗಳಲ್ಲಿ ಜಕ್ಕಣಿಪೂಜೆ ನಡೆಯುತ್ತದೆ; ಯಕ್ಷಿಣಿ

**ಜಕ್ಕರಿಸು** ಉಕ್ಕಿ ಸೂಸು; ಮೋಹಕವಾಗು

**ಜಕ್ಕವಕ್ಕಿ** ಚಕ್ರವಾಕ ಪಕ್ಷಿ

**ಜಕ್ಕಿ** ಯಕ್ಷಿ

**ಜಕ್ಕುಳಿಸು** ಆಕರ್ಷಕವಾಗು, ನಗೆಯಿಂದ ಕೂಡು

**ಜಕ್ಲ** ಅಣಕಿಸು

**ಜಗಜನನಗೆಜನಕ** ಬ್ರಹ್ಮನ ತಂದೆ–ವಿಷ್ಣು

**ಜಗಜೇಟಿ** ಜಗಜ್ಜೆಟ್ಟಿ, ಜಗತ್ತನ್ನು ಗೆದ್ದವನು, ಜಗತ್ತಿಗೆ ಶ್ರೇಷ್ಠನಾದವನು

**ಜಗಜ್ಜನ್ಮಾದಿಕಾರಣ** ಸೃಷ್ಟ್ಯಾದಿ ಅಷ್ಟಕರ್ತೃ–ವಿಷ್ಣು

**ಜಗತಿ** ಜಗಲಿ; ಪ್ರಪಂಚ, ಭೂದೇವಿ (ವರಾಹಾವತಾರ)

**ಜಗತೀಧರಶೇಷ** ಜಗತ್ತನ್ನು ಹೊತ್ತಿರುವ ಆದಿಶೇಷ

**ಜಗತ್ಕರ್ತ** ಜಗತ್ತನ್ನು ರಚನೆ ಮಾಡಿದವ–ಬ್ರಹ್ಮ

**ಜಗತ್ಕವನ** ಜಗತ್ತನ್ನು ಚಿತ್ರ ವಿಚಿತ್ರವಾಗಿ ಜೋಡಿಸಿ ರಚಿಸಿದವ

**ಜಗತ್ತ್ರಯ** ಮೂರುಲೋಕ

**ಜಗತ್ತ್ರಯೇಕ** ತ್ರಿವಿಕ್ರಮ, ಜಗದೇಕ

**ಜಗತ್ತ್ರಾಣ, ಜಗತ್ತ್ರಾತ** ಜಗತ್ತಿನ ರಕ್ಷಕ, ಲೋಕರಕ್ಷಕ, ಜಗತ್ತಿಗೆ ಬಲ ಕೊಡುವವ

Rarest Archives

**ಜಗತ್ಪತಿ** ವಿಷ್ಣು
**ಜಗತ್ಪ್ರಸವಿತ** ಜಗತ್ತನ್ನು ಹುಟ್ಟಿಸುವ–ಶ್ರೀಹರಿ
**ಜಗತ್ಸ್ವಾಮಿ, ಜಗತ್ಸ್ವಾಮಿನ್** ವಿಷ್ಣು
**ಜಗದಂತರಂಗ, ಜಗದಂತಯಾ** ವಿಷ್ಣು
**ಜಗದಂಬಾರಮಣ** ಲಕ್ಷ್ಮೀರಮಣ–ವಿಷ್ಣು
**ಜಗದತ್ಯಂತಭಿನ್ನ** ವಿಷ್ಣು
**ಜಗದಸು** ಜಗತ್ಪ್ರಾಣ–ವಿಷ್ಣು
**ಜಗದೀಶ** ವಿಷ್ಣು
**ಜಗದುದರ** ಜಗತ್ತನ್ನೆಲ್ಲ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡವನು–ಶ್ರೀಹರಿ
**ಜಗದುದರಸೊಸೆ** ಭಾರತೀ ದೇವಿ, ಸರಸ್ವತಿ
**ಜಗದೇಕನಾಥ** ವಿಶ್ವದೊಡೆಯ–ಶ್ರೀಹರಿ
**ಜಗದೇಕಭರ್ತ** ಜಗತ್ತಿನ ಒಡೆಯ–ಶ್ರೀಹರಿ
**ಜಗದೇಕವೀರ** ಜಗತ್ತಿಗೆಲ್ಲ ಪ್ರಧಾನ ಪರಾಕ್ರಮಿಯಾದ
**ಜಗದ್ಧಾತ** ಜಗತ್ತನ್ನು ಸೃಷ್ಟಿಸಿದ ಬ್ರಹ್ಮ
**ಜಗದ್ಭರ್ತ, ಜಗದ್ಭರಿತ** ವಿಶ್ವಮಯ, ವಿಶ್ವವ್ಯಾಪಕ–ಶ್ರೀಹರಿ
**ಜಗದ್ಭುಕು** ಪ್ರಳಯಕಾಲದ ಅಗ್ನಿ, (ಪ್ರಳಯ ಕಾಲದಲ್ಲಿ) ಜಗತ್ತನ್ನೇ ನುಂಗುವ ಭಕ್ಷಕ–ಶ್ರೀಹರಿ
**ಜಗದ್ವಿಲಕ್ಷಣ** ವಿಷ್ಣು
**ಜಗಧ್ವಾಂತ** ಜಗತ್ತಿನ ಕತ್ತಲೆ
**ಜಗನ್ನಾಥ** ವಿಷ್ಣು
**ಜಗನ್ಮಯ** ಜಗತ್ತನ್ನೇ ಆವರಿಸಿರುವವ–ವಿಷ್ಣು
**ಜಗಲಿ** ಕಟ್ಟೆ
**ಜಗವನೆತ್ತಿದವ** ವರಾಹ ಅವತಾರದ ವಿಷ್ಣು
**ಜಗುಳು** ಜಾರು, ಸಡಿಲವಾಗು
**ಜಘನ** ನಿತಂಬ
**ಜಘ್ನು** ಕೊಲ್ಲುವುದು
**ಜಟಜೆ** ಗಂಗೆ
**ಜಟಿ** ಜಡೆಯುಳ್ಳವ, ಋಷಿ
**ಜಟ್ಟಿಂಗ** ಗೊಲ್ಲರ ಗ್ರಾಮ ದೇವರು
**ಜಟ್ಟಿಗ, ಜಟ್ಟಿಯ** ಕುಸ್ತಿ ಪಟು, ಪೈಲ್ವಾನ
**ಜಠರ** ಗರ್ಭ, ಹೊಟ್ಟೆ; ಕಠಿಣ, ಗಟ್ಟಿಯಾದ
**ಜಠರದಿಹಿರಿಯ** ಲೋಕಗಳನ್ನು ತಿಳಿದವ, ಸರ್ವಲೋಕಗಳನ್ನು ತನ್ನಲ್ಲಿ ಇರಿಸಿ ಕೊಂಡವ–ಶ್ರೀಹರಿ
**ಜಡ** ನೀರು; ಸೋಮಾರಿತನ, ಅಚಲ, ಅಚೇತನ, ಜಾಡ್ಯ, ನಿಷ್ಕ್ರಿಯ
**ಜಡಗರೆ** ಮೈಮರೆ
**ಜಡಜ** ತಾವರೆ
**ಜಡಜನಾಭ** ವಿಷ್ಣು; ಸೂರ್ಯನಾರಾಯಣ
**ಜಡಜಭವ** ಬ್ರಹ್ಮ
**ಜಡಜಮಾರ್ಗಣ** ಮನ್ಮಥ
**ಜಡಜಮಿತ್ರಸೂನು** ಸೂರ್ಯನ ಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಜಡಜಲೋಚನ** ಕಮಲದಂತೆ ಕಣ್ಣುಳ್ಳವ–ಕೃಷ್ಣ
**ಜಡಜಸಂಭವ** ನೀರಿನಲ್ಲಿ ಹುಟ್ಟಿದ ಕಮಲದಲ್ಲಿ ಜನಿಸಿದವನು–ಬ್ರಹ್ಮ
**ಜಡಜಾಂಘ್ರಿ** ಪಾದಕಮಲ
**ಜಡಜಾಪ್ತ** ಸೂರ್ಯ
**ಜಡಧಿ** ಸಮುದ್ರ
**ಜಡಧಿಮಂದಿರ** ಸಮುದ್ರಶಾಯಿ–ಶ್ರೀಹರಿ
**ಜಡನುಡಿ** ನಿಂದೆ, ಮಂದನುಡಿ
**ಜಡಪ್ರಕೃತಿ** ಕ್ರಿಯಾಶೂನ್ಯತೆ, ಸೋಮಾರಿತನ
**ಜಡಮತಿ** ದಡ್ಡ, ಅಸಂಬದ್ಧವಾದಿ
**ಜಡಿ** ಕೊಲ್ಲು
**ಜಡಿತ** ಜೋಡಿಸಿದ, ಕುಂದಣಿಸಿದ
**ಜಡಿತಾಭರಣ** ಕುಂದಣಿಸಿದ ಆಭರಣ
**ಜಡಿಸು** ಹಾಕು, ಬಿಗಿ
**ಜಡೆ** ಹೆರಳು; ತುಂತುರು ಮಳೆಯ ಧಾರೆ; ಹೊಡೆ, ಗದರಿಸು, ಬೆದರಿಸು
**ಜತನ** ಜೋಪಾನ, ಎಚ್ಚರಿಕೆ, ಕಾಪಾಡುವಿಕೆ
**ಜತು** ಅರಗು, ಲಾಕ್ಷ

Rarest Archive

**ಜತ್ತ** ಸಾಧನೆ, ಪ್ರಯತ್ನ; ಜೋಕೆ, ಜೋಪಾನ
**ಜತ್ತಾಗು** ಜೋಡಾಗು, ಜೊತೆಯಾಗು
**ಜತ್ತಾದಜನರು** ಸ್ನೇಹಿತರು, ಮಿತ್ರರು
**ಜತ್ತಾಯತಾಗು** ಎಚ್ಚರಿಕೆಯಿಂದಿರು
**ಜತ್ತು** ಜೊತೆ, ಸ್ನೇಹ, ಮೈತ್ರಿ
**ಜತ್ತುಕ** ಮೋಸಗಾರ
**ಜನಕ** ತಂದೆ
**ಜನಕಂಗೆಜನಕ** ಬ್ರಹ್ಮನ ತಂದೆ–ವಿಷ್ಣು
**ಜನಕಂಟಕ** ಸಮಾಜ ಘಾತುಕ
**ಜನಕಜಾ(ಜೆ)** ಜನಕನ ಮಗಳು–ಸೀತೆ
**ಜನಕಜಾಪತಿ** ರಾಮ
**ಜನಕದಂಬ** ಜನರ ಗುಂಪು
**ಜನನಿ** ಲಕ್ಷ್ಮಿ, ತಾಯಿ
**ಜನನಿವಹ** ಜನ ಸಮೂಹ
**ಜನಪ** ರಾಜ
**ಜನಮೇಜಯ** ಒಬ್ಬ ಗಂಧರ್ವ; ಪಾಂಡವರ ಮೊಮ್ಮಗ
**ಜನಯಿತ್ರಿ** ಜನ್ಮಕ್ಕೆ ಕಾರಣಳಾದವಳು, ತಾಯಿ
**ಜನಾಜನ** ಮನುಷ್ಯರು ಮತ್ತು ಮನುಷ್ಯರಲ್ಲದ, ಸಮಸ್ತ ಜೀವಜಾಲ
**ಜನಾರ್ದನ** ಜನರ ಕಷ್ಟ ನಿವಾರಿಸುವವ–ವಿಷ್ಣು
**ಜನಿತ** ಜನಿಸಿದ್ದು
**ಜನಿಮೃತಿಭಯಭಿದೆ** ಹುಟ್ಟು–ಸಾವು ಇವುಗಳ ಭಯವನ್ನು ಪರಿಹರಿಸುವವಳು; ಸರಸ್ವತಿ–ಜ್ಞಾನ ದೇವತೆ
**ಜನ್ನ** ಯಜ್ಞ, ಯಾಗ, ಹೋಮ
**ಜನ್ಮಜನಕ** ಹುಟ್ಟುವ, ಹುಟ್ಟಿಸುವ
**ಜನ್ಮಮೂಲೋತ್ಪಾಟನ** ಪುನರ್ಜನ್ಮ ಬಾರದಂತೆ ಮಾಡುವುದು
**ಜನ್ಮಹಾಸಿಕಿ** ಜನ್ಮವೆಂಬುವ ಹಾಸಿಗೆ
**ಜಪಿತ** ಮಂತ್ರ ಪಠಿಸುವಿಕೆ, ಮಂತ್ರ ಪಠಿಸುವುದು
**ಜಪ್ಪು** ಹೊಡೆ
**ಜಮ್ಮ** ರಾಜನು ಇನಾಮಾಗಿ ಕೊಟ್ಟ ಭೂಮಿ
**ಜಯ** ವಿಷ್ಣು, ಸಂಕರ್ಷಣ
**ಜಯಂತ** ಪಾದಾಭಿಮಾನಿ–ಇಂದ್ರಪುತ್ರ
**ಜಯನಾಮಕ** ವಿಷ್ಣುವಿನ ಹೆಸರುಗಳಲ್ಲೊಂದು "ಜಯ"; ದ್ವಾರಪಾಲಕರಲ್ಲೊಬ್ಬ
**ಜಯಾ** ಲಯಕರ್ತ ಸಂಕರ್ಷಣರೂಪಿ, ಶ್ರೀಹರಿಯ ಪತ್ನಿ
**ಜಯಾಪತಿ** ಸಂಕರ್ಷಣ
**ಜಯಾಸಂಕರ್ಷಣಾತ್ಮಜ** ವಾಯು
**ಜರ, ಜರಾ, ಜರೆ** ಮುಪ್ಪು; ಸ್ವಲ್ಪ
**ಜರಠ** ವೃದ್ಧ
**ಜರದೂರ** ಮುಪ್ಪಿಲ್ಲದವ, ದೇವತೆ
**ಜರಾತನಯ** ಜರೆಯೆಂಬ ರಾಕ್ಷಸಿಯ ಮಗ, ಜರಾಸಂಧ
**ಜರಾಮರಣ** ಮುಪ್ಪು, ಸಾವು
**ಜರಿ** ನಿಂದಿಸು, ತಿರಸ್ಕರಿಸು; ಬದಿ, ಪಕ್ಕ
**ಜರಿಗಲ್ಲು** ಹಿಟ್ಟುಗಲ್ಲು–ಗಟ್ಟಿ ಇರದ ಹಿಸಿದು ಕೊಂಡು ಪುಡಿ ಪುಡಿಯಾಗುವ ಕಲ್ಲು
**ಜರ್ಜರ** ಹಳೆಯ; ಸ್ಥಿರವಲ್ಲದ; ಒಡೆದು ಚೂರಾದ
**ಜಲಚರ** ನೀರಿನಲ್ಲಿ ಸಂಚರಿಸಬಲ್ಲ ಪ್ರಾಣಿಗಳು, ಜಲದಲ್ಲಿ ಜೀವಿಸುವ ಜೀವಿಗಳು
**ಜಲಜ** ಕಮಲ
**ಜಲಜಕರಸಂಜಾತ** ಕರಕಮಲದಿಂದ ಬಂದವನು
**ಜಲಜಗರ್ಭ** ಬ್ರಹ್ಮ
**ಜಲಜದಳನೇತ್ರ** ಕಮಲದ ದಳದಂತೆ ಅಗಲವಾದ ಕಣ್ಣುಳ್ಳವನು–ವಿಷ್ಣು
**ಜಲಜನಾಭ** ಹೊಕ್ಕುಳಲ್ಲಿ ಕಮಲವುಳ್ಳವನು–ವಿಷ್ಣು
**ಜಲಜಪಾಣಿ** ತಾವರೆಯನ್ನು ಕೈಯಲ್ಲಿ ಹಿಡಿದ ಲಕ್ಷ್ಮಿ
**ಜಲಜಪೀಠ** ಬ್ರಹ್ಮ
**ಜಲಜಬಾಂಧವ** ಸೂರ್ಯ
**ಜಲಜಭವ** ಬ್ರಹ್ಮ
**ಜಲಜಭವಾಂಡ** ಬ್ರಹ್ಮಾಂಡ

Rarest Archiver

**ಜಲಜರಿಪು** ಚಂದ್ರ
**ಜಲಜಲೋಚನ** ವಿಷ್ಣು
**ಜಲಜಸಂಭವ** ಬ್ರಹ್ಮ
**ಜಲಜಸಖ** ಸೂರ್ಯ
**ಜಲಜಾಂಡ** ಬ್ರಹ್ಮಾಂಡ
**ಜಲಜಾಕ್ಷ** ಕಮಲದಂತೆ ಕಣ್ಣುಳ್ಳವನು–ವಿಷ್ಣು
**ಜಲಜಾತ** ಕಮಲ
**ಜಲಜಾತನಾಭ** ವಿಷ್ಣು
**ಜಲಜಾಪ್ತ** ಸೂರ್ಯ
**ಜಲಜಾಪ್ತಮಂಡಲಿ** ಸೌರಮಂಡಲ
**ಜಲಜಾಸನ** ಬ್ರಹ್ಮ
**ಜಲಟ** ನೀರಿನಲ್ಲಿ ಸಂಚರಿಸುವ ಮೀನು ಮೊಸಳೆ ಮುಂತಾದವು
**ಜಲದದಾರಿ** ಯೋನಿಮಾರ್ಗ
**ಜಲದಲೆ** ನೀರಿನ ತರಂಗ
**ಜಲದಾಭ** ಮೇಘಕಾಂತಿ
**ಜಲದೊಳ್‌ನೀನೆ** ಮತ್ಸ್ಯಾವತಾರ
**ಜಲಧರ** ನೀರುತರುವವ, ಮೋಡ; ಶಿವ
**ಜಲಧಿ** ಸಾಗರ, ಸಮುದ್ರ
**ಜಲಧಿಜೆ** ಲಕ್ಷ್ಮಿ
**ಜಲಧಿಮಂದಿರ** ಸಮುದ್ರಶಾಯಿಯಾದ ಶ್ರೀಹರಿ
**ಜಲನಿಧಿ** ಸಮುದ್ರ
**ಜಲನಿಧಿಸುತ** ಚಂದ್ರ
**ಜಲಪ** ಬುಧ–ಸ್ವಾದೋದಕಾಭಿಮಾನಿ
**ಜಲಮೂಲ** ಮೋಡ
**ಜಲರುಹ** ತಾವರೆ, ಕಮಲ
**ಜಲರುಹನಾಭ** ಕಮಲನಾಭ–ವಿಷ್ಣು
**ಜಲರುಹಾಕ್ಷ** ವಿಷ್ಣು
**ಜಲವಾಸ** ಕೂರ್ಮಾವತಾರ, ಮಚ್ಛ
**ಜಲವಾಹಕ** ನೀರನ್ನು ಭಾವಿ/ನದಿ/ ಕೆರೆಯಿಂದ ತಂದು ಹಾಕುವವನು; ಮೋಡ
**ಜಲಸರಪಳಿ** ಹೊಳೆಯುವ ಸರಪಳಿ
**ಜಲೂಕ** ಜಿಗಣಿ
**ಜಲ್ಪ** ಮಾತು; ವೇದ
**ಜಲ್ಮ, ಜಲುಮ**<ಜನ್ಮ ಹುಟ್ಟು
**ಜಲ್ಲರಿ** ಹೂಸರಗಳನ್ನು ತೂಗಾಡಿಸುವುದು; ಜಲ್ಲಡಿ(ಜರಡಿ), ಜಾಲರಿ
**ಜಲ್ಲಿಸು** ಜರಡಿಹಿಡಿ
**ಜವ** ಯಮ, ಸಾವು; ವೇಗ, ಸಾಮರ್ಥ್ಯ, ಶಕ್ತಿ
**ಜವಗುಂದು** ಶಕ್ತಿಗುಂದು, ಸಾಮರ್ಥ್ಯ ಕಳೆದುಕೊ
**ಜವಜಡಿ** ಶಕ್ತಿ–ಸಾಮರ್ಥ್ಯವು ಸ್ರವಿಸಿ ಹೋಗು
**ಜವತುರಂಗ** ಬಲಶಾಲಿಯಾದ/ವೇಗವಾಗಿ ಚಲಿಸುವ ಕುದುರೆ
**ಜವನಪುರ** ಯಮನ ಪಟ್ಟಣ
**ಜವನಭೂಮಿ** ಯಮನ ಲೋಕ
**ಜವನವರು** ಯಮದೂತರು
**ಜವನಾರಿ** ಕಾಲಕಾಲ, ಶಿವ
**ಜವನಾಳ್ಗಳು** ಯಮದೂತರು
**ಜವಾಜಿ, ಜವ್ವಾಜಿ, ಜವಾದಿ** ಒಂದು ಬಗೆಯ ಸುಗಂಧ ದ್ರವ್ಯ, ಪುನುಗು
**ಜವೆಯಬೂದಿ** ಮಂಕುಬೂದಿ
**ಜವ್ವನ** ಹರೆಯ, ಯೌವನ
**ಜಸ** ಕೀರ್ತಿ, ಯಶಸ್ಸು
**ಜಳಕ** ಸ್ನಾನ, ಮೀಹ; ಪ್ರಕಾಶ
**ಜಳಕು** ಅಲುಗು, ನಡುಗು, ಅಂಜಿಕೆ
**ಜಾಂಗುಲ, ಜಾಂಗುಲಿಕ** ವಿಷ, ವಿಷವೈದ್ಯ, ಗಾರುಡಿಗ
**ಜಾಂಬವ** ಕರಡಿಗಳರಾಜ, ರಾಮಾಯಣಕಾಲದ ಜಾಂಬವಂತ
**ಜಾಂಬೂನದ** ಚಿನ್ನ, ಹೇಮ; ಚಿನ್ನ ಹಾಕಿದ ಬಟ್ಟೆ, ಜರತಾರಿ ಶಾಲು
**ಜಾಂಬೂನದಛಾಯೆ** ಹೇಮವರ್ಣ, ಚಿನ್ನದ ಬಣ್ಣ
**ಜಾಂಬೂನದಾಂಬರ** ನೀಲವರ್ಣದ ವಸ್ತ್ರ, ಪೀತಾಂಬರ, ಚಿನ್ನದ ಜರಿಯುಳ್ಳ ವಸ್ತ್ರ, ಜರತಾರಿ ಬಟ್ಟೆ

Rarest Archiver

**ಜಾಗಿಸು** ಜಾಗರಿಸು, ಎಚ್ಚರಿಸು

**ಜಾಗು** ಬಾಗು, ಒಲೆದಾಡು, ಎಚ್ಚರ; ತಡಮಾಡು, ಉದಾಸೀನ; ಹೊಗಳಿಕೆ ಮಾತು

**ಜಾಜಿ** ಒಂದು ಬಗೆಯ ಹೂವು, ಮಾಲತೀ ಪುಷ್ಪ; ಕೆಂಪುಬಣ್ಣ; ಜಾಯಿಕಾಯಿ

**ಜಾಡಿ** ಕಂಬಳಿ, ಕಂಬಳಿಗದ್ದುಗೆ

**ಜಾಡಿಮಯ್ಯ** ಕಂಬಳಿಯನ್ನು ಹೊದ್ದವನು

**ಜಾಡು** ದಾರಿ, ಕುರುಹು, ನೆಲೆ; ನೋಯಿಸು

**ಜಾಡೆ** ಹಾಸಿಗೆ

**ಜಾಡ್ಯ** ಕಾಯಿಲೆ

**ಜಾಣವಕ್ಕಿ, ಜಾಣ್ವಕ್ಕಿ** ಗಿಣಿ

**ಜಾಣುವೆ** ಜಾಣ್ಮೆ

**ಜಾತ** ಹುಟ್ಟಿದ; ಚಿನ್ನ

**ಜಾತಕ** ಜನ್ಮ ಪತ್ರಿಕೆ

**ಜಾತರಹಿತ** ಸ್ವಯಂಭೂ, ಹುಟ್ಟಿಲ್ಲದವ, ವಿಷ್ಣು

**ಜಾತರೂಪ** ಬೆತ್ತಲೆಯವನು, ದಿಗಂಬರ

**ಜಾತರೂಪಶಯನಜಾತ, ಜಾತರೂಪಶಯ್ಯಜ** ಪ್ರಹ್ಲಾದ

**ಜಾತರೂಪಶೈಲ** ಮೇರುಪರ್ವತ, ಕನಕಗಿರಿ

**ಜಾತರೂಪಸುಶಯ್ಯ** ಹಿರಣ್ಯಕಶಿಪು

**ಜಾತರೂಪೋದರಾಂಡ** ಬ್ರಹ್ಮಾಂಡ

**ಜಾತವೇದ, ಜಾತವೇದಸ** ಅಗ್ನಿ

**ಜಾತವೇದಸನೇತ್ರ** ಅಗ್ನಿನೇತ್ರ–ಶಿವ

**ಜಾತಿ** ಕುಲ; ಸಂಗೀತದ ಮೂಲ ಸಪ್ತ ಸ್ವರಗಳು; ಜಾಜಿ

**ಜಾತಿಕರ್ಮ** ಜಾತಿ ಸಂಸ್ಕಾರ

**ಜಾತಿಕಾರ್ತಿ** ಜಾತಿಕಾರತಿ, ಬಹುರೂಪಿಣಿ, ನಟಿ

**ಜಾತಿಗಾರ** ಅಭಿನಯಗಾರ, ನಟ

**ಜಾನ** ಜ್ಞಾನ

**ಜಾನಕಿ** ಜನಕರಾಜನ ಮಗಳು–ಸೀತೆ

**ಜಾನಕೀವಲ್ಲಭ, ಜಾನಕೀಶ** ರಾಮ

**ಜಾನಾಗ್ನಿ** ಧ್ಯಾನವೆಂಬ ಬೆಂಕಿ

**ಜಾನು** ಮಂಡಿ, ಮೊಳಕಾಲು

**ಜಾನೂರು** ಮಂಡಿ ಮತ್ತು ತೊಡೆ

**ಜಾಪರ, ಜಾಪಾರ** ಚಾಪಾರ, ಯವಾನಿ, ಅಜವಾನ(ಓಮ)ದ ಜಾತಿಗೆ ಸೇರಿದ ಗಿಡ, ಜಾಪಾಳ

**ಜಾಮಾತೃ** ಅಳಿಯ

**ಜಾಯಾಪತಿ** ಸತಿಪತಿ; ಹೆಂಡತಿಯ ಗಳಿಕೆಯಿಂದ ಜೀವಿಸುವವನು

**ಜಾಯಿಲ** ಕ್ರೂರವಾದ ನಾಯಿ

**ಜಾಯೆ** ಹೆಂಡತಿ

**ಜಾರ** ವ್ಯಭಿಚಾರಿ, ನಡತೆಗೆಟ್ಟವ, ಪರಸ್ತ್ರೀ ಸಂಗ ಮಾಡುವವ, ಕಾಮುಕ

**ಜಾರತನ** ವ್ಯಭಿಚಾರ, ಹಾದರ

**ಜಾರನಾರಿ** ವ್ಯಭಿಚಾರಿ ಸ್ತ್ರೀ, ಹಾದರಗಿತ್ತಿ

**ಜಾರುಜಲ್ಲರಿ** ಬಲೆಯಂತಿರುವ ತೆಳುವಾಗಿರುವ ಕುಚ್ಚುಗಳು

**ಜಾಲ** ಬಲೆ; ಸಮೂಹ; ಕಪಟ, ಮರುಳು ಮಾಡು

**ಜಾಲ(ಳ)ಂಧ್ರ** ತೂತುಗಳಿರುವ ಕಿಟಕಿ

**ಜಾಲಗಾರ** ಬಂಗಾರಸೋಸುವವ; ಮೋಸಗಾರ

**ಜಾಲಗಾರ್ತಿ** ಮೋಸಗಾರ್ತಿ; ಗರ್ವಿಷ್ಠೆ

**ಜಾಲತ್ವ** ಮೋಸಗಾರಿಕೆ

**ಜಾಲವಿದ್ಯೆ** ಅಭಿಚಾರ, ಮಾಯಾಮಂತ್ರ ಮಾಟ ಇತ್ಯಾದಿ, ವಾಮವಿದ್ಯೆ

**ಜಾಲಹಾಕು** ಬಲೆ ಹಾಕು

**ಜಾಲಹೆಂಟಿ** ವಿರಳವಾದ ಮಣ್ಣಿನ ತುಂಡು

**ಜಾಲಿಸು** ಸೋರು

**ಜಾವ** ದಿವಸದ 1/8 ಭಾಗದಷ್ಟು ಕಾಲ; ಕಾವಲು

**ಜಾವಳ** ಮುಂಜುಟ್ಟು ಬಿಡುವ ಕ್ರಿಯೆ, ಚೌಲ

**ಜಾಹ್ನವಿ** ಗಂಗೆಯ ಮತ್ತೊಂದು ಹೆಸರು, ಭಾಗೀರಥಿ

**ಜಾಳ** ರೋಗ

**ಜಾಳಿಕಾರ** ಮೋಸಗಾರ

Rarest Archive

**ಜಾಳಿಗೆ** ಜಾಲಂದರ, ಕಿಡಕಿ; ಬುಗುರಿ ಆಡಿಸುವ ದಾರ; ಹಣ ಇರಿಸುವ ಚೀಲ, ಕೈಚೀಲ

**ಜಾಳಿಗೆದಂಡೆ** ಜಾಳಿಗೆಯಂತೆ ಹೆಣೆದ ಹೂವಿನ ದಂಡೆ

**ಜಾಳಿಸು** ಕಂಪಿಸು, ಅಲ್ಲಾಡು, ನೀಗು

**ಜಾಳುಮಾತು** ಹರಕು ಮಾತು

**ಜಿಂದಗಿ** ಜೀವನ, ಬದುಕು

**ಜಿಂನಗಿ** ಪರಿಶುದ್ಧ

**ಜಿಗಳಿ** ಜಾರಿ–ಕೈಜಾರಿಬಿದ್ದು

**ಜಿಜ್ಞಾಸು** ವಿಚಾರ ಮಾಡುವವನು

**ಜಿಡ್ಡಿವರ್ಲು** ಜಿಡ್ಡಿನ ಒರಳು

**ಜಿಣುಗು** ಜಿನುಗು; ತೊಂದರೆ ಕೊಡು

**ಜಿತ** ಗೆಲ್ಲಲ್ಪಟ್ಟ, ಗೆದ್ದವನು; ಸ್ಥಿರ, ಶಾಶ್ವತ

**ಜಿತಕರಣ** ಇಂದ್ರಿಯ ಗೆದ್ದವ, ಜಿತೇಂದ್ರಿಯ

**ಜಿತಕಾಮ** ಅನಪೇಕ್ಷ; ಕಾಮನನ್ನು ಗೆದ್ದವನು–ಶಿವ; ಸಂನ್ಯಾಸಿ, ಬುದ್ಧ, ಅರ್ಹಂತ

**ಜಿತಮದನ** ಕಾಮನನ್ನು ಗೆದ್ದವನು–ಶಿವ

**ಜಿತಮನ** ಮನಸ್ಸನ್ನು ಗೆದ್ದವ, ಸನ್ಯಾಸಿ, ವಿಷ್ಣು

**ಜಿತಮನ್ಯು** ಕ್ರೋಧಾದಿಗಳನ್ನು ನಿಗ್ರಹಿಸಿದವ–ಜಯಿಸಿದವ; ದುಃಖವನ್ನು ಗೆದ್ದವನು–ವಿಷ್ಣು

**ಜಿತಮರಣ** ಮೃತ್ಯುಂಜಯ, ಶಿವ

**ಜಿತಮುನಿ** ಮನಸ್ಸಿನ ಆಸೆಗಳನ್ನು ಗೆದ್ದವ, ಯತಿ, ಋಷಿ

**ಜಿತಶಕ್ರ** ಇಂದ್ರಜಿತು

**ಜಿತಾರ್ಣ** ಧೀರ, ಗೆದ್ದವನು

**ಜಿತಾಶನ** ಸ್ಥಿರ; ಅನಶನಿ, ಉಪವಾಸ ಮಾಡುವವನು

**ಜಿತೆ** ಗೆದ್ದವಳು

**ಜಿನ** ಒಬ್ಬ ದೈತ್ಯ; ಬುದ್ಧ, (ಜೈನ)ಅರ್ಹಂತ; ವೀತರಾಗ

**ಜಿನಜ, ಜಿನಜಾತ, ಜಿನವಿಮೋಹಕ** ಬುದ್ಧ–ವಿಷ್ಣು

**ಜಿನಸಿಜಿನಸು** ವಿಧ ವಿಧವಾದ ಪದಾರ್ಥ

**ಜಿನಸು** ಪದಾರ್ಥ, ದಿನಸು

**ಜಿಷ್ಣು** ಇಂದ್ರ, ಅರ್ಜುನ, ಜಯಿಸುವವ

**ಜಿಷ್ಣುಸಖ** ಕೃಷ್ಣ

**ಜಿಷ್ಣುಸಾರಥಿ** ಪಾರ್ಥಸಾರಥಿ–ಕೃಷ್ಣ

**ಜಿಹ್ವಾಗ್ರ** ನಾಲಗೆಯ ತುದಿ

**ಜಿಹ್ವಾದ್ವಯ** ಎರಡು ನಾಲಿಗೆ ಉಳ್ಳ, ಹಾವು, ಆದಿಶೇಷ

**ಜಿಹ್ವೆ** ನಾಲಿಗೆ

**ಜಿಹ್ವೋಪಸ್ಥಪರಾಯಣ** ಜಿಹ್ವೆ ಮತ್ತು ಉಪಸ್ಥಗಳ ಚಪಲ ತೀರಿಸಿಕೊಳ್ಳುವುದರಲ್ಲಿ ಆಸಕ್ತ, ಆಹಾರ ಮೈಥುನಾಸಕ್ತ

**ಜೀಕಳಿ** ಪಿಚಕಾರಿ, ಜೀರ್ಕೊಳವೆ

**ಜೀಣ, ಜೀನ** ಜಿಪುಣ, ಲೋಭಿ

**ಜೀನುಗಾರ** ಚಮ್ಮಾರ, ಚರ್ಮದ ಕೆಲಸ ಮಾಡುವವ

**ಜೀಮೂತ** ಮೋಡ, ಆನೆ

**ಜೀಮೂತನಿಭಶ್ಯಾಮ** ನೀಲಮೇಘಶ್ಯಾಮ–ಕೃಷ್ಣ

**ಜೀಮೂತಶಾಲೆ** ಮೋಡಗಳಮನೆ, ಆಕಾಶ

**ಜೀಮೂತಿ** ಶ್ರಾವಂತಿ, ಮೋಡ

**ಜೀಯ** ಒಡೆಯ, ಸ್ವಾಮಿ, ಯಜಮಾನ; ಮಾಂಡಲಿಕ, ಶ್ರೀವೈಷ್ಣವ ಸಂನ್ಯಾಸಿ

**ಜೀರ್ಣಕಂತೆ** ಹಳೆಯವಸ್ತು, ಹರಿದ ಹಳೆಯ ಬಟ್ಟೆ

**ಜೀರ್ಣಮಲಿನ** ಹರಿದು ಕೊಳೆಯಾದ

**ಜೀವ** ಬೃಹಸ್ಪತಿ

**ಜೀವಜೀವ** ಜೀವಭೇದ, ಜಡಭೇದ

**ಜೀವದಾಕಾರಮೂರುತಿ** ಬೇರೆ ಬೇರೆ ಜೀವಿಗಳಲ್ಲಿ ಬೇರೆ ಬೇರೆ ಜೀವಿಗಳಾಕಾರದಲ್ಲಿ ಇರುವವನು–ವಿಷ್ಣು

**ಜೀವನ** ನೀರು, ಬಾಳು, ಬದುಕು

**ಜೀವನಂಗುಷ್ಠಾಗ್ರಮೂರುತಿ** ಕೈ ಹೆಬ್ಬೆರಳಿನ ತುದಿಯಷ್ಟು ರೂಪನಾದ ಹೃತ್ಕಮಲ ತುದಿಯಲ್ಲಿರುವ "ಶ್ರೀ ಅಗ್ರೇಶ"

Rarest Archive

**ಜೀವನ್ಮುಕ್ತಿ** ಹುಟ್ಟುವಿಕೆಯಿಂದ ಬಿಡುಗಡೆ, ಮೋಕ್ಷ
**ಜೀವಬಿಂಬ** ಪ್ರತಿ ಜೀವಿಯಲ್ಲಿ ಪರಮಾತ್ಮನು ಬಿಂಬ ಸ್ವರೂಪಿಯಾಗಿರುವನು
**ಜೀವಾಂಶ** ಬ್ರಹಸ್ಪತ್ಯಾಚಾರ್ಯರ ಅಂಶ
**ಜೀವಾಚ್ಛಾದಿಕ** ಜೀವದ ಮೇಲಿರುವ ಒಂದು ಆವರಣ; ಲಿಂಗ ದೇಹಕ್ಕೆ ಹೊಂದಿಕೊಂಡಿದ್ದ ಅವಿದ್ಯಾ ಕಾರಣವಾದ ಒಂದು ಹೊದಿಕೆ
**ಜೀವಾತ್ಮನಾದ** ಜೀವಿಗಳೆಲ್ಲೆಲ್ಲ ಇರುವ ಆತ್ಮ–ವಿಷ್ಣು
**ಜೀವೇಶರೊಂದು** ಅದ್ವೈತವಾದ
**ಜೀವೋತ್ತಮ** ವಾಯುದೇವರು
**ಜುಣುಗು** ಹಿಂಜರಿ, ಕುಗ್ಗು
**ಜುಮ್ಮನೆ** ಕೂಡಲೆ, ನಿರಾತಂಕವಾಗಿ
**ಜುಲುಪಿಕೇಶ** ಮುಂಗೂದಲು, ಮುಂಗುರುಳು
**ಜುಲುಮೆ** ಒತ್ತಾಯ, ಬಲಾತ್ಕಾರ
**ಜುಳಿಗೆ** ಕಮಂಡಲು ಅಥವಾ ಗಿಂಡಿಯಿಂದ ನೀರು ಹೊರಬರುವ ನಳಿಕೆ, ಬಾಯಿ
**ಜೂಟ** ಜಡೆ, ಜಡೆಗಟ್ಟಿದ ಕೂದಲು
**ಜೂಲು** ಪ್ರಾಣಿಗಳ ಕುತ್ತಿಗೆಯ ಮೇಲಿನ ಕೂದಲು; ಪ್ರಾಣಿಗಳ ಮೈಮೇಲೆ ಅಲಂಕಾರಕ್ಕಾಗಿ ಹಾಕುವ ಹೊದಿಕೆ
**ಜೃಂಭ** ವೈಭವ, ಅತಿಶಯ
**ಜೇಕು** ಹುಲ್ಲು, ಜೊಂಡು
**ಜೇನುಘೃತ** ಜೇನು ತುಪ್ಪ
**ಜೈಗೀಪೌರ್ವ** ಜೈಗೀಪವ್ಯ ಮುನಿ
**ಜೈತ್ರ** ಗೆಲುವು, ಜಯ, ಜಯಶಾಲಿ, ಗೆದ್ದವ
**ಜೊಂಪು** ಮತ್ತು, ಮಂಪರು
**ಜೊತೆ** ಕೂಡಿರುವುದು, ಕೂಟ; ಎರಡು
**ಜೊತ್ತು** ಆಸರೆ, ನೆಲೆ; ಸಾಲು; ಮೋಸ
**ಜೊನ್ನ, ಜೊನ್ನೆ<ಜ್ಯೋತ್ಸ್ನ** ಬೆಳುದಿಂಗಳು
**ಜೊಲ್ಲೆದುರುಬು** ಜೋಲುಬಿದ್ದ ತುರುಬು, ತುರುಬಿನ ಕೊನೆ
**ಜೋಕಾಯಿ** ಬಾಯಿಗೆ ಬಾಗಿದಕಾಯಿ; (ಬಾಲಕೃಷ್ಣ ಹೆಬ್ಬೆರಳನ್ನು ಚೀಪುತ್ತಿರುವ ಚಿತ್ರ)
**ಜೋಕು** ಠೀವಿ, ಡೌಲು
**ಜೋಕೆ** ಸಂರಕ್ಷಣೆ, ಜಾಗರೂಕತೆ
**ಜೋಗಿ<ಯೋಗಿ** ತಪಸ್ವಿ, ಅಲೆಯುವ ಬೈರಾಗಿ, ಗೋಸಾವಿ
**ಜೋಡು** ಜೊತೆ, ಯುಗಲ; ಕವಚ, ಪಾದರಕ್ಷೆ
**ಜೋಡುಕಳಸ** ಸ್ತನದ್ವಯ
**ಜೋಡುರೂಪ** ಮನುಷ್ಯ ಮತ್ತು ಸಿಂಹರೂಪ– ನರಸಿಂಹಾವತಾರ
**ಜೋಡುಹೆಂಡಿರು** ಇಬ್ಬರು ಹೆಂಡತಿಯರು, ಪಾಪ–ಪುಣ್ಯಗಳೆಂಬ ಸಂಗಾತಿಗಳು
**ಜೋಲುವತೊಗಲು** ಜೋತುಬಿದ್ದ ಚರ್ಮ, ಇಳಿಬಿದ್ದ ಮೊಲೆ
**ಜೋಹರ** ಜವಾಹಿರ, ಮುತ್ತು ರತ್ನಗಳ ವ್ಯಾಪಾರಿ; ಹಬ್ಬ, ಉತ್ಸವ
**ಜೋಳಿಗೆ** ಚೀಲ, ಭಿಕ್ಷೆಯಸ್ವೀಕಾರಕ್ಕೆಂದು ವಸ್ತ್ರದಿಂದ ತಯಾರಿಸಿದ ಚೀಲ
**ಜೌಗು** ಯಾವಾಗಲೂ ತೇವವಾಗಿರುವ ನೆಲ, ಕೆಸರು
**ಜೌವನ** ಯೌವನ, ಪ್ರಾಯ
**ಜ್ಞಾತೃ** ತಿಳಿದುಕೊಳ್ಳುವವನು, ಜ್ಞಾನಿ
**ಜ್ಞಾನ** ಬ್ರಹ್ಮಜ್ಞಾನ, ಆತ್ಮವಿದ್ಯೆ
**ಜ್ಞಾನಗಭೀರ** ಆಳವಾದ ಜ್ಞಾನವುಳ್ಳವ–ವಿಷ್ಣು
**ಜ್ಞಾನಗಮ್ಯ** ಜ್ಞಾನದಿಂದಮಾತ್ರ ತಿಳಿಯಲು ಆಗುವವ–ಶ್ರೀಹರಿ
**ಜ್ಞಾನಪುಂಜ** ಜ್ಞಾನದರಾಶಿ
**ಜ್ಞಾನಶುಭಕಾಯಳು** ಜ್ಞಾನವೇ ಸಾಕಾರದಂತಿರುವ ಪವಿತ್ರವಾದ ದೇಹವುಳ್ಳವಳು, ಲಕ್ಷ್ಮಿ, ಸರಸ್ವತಿ
**ಜ್ಞಾನಶೂನ್ಯ** ಜ್ಞಾನವಿಲ್ಲದ, ದಡ್ಡ
**ಜ್ಞಾನಿ** ಭಕ್ತ, ತಿಳಿದವ
**ಜ್ಞಾನಿಗಳರಸ** ಜ್ಞಾನಿಗಳಿಗೆಲ್ಲ ಒಡೆಯ–ವಿಷ್ಣು

Rarest Archive

**ಜ್ಞಾನೇಂದ್ರಿಯಗಳು** ಶ್ರೋತ್ರ, ತ್ವಕ್, ಚಕ್ಷುಸ್ಸು, ಜಿಹ್ವೆ, ನಾಸಿಕ,

**ಜ್ಞೇಯ** ಪರಬ್ರಹ್ಮ; ತಿಳಿಯಬೇಕಾದ್ದು, ತಿಳಿಯುವವ

**ಜ್ಞೇಯಜ್ಞಾತೃ** ತಿಳಿದಿರುವ, ತಿಳಿಸುವವ, ಪರಬ್ರಹ್ಮ

**ಜ್ಯಾಮುಡಿ** ಪರಿಮಳವನ್ನು ಬೀರುವ ಕೂದಲು

**ಜ್ಯಾವನಪ** ಯಮಧರ್ಮ

**ಜ್ಯೇಷ್ಠ** ಹಿರಿಯ, ದೊಡ್ಡವ

**ಜ್ಯೇಷ್ಠದೂತ** ಶ್ರೀಹರಿಯ ಪ್ರತಿನಿಧಿ, ಬ್ರಹ್ಮ-ವಾಯು

**ಜ್ಯೇಷ್ಠಾದೇವಿ** ಕಲಿಯ ಪತ್ನಿಯಾದ ಅಲಕ್ಷ್ಮಿ

**ಜ್ಯೋತಿಶ್ಚಕ್ರ** ಸೌರಮಂಡಲ; ಸುತ್ತಲೂ ದೀವಿಗೆಗಳುಳ್ಳ ತೂಗು ದೀಪದಾನಿ

**ಜ್ಯೋತಿರ್ಮಯ** ಬೆಳಕಿನಿಂದ ಕೂಡಿರುವ, ಪ್ರಕಾಶಮಯ

**ಜ್ಯೋತಿಷ್ಮತಿ** ನಕ್ಷತ್ರಗಳಿಂದ ಬೆಳಕನ್ನುಳ್ಳ ರಾತ್ರಿ, ಕಂಗು

**ಜ್ಯೋತಿಷ್ಮತಿತೈಲ** ಕಂಗು ಸಸ್ಯದಿಂದ ತಯಾರಿಸಿದ ತೈಲ

**ಜ್ಯೋತ್ಸ್ನೆ** ಬೆಳುದಿಂಗಳು

**ಜ್ವಲಿತ** ಹೊಳೆಯುವ

**ಜ್ವಾಲಾನರಸಿಂಹ** ಅಹೋಬಲದಲ್ಲಿರುವ ಒಂಬತ್ತು ನರಸಿಂಹಮೂರ್ತಿಗಳಲ್ಲಿ ಒಂದು [ಜ್ವಾಲಾ, ಅಹೋಬಲ, ಮಾಲೋಲ (ಲಕ್ಷ್ಮೀ), ಕ್ರೋಡಾಕಾರ, ಕಾರಂಜ, ಭಾರ್ಗವ, ಯೋಗಾನಂದ, ಛತ್ರವಟ, ಪಾವನನೃಸಿಂಹ]

## ಝ

**ಝ** ಸಂಖ್ಯೆ ಒಂಬತ್ತು

**ಝಂಕಿಸು** ತಿರಸ್ಕರಿಸು

**ಝಂಗಿಸು** ಜಣಜಣವೆನ್ನು, ತುಂಬಿಯಂತೆ ಸ್ವರ ಕೊಡು

**ಝಂಜಾವಾತ** ಮಳೆಯಿಂದ ಕೂಡಿದ ಬಿರುಗಾಳಿ, ವಾಯುದೇವರು

**ಝಂಝಾನಿಲ(ಳ)** ಬಿರುಗಾಳಿ

**ಝಂಝೂಮರುತ್** ಮಳೆಯಿಂದ ಕೂಡಿದ ಬಿರುಗಾಳಿ

**ಝಕ್ಕಿಸು** ಅನಿವಾರ್ಯವಾಗಿ ಮಾಡು; ಸೋಲಿಸು; ಕೀಳಾಗು

**ಝಗಡ** ಜಗಳ, ಕಲಹ

**ಝಝರ** ವೀರ, ಧೈರ್ಯಶಾಲಿ, ಶೂರ

**ಝರಿ** ನೀರಸೆಲೆ, ಸಣ್ಣ ಪ್ರವಾಹ

**ಝಲ್ಲ** ಭ್ರಮೆ, ಹುಚ್ಚು

**ಝಲ್ಲಿ** ಗೊಂಚಲು, ಕುಚ್ಚು, ಗೊಂಡೆಗಳ ತೋರಣ

**ಝಲ್ಲಿಸು<ಜಾಲಿಸು** ಸೋಸು; ಬೆದರಿಸು, ಜಂಕಿಸು

**ಝಲ್ಲು** ಭಯ

**ಝಷ** ಮೀನು

**ಝಷಕೇತನನಯ್ಯ** ಮನ್ಮಥನ ತಂದೆ-ವಿಷ್ಣು

**ಝಷಕೇತು** ಮೀನನ್ನು ಬಾವುಟದಲ್ಲುಳ್ಳವನು - ಮನ್ಮಥ

**ಝಷಕೇತುಜನಕ** ಮನ್ಮಥನ ತಂದೆ-ವಿಷ್ಣು

**ಝಳಪು** ಹೊಳಪು

**ಝಾಟ<ಜೂಟ್** ಸುಳ್ಳು

**ಝಾಡನೆ** ನಿಂದಿಸುವುದು

**ಝಾವ** ಜಾವ, ಹೊತ್ತು

**ಝಾವಝಾವಕೆ** ಜಾವಜಾವಕ್ಕೆ, ಕಾಲಕಾಲಕ್ಕೆ

**ಝಿಲ್ಲಿಕೆ** ಜೀರುಂಡೆ

**ಝೇಲಿಸು** ಹಿಡಿದುಕೊ

**ಝೊಂಪಿಸು** ಮೈಮರೆ, ಎಚ್ಚರ ತಪ್ಪು

Rarest Archiver

## ಟ

**ಟ** ಸಂಖ್ಯೆ ಒಂದು

**ಟಂಕ** ಕೊಡ: ಅಧಿಕೃತ ಮುದ್ರೆಹಾಕಿದ ನಾಣ್ಯ: ಬೆಳ್ಳಿ ಇಲ್ಲವೆ ಹಿತ್ತಾಳೆಯ ಬೆಸುಗೆ: ಬೆಟ್ಟದ ಇಳಿಜಾರು ಪ್ರದೇಶ: ಕಲ್ಲು ಕೆತ್ತುವ ಚಾಣ, ಕಲ್ಲುಳಿ

**ಟಂಕೀ** ಕಲ್ಲು ಒಡೆಯುವ ಸುತ್ತಿಗೆ ಟಂಕ; ಜ್ಞಾನಮುದ್ರೆಯನ್ನೂ ಟಂಕವನ್ನೂ ಧರಿಸಿರುವ ಭಗವಂತನ ಒಂದು ರೂಪ ಟಂಕೀ: 'ಟ' ಎಂಬ ವರ್ಣಕ್ಕೆ ನಿಯಾಮಕ

**ಟಕ್ಕು** ಮೋಸ, ವಂಚನೆ

**ಟವಟವಿಸು** ಕಳೆತುಂಬಿರು, ಕಾಂತಿಯುಕ್ತವಾಗಿರು, ಮಿಂಚು

**ಟವಳಿ** ಮೋಸ

**ಟಾಹಬಡೆ** ದೈನ್ಯದಿಂದ ಒದರು

**ಟೀಕಾಂಜನ** ವ್ಯಾಖ್ಯಾನವೆಂಬ ಅಂಜನ

**ಟೂಕ** ಅತಿ ಲಕ್ಷ್ಯಪೂರ್ವಕ

**ಟೂಕಿ** ತೂಕ

**ಟೆಂಟಣಿಸು** ಮುತ್ತು, ಆವರಿಸು

**ಟೇಕ** ಗುಡ್ಡ, ಬೆಟ್ಟ

**ಟೊಂಕ** ಸೊಂಟ, ನಡು

**ಟೊಣೆ** ವಂಚಿಸು, ಮೋಸಗೊಳಿಸು, ಕದಿ; ತಿವಿ, ಹೊಡಿ; ಅಗೆ

**ಟೊಳ್ಳು** ವ್ಯರ್ಥವಾದ, ಹುರುಳಿಲ್ಲದ, ಗಟ್ಟಿ ಅಲ್ಲದ

**ಟೌಕರ** ದಿಟ್ಟಿಸಿ ನೋಡು

**ಟೌಳಿ<ಟವಳಿ** ಮೋಸ, ವಂಚನೆ

## ಠ

**ಠಕ್ಕು** ಮೋಸ

**ಠಕ್ಕುಠವಳಿ** ಮೋಸವಂಚನೆ

**ಠಮಕ** ಡೌಲು

**ಠವಲಾ** ಬೀಸುವ ಕಲ್ಲಿನ ಮಧ್ಯದಲ್ಲಿರುವ ಗೂಟ

**ಠವಿಸು** ಹೊಳೆ, ಪ್ರಕಾಶಿಸು

**ಠಾಕೂರ** ದೇವರು, ಗೌರವಾರ್ಹನಾದ ವ್ಯಕ್ತಿ, ಒಡೆಯ, ಕೃಷ್ಣ

**ಠಾಣದೀವಿಗೆ** ಸ್ಥಾನ ದೀಪಿಕಾ, ನಂದಾದೀಪ; ಸ್ಥಳ, ಸಮೆ

**ಠಾವು** ಎಡೆ, ಸ್ಥಳ, ಜಾಗ

**ಠೇವು** ನಿಧಿ, ಠೇವಣಿ

**ಠೊಣ್ಣ** ಧಡಿಯ, ಸ್ಥೂಲಕಾಯಿ

**ಠೋಕರ** ಎಡವುವದು

**ಠೌಳಿ** ಮೋಸ, ವಂಚನೆ

## ಡ

**ಡ** ಒಂದು ಸಂಖ್ಯೆ, ಮೂರು

**ಡಂಕ** ಚರ್ಮವಾದ್ಯ, ಡಕ್ಕೆ, ತಮಟೆ

**ಡಂಕರ** ಚರ್ಮವಾದ್ಯಗಾರ

**ಡಂಕಿ** ಚರ್ಮವಾದ್ಯ, ತಮಟೆ, ಹಲಿಗೆ

**ಡಂಗುರಹೊಂಯ್** ಸಾರು, ಊರುತುಂಬ ಡಂಗುರ ಹೊಡೆದು ಹೇಳು, ಟಾಂಟಾಂ ಮಾಡು

**ಡಂಬಕ** ಆಡಂಬರದವ, ಮೋಸಗಾರ, ವಂಚಕ, ಆಷಾಢಭೂತಿ

**ಡಂಬಕರ್ಮಿ** ಸೋಗಿನ ಕೆಲಸ ಮಾಡುವವನು, ಮೋಸಗಾರ

**ಡಂಬು** ಸೋಗು

**ಡಂಭ** ವಂಚನೆ, ಸೋಗು, ಒಣಹೆಮ್ಮೆ, ಜಂಭ

**ಡಂಭಕ** ಬೂಟಾಟಿಕೆ, ತೋರಿಕೆ, ಮೋಸ

Rarest Archive

**ಡಬ್ಬು** ಒಣಹೆಮ್ಮೆ, ಜಂಭ
**ಡಮರು** ಒಂದು ಬಗೆಯ ಚರ್ಮವಾದ್ಯ
**ಡಾಣೆ** ದೊಣ್ಣೆ, ಬಡಿಗೆ
**ಡಾಲು<ಢಾಲು** ಗುರಾಣಿ, ಹರಿಗೆ
**ಡಾವಣಿ<ದಾವಣಿ** (ದನಕರುಗಳನ್ನು ಸಾಲಾಗಿ ಕಟ್ಟುವ) ಹಗ್ಗ
**ಡಾಳ** ಮೋಸ, ವಂಚನೆ
**ಡಾಳಿಸು<ಢಾಳಿಸು** ಪ್ರಕಾಶಿಸು, ಬೀಸು
**ಡಿಂಗಡಿ(ರಿ)ಗ** ಭಕ್ತ, ಸೇವಕ, ಆಳು
**ಡಿಂಡೀರ** ಬುರುಗು, ನೊರೆ
**ಡಿಂಬ** ಶರೀರ, ದೇಹ, ಮನೆ; ತೊಂದರೆ; ಬಾಲಕ
**ಡಿಂಬಕ** ಬಾಲಕ, ಚಿಕ್ಕವ
**ಡಿಂಬು** ಬಾಧೆ
**ಡಿಂಭ** ಆಗತಾನೆ ಜನಿಸಿದ ಮಗು ಅಥವಾ ಪ್ರಾಣಿಯ ಮರಿ, ದೇಹ, ಶರೀರ; ದಡ್ಡ
**ಡುರುಕಿ** ಎತ್ತು, ಗೂಳಿ ಮುಂತಾದ ಪ್ರಾಣಿಗಳ ಗುಟುರು
**ಡುಲಕಿಸು** ತೂಕಡಿಸು
**ಡುಳ್ಳಿಮನ** ಸುಳ್ಳು ಮನಸ್ಸು
**ಡೆಂಕಣಿ** ಒಂದುಬಗೆಯ ಆಯುಧ, ಕೋಟೆಯ ಮೇಲಿನ ಬುರುಜು
**ಡೆಂಡ(ಢ)ಣಿಸು** ಉತ್ಸಾಹಪಡು; ಬೆದರಿಕೆಯಿಂದ ನಡುಗು, ದುಃಖಿಸು
**ಡೇಗ** ಆಧಾರ
**ಡೇಗೆ** ಒಂದುಜಾತಿಯ ಬೇಟೆ ಆಡುವ ಪಕ್ಷಿ, ಗಿಡಗ
**ಡೊಂಕಸತಿ** ಗೂನಿ, ಕುಬ್ಜೆ (ಕಂಸನ ಗಂಧದವಳು)
**ಡೊಂಕಿ** ವಕ್ರವಾದವಳು, ಕುಬ್ಜೆ
**ಡೊಂಕು** ಓರೆ, ತಪ್ಪು, ವಕ್ರಗತಿ
**ಡೊಂಬ** ಗಣೆಯಮೇಲೆ ಆಡುವವನು, ಕೊಲ್ಲಟಿಗ, ಡೊಂಬರಾಟದವ
**ಡೊಂಬೆ** ನಟನೆ; ಗುಲ್ಲು, ಕೋಲಾಹಲ
**ಡೊಕ್ಕೆ** ಶರೀರ, ಮೈ, ಹೊಟ್ಟೆ
**ಡೊಗರು** ಬಿಲ, ಪೊಟರೆ, ತೂತು
**ಡೊಗ್ಗಾಲು** ಊರಿದ ಮೊಳಕಾಲು, ನಮಸ್ಕಾರ
**ಡೊಳ್ಳು** ಬೊಜ್ಜು ಬೆಳೆದ ಹೊಟ್ಟೆ, ಬೊಜ್ಜು; ಚರ್ಮದ ವಾದ್ಯ
**ಡೋರ್ಯ** ಒಂದುಬಗೆಯ ಪಟಾಪಟಿ ಬಟ್ಟೆ
**ಡೌಲು** ಆಡಂಬರ, ಒಣಹೆಮ್ಮೆ, ಬಡಾಯಿ

## ಢ

**ಢಂಭ<ದಂಭ** ಆಡಂಬರ
**ಢಕ್ಕಿ(ಕ್ಕೆ)<ಡಕ್ಕೆ** ತಮಟೆ, ಚರ್ಮವಾದ್ಯ, ಭೇರಿ
**ಢಗಳ** ದೊಗಳೆ, ಸಡಿಲವಾದ
**ಢಗೆ<ದಗೆ** ನೀರಡಿಕೆ, ಶಿಖೆ
**ಢಳ** ಉಚ್ಚ ಪದವಿ
**ಢಾಣಕ** ಆಡಳಿತಗಾರ, ವ್ಯವಸ್ಥಾಪಕ
**ಢಾಣೆ** ಗುರಾಣಿ, ಹರಿಗೆ, ದಂಡ
**ಢಾಲ್, ಢಾಲ, ಢಾಲು** ಗುರಾಣಿ, ಹರಿಗೆ
**ಢಾಳ** ಕಾಂತಿ, ಪ್ರಕಾಶ
**ಢಾಳಿಸು<ಚಡಾಳಿಸು** ಬೀಸು, ಝಳಪಿಸು, ಪ್ರಜ್ವಲಿಸು
**ಢೇಗು<ಡೇಗು** ಉದಾನವಾಯು ಬಿಡು, ತೇಗು, ತೇಗುವಿಕೆ

Rarest Archiver

# ತ

ತ ಒಂದು ಸಂಖ್ಯೆ, ಆರು

**ತಂಕ** ಸೊಕ್ಕು; ಕಲ್ಲುಕುಟಿಗನ ಚಾಣ, ಟಂಕ

**ತಂಗು** ಬೀಡುಬಿಡು, ಇಳಿದುಕೊ, ನಿಲ್ಲು

**ತಂಡ** ಗುಂಪು, ಸಮೂಹ, ಪಕ್ಷ, ಪಂಗಡ

**ತಂಡತಂಡ** ಬೇರೆಬೇರೆ ತರಹದ, ಪಂಗಡಗಳು

**ತಂಡು** ನಂದೀಶ್ವರ

**ತಂಡುಲ** ಅಕ್ಕಿ, ಅಕ್ಷತೆ, ಕಮಲದ ಬೀಜ

**ತಂಡುವಾಹನ** ನಂದೀಶ್ವರ ವಾಹನ–ಶಿವ

**ತಂತು** ಸೂತ್ರ; ನೂಲು, ಎಳೆ, ದಾರ; ಸ್ವಲ್ಪ, ಒಂದು ಎಳೆಯಷ್ಟು; ತಂತ್ರ, ಉಪಾಯ

**ತಂತುಪಟ** ಬಟ್ಟೆ

**ತಂತುಮಾತ್ರ** ಸ್ವಲ್ಪಮಾತ್ರ

**ತಂತುಹುಳು** ರೇಶಿಮೆಯ ಹುಳು

**ತಂತ್ರ** ರಹಸ್ಯಮಯ ವಿದ್ಯೆ, ಇಂದ್ರಜಾಲ, ಕೈಕೆಲಸ; ಮಂತ್ರಸಹಿತವಾಗಿ ಮಾಡತಕ್ಕ ಆಗಮೋಕ್ತ ಕ್ರಿಯೆಗಳು: ಕುಟಿಲ ರಾಜಕಾರಣ

**ತಂತ್ರದರಸ** ವಿಷ್ಣು

**ತಂತ್ರಸಾರ** ಶಾಸ್ತ್ರದ ಸಾರ, ವೈಷ್ಣವ ಆಚಾರ ವಿಚಾರಗಳನ್ನು ಹೇಳುವುದಕ್ಕಾಗಿ ಶ್ರೀಮಧ್ವಾಚಾರ್ಯರು ಸಂಗ್ರಹಿಸಿದ ಗ್ರಂಥ

**ತಂತ್ರಿ** ತಂತ್ರಶಾಸ್ತ್ರವನ್ನು ಬಲ್ಲವನು; ವೀಣೆ, ತಂಬೂರಿ ಮುಂತಾದ ತಂತಿಯನ್ನು ಉಪಯೋಗಿಸುವ ವಾದ್ಯ

**ತಂದೆನೃಪಾಲ** ಜನಕರಾಜ

**ತಂದೆಲೋಕ** ಜನಕನಲೋಕ, ಇಂದ್ರಲೋಕ, ಪಿತೃಲೋಕ

**ತಂದ್ರ, ತಂದ್ರಾ, ತಂದ್ರಿ** ಬಳಲಿಕೆ, ದಣಿವು; ಆಲಸ್ಯ, ಜಡತೆ

**ತಂದ್ರಮತಿ** ಜಡಬುದ್ಧಿ

**ತಂಬಟ, ತಂಬಟಿ** ಚರ್ಮವಾದ್ಯ, ತಮಟೆ

**ತಂಬಲಾಗು** ಆರ್ದ್ರವಾಗುವಂತೆ, ತೊಯ್ಯುವಂತೆ, ಸಂಪೂರ್ಣ ರಸಾಸ್ವಾದನೆಯಾಗು

**ತಂಬಲಾಪಾಣಿ** ಬೊಗಸೆ ಒಡ್ಡಿ ಬೇಡುವುದು

**ತಂಬಿಸು<ಸ್ತಂಭಿಸು** ನಿಶ್ಚಲವಾಗು; ಸಂತೈಸು, ಸಮಾಧಾನ ಮಾಡು

**ತಂಬುಲ** ಎಲೆ ಅಡಿಕೆ

**ತಂಬೂರ** ಕಶ್ಯಪ ಮತ್ತು ಅರಿಷ್ಟೆಯರ ಮಗನಾದ ಗಂಧರ್ವ; ನಾದ ಹೊರಡಿಸುವ ತಂತಿ ವಾದ್ಯ

**ತಂಬೆಲರು** ತಂಪಾದಗಾಳಿ

**ತಕ್ಕಿಸು, ತಕ್ಕೈಸು** ಆಲಿಂಗಿಸು

**ತ್ರಕ್ರ** ಮಜ್ಜಿಗೆ

**ತಕ್ಷಕಸುತ** ಅಶ್ವಸೇನ, ಕರ್ಣನ ಬತ್ತಳಿಕೆಯಲ್ಲಿ ಸೇರಿದ್ದ ಸರ್ಪಾಸ್ತ್ರ

**ತಗರ್** ತಡೆ, ಅಡ್ಡಿಪಡಿಸು; ನಿಲ್ಲು, ಅಡ್ಡಿಗೊಳಗಾಗು

**ತಗರು** ತಡೆಹಿಡಿ; ಮೇಷ, ಗಂಡುಕುರಿ, ಟಗರು

**ತಗ್ಗಿಸು** ತಲೆಬಾಗು, ವಿನೀತನಾಗು

**ತಗ್ಗು** ಬಾಗು, ಕುಗ್ಗು

**ತಗ್ಗೆಡೆ** ಕುಗ್ಗುವಸ್ಥಳ; ತಲೆತಗ್ಗಿಸು

**ತಟ** ದಡ

**ತಟಾಕ** ಕೆರೆ, ಜಲಾಶಯ

**ತಟಿತ್, ತಟಿತ್ತು** ಮಿಂಚು

**ತಟಿನಿ** ನದಿ, ಹೊಳೆ, ತೊರೆ

**ತಟಿಶ್ರೋಣಿ** ಉಬ್ಬಿದ ನಿತಂಬ

**ತಟ್ಟಕ<ತಟಾಕ** ಜಲಾಶಯ

**ತಟ್ಟಿ** ಬಿದಿರ ತಡಿಕೆ; ತಟ್ಟೆ; ತಟ್ಟುವುದು

**ತಡವು** ಕೆಣಕು; ತಡೆ; ನೇವರಿಸು; ವಿಳಂಬ, ನಿಲ್ಲು

**ತಡಹು** ಹುಡುಕು

**ತಡಿ** ದಡ, ತಟ, ದಂಡೆ; ನಿರೋಧಮಾಡು; ಕುದುರೆಯ ಜೀನು

**ತಡಿಕೆರವು** ದಪ್ಪಜೋಡು, ಎಕ್ಕಡ

Rarest Archiver

**ತಡೆ** ಸಾವಕಾಶವಮಾಡು; ಅಡ್ಡಿ, ನಿರ್ಬಂಧ; ಹಾವುಗಳನ್ನು ನಿಲ್ಲಿಸುವ ಮಂತ್ರ
**ತಡೆಗಾರ** ಮಂತ್ರ ಮಾಟಗಾರ
**ತಣಿಗೆ** ಹರಿವಾಣ, ತಟ್ಟೆ
**ತಣಿರು** ತಳಿರು, ಚಿಗುರು
**ತಣ್ಗದಿರ** ಶೀತಲ, ಕಿರಣಗಳುಳ್ಳವ, ಚಂದ್ರ
**ತಣ್ಣಸ** ತಂಪು, ಶೀತಲ
**ತತ್** ಅದು, ಅದರ
**ತತಿ** ಸಮೂಹ, ಗುಂಪು, ಸಾಲು
**ತತು** ಅದರಂತೆ
**ತತುವರು** ತತ್ತ್ವಾಭಿಮಾನಿ ದೇವತೆಗಳು
**ತತ್ತದ್ರೂಪ** ಆಯಾಯಾ ರೂಪ
**ತತ್ತರ** ತಲ್ಲಣ, ಬೆದರುವಿಕೆ
**ತತ್ತರಿ** ತರಿತರಿ, ಒಂದೇಸವನೆ ಹೊಡೆ
**ತತ್ತಲ** ಚಿಂತೆ, ಕಳವಳ
**ತತ್ತಳಿಸು** ತತ್ತರಿಸು, ಚಿಂತೆಮಾಡು
**ತತ್ತ್ವಮಸಿ** ಅದು ನೀನಾಗಿದ್ದೀಯೆ; ನೀನೆ ಬ್ರಹ್ಮನಿರುವೆ
**ತತ್ತ್ವವಿಂಶತಿನಾಲ್ಕು** ಚತುರ್ವಿಂಶತಿ (ಇಪ್ಪತ್ತನಾಲ್ಕು) ತತ್ತ್ವಗಳು
**ತತ್ಥಳಿಪ** ಥಳಥಳಿಪ, ಪ್ರಕಾಶಿಸುವ
**ತತ್ಥೈವಾದ್ಯ** ಥೈ-ಥೈ ಎಂಬ ಶಬ್ದವನ್ನು ನುಡಿಸುವ ಮೃದಂಗಾದಿ ವಾದ್ಯ
**ತತ್ರಸ್ಥ** ಅಲ್ಲಲ್ಲಿ ಇರುವ
**ತತ್ವಮತ** ವೈಷ್ಣವ ಮತ
**ತತ್ವಾಭಿಮಾನಿಗಳು** ಸೃಷ್ಟಿಯ ಚೇತನ ಅಚೇತನ ವಸ್ತುಗಳ ಮತ್ತು ದೇಹಗತ ಇಂದ್ರಿಯಗಳ ಅಭಿಮಾನಿ ದೇವತೆಗಳು, ತತ್ವಾಭಿಮಾನಿ ದೇವತೆಗಳು
**ತತ್ವಾರ್ಥಿ** ತತ್ವವನ್ನು ಅಪೇಕ್ಷಿಸುವವನು
**ತಥ್ಯ** ಸತ್ಯ, ತಿರುಳು
**ತದುಕು** ಹೊಡೆ, ಬಡಿ, ಕುಟ್ಟು
**ತದ್ದಿನ** ಆದಿನ, ತಿಥಿ, ಶ್ರಾದ್ಧದಿನ
**ತದ್ಧಾಮ** ಆ ಮನೆ
**ತನಯ** ಮಗ
**ತನಯಳು** ಮಗಳು
**ತನಿ** ಅತಿಶಯವಾದ, ಹೊಚ್ಚ ಹೊಸದಾದ; ರುಚಿ, ಪಕ್ವವಾದ; ಒಂಟಿಯಾದುದು
**ತನಿಗಿಡಿ** ಬೂದಿ ಮುಚ್ಚದೆ ನಿಗಿನಿಗಿಸುವ ಬೆಂಕಿ, ಹೆಚ್ಚಾದ ಬೆಂಕಿ
**ತನಿವಾತ** ಹಿತವಾದ ಗಾಳಿ, ತಂಗಾಳಿ
**ತನು** ದೇಹ, ಒಡಲು
**ತನುಜ** ಮಗ
**ತನುಜತರ** ತೆಳುವಾದ ಹೊಟ್ಟೆ
**ತನುಜಾತೆ** ಮಗಳು, ರುಕ್ಮಿಣಿ
**ತನುಜೆ** ಮಗಳು
**ತನುಮರೆ** ಮೈಮರೆ
**ತನುಮೂರರಸಾಕ್ಷಿ** ಲಿಂಗದೇಹ, ಪಾಂಚಭೂತಿಕ ದೇಹ, ಸ್ವರೂಪದೇಹ ಸಾಕ್ಷಾತ್ತಾಗಿ ನೋಡುವವ –ಶ್ರೀಹರಿ
**ತನುಸಂಬಂಧಿ** ಶರೀರಕ್ಕೆ ಸಂಬಂಧಿಸಿದ; ಬಂಧುಗಳು
**ತನೂಭವ** ಮಗ
**ತನ್ನಗ್ನಿ(<ತತ್-ಅಗ್ನಿ)** ಆ ಬೆಂಕಿ, ಜ್ಞಾನವೆಂಬ ಬೆಂಕಿ
**ತನ್ನಭವನ** ತನ್ನ ಮನೆ; ಸಸ್ಯಲೋಕ
**ತನ್ಮಾತ್ರಗಳು** ರೂಪ, ರಸ, ಗಂಧ, ಶಬ್ದ, ಸ್ಪರ್ಶ
**ತನ್ಮಾತ್ರಾದೂರ** ತನ್ಮಾತ್ರೆಗಳಿಂದ ಅಂದರೆ ಪ್ರಕೃತಿಯಿಂದ ದೂರನಾದವ–ವಿಷ್ಣು
**ತಪ** ತಪಸ್ಸು, ಆಲೋಚನೆ; ಶಿವ
**ತಪನ** ಕಾಯಿಸುವ, ಸುಡುವ, ಸೂರ್ಯ
**ತಪನಪ್ರಕಾಶ** ಸೂರ್ಯಕಾಂತಿ
**ತಪನೀಯಾಂಬಕ** ಹಿರಣ್ಯಾಕ್ಷ

Rarest Archiver

**ತಪಸ್ಸು** ಅಗ್ನಿ, ಬೆಂಕಿ; ವ್ರತನಿಯಮಾದಿಗಳಿಂದ ದೇಹವನ್ನು ದಂಡಿಸುತ್ತ ಧ್ಯಾನ ಮಾಡುವುದು
**ತಪಿಸು** ಒದ್ದಾಡು, ಸಂಕಟಪಡು
**ತಪುತ<ತಪ್ತ** ಕಾಯಿಸಿದ, ಬೆಂದ
**ತಪುತಾರ** ಕಾಯಿಸಿದ ಚಕ್ರ ಮುದ್ರೆ; ಬಹಳ
**ತಪ್ತಲೋಹ** ಕಾಯ್ದ ಕಬ್ಬಿಣ, ನರಕದಲ್ಲಿಯ ಒಂದು ಬಗೆಯ ಶಿಕ್ಷೆ
**ತಪ್ತಾಂಕಿತ** ಶಂಖ ಮತ್ತು ಚಕ್ರದ ಗುರುತಿನ ಬೆಳ್ಳಿಯ ಮುದ್ರೆಯನ್ನು ಕಾಯಿಸಿ ದೇಹಕ್ಕೆ ಸ್ವಾಮಿಗಳು ಒತ್ತುವ ಮುದ್ರೆ
**ತಪ್ಪು** ನೀತಿಬಿಟ್ಟ ನಡೆ, ಸುಳ್ಳಾಗು
**ತಬಕ(ಕು)** ತಟ್ಟೆ, ಹರಿವಾಣ
**ತಮ** ಬೀರ/ವೇದ ಕದ್ದ ಶಂಖಾಸುರ, ಒಬ್ಬ ರಾಕ್ಷಸ; ಅಜ್ಞಾನ, ಕತ್ತಲೆ, ತಮಸ್ಸು
**ತಮಂಧ** ಕಗ್ಗತ್ತಲೆ, ಅಜ್ಞಾನ
**ತಮನವೈರಿ** ತಮನೆಂಬ ದೈತ್ಯನನ್ನು ಕೊಂದ ಮತ್ಸ್ಯಾವತಾರ ರೂಪಿ ಪರಮಾತ್ಮ
**ತಮನಿಧಿ** ಕತ್ತಲೆಯ ರಾಶಿ
**ತಮಸಿ** ಅಜ್ಞಾನಿ
**ತಮಸು, ತಮಸ್ಸು** ಕತ್ತಲೆ, ಅಜ್ಞಾನ
**ತಮಹರ** ಮತ್ಸ್ಯರೂಪೀ ಶ್ರೀಹರಿ; ಸೂರ್ಯ
**ತಮಾಲವರ್ಣ** ಹೊಂಗೆ ಎಲೆಯ ಬಣ್ಣ, ನೀಲಿ ಬಣ್ಣ
**ತರಂಗ** ಅಲೆ
**ತರಂಗಹಾರು** ಅಲೆಯಂತೆ ನಾಗಾಲೋಟದಿಂದ ಹಾರು
**ತರಂಗಿಣಿ** ಅಲೆಗಳಿಂದ ಕೂಡಿದ ನದಿ
**ತರಂಗಿತ** ಅಲೆಗಳುಳ್ಳ
**ತರಕ್ಷು** ಹುಲಿ
**ತರಗು** ಒಣಗಿದ, ಕುಂದಿದ
**ತರಗೆಲೆ** ಒಣಗಿದೆಲೆ
**ತರಣ** ದಾಟುವಿಕೆ, ಪಾರಾಗುವಿಕೆ
**ತರಣಿ** ಸೂರ್ಯ; ನಾವೆ, ಹರಿಗೋಲು; ಗಿಳಿ
**ತರಣಿಕರ** ಸೂರ್ಯಕಿರಣ
**ತರಣಿಕುಮಾರ, ತರಣಿಜ** ಸೂರ್ಯನ ಮಗನಾದ ಯಮ, ಸುಗ್ರೀವ, ಕರ್ಣ, ಶನ್ಯೈಶ್ಚರ
**ತರಣಿಕುಲ** ಸೂರ್ಯವಂಶ
**ತರಣಿಮುಣುಗು** ಸೂರ್ಯಾಸ್ತ, ಸಂಜೆ
**ತರಣಿಯಾನಂತ ಕಿರಣ** ಸೂರ್ಯನ ಅನಂತ ಕಿರಣಗಳು
**ತರಣಿಶತಸುರುಚಿರತೇಜ** ನೂರಾರು ಸೂರ್ಯರಿಗೆ ಸದೃಶವಾದ ಕಾಂತಿಯನ್ನು ಹೊಂದಿರುವವನು –ವಿಷ್ಣು
**ತರಣಿಸಮ** ಕಕ್ಷ್ಯಾ ತಾರತಮ್ಯದಲ್ಲಿ ಸೂರ್ಯ (ತರಣಿ)ನಿಗೆ ಸಮನಾದ ಚಂದ್ರ
**ತರಣಿಸು** ನದಿಯನ್ನು ದಾಟಿಸು, ಪಾರುಮಾಡು
**ತರಣಿಸುತ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನ್ಯೈಶ್ಚರ
**ತರಣಿಸೂತ** ಅರುಣ
**ತರಣೋಪಾಯ** ಪರಿಹಾರಮಾರ್ಗ, ತಾರಕಮಂತ್ರ ಉದ್ಧಾರಮಾರ್ಗ
**ತರಹರಿಸು** ತಡಮಾಡು; ಕಳವಳಿಸು, ಸೈರಿಸು
**ತರಳ** ಒಣಗಿದ ಹಣ್ಣು; ಬಾಲಕ; ಚಂಚಲವಾದ, ಕದಲುವ
**ತರಳದೃಷ್ಟ** ಪರ ಹೆಣ್ಣಿನ ಮೇಲೆ ಕಣ್ಣು ಹಾಕುವವ
**ತರಳಪ್ರಾಯ** ನವಯೌವನ
**ತರಳಭಕ್ತಿ** ಅಲ್ಪಭಕ್ತಿ
**ತರಳೆ** ಬಾಲಕಿ, ಹುಡುಗಿ
**ತರಾಲ, ತರಾಳ** ಚಂಚಲ
**ತರಿ** ಕತ್ತರಿಸು, ಪರಿಹರಿಸು, ಕಡಿ
**ತರಿಗೆಂಡ** ಬೂದಿ ಮುಚ್ಚದ ಕೆಂಡ, ಚೆನ್ನಾಗಿ ಉರಿಯುವ ಕೆಂಡ
**ತರು** ವೃಕ್ಷ, ಮರ
**ತರುಚರವರ** ಕಪಿಶ್ರೇಷ್ಠ, ಹನುಮಂತ

Rarest Archiver

**ತರುಣಗಾತುರ** ಯೌವ್ವನದೇಹಿ, ಪ್ರಾಯದವನು
**ತರುಣತರಣಿ, ತರುಣಾತಪ** ಬಾಲಸೂರ್ಯ
**ತರುಣಿ** ಹೆಂಗಸು, ಯುವತಿ
**ತರುಬು** ಅಡ್ಡಗಟ್ಟು, ಬೆನ್ನಟ್ಟು, ದೂಡು; ನಿಗ್ರಹಿಸು; ಅಪ್ಪಿಕೊ
**ತರುಲತೆ** ಗಿಡಬಳ್ಳಿ
**ತರುವಲಿ** ಹುಡುಗ, ಬಾಲಕ
**ತರುವೈರಿ** ಅಗ್ನಿ
**ತರುಸ್ಥಿತ** ಗಿಡ/ಮರದಲ್ಲಿದ್ದ
**ತರ್ಕ** ಊಹೆ, ಅನುಮಾನ; ವಾದ
**ತರ್ಕೈಸು** ಅಪ್ಪಿಕೊ
**ತರ್ಜನಿ** ತೋರುಬೆರಳು
**ತಲಾಘಾತ** ನೆಲದ ಹೊಡೆತ
**ತಲೆಗಾಯು** ಸಂರಕ್ಷಿಸು, ಕಾಪಾಡು
**ತಲೆಗಿಂಬು** ತಲೆದಿಂಬು
**ತಲೆಗೆಸಲ್ಲು** ಪಾಲಿಗೆ ಬರು, ತಲಾಪಾಲು
**ತಲೆಚಿಟ್ಟಿಟ್ಟು** ತಲೆ ಚಿಟ್ಟು ಹಿಡಿದು, ಬಹಳ ಬೇಸತ್ತು
**ತಲೆಬಾಗಿಲು** ಮನೆಯ ಮುಂದಿನ ಹೆಬ್ಬಾಗಿಲು; ಬುದ್ಧಿ, ಅರಿವು, ಜ್ಞಾನ
**ತಲೆಂಯುಲ್ಲಿನಡೆ** ವಿಪರೀತ ವೃತ್ತಿಹೊಂದು, ಅಹಂಕಾರದಿಂದ ವರ್ತಿಸು
**ತಲೆಯೆತ್ತು** ಬೆಳೆದು ನಿಲ್ಲು, ಅಭಿವೃದ್ಧಿಹೊಂದು
**ತಲೆಯೋಡು** ತಲೆಬುರುಡೆ, ಕಪಾಲ
**ತಲೆಹತ್ತರವ** ರಾವಣ
**ತಲೆಹತ್ತು** ಹತ್ತು ತಲೆ
**ತಲೆಹರಿಮಾಡಿಕೊ** ತಲೆ ಚಚ್ಚಿಕೊ
**ತಲೆಹುಳಿತ** ತಲೆಕೆಟ್ಟ, ಹುಚ್ಚುಹಿಡಿದ
**ತಲ್ಪ** ಹಾಸಿಗೆ
**ತಲ್ಲಣ** ಹೆದರಿಕೆ, ಗಾಬರಿ, ತಳಮಳ, ಪರಿತಾಪ
**ತಲ್ಲಿ** ತಾಯಿ, ಯುವತಿ
**ತಲ್ಲಿ(ಳ್ಳಿ)** ಅಪರಾಧ; ಸಂಬಂಧ, ಒಡನಾಟ, ಗೊಡವೆ
**ತವ** ನಿನ್ನ
**ತವಕ** ಆಸೆ, ಬಯಕೆ, ಹಂಬಲ; ಕಾತುರ, ಕುತೂಹಲ
**ತವಮಣಿ** ಅಕ್ಷಯಮಣಿ, ಎಂದಿಗೂ ನಾಶವಾಗದ ರತ್ನ
**ತವರು** ಹುಟ್ಟಿದ ಮನೆ, ಜನಿಸಿದ ಮನೆ
**ತವಿಸು** ಪರಿಹರಿಸು, ನಾಶಮಾಡು; ತಂಪುಗೊಳಿಸು, ಶೆಖೆಗುಂದಿಸು
**ತಸ್ಕರ** ಚೋರ, ಕಳ್ಳ
**ತಸ್ವೀರ್** ಪ್ರತಿಬಿಂಬ, ಭಾವಚಿತ್ರ
**ತಹರಿಸು** ಸ್ಥೈರಿಸು
**ತಳ** ಕೆಳಗು, ಪಾತಾಳ
**ತಳಂಕ** ತಾಳೆಯ ಹೆಂಡ ಕುಡಿಯುವವನು; ಬಲರಾಮ
**ತಳಂಕನನುಜ** ಕೃಷ್ಣ
**ತಳಕಾಲನಂಬುನ** ಅಂಗಾಲಲ್ಲಿ ಕಣ್ಣುಳ್ಳ ಭೃಗುಮಹರ್ಷಿ
**ತಳಕು** ಅಪ್ಪುಗೆ, ಆಲಿಂಗನ
**ತಳಪಟ** ಅಂಗಾತವಾಗಿ ಬೀಳು ಸೋಲು
**ತಳಪು** ಹೊಳಪು, ಕಾಂತಿ
**ತಳಲಗಾವಿ** ತಳಿರುಗೆಂಪು, ಚಿಗುರಿನ ಕೆಂಪುಬಣ್ಣ
**ತಳವಾರ** ಊರಿನ ಕಾವಲುಗಾರ, ಪಹರೆಯವನು
**ತಳಿ** ಚೆಲ್ಲು, ಚಿಮುಕಿಸು; ಸಸಿ, ವಂಶ
**ತಳಿಗಿ, ತಳಿಗೆ** ದೇವರಿಗೆ ವಿಶೇಷ ನೈವೇದ್ಯ ಇಡುವ ಹರಿವಾಣ, ತಟ್ಟೆ
**ತಳಿತ** ಚಿಗುರಿದ
**ತಳಿಲ್<ತಳಲ್** ತಳಿರು, ಚಿಗುರು
**ತಳಿಲಗಾವಿ** ಚಿಗುರಿನಂತೆ ಕೆಂಪಗಿರುವ ಕಾವಿವಸ್ತ್ರ
**ತಳಿಸು** ಥಳಿಸು, ಕುಟ್ಟು
**ತಳುಪು** ಕಾಂತಿ, ಪ್ರಕಾಶ
**ತಳುವು** ನಿಧಾನಿಸು, ತಡಮಾಡು
**ತಳೆ** ಲೇಪಿಸು, ಚಿಮುಕಿಸು

Rarest Archives

**ತಳೋದರಿ** ಚೆಲುವೆ, ದ್ರೌಪದಿ

**ತಳ್ಳಿ** ಸಂಬಂಧ, ವಂಶ, ಒಡನಾಟ; ಗೊಡವೆ, ಉಸಾಬರಿ, ತಂಟೆ; ನಿಂದೆ ಅಪವಾದ; ತಳಿ; ಕಟ್ಟು, ಬಂಧನ

**ತಳ್ಳಿಕಾರ** ತುಂಟ, ನಿಂದೆಯುಳ್ಳವನು

**ತಳ್ಳಿಕೋರ** ಚಾಡಿಕೋರ

**ತಾಂಡವ** ನೃತ್ಯದ ಒಂದು ಪ್ರಭೇದ, ಒಂದು ಬಗೆಯ ನೃತ್ಯ

**ತಾಂಬಾಣ(ಳ)** ತಟ್ಟೆ, ಹರಿವಾಣ, ತಾಮ್ರದ ತಟ್ಟೆ

**ತಾಂಬೋಲ** ತಾಂಬೂಲ, ವೀಳೆಯ

**ತಾಗೀಗ** ಕೂಡಿಕೊಂಡು

**ತಾಗು** ಸೇರು, ಸೋಕು

**ತಾಗುಬಾಗು** ತಗ್ಗಿಬಗ್ಗಿ ನಡೆ; ಸಾಧಕಬಾಧಕ

**ತಾಚು** ನಿದ್ರೆಮಾಡು

**ತಾಜ್<ತಾಜಾ** ಹೊಸ, ಶುದ್ಧವಾದ

**ತಾಟಂಕ** ಒಂದು ಬಗೆಯ ಕರ್ಣಾಭರಣ, ಓಲೆ; ತಾಟಕಾಸುರ

**ತಾಟಕ** ತುಂಟ, ಪೋಲಿ; ಗರ್ವಿ, ಅಹಂಕಾರಿ

**ತಾಟಕಿ** ರಾಮಾಯಣ ಕಾಲದ ಒಬ್ಬ ರಾಕ್ಷಸಿ

**ತಾಟತೂಟಕ** ಒಳಗೊಂದು ಹೊರಗೊಂದು ಅಭಿಪ್ರಾಯ–ವೇಷ–ಭಾಷೆ ಹೊಂದುವುದು

**ತಾಡನ** ಏಟು, ಪೆಟ್ಟು, ಬಡಿಯುವಿಕೆ

**ತಾಡನೆ** ಹೊಡೆತ

**ತಾಣಪ್ರೀಣ** ಸಹಾಯ, ಪ್ರೀತಿ

**ತಾತ** ತಂದೆ, ತಂದೆಯ ತಂದೆ, ತಾಯಿಯ ತಂದೆ

**ತಾತ್ಪರ್ಯ** ಉದ್ದೇಶ, ಗುರಿ; ಆಸಕ್ತಿ, ಒಲವು; ಭಾವಾರ್ಥ, ಒಟ್ಟಾರೆ ಅಭಿಪ್ರಾಯ, ವ್ಯಾಖ್ಯಾನ

**ತಾನ<ಸ್ಥಾನ** ತಂತು; ಸ್ವರ; ಸೂರು; ಸ್ನಾನ

**ತಾನದಸೋನೆ** ಸಂಸಾರದ ಸುರಿಮಳೆ

**ತಾಪ** ಬಿಸಿ, ಶಾಖ; ದುಃಖ

**ತಾಪತಿ** ಒಂದು ಬಗೆಯ ರೇಷ್ಮೆ ಬಟ್ಟೆ

**ತಾಪತ್ರಯ** ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಎಂಬ ಮೂರು ಬಗೆಯ ಕಷ್ಟಗಳು

**ತಾಪಲೋಪ** ಸಿಟ್ಟು, ಕಷ್ಟ, ಕೋಪಗಳಿಂದ ದೂರವಾದವನು–ವಿಷ್ಣು

**ತಾಪಸೋತ್ತಮ** ಉತ್ತಮ ಸನ್ಯಾಸಿ, ವೇದವ್ಯಾಸ

**ತಾಮರಸ** ಕಮಲ, ತಾವರೆ, ಪಾದಪದ್ಮ; ಬಂಗಾರ

**ತಾಮರಸಪದೆ** ಕಮಲದಂತಹ ಚರಣ ಉಳ್ಳವಳು–ಲಕ್ಷ್ಮಿ

**ತಾಮರಸಪೀಠ** ಚತುರ್ಮುಖ ಬ್ರಹ್ಮ

**ತಾಮರಸಬಂಧು** ಸೂರ್ಯ

**ತಾಮರಸಭವ** ಬ್ರಹ್ಮ

**ತಾಮರಸಭೂಮಿ** ಬಂಗಾರದ ಭೂಮಿ, ಲಂಕೆ

**ತಾಮರಸಸಖ** ಸೂರ್ಯ

**ತಾಮರಸಸಖಸುತ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ

**ತಾಮರಸಾಸನ** ಬ್ರಹ್ಮ

**ತಾಮರಸಾಸನವಂದ್ಯ** ಬ್ರಹ್ಮನಿಂದ ವಂದಿಸಲ್ಪಟ್ಟವ–ವಿಷ್ಣು

**ತಾಮರಸೋದ್ಭವಾಂಡ** ಬ್ರಹ್ಮಾಂಡ

**ತಾಮಸ** ನಿಧಾನ, ಜಡ; ಸತ್ವ, ರಜ, ತಮಗಳಲ್ಲಿ ಕೊನೆಯ ಗುಣ; ಅಜ್ಞಾನ, ಅವಿದ್ಯಾಪ್ರಧಾನ

**ತಾಮಸಮತಿ** ಎಲ್ಲವನ್ನೂ ವಿಪರೀತವಾಗಿ ತಿಳಿದುಕೊಳ್ಳುವ ಬುದ್ಧಿ

**ತಾಮಿಸ್ರ<ತಮಿಸ್ರ** ಕತ್ತಲು, ಅಂಧಕಾರ; ಯಥಾರ್ಥ ಜ್ಞಾನಿಗಳ ಬಗ್ಗೆ ಆಕ್ರೋಶ

**ತಾಮ್ರ** ಕೆಂಪು; ಕೆಂಪು ಬಣ್ಣದ ಒಂದು ಲೋಹ

**ತಾಮ್ರಚೂಡ** ಹುಂಜ

**ತಾಮ್ರತುಂಡ** ಗಿಳಿ

**ತಾಮ್ರಧ್ವಜ** ಪಾಂಡವರ ಅಶ್ವಮೇಧದ ಕುದುರೆಯನ್ನು ಕಟ್ಟಿ ಯುದ್ಧದಲ್ಲಿ ಕೃಷ್ಣಾರ್ಜುನರನ್ನು ಸೋಲಿಸಿದವ

**ತಾಮ್ರಧ್ವಜನತಂದೆ** ಮಯೂರಧ್ವಜ

Rarest Archiver

**ತಾಮ್ರಶಿಖಿ** ಹುಂಜ
**ತಾಯತ, ತಾಯಿತ್ತು, ತಾಯ್ತ** ರಕ್ಷಾಬಂಧ; ಒಂದು ಬಗೆಯ ಆಭರಣ, ಕಡೆದ ಹವಳ ಕಂಕಣ–ಹವಳ ಕಟ್ಟಿದ ಬಳೆ
**ತಾರ** ದಾಟು; ಓಂಕಾರ, ಎತ್ತರದ ಧ್ವನಿ; ಬಿಳಿಯದು; ಗುರುಪತ್ನಿ ತಾರ; ವಾಲಿಯ ಪತ್ನಿ
**ತಾರಕ** ರಕ್ಷಕ, ಅಂಬಿಗ, ದಾಟಿಸುವವ, ಪಾರು ಮಾಡುವವನು, ಉದ್ಧಾರ ಮಾಡುವವ, ನಿವಾರಕ, ಹಂಚಿಕೆ, ಸಂರಕ್ಷಣೆ, ಸಂಸಾರವನ್ನು ದಾಟಿಸುವ ಮಂತ್ರ,; ರಾಮನಾಮ; ಸಂಗೀತ ದಲ್ಲಿಯ ಮೂರು ಸ್ವರ ತಾರಕ, ಮೋಕ್ಷ ದಾಯಕ, ಉದ್ದಾರಮಾರ್ಗ; ಒಬ್ಬ ರಾಕ್ಷಸನ ಹೆಸರು
**ತಾರಕಬ್ರಹ್ಮಧ್ವಿರೂಪ** ತಾರಕನಾದ ಬ್ರಹ್ಮನ ಪ್ರತಿರೂಪ
**ತಾರಕಸತಿವ್ರತಹಾರಕ** ತಾರಕಾಸುರನ ಪತ್ನಿಯ ವ್ರತಭಂಗ ಮಾಡಿದ ಬುದ್ಧ
**ತಾರಕಾಂತಕ** ತಾರಕಾಸುರನನ್ನು ಕೊಂದ ಸ್ಕಂದ, ಷಣ್ಮುಖ
**ತಾರಕೆ** ನಕ್ಷತ್ರ
**ತಾರಕೇಶ** ಚಂದ್ರ
**ತಾರಕ್ಕಿ** ನಕ್ಷತ್ರ, ತಾರೆ
**ತಾರಕ್ಷ್ಯರಂಗ** ಹುಲಿಯನ್ನು ವಾಹನ ಮಾಡಿ ಕೊಂಡವನು; ಗರುಡವಾಹನ ರಂಗ–ಶ್ರೀಹರಿ
**ತಾರತಮ್ಯಮತ** ಮಧ್ವಮತ
**ತಾರತಾರ** ಮೇಲೆ ಮೇಲೆ
**ತಾರಹಾರ** ನಕ್ಷತ್ರ ಮಾಲಿಕೆ, ಇಪ್ಪತ್ತೇಳು ದೊಡ್ಡಮುತ್ತಿನ ಸರ
**ತಾರಾತ್ಮಜ** ತಾರೆಯ ಮಗ ಬುಧ
**ತಾರಾನಾಥ, ತಾರಾಪತಿ** ಚಂದ್ರ, ವಾಲಿ
**ತಾರಾಪಥ** ನಕ್ಷತ್ರಗಳು ಕೂಡಿಕೊಂಡಿರುವ ಆಕಾಶಗಂಗೆ
**ತಾರಾರಮಣ** ಚಂದ್ರ; ತಾರೆಯಪತಿ–ಬೃಹಸ್ಪತಿ; ವಾಲಿ
**ತಾರಿಸು** ದಾಟಿಸು, ಉದ್ಧಾರಮಾಡು, ಪಾರು–ಮಾಡು, ಪಾರಗಾಣಿಸು
**ತಾರು** ಒಣಗು, ಸೊರಗು, ಅತಿಯಾಗಿ ಓಡಾಡು; ನದಿ ದಾಟುವ ಸ್ಥಳ, ಕಡವು, ಹಾಯ್ಗಡು; ದೋಣಿ
**ತಾರುಣ್ಯ** ಪ್ರಾಯ, ಯೌವನ
**ತಾರುಣ್ಯಭಕುತಿ** ಊರ್ಜಿತವಾಗುತ್ತಿರುವ ಭಕುತಿ, ಪಕ್ವಭಕ್ತಿ
**ತಾರೆ** ವಾಲಿಯ ಹೆಂಡತಿ; ನಕ್ಷತ್ರ; ವಾಯು, ಗಾಳಿ
**ತಾರೇಶ** ಚಂದ್ರ
**ತಾರೊಡಲು** ಕೃಷದೇಹ
**ತಾರ್ಕಣೆ** ತರ್ಕಮಾಡಿದ ವಸ್ತು, ಪ್ರತ್ಯಕ್ಷವಾದ, ರುಜುವಾದ
**ತಾರ್ಕ್ಷ್ಯಕ** ವೈನತೇಯ, ಗರುಡ
**ತಾರ್ಕ್ಷ್ಯತುರಂಗ** ಗರುಡವಾಹನ–ವಿಷ್ಣು
**ತಾಲಕೇತನನುಜ** ತಾಲವೃಕ್ಷದ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳ ಬಲರಾಮನತಮ್ಮ–ಕೃಷ್ಣ
**ತಾಲು** ಕಂಠ; ಅಂಗಳು, ಬಾಯಿಯ ಒಳ ಮೇಲ್ಭಾಗ
**ತಾವಕ** ತಮ್ಮವನು, ನಿನಗೆ ಸಮಬಂಧಪಟ್ಟ, ಆತ್ಮೀಯ; ಭಕ್ತ
**ತಾವರಿಸು** ತವಿಸು
**ತಾವರೆ** ಕಮಲ
**ತಾವರೆಗೊಡೆ** ಕಮಲದ ಕೊಡೆ
**ತಾವು** ಸ್ಥಳ, ಜಾಗ
**ತಾಸು** ಒಂದು ಗಂಟೆಯ ಕಾಲ, ಗಂಟೆ
**ತಾಳಂಕತಮ್ಮ** ತಾಳವೃಕ್ಷವನ್ನು ಚಿಹ್ನೆಯಾಗಿ ಉಳ್ಳ ಬಲರಾಮನ ತಮ್ಮ ಕೃಷ್ಣ
**ತಾಳಹಸ್ತ** ತಾಳೆ ವೃಕ್ಷವನ್ನು ಹಿಡಿದವನು ಬಲರಾಮ

Rarest Archiver

**ತಾಳಿ** ಮಾಂಗಲ್ಯ; ಹೆಣ್ಣು ದೇವತೆ ಹೆಸರಿನಲ್ಲಿಯ ಹರಕೆ; ಶಕ್ತಿ ದೇವತೆಯ ಆರಾಧಕರು ಕಟ್ಟಿದ ಸುವರ್ಣ ಪದಕ

**ತಾಳಿಮಿಕೆ< ತಾಳುಮಿಕೆ** ತಾಳ್ಮೆ, ಸಹನೆ

**ತಾಳಿಹಾಕು** ಬೆರಣಿಯ ಕಿಚ್ಚು ಹೊತ್ತಿಸು

**ತಾಳು** ಮೂಲ, ಆಧಾರ; ಸೈರಿಸು

**ತಾಳೆ** ಓಲೆಗರಿಮರ

**ತಾಳೆಸರ** ಹೊಂದಾಣಿಸಿದ ಹಾರ

**ತಾಳ್ಯುದ್ದ** ತಾಳೆಯ ಉದ್ದ, ತಾಳೆ ಮರದಷ್ಟು ಎತ್ತರವಾಗಿ; ಗಂಟಲಿನ, ಅಂಗುಳಿನ ಉದ್ದಕ್ಕೂ

**ತಿಂಗಳಚಾಂದ್ರಾಯಣ** ಕೃಛ್ರ ಚಾಂದ್ರಾಯಣ ಮೊದಲಾದ ಕಷ್ಟಸಾಧ್ಯವಾದ ವ್ರತ

**ತಿಂಗಳಿನಂದದಿ** ಬೆಳುದಿಂಗಳಿನಂತೆ

**ತಿಂಗಳು** ಚಂದ್ರ

**ತಿಂಡಿ** ನವೆ, ತುರಿಕೆ

**ತಿಂಡಿವ(ವಾ)ಳ** ತಿನಿಸುಬಕ್ಕ, ತಿಂಡಿಪೋತ, ಹೊಟ್ಟೆಬಾಕ

**ತಿಂತಿಣಿ, ತಿಂಥಿಣಿ** ಗುಂಪು, ಸಮೂಹ, ರಾಶಿ, ಸೇನೆ

**ತಿಂತ್ರಿಣಿ** ಹುಣಸೆ

**ತಿಂದೋಡಿ** ತಿನ್ನುವ ಆಸೆಯುಳ್ಳವ

**ತಿಗಡು** ತೊಗಟೆ, ಸಿಪ್ಪೆ

**ತಿಗಡುತನ** ಯಾವುದನ್ನೂ ಲೆಕ್ಕಿಸದ, ದಪ್ಪ ಚರ್ಮದ

**ತಿಗರಿ** ಕುಂಬಾರನ ಗಾಲಿ, ಚಕ್ರ

**ತಿಗುರು** ಲೇಪಿಸು; ಒಂದು ಬಗೆಯ ಸುಗಂಧ ದ್ರವ್ಯ

**ತಿಗ್ಮ** ತೀಕ್ಷ್ಣವಾದ, ಸೂರ್ಯ

**ತಿಗ್ಮಕಿರಣ** ಸೂರ್ಯ

**ತಿಗ್ಮಾಂಶು** ಸೂರ್ಯ

**ತಿಣ್ಣ** ತೀಕ್ಷ್ಣ, ಆಧಿಕ್ಯ, ಹೆಚ್ಚಳ

**ತಿಣ್ಣೆ** ತೀಟೆ, ತುರಿ, ಕಡಿತ; ತಿಂಡಿ

**ತಿತಿಕ್ಷೆ** ಸಹನೆ, ತಾಳ್ಮೆ

**ತಿತ್ತಿ, ತಿದಿ** ಚರ್ಮದ ಊದುಚೀಲ

**ತಿತ್ತಿರಿ** ತುತ್ತೂರಿ, ಒಂದು ವಾದ್ಯ ವಿಶೇಷ; ಒಂದು ಜಾತಿಯ ಹಕ್ಕಿ, ಕವುಜಗ

**ತಿನಿಸು** ಆಹಾರ, ಖಾದ್ಯ; ನವೆ, ಕಡಿತ

**ತಿಮಿಗಳ** ತಿಮಿಗೋಲು

**ತಿಮಿರ** ಕತ್ತಲು, ಅಜ್ಞಾನ

**ತಿಮಿರನಾಶ** ತಮಸ್ಸನ್ನು ಕತ್ತಲನ್ನು ಕತ್ತರಿಸುವ (ನಿವಾರಿಸುವ), ಸೂರ್ಯ, ಚಂದ್ರ

**ತಿಮಿರಿ** ಕತ್ತಲು; ಚಕ್ರ

**ತಿಮುರು** ಉಜ್ಜು, ಲೇಪಿಸು; ಸೊಕ್ಕು

**ತಿಮ್ಮ, ತಿಮ್ಮರಾಯ, ತಿರುಮಲ** ವೇಂಕಟೇಶನ ಪರ್ಯಾಯ ನಾಮಗಳು

**ತಿಮ್ಮಣ್ಣ** ಮಂಗ

**ತಿರ<ಸ್ಥಿರ** ಶಾಶ್ವತ

**ತಿರಕಿ<ತಿರುಕೆ** ಭಿಕ್ಷೆ

**ತಿರಹು** ತಿರುವು

**ತಿರಿ** ತಿರುಗು, ಭಿಕ್ಷೆ ಬೇಡು; ಕೊಯ್ಯು

**ತಿರಿಕೆ** ತಿರುಪೆ, ಭಿಕ್ಷೆ

**ತಿರುಕತಕ್ರ** ಭಿಕ್ಷುಕನ ಮಜ್ಜಿಗೆ

**ತಿರುಗದಚೀಟಿ** ಎಂದಿಗೂ ತಿರಸ್ಕೃತವಾಗದ ವಾಗ್ದಾನ ಪತ್ರ

**ತಿರುಗು** ಜನನ ಮರಣ ಚಕ್ರದಲ್ಲಿ ಹಾಯು

**ತಿರುತಿರು** ಶ್ರೀಶ್ರೀ, ಪರಮಪವಿತ್ರವಾದ

**ತಿರುನಾಮ** ಶ್ರೀನಾಮ, ಶ್ರೀವೈಷ್ಣವದ ಮುಂಡ್ರ

**ತಿರುನಾಮಧಾರಿ** ಶ್ರೀವೈಷ್ಣವ

**ತಿರುಪೆ** ಭಿಕ್ಷೆ

**ತಿರುಮಂತ್ರ** ಶ್ರೀಮಂತ್ರ (ಓಂ ನಮೋ ನಾರಾಯಣಾಯ)

**ತಿರುಮಣಿ** ಶ್ರೀನಿವಾಸನ ಹಣೆಯಲ್ಲಿ ಒಪ್ಪುವ ಪವಿತ್ರವಾದ ಬಿಳಿಯ ನಾಮ; ಪವಿತ್ರವಾದ ರತ್ನ

Rarest Archive

**ತಿರುಮಣಿ ತಿರುಚೂರ್ಣ** ಶ್ರೀವೈಷ್ಣವರು ನಾಮಕ್ಕೆ ಬಳಸುವ ಬಿಳಿ ಮತ್ತು ಕೆಂಪು ಪುಡಿ
**ತಿರುಮಣ್ಣು** ಶ್ರೀವೈಷ್ಣವರು ನಾಮಕ್ಕೆ ಬಳಸುವ ಬಿಳಿಯ ಮಣ್ಣು
**ತಿರುಮಲರೂಪ** ಶ್ರೀನಿವಾಸರೂಪ, ಉಡುಪಿ ಕೃಷ್ಣನಿಗೆ ಶನಿವಾರ ಮಾಡುವ ಶ್ರೀನಿವಾಸಾಲಂಕಾರ
**ತಿರುಮಲಾರ್ಯ** ಅಂಕಿತನಾಮ, ತಿರುಮಲಾಚಾರ್ಯ
**ತಿರುಲಾಂಛನ** ಮಂಗಳ ಚಿಹ್ನೆ, ಊರ್ಧ್ವಪುಂಡ್ರ, ನಾಮ
**ತಿರುವಂಗೂರು** ತಿರುವಾಂಕೂರು(ತ್ರಿವೇಂಡ್ರಂ)
**ತಿರುವೆಂಗಳಪ್ಪ** ವೇಂಕಟೇಶ
**ತಿರೆ** ಭೂಮಿ
**ತಿರೋಧಾನ** ಭಿಕ್ಷೆ; ಅದೃಶ್ಯವಾಗುವ ತಪೋಶಕ್ತಿ; ಅಡಗಿಸಿಡು, ಮುಚ್ಚಿಡು
**ತಿರೋಭವ** ಹಿಂದೆ ಹೋಗುವುದು–ಮರೆಯುವುದು
**ತಿರೋಹಿತ** ಮರೆಯಾದ, ಅಡಗಿಸಿದ
**ತಿರ್ಣವರ್ತ** ತೃಣಾವರ್ತನೆಂಬ ರಾಕ್ಷಸ
**ತಿರ್ದು** ತಿದ್ದು, ಸರಿಪಡಿಸು
**ತಿರ್ಮಲ** ತಿರುಮಲ
**ತಿರ್ಯಕ್** ಪಶುಪಕ್ಷಿ ಮುಂತಾದ ಪ್ರಾಣಿವರ್ಗ; ಅಡ್ಡತಿಡ್ಡಾಗಿ ಚಲಿಸುವ
**ತಿರ್ಯಕ್ಜಾತಿ, ತಿರ್ಯಗ್ಜಾತಿ** ಪಶುಪಕ್ಷಿ ಮುಂತಾದ ಪ್ರಾಣಿವರ್ಗ
**ತಿಲಕ** ಹಣೆಯಲ್ಲಿಡುವ ಬೊಟ್ಟು; ಶ್ರೇಷ್ಠ
**ತಿಲಜ** ಎಳ್ಳೆಣ್ಣೆ
**ತಿಲಜವರ್ತಿ** ಎಳ್ಳೆಣ್ಣೆಯಲ್ಲಿ ಉರಿಯುವ ಬತ್ತಿ
**ತಿಲಮಾತ್ರ, ತಿಲಾಂಶ** ಎಳ್ಳಷ್ಟು
**ತಿಲೋತ್ತಮ** ಒಬ್ಬ ಅಪ್ಸರೆ, ನಕುಲನ ಪತ್ನಿ
**ತಿವರು** ಹಚ್ಚು
**ತಿಸರ(ರಾಟ)** ಒಬ್ಬ ರಾಕ್ಷಸ; ಮೂರೆಳೆ ಸರ, ಮೂರುಬಾಣ; ಜಗಳ, ಕಲಹ
**ತಿಸುಳ** ತ್ರಿಶೂಲ
**ತಿಳಿ** ಎಚ್ಚರಾಗು, ಶುದ್ಧವಾಗು
**ತಿಳಿಮತಿ** ನಿರ್ಮಲ ಮನಸ್ಸು
**ತೀಟು, ತೀಡು** ಉಜ್ಜು, ಹಚ್ಚು; ನಾಶಪಡಿಸು
**ತೀಟೆ** ಅತೀವ ಆಸಕ್ತಿ; ಚಪಲ; ನವೆ
**ತೀದು** ತುಂಬಿ, ಮುಗಿಸಿ; ಬೀಸು
**ತೀರ್** ನಾಶವಾಗು, ಸಾವು
**ತೀರ್ಕಣಿಸು** ಕೊನೆಗಾಣಿಸು
**ತೀರ್ಥ>ತೀರಥ** ಪುಣ್ಯಜಲಸ್ಥಾನ, ಪವಿತ್ರ ನದಿ, ನದಿಗಳು, ಪವಿತ್ರ ಕ್ಷೇತ್ರ, ಪವಿತ್ರ ವಾದ ನೀರು, ದೇವರಿಗೆ ಅಭಿಷೇಚಿತ ಪವಿತ್ರ ಜಲ
**ತೀರ್ಥಪದ, ತೀರ್ಥಪಾದ** ಗಂಗೆಯನ್ನು ಪಾದದಿಂದ ಸೃಷ್ಟಿಸಿದವನು–ಶ್ರೀಹರಿ
**ತೀರ್ಥಪಾದರು** ಪೂಜ್ಯರು, ಯೋಗಿಗಳು
**ತೀರ್ಥರಾಜ** ವರುಣ; ಪ್ರಯಾಗದ ಇನ್ನೊಂದು ಹೆಸರು
**ತೀರ್ಥವಿಧಿ** ತೀರ್ಥಕ್ಷೇತ್ರದಲ್ಲಿ ಮಾಡುವ ಕ್ಷೌರ ಮತ್ತು ಶ್ರಾದ್ಧಾದಿ ಕರ್ಮಗಳು
**ತೀರ್ಥಶ್ರವ** ಶುದ್ಧವಾದ; ಯಶಸ್ಸುಳ್ಳವ
**ತೀವು** ತುಂಬು; ಹೊರಸೂಸು, ಚೆಲ್ಲು, ಹರಡು
**ತುಂಗ** ಮಹಾ, ದೊಡ್ಡ, ಶ್ರೇಷ್ಠ, ಎತ್ತರ; ತುಂಗಾನದಿ
**ತುಂಗಕರ್ಣಾಟನೃಪ** ವಿಜಯನಗರದ ದೊರೆ ಕೃಷ್ಣದೇವರಾಯನ ಬಿರುದು
**ತುಂಗಕುಚ** ದೊಡ್ಡ ಮೊಲೆ
**ತುಂಗವಕ್ಷ** ಉಬ್ಬಿರುವ ಎದೆ
**ತುಂಗವಿಕ್ರಮ** ಮಹಾಪರಾಕ್ರಮಿ, ಉನ್ನತ ಬಲಶಾಲಿ, ದೊಡ್ಡ ಶೂರ
**ತುಂಗವಿಕ್ರಮಪದ** ವಿಷ್ಣು–ತ್ರಿವಿಕ್ರಮಾವತಾರ
**ತುಂಗವಿಹಂಗ** ಎತ್ತರದಲ್ಲಿ ಹಾರಾಡುವ ಹಕ್ಕಿ–ಗರುಡ
**ತುಂಟಯೋಧನ** ದುರ್ಯೋಧನ
**ತುಂಡ** ಮುಖ, ಕೊಕ್ಕು

Rarest Archiver

**ತುಂಡಿಸು** ಕತ್ತರಿಸು, ತುಂಡು ಮಾಡು

**ತುಂದಿ** ಹೃತ್ಪೂರ್ವಕ (ಹೃದಯತುಂಬಿ)

**ತುಂದಿಲೋದರ** ಬೊಜ್ಜು ಬೆಳೆಸಿದವನು, ಗಣಪತಿ

**ತುಂಬಿ** ಭ್ರಮರ, ದುಂಬಿ, ಜೇನು ಹುಳು

**ತುಂಬಿತ್ವ** ಪೂರ್ಣತ್ವ

**ತುಂಬಿತ್ವಕ್ಕರಸ** ಪೂರ್ಣತೆಗೆ ಅರಸನಾದ ಶ್ರೀಹರಿ

**ತುಂಬಿರವ** ದುಂಬಿಗಳ ಝೇಂಕಾರ

**ತುಂಬಿರುವಪಟ್ಟಣ** ದೇಹ

**ತುಂಬುಫಲ** ಕುಂಬಳಕಾಯಿ, ಪೂರ್ಣಫಲ

**ತುಂಬೂರಗೊಳ್ಳಿ** ಕಾಡುಮಾವಿನ ಮರ

**ತುಕ್ಕು** ಸಂಚರಿಸು, ಮತ್ತೆ ಮತ್ತೆ ಬರುವುದು; ಗುಂಪುಕೂಡು

**ತುಚ್ಛ, ತುಚ್ಛಕ** ಕೀಳು, ನೀಚ, ಹೀನ

**ತುಟ್ಟಿಸು** ಶಕ್ತಿಗುಂದು; ಕಡೆಗಣಿಸು

**ತುಡು** ತೊಡು, ಧರಿಸು

**ತುಡುಕು** ಆತುರದಿಂದ ಹಿಡಿ, ಮುಟ್ಟು, ಮುನ್ನುಗ್ಗು

**ತುಡುಗ** ಕಳ್ಳ, ಮೋಸಗಾರ

**ತುಡುಗಾಟ, ತುಡುಗು, ತುಡುಗ** ತುಂಟತನ, ಕಳ್ಳತನ

**ತುಡುಗುಲಿ** ಕಳ್ಳತನದಿಂದ ಬದುಕುವ ಮನುಷ್ಯ ಅಥವಾ ಪ್ರಾಣಿ

**ತುಡುಗೆ** ತೊಟ್ಟುಕೊಳ್ಳುವ ವಸ್ತ್ರ, ಆಭರಣ

**ತುಡುಬು(ಮು)** ಒಂದು ಬಗೆಯ ಚರ್ಮವಾದ್ಯ

**ತುತಿ<ಸ್ತುತಿ** ನುತಿ, ಪ್ರಶಂಸೆ, ಹೊಗಳಿಕೆ, ಸ್ತೋತ್ರ

**ತುತ್ತಾಯಿತ್ತ** ತುತ್ತುಮಾಡಿ; ಅಂತಃಕರಣದಿಂದ

**ತುತ್ತುಮೂರಾಗಿಸು** ಕಬಳಿಸು, ನುಂಗು, ಅವಸರ ದಿಂದ ತಿನ್ನು; ಶ್ರೀಹರಿಯ ಪ್ರಳಯಕಾಲದ ಭೋಜನ

**ತುಪ್ಪದಬಿಂದಿಗೆ** ಸಾಧನ ಶರೀರ

**ತುಪ್ಪಿರಿ, ತೂಪಿರಿ** ಊದು, ಉರುಬು, ಉಗುಳು; ದೃಷ್ಟಿದೋಷ ಪರಿಹರಿಸಲು ಬೂದಿ ಮುಂತಾ ದುವನ್ನು ಗಾಳಿಗೆ ಊದಿ ಮಂತ್ರ ಹಾಕು

**ತುಪ್ಪು** ಉಗುಳು

**ತುಬ್ಬು** ಹಬ್ಬು, ಹರಡು

**ತುಭ್ಯಂ** ನಿನಗೆ

**ತುಮುಲ** ಗಲಿಬಿಲಿ, ಗೊಂದಲ, ಕ್ಷೋಭೆ

**ತುರಂಗ, ತುರಗ** ಕುದುರೆ

**ತುರಂಗಪ** ಕಲ್ಕಿ

**ತುರಂಗರೂಪ, ತುರಂಗವದನ** ಕುದುರೆಯ ಮುಖದ ಶ್ರೀಹರಿ (ಹಯವದನ)

**ತುರಂಗಸಂಚರಣ** ಕುದುರೆಯೇರಿ ಸಂಚರಿಸು ವವನು, ಕಲ್ಕ್ಯಾವತಾರದಲ್ಲಿ ಕುದುರೆ ಯೇರಿ ಸಂಚರಿಸುವ ಶ್ರೀಹರಿ

**ತುರಗಗ್ರೀವ** ಕುದುರೆಯಂತೆ ಕುತ್ತಿಗೆ ಯುಳ್ಳವನು, ಹಯವದನರೂಪಿ–ಶ್ರೀಹರಿ

**ತುರಗಧ್ವರ** ಅಶ್ವಮೇಧಯಾಗ

**ತುರಗವೇರು** ಕುದುರೆ ಹತ್ತು, ಕಲ್ಕ್ಯವತಾರ

**ತುರಗಾಸ್ಯ** ಹಯಗ್ರೀವ–ಶ್ರೀಹರಿ

**ತುರಾಯಿ** ಕಿರೀಟ; ಪೇಟಕ್ಕೆ ಸಿಕ್ಕಿಸುವ ಹೂವು ಮುಂತಾದುವು

**ತುರೀಐ** (ನಾಲ್ಕನೆಯ ಶ್ರೇಷ್ಠ ) ಜಾಗ್ರತ ಸ್ವಪ್ನ ಸುಷುಪ್ತಿ ನಂತರದ ದೇವರ ರೂಪ

**ತುರೀಯ** ನಾಲ್ಕನೆಯ ಅವಸ್ಥೆ, ಮೋಕ್ಷದಲ್ಲಿ ಆನಂದ ಕೊಡುವ ಭಗವದ್ರೂಪ, ಯೋಗಿಗಳು ಪರಮಾತ್ಮನಲ್ಲಿ ಐಕ್ಯವಾಗುವ ಸ್ಥಿತಿ

**ತುರೀಯುಮೂರುತಿ** ಜಾಗ್ರದಾದಿ ಮೂರು ಅವಸ್ಥೆಗಳಿಗೂ ಮೀರಿದ ಮೂರ್ತಿ–ಶ್ರೀಹರಿ

**ತುರೀಯಾಶ್ರಮಮಣಿ** ಸನ್ಯಾಸಿಗಳಲ್ಲಿ ರತ್ನ ದಂತಿರುವವರು (ವಾದಿರಾಜರು), ಶ್ರೇಷ್ಠ ಸನ್ಯಾಸಿ

**ತುರು** ಹಸು, ಆಕಳು

**ತುರುಕರಕೂದಲು** ಎತ್ತಿನ ಹೆಗಲ ಮೇಲಿರುವ ಕೂದಲು, ಜೂಲು, ಗಂಗಾವನ

**ತುರುಕರು** ಹಸು ಮತ್ತು ಕರು

Rarest Archiver

**ತುರುಕರುವಿನಮಂತ್ರ** ಗೋಮಾತೆಯ ಸ್ತೋತ್ರ
**ತುರುಗಾತಿ** ಗೋಪಿ
**ತುರುಗಾಹೆಬೆಸನ** ದನಕಾಯುವ ಕೆಲಸ
**ತುರುಗು** ಒತ್ತಿತುಂಬು, ತುರುಕು, ಗುಂಪಾಗು
**ತುರುಗೆವೆ** ಒತ್ತಾದ ಕೂದಲಿನ ರೆಪ್ಪೆ
**ತುರುಚಿ** ಮುಟ್ಟಿದರೆ ನವೆಯಾಗುವ ಸೊಪ್ಪು, ಚುರ್ಚಿಗಿಯ ಗಿಡ
**ತುರುಪಾಲ** ಗೋಪಾಲ
**ತುರುಬು** ಹೂವನ್ನು ಮುಡಿ; ಕೂದಲಿನ ಗಂಟು
**ತುರುರಕ್ಷಕದಾಸಾರ್ಯ** ಗೋಪಾಲದಾಸರು
**ತುರುವಿಂಡು, ತುರುಹಿಂಡು** ಆಕಳ ಹಿಂಡು, ಹಸುಗಳ ಗುಂಪು
**ತುರ್ಯಾವಸ್ಥೆ** ನಾಲ್ಕನೆಯ ಅವಸ್ಥೆ, ಎಲ್ಲಕ್ಕೂ ಮೀರಿದ ಶುದ್ಧ ಅವಸ್ಥೆ, ಆತ್ಮ
**ತುರ್ಯಾಶ್ರಮ** ಕೊನೆಯ ಆಶ್ರಮ–ಸಂನ್ಯಾಸ
**ತುಲಸಿಬರ್ಹ** ತುಳಸಿದಳ
**ತುಲ್ಯ** ಸಮಾನ
**ತುಲ್ಯವರ್ಜಿತ** ಅಸದೃಶ
**ತುಷಮಾರಿ** ಹುಲ್ಲಿನ ಶತ್ರು, ಇಬ್ಬನಿ
**ತುಷಾರ** ಇಬ್ಬನಿ
**ತುಷಾರಗಣ** ತುಷಿತರೆಂಬ ದೇವತಾಗಣ
**ತುಷ್ಟ** ತೃಪ್ತ, ಆನಂದ, ಸಂತೋಷಗೊಂಡ
**ತುಷ್ಟಃ** ಸರ್ವದಾ ತನ್ನಷ್ಟಕ್ಕೆ ತಾನು ಸಂತೋಷ ಪಡುತ್ತಿರುವವನು, ಸಂತೃಪ್ತ
**ತುಷ್ಟಿಪೂರ್ಣ** ಪೂರ್ಣಾನಂದ
**ತುಷ್ಣೀಕರ** ಸೂರ್ಯ
**ತುಸ, ತುಸು** ತವುಡು, ಆಹಾರ; ಸ್ವಲ್ಪ
**ತುಹಿನ** ಮಂಜು, ಹಿಮ
**ತುಳಸ್ಯಾಪ್ತ** ರಾಧಾ; ಕಾರ್ತೀಕದಾಮೋದರ; ತುಳಸಿಗೆ ಆಪ್ತನಾದವನು, ಪ್ರಿಯನಾದವನು, ತುಳಸಿಯಿಂದ ಕೂಡಿದ
**ತುಳುವಂಶಜ** ತುಳುವಂಶದಲ್ಲಿ ಹುಟ್ಟಿದವನು; ಮಧ್ವಾಚಾರ್ಯರು
**ತೂಟಕ** ಸೋಗು, ಡಂಭ, ಕಳ್ಳತನ, ಮೋಸ
**ತೂರ್ಣ** ವೇಗ, ತೀವ್ರವಾದ, ತ್ವರಿತವಾದುದು
**ತೂರ್ಯ** ವಾದ್ಯಮೇಳ, ಧ್ವನಿ, ತುತ್ತೂರಿ
**ತೂಲ** ಹತ್ತಿ
**ತೂಳದವ** ದೇವರುಮೈದುಂಬಿದವ; ಆಕ್ರಮಣ ಕಾರ
**ತೂಳದೇವರು** ಮೈಮೇಲೆ ಬಂದ ದೇವರು
**ತೂಳು** ಆಕ್ರಮಣ; ಮೈದುಂಬು
**ತೃಟಿ, ತೃಟೆ** ಕ್ಷಣ, ಲವ
**ತೃಣ** ಹುಲ್ಲು, ಹುಲ್ಲುಕಡ್ಡಿ
**ತೃಣಕಾಷ್ಠ** ಹುಲ್ಲು–ಕಟ್ಟಿಗೆ
**ತೃಣತಲ್ಪ** ದರ್ಭಶಯನ, ಹುಲ್ಲನ್ನು ಹಾಸಿಗೆ ಯನ್ನಾಗಿ ಮಾಡಿಕೊಂಡವನು–ರಾಮ
**ತೃಣವಿತ್ತುಪೇಳು** ಕಡ್ಡಿ ಕೊಟ್ಟು ಹೇಳು, ತಿಳಿಹೇಳು
**ತೃಣಾವರ್ತ** ಕಂಸನ ಕಡೆಯ ಒಬ್ಬ ರಾಕ್ಷಸ
**ತೃಣಿ** ಕ್ಷಣ ಕಾಲ
**ತೃಣೀಕೃತ** ಕ್ಷುಲ್ಲಕ ಎಂದು ತಿಳಿದ, ಲೆಕ್ಕಿಸದ
**ತೃತೀಯಾವತಾರ** ಮೂರನೆಯ ಅವತಾರ–ಮಧ್ವಾಚಾರ್ಯರು (ಹನುಮ, ಭೀಮ, ಮಧ್ವ–ಅವತಾರತ್ರಯ)
**ತೃತೀಶ** ದೇವತೆ
**ತೃಷ<ತೃಷೆ** ಬಾಯಾರಿಕೆ, ನೀರಡಿಕೆ
**ತೃಷಾರ್ತ** ಬಾಯಾರಿದ
**ತೃಷೆ** ಐದು ಕ್ಷಣ ಕಾಲ; ನೀರಡಿಕೆ
**ತೃಪ್ತಾಪ್ತಾ** ಸೂರ್ಯ
**ತೃಪ್ತಿ** ತೃಪ್ತಿ
**ತೆಕ್ಕಿಸು<ತಕ್ಕಿಸು** ಅಪ್ಪಿಕೊ
**ತೆಗಡಬಾಯಿ** ನಿಂದಿಸುವ ಬಾಯಿ
**ತೆಗಡು** ತೆಗಳು, ನಿಂದಿಸು
**ತೆತ್ತಿಗ** ನೆಂಟ, ಭಾಂಧವ, ಆಪ್ತ; ಸೇವಕ, ಭಕ್ತ, ದಾಸ; ಹೊಣೆಗಾರ
**ತೆತ್ತಿಸು** ಜೋಡಿಸು, ಕೂಡಿಸು

Rarest Archiver

**ತೆಪ್ಪ** ನೀರನ್ನು ದಾಟಲು ಸಹಾಯಕವಾದ ಬಿದಿರ ಅಟ್ಟಣಿಗೆ, ತೆಪ್ಪೋತ್ಸವಕ್ಕೆ ಸಿದ್ಧಮಾಡುವ ನೀರಿನ ಮೇಲೆ ತೇಲುವ ಅಲಂಕೃತ ದೋಣಿ

**ತೆರ** ಕಂದಾಯ; ಕನ್ಯಾಶುಲ್ಕ; ಪದ್ಧತಿ

**ತೆರಪು, ತೆರವು, ತೆರ್ಪು** ಅವಕಾಶ, ಬಿಡುವು, ಖಾಲಿಮಾಡುವುದು

**ತೆವರು** ದಿನ್ನೆ, ಗದ್ದೆಯ ಬದು

**ತೆಳ್ವಸುರು** ತೆಳುವಾದ ಬಸಿರು, ತೆಳು ಹೊಟ್ಟೆ

**ತೇ** ನಿನಗೆ

**ತೇಕು** ಜೋರಾಗಿ ಉಸಿರಾಡು, ಆಯಾಸಪಡು

**ತೇಜ** ತೇಜಸ್ಸು, ಕಾಂತಿ; ಹೆಚ್ಚಿನಬೆಲೆ; ತನ್ಮಾತ್ರ ಗಳಲ್ಲೊಂದು

**ತೇಜಃಪುಂಜ** ಕಾಂತಿಯ ಮುದ್ದೆ

**ತೇಜಸ್ಸಲಿಲ** ಬೆಳಕು, ನೀರು

**ತೇಜಿ** ಕುದುರೆ; ತುಟ್ಟಿ, ಹೆಚ್ಚಿನ ಬೆಲೆ

**ತೇಜಿಯಾಟ** ಕುದುರೆಯಾಟ, ಸಾರಥಿತನ

**ತೇಜೋನಿಧಿ** ಕಾಂತಿಯ ಸಮೂಹ

**ತೇಟಿಗ** ಸಾಣೆ ಹಿಡಿಯುವವ

**ತೇಯು** ಉಜ್ಜು, ಸವೆಯಿಸು

**ತೇರುಂಡ** ವಿಚಾರಗೇಡಿ, ಹುಂಬ

**ತೇರೈಸು** ಹಿಂಜರಿ, ಹಿಮ್ಮೆಟ್ಟು; ಅಪೇಕ್ಷಿಸು

**ತೇಳಿನಾಗಾದಿಗೆ** ಚೇಳುಗಳೇ ಮೊದಲಾದ ವಿಷಜಂತುಗಳುಳ್ಳ ಕೋಟೆಯ ಕಂದಕ

**ತೇಳು** ಚೇಳು, ವೃಶ್ಚಿಕ

**ತೈಜಸ** ಪ್ರಕಾಶಮಾನ, ಸ್ವಪ್ರಕಾಶ; ವಿಷ್ಣುವಿನ ಮತ್ತೊಂದು ಹೆಸರು, ಜೀವರ ಗಂಟಲು ಭಾಗದಲ್ಲಿರುವ ಭಗವಂತನ ರೂಪ, ಸ್ವಪ್ನವನ್ನು ಕಾಣಿಸುವ ಪರಮಾತ್ಮನ ಹೆಸರು

**ತೈಲ** ಎಳ್ಳೆಣ್ಣೆ, ಎಣ್ಣೆ

**ತೊಂಗಲು** ಗೊಂಚಲು, ಕುಚ್ಚ

**ತೊಂಚಹಂಚ** ನಾನು ನೀನು ಎಂದು

**ತೊಂಡ** ಭಕ್ತ, ಸೇವಕ, ಆಳು; ತುಂಟತನ, ತುಂಟ

**ತೊಂಡಮಾನ** ಆಕಾಶರಾಜನ ತಮ್ಮ

**ತೊಂಡಲ್, ತೊಂಡಿಲ್, ತೊಂಡಿಲು** ತಲೆಯಲ್ಲಿ ಧರಿಸುವ ಮುತ್ತಿನ ಆಭರಣ

**ತೊಂಡವತ್ಸಲ** ಭಕ್ತವತ್ಸಲ

**ತೊಂಡೆ** ಓತಿಕೇತ; ಅಳಿಸು

**ತೊಂತು** ಸುತ್ತು, ಆವರಿಸು, ಹತ್ತು, ಎತ್ತಿಕಟ್ಟು

**ತೊಂಬಲು** ಎಂಜಲು

**ತೊಕ್ಕಿಮುಕ್ಕು** ಬಹು ದುಃಖಕ್ಕೆ ಗುರಿಮಾಡು

**ತೊಗಲಚೀಲ** ಚರ್ಮದ ಚೀಲ, ಮಾನವ ದೇಹ

**ತೊಗಲಬಕ್ಕಣ** ಚರ್ಮದ ಚೀಲ

**ತೊಗಲು** ಚರ್ಮ

**ತೊಟ್ಟಂಬು** ಹೂಡಿದಬಾಣ, ಬಿಟ್ಟಬಾಣ

**ತೊಟ್ಟು** ಹನಿ, ತುಂತುರು, ಸೀಕರ; ಮೊಲೆಯ ತುದಿ, ಚೂಚುಕ; ಹಣ್ಣು ಅಥವಾ ಎಲೆಗಳ ತುಂಬು, ಕಾವು

**ತೊಡಕು** ಕಗ್ಗಂಟು, ತಡೆ; ಸ್ವಲ್ಪ

**ತೊಡರಿಸು** ಪ್ರವರ್ತಿಸು, ಸಿಕ್ಕಿಸು, ಸೇರಿಸು

**ತೊಡರು** ಸಂಬಂಧ, ಸಂಕೋಲೆ, ಸರಪಳಿ, ಬಂಧನ; ಆಭರಣ, ಬಿರುದಿನ ಸಂಕೇತವಾಗಿ ಧರಿಸುವ ಕಾಲ ಬಳೆ

**ತೊಡವು** ಉಡುಗೆ, ಆಭರಣ

**ತೊಡಿ** ಜಗಳ, ತಾಡನಮಾಡು

**ತೊಡು** ಧರಿಸು, ಬಾಣವನ್ನು ಹೂಡು; ಪ್ರಾರಂಭಿಸು, ಮೊದಲುಮಾಡು

**ತೊಡೆ** ಮೊಳಕಾಲಿನಿಂದ ಸೊಂಟದವರೆಗಿನ ಭಾಗ; ಬಳಿ, ಸವರು, ಒರಸು

**ತೊಣಸಿ, ತೊಣಚಿ** ದನಗಳ ರಕ್ತ ಹೀರುವ ಒಂದು ಜಾತಿಯ ನೊಣ

**ತೊತ್ತಳದುಳಿ** ನಜ್ಜುಗುಜ್ಜಾಗುವಂತೆ ತುಳಿ, ನಾಶಮಾಡು

**ತೊತ್ತಿಗ, ತೊತ್ತಿಗಾರ** ಸೇವಕ

**ತೊತ್ತು** ಸೇವಕ, ಸೇವಕಿ

Rarest Archive

**ತೊತ್ತುತೊಂಡ** ಸೇವಕ, ಊಳಿಗದ ಆಳು

**ತೊಪ್ಪಲು** ಎಲೆ, ಸೊಪ್ಪು

**ತೊರಹು, ತೊರೆ** ನೀರು ಹರಿಯುವ ಹಳ್ಳ; ಕೆಚ್ಚಲಿನಲ್ಲಿ ಹಾಲು ತುಂಬಿಕೊಳ್ಳುವುದು

**ತೊಲಗು** ದೂರ ಸರಿ

**ತೊಳಲಿಸಬೇಡ** ಕಷ್ಟಪಡಿಸಬೇಡ

**ತೊಳಲು** ಅಲೆದಾಡು, ಸಂಚಾರ ಮಾಡು

**ತೊಳಸು** ಸುತ್ತಿ ತಿರುಗಿಸು, ಒಲೆಯ ಮೇಲಿಟ್ಟು ಕೈಯ್ಯಾಡಿಸು, ಕುಟ್ಟು

**ತೋಕ** ಸಂತತಿ, ಮಗು

**ತೋಟಿ** ಜಗಳ; ಸ್ವಚ್ಛಗೊಳಿಸುವವ

**ತೋಡ, ತೋಡೆ, ತೋಡ್ಯ** ಮುಂಗೈಗೆ ತೊಡುವ ಒಂದು ಬಗೆಯ ಆಭರಣ

**ತೋಡು** ಹಳ್ಳಮಾಡು, ಅಗೆ; ಸಮಾನತೆ, ಹೋಲಿಕೆ

**ತೋದಕ** ಉಪಾಯಗಾರ, ಪ್ರೇರಕ; ತೃಪ್ತಿಬಡಿಸುವ, ತುಂಬುವ

**ತೋದು** ಯುಕ್ತಿ, ಉಪಾಯ, ಅವಸರಕ್ಕೆ ತಕ್ಕಂತೆ ಉಪಾಯ ಮಾಡುವಾತ

**ತೋಮರ** ಆಯುಧ ವಿಶೇಷ, ಈಟಿಯಂತಿರುವ ಆಯುಧ

**ತೋಯ** ನೀರು

**ತೋಯಜ** ಕಮಲ

**ತೋಯಜನಯನೆ** ಕಮಲದಂತೆ ಸುಂದರವಾದ ಕಣ್ಣುಳ್ಳವಳು–ಲಕ್ಷ್ಮಿ

**ತೋಯಜಭವ** ಬ್ರಹ್ಮ

**ತೋಯಜಮುಖಿ** ಕಮಲದಂತೆ ಮುಖವುಳ್ಳವಳು –ಲಕ್ಷ್ಮಿ

**ತೋಯಜಾಂಬಕ** ಕಮಲಾಕ್ಷ–ವಿಷ್ಣು

**ತೋಯಜಾಂಬಕಿ** ಕಮಲದಂತೆ ಕಣ್ಣುಳ್ಳವಳು– ಲಕ್ಷ್ಮಿ

**ತೋಯಜಾಕ್ಷ** ವಿಷ್ಣು

**ತೋಯಜಾಸನಾಂಡ** ಬ್ರಹ್ಮಾಂಡ

**ತೋಯಜೆ** ಲಕ್ಷ್ಮಿ

**ತೋಯಧಿ** ಮೋಡ, ಮುಗಿಲು, ಸಮುದ್ರ

**ತೋಯಾಜಾಂಘ್ರಿ** ಗಂಗೆಯುದ್ಭವಿಸಿದ ಪಾದ

**ತೋಯುಜಾಸನ** ಬ್ರಹ್ಮ

**ತೋಯೆ<ತೊವ್ವೆ** ಬೇಳೆಯಿಂದ ಮಾಡಿದ ಒಂದು ಬಗೆಯ ಖಾದ್ಯ

**ತೋರ** ಶಿಶುವಿನ ಅಳತೆಯಷ್ಟು; ದಪ್ಪ, ದೊಡ್ಡ

**ತೋರಣತಡಿಯವ** ದ್ವಾರಪಾಲಕ

**ತೋರಿದಸಾರ** ವೇದ

**ತೋಷ, ತೋಷಣ** ಆನಂದ, ತೃಪ್ತಿ, ಸಂತೋಷ

**ತೋಷತೀರ್ಥರು** ಆನಂದತೀರ್ಥರು– ಮಧ್ವಾಚಾರ್ಯರು

**ತೋಷಪಾಲಕ** ಸಂತೋಷಪಡಿಸಿದ ಭಕ್ತರನ್ನು ಕಾಪಾಡುವವನು

**ತೋಳಂಬಲಿ** ತೋಳೆಂಬ ಬಳ್ಳಿಯಲ್ಲಿ, ತೋಳು ಗಳಿಂದ ಬಿಗಿಹಿಡಿ, ಭದ್ರಪಡಿಸು, ಅಪ್ಪುಗೆ, ಆಲಿಂಗನ

**ತೋಳನ್ನಾಡ್ಸೈ** ಮಕ್ಕಳನ್ನು ತೋಳಲ್ಲಿಟ್ಟು ಆಡಿಸಿ ಮುದ್ದಾಡುವ ಒಂದು ಮಕ್ಕಳಾಟ, ತೋಳಾಟ

**ತೋಳಹೊಯ್** ಭುಜ ಚಪ್ಪರಿಸು, ಕೈಕಡಿ

**ತೋಳ್ಬಂದಿ** ತೋಳಿಗೆ ಧರಿಸುವ ಆಭರಣ, ಅಂಗದ

**ತೌಡು** ಬತ್ತದ ಹೊಟ್ಟು

**ತ್ಯಜಿಸು** ಬಿಡು, ತೊರೆ

**ತ್ಯರ<ತೆರ** ರೀತಿ

**ತ್ಯಾಜ<ತ್ಯಾಜ್ಯ** ನಿರರ್ಥಕವಾದ ವಸ್ತು, ಕಸ

**ತ್ರಯಂಬಕ** ಮೂರುಕಣ್ಣುಳ್ಳವ, ಶಿವ

**ತ್ರಯದಶದ್ವಯರಾಗ** 32 ರಾಗಗಳು–8 ಪುರುಷ ರಾಗಗಳು, 24 ಸ್ತ್ರೀ ರಾಗಗಳು, ಕ್ರಮವಾಗಿ ಭೈರವಿ, ಭೂಪತಿ(ಭೂಪಾಲ), ಶ್ರೀರಾಗ, ರಾಗಪಂಜರ, ವಸಂತ, ಮಾಲವ, ಬಂಗಾಲ, ನಾಟಕ(ನಟ್ಟ), ದೇವಕ್ರಿಯಾ, ಮೇಘರಂಜೀ,

Rarest Archive

ಕುರುಂಜೀ, ವೇಲಾವುಲೀ, ಮಲಹರಿ, ಬೌಲೀ, ಅಂಧಾಲೀ, ಭಲ್ಲಾತೀ, ಮಾಹುರೀ, ದೇಶೀ, ಲಲಿತಾ, ತೋಡೀ, ರಾಮಕ್ರಿಯಾ, ವರಾಲೀ, ಕೌಶೀ, ಗುಂಡಕ್ರಿಯಾ, ಘೂರ್ಜರೀ, ಗೌಲೀ, ಕರ್ನಾಟಗೌಲಿಕಾ, ಧನ್ಯಾಸಿಕಾ, ಕಾಂಭೋಜೀ, ದೇಶಾಕ್ಷೀ, ಆಹರೀ, ನಾರಾಯಣೀ

**ತ್ರಯನಾಮ** ಅಚ್ಯುತ, ಅನಂತ, ಗೋವಿಂದ

**ತ್ರಯನೇತ್ರ** ಮೂರು ಕಣ್ಣುಳ್ಳವ–ಶಿವ

**ತ್ರಯಪದ** ಅಗ್ನಿ

**ತ್ರಯವಿಕಾರ** ಆಧ್ಯಾತ್ಮ, ಆಧಿಭೌತಿಕ, ಆಧಿದೈವ

**ತ್ರಾಡನ** ನಾಚಿಕೆ

**ತ್ರಾಣ** ಶಕ್ತಿ, ಬಲ

**ತ್ರಾಣಿ** ಆಶ್ರಯ ಹೊಂದಿರುವ; ಬಲಿಷ್ಠ

**ತ್ರಾತ** ರಕ್ಷಕ, ರಕ್ಷಿಸುವವನು, ಪಾಲಿಸುವವನು

**ತ್ರಾಸ** ಕಷ್ಟ

**ತ್ರಾಸು** ಸಣ್ಣ ತಕ್ಕಡಿ

**ತ್ರಾಹಿ** ರಕ್ಷಿಸು, ಕಾಪಾಡು

**ತ್ರಾಹ್ಯ** ತ್ರಾಣ, ಬಲ

**ತ್ರಿಕರಣ** ವಾಕ್, ಮನ, ಕಾಯ

**ತ್ರಿಕರ್ಮ** ಕರ್ಮತ್ರಯ: ಕಾಯಾ, ವಾಚಾ, ಮನಸಾ; ಪ್ರಾರಬ್ಧ, ಸಂಚಿತ, ಆಗಾಮಿ

**ತ್ರಿಕಾಲ** ಪೂರ್ವಾಹ್ನ, ಮಧ್ಯಾಹ್ನ, ಅಪರಾಹ್ನ; ಭೂತ, ವರ್ತಮಾನ, ಭವಿಷ್ಯ

**ತ್ರಿಕಾಲಜ್ಞ** ಹಿಂದಿನ, ಇಂದಿನ, ಮುಂದಿನ ಜ್ಞಾನ ಉಳ್ಳವ

**ತ್ರಿಗುಣ** ಸತ್ವ, ರಜಸ್, ತಮೋಗುಣಗಳು

**ತ್ರಿಗುಣಕಾರ್ಯ** ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯ; ಸಾತ್ವಿಕ, ರಾಜಸ, ತಾಮಸಗುಣ ಕಾರ್ಯ

**ತ್ರಿಗುಣಧಾಮ** ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ವಾಸಿಸುವವನು–ಶ್ರೀಹರಿ

**ತ್ರಿಗುಣವರ್ಜಿತ** ತ್ರಿಗುಣವಿದೂರ–ವಿಷ್ಣು

**ತ್ರಿಗುಣಾಕಾರ** ತ್ರಿಗುಣಗಳನ್ನುಳ್ಳವನು

**ತ್ರಿಗೋಲ** ಸೂರ್ಯಮಂಡಲ, ಚಂದ್ರಮಂಡಲ, ಅಗ್ನಿಮಂಡಲ (ಗೋಲತ್ರಯ)

**ತ್ರಿಜಗ, ತ್ರಿಜಗತ್** ಮೂರುಲೋಕ; ಸ್ವರ್ಗ, ಮರ್ತ್ಯ, ಪಾತಾಳ

**ತ್ರಿಜಗನುತ** ಮೂರುಲೋಕಗಳಿಂದ ಪೂಜಿತ–ಶ್ರೀಹರಿ

**ತ್ರಿಜಗನ್ಮಾತೆ** ಮೂರುಲೋಕದ ಒಡತಿ–ಲಕ್ಷ್ಮಿ

**ತ್ರಿಜಗವಿಜಯವೇಷ** ವಿಶ್ವರೂಪ ದರ್ಶನ

**ತ್ರಿಜಗಾಧಾರಕ** ಬ್ರಹ್ಮಾಂಡವನ್ನು ಹೆಡೆಯ ಮೇಲೆ ಹೊತ್ತಿರುವವ–ಶೇಷದೇವರು

**ತ್ರಿಣಯನಗಣಸೇವ** ಶಿವಗಣಗಳಿಂದ ಸೇವಿತ ನಾದವನು–ಶ್ರೀಹರಿ

**ತ್ರಿಣಯನ** ಶಿವ

**ತ್ರಿಣಯಸಖ** ಶಿವನ ಗೆಳೆಯ–ಶ್ರೀಹರಿ

**ತ್ರಿದಂಡಿ** ಸನ್ಯಾಸಿ; ಅದ್ವೈತಿ–ಏಕದಂಡಿ, ದ್ವೈತಿ–ದ್ವಿದಂಡಿ, ವಿಶಿಷ್ಟಾದ್ವೈತಿ–ತ್ರಿದಂಡಿ

**ತ್ರಿದಶ** ಮೂವತ್ತು; ದೇವತೆ

**ತ್ರಿದಶತತಿ** ದೇವತಾಸಮೂಹ

**ತ್ರಿದಶತರು** ದೇವವೃಕ್ಷ, ಕಲ್ಪವೃಕ್ಷ

**ತ್ರಿದಶಭೂರುಹ** ಕಲ್ಪವೃಕ್ಷ

**ತ್ರಿದಶಾಂತ** ಸ್ವರ್ಗದವರೆಗು

**ತ್ರಿದಶಾಲಯಪತಿ** ದೇವೇಂದ್ರ

**ತ್ರಿದಶೇಶ್ವರ** ದೇವರದೇವ, ಶ್ರೀಹರಿ

**ತ್ರಿದಿಶರು** ದೇವತೆಗಳು

**ತ್ರಿಧರರು** ಜ್ಞಾನ, ಭಕ್ತಿ, ವೈರಾಗ್ಯವನ್ನು ಹೊಂದಿದ ವರು

**ತ್ರಿಧಾಮ** ಅನಂತಾಸನ, ಶ್ವೇತದೀಪ, ವೈಕುಂಠ

**ತ್ರಿನಯನ** ಶಿವ

**ತ್ರಿನೇತ್ರ** ಮೂರುಕಣ್ಣುಳ್ಳವ ಶಿವ

**ತ್ರಿಪಥಗಾಮಿನಿ, ತ್ರಿಪಥಗೆ** ಸ್ವರ್ಗ, ಮರ್ತ್ಯ, ಪಾತಾಳದಲ್ಲಿ ಪ್ರವಹಿಸುವವಳು–ಗಂಗಾನದಿ

Rarest Archiver

**ತ್ರಿಪದ** ವೇದಗಳು; ಮೂರು ಪಾದಗಳು– ಗಾಯತ್ರಿ, ಅಗ್ನಿ, ವಾಮನ

**ತ್ರಿಪುರ** ಮಾಯಾಸುರನು ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ ಮತ್ತು ವಿದ್ಯುನ್ಮಾಲಿಗಳಿಗಾಗಿ ಕಟ್ಟಿಸಿಕೊಟ್ಟ ಮೂರು ಪಟ್ಟಣಗಳು, ತ್ರಿಕೂಟ, ಶ್ರೀಪಾಟ, ಗೊಲ್ಲಾಟ, ಕಬ್ಬಿಣ, ಬೆಳ್ಳಿ, ಚಿನ್ನದ ಪುರಗಳು

**ತ್ರಿಪುರಾರಿ** ಶಿವ

**ತ್ರಿಭಂಗಿ** ನಾಟ್ಯದ ಒಂದು ಪ್ರಕಾರ, ದೇಹದ ಮೂರು ಎಡೆಗಳಲ್ಲಿ ಬಾಗಿ ನಿಲ್ಲುವುದು

**ತ್ರಿಭುವನ** ಮೂರು ಲೋಕ, ಭೂಮಿ, ಪಾತಾಳ, ಆಕಾಶ

**ತ್ರಿಭುವನೇಶ** ಮೂರು ಲೋಕಗಳಿಗೆ ಸ್ವಾಮಿ– ಶ್ರೀಹರಿ

**ತ್ರಿಮತ** ಮೂರು ಮತಗಳು– ಅದ್ವೈತ, ವಿಶಿಷ್ಟಾದ್ವೈತ, ದ್ವೈತ

**ತ್ರಿಮಲ** ಮೂರು ಬಗೆಯ ಪಾಪದ ಕೊಳೆ (ಸಂಚಿತ, ಆಗಾಮಿ, ಪ್ರಾರಬ್ಧ): ಕಾಯಿಕ, ವಾಚಿಕ, ಮಾನಸಿಕ ಪಾಪಗಳ ಕೊಳೆ

**ತ್ರಿಯಂಬಕ** ಮೂರುಕಣ್ಣುಳ್ಳವ–ಶಿವ

**ತ್ರಿರಾವರ್ತಿ** ಮೂರುಸಲ

**ತ್ರಿರೇಖೆ** ಕೊರಳ ಮೇಲಿನ ಮೂರು ಗೆರೆಗಳು

**ತ್ರಿಲೋಚನ** ಮುಕ್ಕಣ್ಣ–ಶಿವ

**ತ್ರಿವಳಿ, ತ್ರಿವಳಿರೇಖೆ** ಹೊಟ್ಟೆಯ ಮೇಲಿನ ಮೂರುಗೆರೆಗಳು

**ತ್ರಿವಿಕ್ರಮ** ವಿಷ್ಣು

**ತ್ರಿವಿಧ** ಸುರ, ನರ, ಉರಗ–ಈ ಮೂರು ವಿಧದವರು

**ತ್ರಿವಿಧಕರಣ** ಮಾತು, ಮನಸ್ಸು, ಮತ್ತು ದೇಹ

**ತ್ರಿವಿಧಚೇತನರು, ತ್ರಿವಿಧಜೀವರು** ಸಾತ್ವಿಕ, ರಾಜಸ, ತಾಮಸ ಜೀವಿಗಳು

**ತ್ರಿವಿಧನಾಶ** ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ

**ತ್ರಿವಿಧಪಾಪ** ಪಾತಕ, ಉಪಪಾತಕ, ಮಹಾಪಾತಕ

**ತ್ರಿವಿಧರೂಪ** ಬ್ರಹ್ಮ, ವಿಷ್ಣು, ಶಿವ

**ತ್ರಿವಿಧಶ್ವಾಸ** ಭೂ, ಅಭೂ, ಭೂರಭೂ ಎಂದು ಮೂರು ವಿಧ ಶ್ವಾಸಜಪ

**ತ್ರಿವಿಧಾತ್ಮ** ವಿಶ್ವ, ತೈಜಸ, ಪ್ರಾಜ್ಞ

**ತ್ರಿವಿಷ್ಟಪ** ಸಿಂಹಾಸನ; ಸ್ವರ್ಗ

**ತ್ರಿವಿಷ್ಟಪದ** ಮೋಕ್ಷ

**ತ್ರಿವೃತ್** ಗುಣತ್ರಯನಿಯಾಮಕ

**ತ್ರಿವೃನ್ನಾಮ** ಗುಣತ್ರಯಾತ್ಮಕವಾಚ್ಯ

**ತ್ರಿವೇಣಿತೀರ** ಗಂಗಾ, ಯಮುನಾ, ಸರಸ್ವತಿ ನದಿಗಳ ದಂಡೆ

**ತ್ರಿಶಂಕು** ಒಬ್ಬರಾಜನ ಹೆಸರು

**ತ್ರಿಶಂಕುಲೋಕ** ವಿಶ್ವಾಮಿತ್ರನು ತನಗೆ ಪ್ರಿಯನಾದ ತ್ರಿಶಂಕು ರಾಜನಿಗಾಗಿ ಸೃಜಿಸಿದ ಬೇರೊಂದು ಸ್ವರ್ಗ

**ತ್ರಿಶೂಲ** ಮೂರುಮೊನೆಯ ಆಯುಧ

**ತ್ರಿಶೂಲಧರ** ಶಿವ

**ತ್ರಿಸ್ಥಾನ** ಶ್ವೇತದ್ವೀಪ, ಅನಂತಾಸನ, ವೈಕುಂಠ

**ತ್ರಿಸ್ಥಾನವಾಸ** ವಿಷ್ಣು

**ತ್ರುಟಿ** ಕ್ಷಣಮಾತ್ರ, ಕ್ಷಣಕಾಲ, ಕ್ಷಣದ ಕಾಲುಭಾಗ, 2ತ್ರುಟಿ=1ಲವ

**ತ್ರೇತೆ** ಎರಡನೆಯ ಯುಗವಾದ ತ್ರೇತಾಯುಗ

**ತ್ರೈಘೋಷಣ** ವೇದಗಳನ್ನು ಉಚ್ಚಾರ ಮಾಡುವುದು

**ತ್ರೈಘೋಷಣಮುಖ** ಸಹಸ್ರ ಮುಖಗಳುಳ್ಳವ– ಶೇಷದೇವ

**ತ್ರೈಜಗತ್** ಮೂರುಲೋಕ, ಸ್ವರ್ಗ, ಮರ್ತ್ಯ, ಪಾತಾಳ

**ತ್ರೈಜಗದೀಶ** ಮೂರುಲೋಕದೊಡೆಯ

**ತ್ರೈತತ್ವ** ವೈಕಾರಿಕ, ತೈಜಸ, ತಾಮಸ (ರುದ್ರನಿಗೆ ಸಂಬಂಧಿಸಿದಂತೆ)

**ತ್ರೈತಾಪ** ಆಧಿಭೂತ, ಆಧ್ಯಾತ್ಮಿಕ, ಆಧಿದೈವ

Rarest Archive

**ತ್ರೈವಾಣಿ** ವೇದವಾಣಿ

**ತ್ರೋಟಕ** ವಂಚನೆ

**ತ್ರ್ಯಂಬಕ** ಮೂರು ಕಣ್ಣುಳ್ಳ ಶಿವ

**ತ್ರ್ಯಂಬಕಾದ್ಯಮರೇಶ** ರುದ್ರ ಮೊದಲಾದ ದೇವತೆಗಳ ಒಡೆಯ–ವಿಷ್ಣು

**ತ್ರ್ಯಕ್ಷ** ಮೂರುಕಣ್ಣುಳ್ಳವನು (ಸೂರ್ಯ, ಚಂದ್ರ, ಅಗ್ನಿ) ಶಿವ, ನರಸಿಂಹ

**ತ್ರ್ಯಧೀಶ** ತ್ರಿಲೋಕನಾಥ–ಶ್ರೀಹರಿ

**ತ್ವಂಚಾಹಂಚ** ನೀನು–ನಾನು ಎಂಬ ಭೇದಭಾವ, ತೊಂಚಾವಂಚ

**ತ್ವಕ್, ತ್ವಕು, ತ್ವಕ್ಕು** ತ್ವಚೆ, ಚರ್ಮ, ಸ್ಪರ್ಶಾದಿಗಳಿಗೆ ಹಾತೊರೆಯುತ್ತಿರುವ ತ್ವಗಿಂದ್ರಿಯ

**ತ್ವಗಂಶ** ಚರ್ಮದ ಭಾಗ

**ತ್ವಗೇಂದ್ರಿಯ** ಚರ್ಮ

**ತ್ವಚ<ತ್ವಚೆ** ಚರ್ಮ

**ತ್ವತ್** ನಿನ್ನ

**ತ್ವತ್ಕೃತ** ನೀನು ಮಾಡಿದ

**ತ್ವರ, ತ್ವರಿತ, ತ್ವರಿಯ, ತ್ವರಿಯಾ** ತೀವ್ರ, ಬೇಗ, ವೇಗವಾಗಿ

**ತ್ವಷ್ಟ** ಬಡಗಿ, ವಿಶ್ವಕರ್ಮ (ದೇವಲೋಕದ ಶಿಲ್ಪಿ)

## ಥ

**ಥ** ಸಂಖ್ಯೆ ಏಳು

**ಥಂಬಿಸು<ಸ್ಥಂಬಿಸು** ನಿಲ್ಲಿಸು

**ಥಡಿ** ದಂಡೆ; ಕುದುರೆ ಸವಾರ ಕೂಡಲು ಅದರ ಮೇಲೆ ಹಾಕುವ ಆಸನ

**ಥಳಕು(ಪು)** ಕಾಂತಿ, ಪ್ರಕಾಶ; ನಟನೆ, ತೋರಿಕೆ, ಬೆಡಗು, ಬಿನ್ನಾಣ

**ಥಳಥಳಿಸು** ಹೊಳೆ

**ಥಾಲಿ** ಲೋಹದ ಗುಂಡನೆಯ ಪಾತ್ರೆ, ತಟ್ಟೆ, ಜಲಪಾತ್ರೆ, ಗಿಂಡಿ, ಪಂಚಪಾತ್ರೆ

**ಥೋರ<ತೋರ** ದಪ್ಪ, ದೊಡ್ಡ, ಸ್ಥೂಲ

## ದ

**ದ** ಕೊಡುವುದು; ಸಂಖ್ಯೆ ಎಂಟು

**ದಂಗು** ಆಶ್ಚರ್ಯ, ವಿಸ್ಮಯ

**ದಂಡಕ** ಗಳೆ, ದೊಣ್ಣೆ; ನಿಯಮ; ಸಾಹಿತ್ಯದ ಛಂದಸ್ಸಿನಲ್ಲೊಂದು ಬಗೆ

**ದಂಡಣೆ** ದಂಡನೆ

**ದಂಡಧರ** ಯಮ

**ದಂಡಧಾರಕ** ದಂಡ(ದೊಣ್ಣೆಯನ್ನು) ಹಿಡಿದವ

**ದಂಡಾತ್ಮಜ** ಯಮದೇವರ ಮಗನಾದ ಧರ್ಮರಾಜ

**ದಂಡಿ** ಹೆಚ್ಚಾಗಿ, ಆಧಿಕ್ಯ, ಹೆಚ್ಚಳ; ಯಮರಾಜ; ದ್ವಾರಪಾಲಕ; ಒಬ್ಬ ಸಂಸ್ಕೃತ ಕವಿ

**ದಂಡಿಕಾ** ದಂಡಕಾಷ್ಟ, ದಂಡ, ಕೋಲು

**ದಂಡಿಗೆ** ಬೆತ್ತ, ಬಡಿಗೆ; ತಂಬೂರಿ, ಪಲ್ಲಕ್ಕಿ

**ದಂಡಿಗೆಬೆತ್ತ** ಏಕತಾರಿ, ಹೆಗಲಿನಿಂದ ಇಳಿ ಬೀಳಬಹುದಾದ ಒಂದು ತಂತೀ ವಾದ್ಯ ಮತ್ತು ಕೋಲು

**ದಂಡೆ** ಹೂಕಟ್ಟುವ ಒಂದು ಬಗೆ; ತಟ, ಕೂಲ, ದಡ; ಸಾಮು ಮಾಡುವಲ್ಲಿ ಒಂದು ರೀತಿ; ಭುಜ

**ದಂಡೆಯನೊಗದಂತೆ** ದಂಡವತ್ ಪ್ರಣಾಮ ಮಾಡಿದಂತೆ

**ದಂತ** ಹಲ್ಲು

**ದಂತಚ್ಯುತ** ಬೋಡು ಬಾಯಿಯವ, ಹಲ್ಲುಬಿದ್ದವ

Rarest Archiver

**ದಂತಧಾವನ** ಹಲ್ಲು ಉಜ್ಜುವಿಕೆ

**ದಂತಪಂಙ್ತ್ತಿ** ಹಲ್ಲುಗಳ ಸಾಲು

**ದಂತವಕ್ತ್ರಕ** ಉಬ್ಬು ಹಲ್ಲಿನವನು

**ದಂತಿ** ಆನೆ

**ದಂತಿಚರ್ಮಾಂಬರ** ಶಿವ

**ದಂತಿಪುರ** ಹಸ್ತಿನಾವತಿ

**ದಂತಿಮಜ್ಜನ** ಆನೆಯ ಸ್ನಾನ, ದೊಡ್ಡಸ್ನಾನ, ವ್ಯರ್ಥಸ್ನಾನ

**ದಂತಿವದನ** ಗಣಪತಿ

**ದಂತಿವರದ** ಶ್ರೀಹರಿ (ಗಜೇಂದ್ರ ಮೋಕ್ಷ)

**ದಂತಿಶೈಲಾಗ್ರ** ಕರಿಗಿರಿಯ ಶಿಖರ

**ದಂದಲೆ<ದಾಂದಲೆ** ತಲೆಹರಟೆ, ಪೀಡೆ, ತಂಟೆ

**ದಂದಶೂಕ** ಸರ್ಪ, ಹಾವು

**ದಂದುಗ** ತೊಂದರೆ, ಕಷ್ಟ, ಕೋಟಲೆ,

**ದಂಧನ** ದಾಂದಲೆ

**ದಂಪತ್ತ** ದಂಪತಿ

**ದಂಭ** ಮೋಸ, ಮೋಸಗಾರ

**ದಂಭೋಲಿ(ಳಿ)** ವಜ್ರಾಯುಧ

**ದಂಭೋಲಿಧರ** ವಜ್ರಾಯುಧಧಾರಿ-ಇಂದ್ರ

**ದಂಷ್ಟ** ದಾಡೆ (ಕೋರೆಹಲ್ಲು)

**ದಂಷ್ಟಿ** ವರಾಹ

**ದಕ್ಕು** ಲಭಿಸು, ಸಿಗು, ಸಲ್ಲು

**ದಕ್ಷಭಂಜನ, ದಕ್ಷಯಜ್ಞವಿಭಂಜ** ದಕ್ಷನ ಯಜ್ಞವನ್ನು ಕೆಡಿಸಿದವನು-ಶಿವ

**ದಕ್ಷಸುತೆಪತಿ** ಶಿವ

**ದಕ್ಷಾಧ್ವರ** ದಕ್ಷಯಜ್ಞ

**ದಕ್ಷಿಣಮಾರ್ಗ** ಪಿತೃಗಳು ಹೋಗುವ ದಾರಿ

**ದಕ್ಷಿಣಹಸ್ತ** ಬಲಗೈ

**ದಕ್ಷಿಣಾಕ್ಷಿವಾಸ** ಬಲಗಣ್ಣಿನಲ್ಲಿ ವಾಸವಾಗಿರುವ "ವಿಶ್ವ"ನಾಮಕ ಶ್ರೀಹರಿ

**ದಗ** ವಿಶ್ವಾಸಘಾತ, ಮೋಸ, ದ್ರೋಹ

**ದಗಡಿ** ಒರಟ; ಜಾರೆ, ವ್ಯಭಿಚಾರಿಣಿ

**ದಗದಗಿಸು** ಸಂತಾಪಪಡು

**ದಗಲೆ** ಕವಚ, ಚಿಲಖತ್ತು; ಅಳ್ಳಕವಾದ, ಸಡಿಲವಾದ

**ದಗ್ಧಪಟ** ಬೆಂಕಿಗೆ ಸಿಕ್ಕ ಬಟ್ಟೆ, ಸುಟ್ಟ ಬಟ್ಟೆ

**ದಟ್ಟಡಿ** ತಪ್ಪುಹೆಜ್ಜೆ, ನಡಿಗೆ ಬಾರದ ಮಕ್ಕಳು ಇಡುವ ಹೆಜ್ಜೆ

**ದಟ್ಟಿ** ಟೊಂಕಕ್ಕೆ ಸುತ್ತುವ ವಸ್ತ್ರ, ವಲ್ಲಿ

**ದಟ್ಟಿತು** ಒತ್ತೊತ್ತಾಗಿರುವುದು

**ದಟ್ಟಿಸು** ನಿಷ್ಠುರವಾಗು, ಗದರಿಸು

**ದಡಿಗ** ಗಟ್ಟಿಗ, ದಾಂಡಿಗ, ಬಲಶಾಲಿ

**ದಡ್ಡು, ದಡ್ಡ್ಯಾಗು** ಜಡ್ಡು, ಮೊಂಡು; ಗಂಟು; ಒಂದೇ ಸಮನೆ ಬಳಸಿದಾಗ ಆಗುವ ಬಿರುಸಾದ ಗುರುತು

**ದಢಿತನ** ಗೌರವ, ಅಹಂಕಾರ

**ದಣಿ** ಆಯಾಸಪಡು, ಬಳಲು; ತೃಪ್ತಿ ಹೊಂದು, ತಣಿ; ಒಡೆಯ, ಯಜಮಾನ

**ದಣು, ದಣುವಿಕೆ** ಆಯಾಸ, ಶ್ರಮ

**ದತ್ತ** ಲಭ್ಯ, ಕೊಡಲ್ಪಟ್ಟ

**ದತ್ತಾತ್ರೇಯ** ಬ್ರಹ್ಮ-ವಿಷ್ಣು-ಮಹೇಶ್ವರ ರೂಪಿ ವಿಷ್ಣುವಿನ ಅವತಾರ

**ದದಪುಗೆಡು** ಗೌರವವಿಲ್ಲದಾಗು, ಮಾನಹೋಗು

**ದಧಿ** ಮೊಸರು; ಚಂದ್ರಮಂಡಲ

**ದಧಿಕ್ಷೀರ** ಮೊಸರು, ಹಾಲು

**ದಧಿನಾಥ** ಕೃಷ್ಣ; ಚಂದ್ರ

**ದಧಿಭಾಂಡ** ಮೊಸರುಗಡಿಗೆ

**ದಧಿಮಥನ** ಮೊಸರು ಕಡೆಯುವುದು

**ದಧಿವಡೆ** ಮೊಸರು ವಡೆ

**ದಧಿವಾಮನ** ಚಂದ್ರಮಂಡಲ ಮಧ್ಯಸ್ತನಾಗಿ ಪದ್ಮಾಸನದಲ್ಲಿ ಕುಳಿತ ದ್ವಿಭುಜವಾಮನ

**ದಧಿಶೋಧಿಸು** ಮೊಸರ ಕೆನೆ ತೆಗೆ

**ದಧೀಚಿ** ಸ್ವಾಯಂಭುವ ಮನ್ವಂತರದಲ್ಲಿದ್ದ ಒಬ್ಬ ಋಷಿ

Rarest Archiver

**ದಧ್ಯನ್ನದಮುದ್ದೆ** ಮೊಸರನ್ನದ ತುತ್ತು, ಬುತ್ತಿ
**ದಧ್ಯೋದನ** ಮೊಸರನ್ನ
**ದನಿ** ಧ್ವನಿ
**ದನುಜ** ರಾಕ್ಷಸ, ರಾಕ್ಷಸರ ಒಂದು ಜಾತಿ
**ದನುಜಘರಟ್ಟ** ರಾಕ್ಷಸರಿಗೆ ಬೀಸುವ ಕಲ್ಲಿನಂತೆ ಇರುವವನು–ಶ್ರೀಹರಿ
**ದನುಜಡಿಂಬ** ದೈತ್ಯ ಬಾಲಕನಾದ ಪ್ರಹ್ಲಾದ
**ದನುಜದಲ್ಲಣ** ರಾಕ್ಷಸ ಧ್ವಂಸಿ–ಶ್ರೀಹರಿ
**ದನುಜನಗರ** ಲಂಕೆ
**ದನುಜಮರ್ದನ** ದೈತ್ಯಸಂಹಾರಕ
**ದನುಜವೃಂದ** ಶತ್ರುಗಳು
**ದನುಜೆಯಾಳ್ದನಣ್ಣನಯ್ಯ** ಭೀಮನ ಅಣ್ಣನಾದ ಧರ್ಮರಾಯನ ತಂದೆ–ಯಮಧರ್ಮರಾಯ
**ದನುಜೇಂದ್ರ** ರಾಕ್ಷಸರೊಡೆಯ
**ದಬ್ಬೆ** ಕೋಲು, ದೊಣ್ಣೆ
**ದಮ(ಮೆ)** ಇಂದ್ರಿಯನಿಗ್ರಹ, ಮನೋನಿಗ್ರಹ, ಜಿತೇಂದ್ರಿಯತ್ವ
**ದಮನ** ಹತೋಟಿ, ಅಂಕೆ, ಶಿಕ್ಷೆ, ದಂಡ; ನಾಶ
**ದಮಯಂತಿಕಾಂತಸುತೆ** ನಳನಂದಿನಿ
**ದಮುನಸ್** ಅಗ್ನಿ, ಬೆಂಕಿ
**ದಮುನಾಮ** ಅಗ್ನಿನಾಮಕ ಪರಮಾತ್ಮ
**ದಮ್ಮಡಿ, ದಮ್ಮುಡಿ** ಬಿಡಿಗಾಸು, ದುಗ್ಗಾಣಿ
**ದಮ್ಮಣಿ** ಧರ್ಮಾರ್ಥವಾಗಿ ಪಾನೀಯಗಳನ್ನು ಕೊಡುವ ಸ್ಥಳ, ಅರವಟ್ಟಿಗೆ
**ದಮ್ಮನೆ** ದಪ್ಪಗೆ
**ದಯ** ಕರುಣೆ, ಕೃಪೆ
**ದಯಾನಿಧಿ** ಕರುಣಾನಿಧಿ
**ದಯಾಪರ** ನಿರ್ವ್ಯಾಜ ಕೃಪೆ ಉಳ್ಳವ
**ದಯಾಪಾಂಗ** ದಯಾದೃಷ್ಟಿಯುಳ್ಳವನು–ಶ್ರೀಹರಿ
**ದರ** ಶಂಖ, ಕಂಬು, ಸೀಳು; ಕುಳಿ, ಹಳ್ಳ
**ದರದರ** ಅನುಕರಣ ಶಬ್ದ, ಸರಸರನೆ, ಸಣ್ಣ ಸಣ್ಣ
**ದರವಿ<ದರ್ವಿ** ಸೌಟು, ಸಟ್ಟುಗ
**ದರವೇಶಿ** (ಮನೆಮನೆಯ ಬಾಗಿಲಿಗೆ ಬರುವ ಮುಸ್ಲಿಂ ಫಕೀರ), ಭಿಕ್ಷುಕ, ದಿಕ್ಕಿಲ್ಲದವ
**ದರಹಸಿತ, ದರಹಾಸ** ಮಂದಸ್ಮಿತ, ಮುಗುಳ್ನಗೆಯುಳ್ಳ, ಮಂದಹಾಸ
**ದರಾಧರ** ಮುಗುಳುನಗು
**ದರಾರಿ** ಶಂಖಚಕ್ರಗಳು
**ದರಿ** ಆಳ, ರಸಾತಳ, ಹಳ್ಳ
**ದರ್ದುರ** ಕಪ್ಪೆ
**ದರ್ಪ** ಸೊಕ್ಕು, ಹೆಮ್ಮೆ, ಠೀವಿ
**ದರ್ಪಕ** ಮನ್ಮಥ, ಕಾಮ
**ದರ್ಪಣ** ಕನ್ನಡಿ
**ದರ್ಪಣನಿಭ** ಕನ್ನಡಿಯಂತೆ ಹೊಳೆಯುವ
**ದರ್ಭಶಯನ** ದರ್ಭೆಯನ್ನು ಹಾಸಿಗೆಯಾಗಿ ಉಳ್ಳವನು
**ದರ್ವಿ** ಸೌಟು; ಜಡ
**ದರ್ವೀಧರಹಸ್ತ** ಸೌಟು ಹಿಡಿದವನು, ಭೀಮ
**ದರ್ಶನ** ತತ್ತ್ವಜ್ಞಾನ
**ದಲ** ಎಸಳು, (ತುಳಸಿಯ) ದಳ, ರೇಕು, ಎಲೆ
**ದಲಿಸು** ಒಡೆ, ಸೀಳು
**ದಲ್ಲಣ** ನಾಶಮಾಡುವವನು, ಭಯ ಪಡಿಸುವವನು; ತಲ್ಲಣ, ಭಯ
**ದವ** ಅಡವಿ, ಕಾಡು; ಕಾಳ್ಗಿಚ್ಚು
**ದವನ** ಸುವಾಸನೆಯ ಒಂದು ಗಿಡ, ಹಬ್ಬದ ಹೂವು
**ದವಸ** ಕಾಳು, ಧಾನ್ಯ
**ದವಿಧಭೂತಸ್ಥ** ಪ್ರತಿಬಿಂಬ
**ದವೆ** ಚೂರು, ಅಣು
**ದಶ** ಹತ್ತು
**ದಶಕಂಠನನುಜ** ರಾವಣನ ತಮ್ಮ ವಿಭೀಷಣ
**ದಶಕಂಧರ, ದಶಗ್ರೀವ** ಹತ್ತು ತಲೆಯವ ರಾವಣ
**ದಶಚ್ಛದ** ಹತ್ತು ಇಂದ್ರಿಯಗಳು (ಕೂಡಿ ಕೆಲಸ ಮಾಡುವುದು)

Rarest Archive

**ದಶನ** ಹಲ್ಲು, ಕಚ್ಚುವಿಕೆ
**ದಶಪ್ರಮತಿ** ಮಧ್ವಾಚಾರ್ಯರು
**ದಶಮತಿ** ಪೂರ್ಣಪ್ರಜ್ಞ
**ದಶಮತಿಬೋಧ** ಪೂರ್ಣಬೋಧ
**ದಶಮದ್ವಾರ** ಷಟ್‌ಚಕ್ರಭೇದನ, ಬ್ರಹ್ಮರಂಧ್ರ
**ದಶಮಾತುರು** ದಶಮಾತೃಕೆಗಳು, ಐದು ಕರ್ಮೇಂದ್ರಿಯಗಳು ಮತ್ತು ಐದು ಜ್ಞಾನೇಂದ್ರಿಯಗಳು
**ದಶಮುಖ** ರಾವಣ
**ದಶಮುಖನನುಜ** ವಿಭೀಷಣ
**ದಶರಥ** ಹತ್ತುರಥ, ಹತ್ತುರಥಗಳನ್ನು ಒಂದೇಸಲಕ್ಕೆ ಓಡಿಸುವವ; ರಾಮನ ತಂದೆ
**ದಶರೂಪ** ಜೀವರಿಗೆ ಪ್ರೇರಿಸುವ ಶ್ರೀಹರಿ ರೂಪಗಳು, ಮಚ್ಛಾದಿ ದಶ ರೂಪಗಳು
**ದಶವರೂಥಜ** ದಶರಥನ ಮಗ–ರಾಮ
**ದಶವರೂಥ** ದಶರಥ
**ದಶವಾಯು** ಐದು ಪ್ರಾಣ(ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ) ಹಾಗೂ ಐದು ಉಪ ಪ್ರಾಣರು(ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ)
**ದಶಶಿರ, ದಶಾಸ್ಯ** ರಾವಣ
**ದಶೇಂದ್ರಿಯ** ಹತ್ತು ಇಂದ್ರಿಯ: ಪಂಚ ಜ್ಞಾನೇಂದ್ರಿಯಗಳು + ಪಂಚ ಕರ್ಮೇಂದ್ರಿಯಗಳು
**ದಷ್ಟ** ಬಡತನದಿಂದ ಕಚ್ಚಲ್ಪಟ್ಟವರು
**ದಸಕು** ಹೊಟ್ಟು, ಉಮ್ಮಿ
**ದಸ್ಯು** ದಾಸ; ಅನಾಗರಿಕ; ಕಳ್ಳ, ತುಡುಗ; ಶತ್ರು, ವೈರಿ
**ದಸ್ರರು** ಅಶ್ವಿನಿದೇವತೆಗಳು (ನಾಸತ್ಯ–ದಸ್ರರು), ಯಮಳರು
**ದಹಕರ** ಕಪಟ
**ದಹಿಸು** ಸುಡು
**ದಳ** ಸೈನ್ಯ; ಎಲೆ, ರೇಕು, ಎಸಳು
**ದಳವಾಯುಗಳು** ಐದು ಪ್ರಾಣವಾಯುಗಳು, ಐದು ಉಪವಾಯುಗಳು
**ದಳಾರ್ವಿಲಸಿತ** ಅರಳಿದ, ಆರುದಳದ ಕಮಲ
**ದಳಿ** ಹಾಲು ಕರೆಯುವಾಗ ಕಾಲು ಮತ್ತು ಬೆನ್ನು ಕೂಡಿಸಿ ಕಟ್ಟುವ ಹಗ್ಗ
**ದಳ್ಳುರಿ** ದೊಡ್ಡ ಉರಿ
**ದಾಂತ, ದಾಂತಿ** ಕೊಡುವವನು, ಉದಾರ; ಸಂಯಮ, ಮನೋನಿಗ್ರಹವುಳ್ಳವನು; ಒಂದು ಮರದ ಹೆಸರು
**ದಾಕ್ಷಾಯಿಣಿ** ಗೌರಿದೇವಿ, ದಕ್ಷಪ್ರಜೇಶನ ಪುತ್ರಿ ಪಾರ್ವತಿ
**ದಾಟುಕಾಲಿಡು** ನಡೆಯುವಾಗ ಕಾಲಿಡಬಾರದ ಸ್ಥಳಗಳನ್ನು ದಾಟಿಕೊಂಡು ನಡೆ, ಹಾರು
**ದಾಡಿಮ** ದಾಳಿಂಬೆ
**ದಾಡೆ** ಕೋರೆಹಲ್ಲು, ಹಲ್ಲು, ದವಡೆ
**ದಾತ** ದಾನಿ, ಉದಾರಿ, ಯಜಮಾನ, ಒಡೆಯ
**ದಾತಾರ** ಸಲಹುವವ
**ದಾತೃ** ದಾನಿ, ಕೊಡುವವ
**ದಾನವದಲ್ಲಣ** ರಕ್ಕಸರ ಸೊಕ್ಕನ್ನಡಗಿಸಿದವ–ವಿಷ್ಣು
**ದಾನವರವೃಂದಪುರ** ಲಂಕೆ
**ದಾನವರೆರೆಯ** ರಾಕ್ಷಸರ ರಾಜ, ಕಂಸ, ಶಿಶುಪಾಲ ಇತ್ಯಾದಿ
**ದಾನವಾಂತಕ** ದಾನವರನ್ನು ಕೊಂದವನು, ವಿಷ್ಣು
**ದಾನವಾನು** ದಾನ ಪಡೆ
**ದಾನವಾರಿ** ವಿಷ್ಣು, ಕೃಷ್ಣ
**ದಾನವೇಶ** ಅಸುರರ ಒಡೆಯ
**ದಾಪುಗಾಲು** ದೊಡ್ಡ ದೊಡ್ಡ ಹೆಜ್ಜೆ, ದಾಟುಗಾಲು
**ದಾಮ** ಡಾಬು, ನಡುಪಟ್ಟಿ, ಒಡ್ಯಾಣ, ಮಾಲೆ; ಹಗ್ಗ
**ದಾಮ–ಸುದಾಮ** ಕಂಸನ ಮಾಲೆಗಾರರು
**ದಾಮಕರ್ತ** ಮಾಲೆಗಾರ, ಹೂವು ಕಟ್ಟುವವನು
**ದಾಮಣಿ** ಕಣ್ಣಿ, ದನಗಳನ್ನು ಕಟ್ಟುವ ಹಗ್ಗ; ದಾವಣಿ

Rarest Archives

**ದಾಮೋದರ** ಕೃಷ್ಣ

**ದಾಯ** ರೀತಿ; ಪಾಲು; ಸಮಯ, ಸಂದರ್ಭ; ಪಗಡೆಯಾಟ, ಪಗಡೆಯಾಟದಲ್ಲಿ ಉರುಳಿಸುವ ಗರ, ದಾಳ, ಬಯಸುವ ಸಂಖ್ಯೆ

**ದಾಯಕ** ಕೊಡುವವನು

**ದಾಯಭಾಗ** ಆಸ್ತಿಯ ಪಾಲು, ದಾಯಾದಿಗಳ ಭಾಗ

**ದಾಯಾದಿ, ದಾಯಿಗ** ಜ್ಞಾತಿ, ರಕ್ತ ಸಂಬಂಧಿ, ಆಸ್ತಿಯಲ್ಲಿ ಪಾಲುದಾರ, ಭಾಗಾದಿ, ಹಕ್ಕುಳ್ಳನಂಟ

**ದಾಯಿಗಾರ** ವೈರಿಯಾದ ದಾಯಾದಿ

**ದಾರ** ದ್ವಾರ; ಹೆಂಡತಿ; ನೂಲು; ಯಾರ

**ದಾರಕ** ಕತ್ತರಿಸುವ, ಮುರಿಯುವ; ಮಗ, ಬಾಲಕ

**ದಾರಢ್ಯ<ದಾರ್ಢ್ಯ** ಭಕ್ತಿಗೆ ವಿಶೇಷಣ, ದೃಢಭಕ್ತಿ

**ದಾರದು** ಯಾರದು, ಅದು ಯಾರು

**ದಾರಧರ್ಷಕ** ದ್ರೌಪದಿಯೊಂದಿಗೆ ಸೊಕ್ಕಿನಿಂದ ನಡೆದುಕೊಂಡವ, ದುಶ್ಶಾಸನ

**ದಾರವಟ್ಟ<ದ್ವಾರಬಂಧ** ಹೊಸ್ತಿಲು, ಚೌಕಟ್ಟು

**ದಾರಿ** ರಸ್ತೆ, ಉಪಾಯ, ಕಷ್ಟಕರ್ಮ, ಜೀವನ ಪಥ

**ದಾರಿಂದ<ಅದಾರಿಂದ** ಅದು ಯಾರಿಂದ

**ದಾರಿಕಟ್ಟು** ಅಡ್ಡಿಮಾಡು, ನಿರ್ಬಂಧಿಸು

**ದಾರಿಗೂ<ಅದಾರಿಗೂ** ಅದು ಯಾರಿಗೂ

**ದಾರಿತ** ಸೀಳಿದ

**ದಾರಿದ್ರ್ಯಭಂಜಿನಿ** ಬಡತನವನ್ನು ನಾಶಮಾಡುವವಳು–ಲಕ್ಷ್ಮಿ

**ದಾರು<ಅದಾರು** ಅದು ಯಾರು; ಮರ

**ದಾವ** ಕಿಚ್ಚು, ಬೆಂಕಿ, ಕಾಡುಗಿಚ್ಚು; ಅದುಯಾವ, ಯಾವಾತ

**ದಾವಗ** ಯಾರಿಗೆ(ವ್ಯಾವಹಾರಿಕ ಪ್ರಯೋಗ)

**ದಾವಣಿ, ದಾವಣೆ** ಸಾಲಾಗಿ ದನಗಳನ್ನು ನಿಲ್ಲಿಸಿ ಕಟ್ಟುವ ಉದ್ದನೆಯ ಹಗ್ಗ, ಕಣ್ಣಿ

**ದಾವಶಿಖ** ಕಾಳ್ಗಿಚ್ಚು

**ದಾವಾಂಕ** ರಾವಣನ ಮಗ

**ದಾವಾಗ್ನಿ, ದಾವಾನಲ(ಳ)** ಕಾಳ್ಗಿಚ್ಚು, ಕಾಡ್ಗಿಚ್ಚು

**ದಾವು** ಹಗ್ಗ; ನೀರಡಿಕೆ, ಬಾಯಾರಿಕೆ

**ದಾವುದು** ಅದು ಯಾವುದು

**ದಾಶ<ದಾಸ** ಆಳು

**ದಾಶರಥಿ** ದಶರಥನ ಮಗನಾದ ರಾಮ

**ದಾಶಾರ್ಹ** ಪೂಜಾರ್ಹ; ಯಾದವ

**ದಾಸಕೂಟ** ಹರಿದಾಸರ ಸಂಪ್ರದಾಯ, ಪರಂಪರೆ (ಹರಿದಾಸರ ಗುಂಪು ಅಥವಾ ಸಮೂಹ)

**ದಾಸೋಹ, ದಾಸೋಹಂ** ಸೇವಕ ವೃತ್ತಿ, ಶ್ರೀಹರಿಯ ದಾಸ

**ದಾಸ್ತಾನು** ಸಂಗ್ರಹ, ಶೇಖರಣೆ

**ದಾಸ್ಯ** ಸೇವಕತನ, ಸೇವಾವೃತ್ತಿ, ಊಳಿಗತನ

**ದಾಹಕ** ಸುಡುವವನು, ಬೆಂಕಿ, ನಾಶಮಾಡುವವನು

**ದಾಹನ** ಸುಡುವಿಕೆ

**ದಿಂಡ** ಅಹಂಕಾರಿ, ಉದ್ಧಟ

**ದಿಂಡು** ಗರ್ವ; ಬಾಳೆಯ ಕಾಂಡದ ತಿರುಳು

**ದಿಂಡುಗೆಡಹು** ನೆಲಕ್ಕೆ ಕೆಡವು; ಸಾಷ್ಟಾಂಗ ನಮಿಸು

**ದಿಂಡುಗೆಡೆ** ಅಡ್ಡಬೀಳು, ನಮಸ್ಕಾರಮಾಡು

**ದಿಂಡುದರಿ** ಸಂಹರಿಸು

**ದಿಂಡೆ** ನೀಚ ಹೆಂಗಸು, ದುಷ್ಟೆ

**ದಿಂಡೆಗಾರ** ಸ್ವೇಚ್ಛಾಚಾರಿ, ಅಹಂಕಾರಿ

**ದಿಂಡೆಯ, ದಿಂಡೇರು** ದೈತ್ಯ; ಸೊಕ್ಕಿದವ; ಒರಟು ಹೆಂಗಸು; ಸ್ವಾಮಿಗಳ ಎಡಬಲ ಸೇವಕ

**ದಿಕ್ಕರಿ** ದಿಗ್ಗಜ

**ದಿಗಂತ** ದಿಕ್ಕಿನ ಕೊನೆ, ದಿಕ್ತಟ, ಆಕಾಶದ ಅಂಚು, ಕೊನೆ

**ದಿಗಂಬರ** ವಸ್ತ್ರಹೀನ, ದಿಕ್ಕುಗಳನ್ನೇ ಬಟ್ಟೆಯನ್ನಾಗುಳ್ಳವ, ನಗ್ನ; ಭಕ್ತ ಶ್ರೇಷ್ಠ

**ದಿಗಂಬರಧರ** ಬೌದ್ಧಾವತಾರ (ದಿಕ್ಕನ್ನು ಬಟ್ಟೆಯಾಗಿ ಉಳ್ಳವ)

Rarest Archiver

**ದಿಗ್ಗಜ** ಭೂಭಾಗವನ್ನು ಹೊತ್ತಿರುವ ಎಂಟು ದಿಕ್ಕಿನ ಆನೆಗಳು

**ದಿಗ್ದಂತಿ** ದಿಕ್ಕಿನ ಭಾರವನ್ನು ಹೊರುವ ಆನೆ, ಮಹಾಪಂಡಿತ

**ದಿಗ್ದೆಸೆ<ದಿಕ್ಕುದೆಸೆ** ಎಂಟು ದಿಕ್ಕುಗಳು, ಎಂದರೆ ಸುತ್ತಲೂ

**ದಿಗ್ವರ** ದಿಗ್ದೇವತೆ

**ದಿಗ್ವಲಯ** ದಿಕ್ಕುಗಳ ಪ್ರದೇಶ

**ದಿಗ್ವಸನ** ದಿಕ್ಕನ್ನೇ ವಸ್ತ್ರವಾಗುಳ್ಳವ, ದಿಗಂಬರ, ಬುದ್ಧ

**ದಿಟ** ಸತ್ಯ

**ದಿಟ್ಟಿ<ದೃಷ್ಟಿ** ಕಣ್ಣು, ನೋಟ

**ದಿಟ್ಟಿಹರಿದಾಡು** ಭಗವಂತನತ್ತ ದೃಷ್ಟಿ ಹೊರಳು

**ದಿಟ್ಟೆ** ಧೈರ್ಯವಂತೆ, ಉದ್ಧಟೆ

**ದಿಡಗು** ಜೋರು, ಅಬ್ಬರ

**ದಿಡ್ಡಿ** ಸಣ್ಣ ಬಾಗಿಲು, ಕಿಂಡಿ

**ದಿತಿ** ಕಶ್ಯಪ ಋಷಿಯ ಪತ್ನಿ

**ದಿತಿಜ, ದಿತಿಜಾತ** ದಿತಿಯ ಮಗ–ರಾಕ್ಷಸ

**ದಿತಿಜಾಧಿಪ** ದಿತಿಯ ಮಕ್ಕಳಾದ ದೈತ್ಯರ ದೊರೆ

**ದಿತಿಜಾರಿ** ದೈತ್ಯರ ಶತ್ರು–ವಿಷ್ಣು

**ದಿತಿಸುತರು** ದಿತಿಯ ಮಕ್ಕಳು, ದೈತ್ಯರು, ರಾಕ್ಷಸರು, ಹಿರಣ್ಯಕಶಿಪು ಮುಂತಾದವರು

**ದಿತಿಸುತಾಂತಕ** ಹಿರಣ್ಯಕಶಿಪುವಿನ ಅಂತಕ–ನರಸಿಂಹ

**ದಿತ್ಯ** ದಿತಿಯ ಮಗ (ರಾಕ್ಷಸ)

**ದಿನಕರ** ಸೂರ್ಯ

**ದಿನಕರಭವಪಾಲ** ಸೂರ್ಯವಂಶೋದ್ಧಾರಕ–ರಾಮ

**ದಿನಕರಸುತ** ಸೂರ್ಯಪುತ್ರನಾದ ಸುಗ್ರೀವ, ಕರ್ಣ, ಯಮ, ಶನೈಶ್ಚರ

**ದಿನಕರಾನ್ವಯ** ಸೂರ್ಯವಂಶ

**ದಿನಕರ್ವಂಶಜ** ರಾಮ

**ದಿನತುಂಬು** ಆಯಸ್ಸು ತುಂಬು, ಮರಣ ಸಮೀಪಿಸು; ಹೆರಿಗೆಯ ದಿನ ಸಮೀಪಿಸು

**ದಿನತ್ರಯ** ದಶಮಿ, ಏಕಾದಶಿ, ದ್ವಾದಶಿದಿನಗಳು

**ದಿನಪ** ಸೂರ್ಯ

**ದಿನಪಸುತ** ಸೂರ್ಯಪುತ್ರನಾದ ಸುಗ್ರೀವ, ಕರ್ಣ, ಯಮ, ಶನೈಶ್ಚರ

**ದಿನಮಣಿ** ಸೂರ್ಯ

**ದಿನಮಣಿಕುಲಜಾತ** ಸೂರ್ಯವಂಶದಲ್ಲಿ ಹುಟ್ಟಿದವ–ರಾಮ

**ದಿನರನ್ನ** ದಿನಮಣಿಯಾದ ಸೂರ್ಯ

**ದಿನರ್ವಂಶಜ** ಸೂರ್ಯವಂಶಜನಾದ ರಾಮ

**ದಿನಸಪ್ತಶತವರುಷ** ಏಳುನೂರು ವರುಷ

**ದಿನೇಶ** ಸೂರ್ಯ

**ದಿಬ್ಬಣ** ಮದುವೆಯ ಮೆರವಣಿಗೆ, ನಿಬ್ಬಣ

**ದಿಮ್ಮದಿರುಗ** ಅಪ್ಪಾಳೆ ತಿಪ್ಪಾಳೆ ಆಟ, ತಿರುಗುವವ

**ದಿಮ್ಮನೆ** ಬಲವಾಗಿ, ತಟ್ಟನೆ

**ದಿಮ್ಮಿಗ** ಬಲಿಷ್ಠ, ಶ್ರೇಷ್ಠ

**ದಿವ** ಸ್ವರ್ಗ, ಆಕಾಶ; ದಿನ, ಹಗಲು

**ದಿವ(ವಾ)ಕರ** ಸೂರ್ಯ

**ದಿವ(ವಾ)ರಾತ್ರಿ** ಹಗಲು ರಾತ್ರಿ

**ದಿವಪುರ** ವಿಷ್ಣುಲೋಕ, ದೇವಲೋಕ

**ದಿವಮಣಿ** ಸೂರ್ಯ

**ದಿವಸತರಂಗಿಣಿ** ದೇವನದಿ–ಗಂಗೆ

**ದಿವಸಬಿಡು** ಉಪವಾಸಮಾಡು

**ದಿವಸಾಂಧಪಕ್ಷಿ** ಗೂಗೆ, ಗೂಬೆ, ಉಲೂಕ

**ದಿವಸಾಧಿಪ, ದಿವಸಾಧಿಪತಿ** ಸೂರ್ಯ

**ದಿವಾಸಂಧಿ** ಸಂಜೆಯ ಸಮಯ, ಸಂಧ್ಯಾಕಾಲ

**ದಿವಿ** ಸ್ವರ್ಗ, ಆಕಾಶ

**ದಿವಿಜ** ದೇವತೆ, ಬ್ರಾಹ್ಮಣ, ಭಕ್ತ

**ದಿವಿಜತರಂಗಿಣಿ** ದೇವನದಿ–ಗಂಗೆ

**ದಿವಿಜದ್ರುಮ** ಕಲ್ಪವೃಕ್ಷ

**ದಿವಿಜಪ** ದೇವತೆಗಳನ್ನು ರಕ್ಷಿಸುವವ–ಶ್ರೀಹರಿ

Rarest Archiver

**ದಿವಿಜರೊಡೆಯ** ಇಂದ್ರ
**ದಿವಿಯ<ದಿವ್ಯ** ಶ್ರೇಷ್ಠವಾದುದು; ಪರೀಕ್ಷೆ
**ದಿವಿಷತ್‌ಪತಿ** ಇಂದ್ರ
**ದಿವೌಕಸ** ದೇವತೆ
**ದಿವ್ಯ** ಶ್ರೇಷ್ಠ, ಉತ್ತಮವಾದ; ಪರೀಕ್ಷೆ, ಅಪರಾಧ ನಿರ್ಣಯದಲ್ಲಿ ಮಾಡುವ ಉಗ್ರ ಪರೀಕ್ಷೆ; ತುಲಾ, ಅಗ್ನಿ, ಜಲ, ತಂಡುಲ, ತಪ್ತ, ಮಾಷ, ಫಾಲ ಮತ್ತು ಧರ್ಮಗಳೆಂಬ ಏಳು ಬಗೆಯ ದಿವ್ಯಗಳು
**ದಿವ್ಯಜನಗುರು** ಬೃಹಸ್ಪತಿ
**ದಿವ್ಯವ್ಯೋಮವನ್ನೇರು** ಅರ್ಚಿರಾದಿ ಮಾರ್ಗವನ್ನು ಹಿಡಿ
**ದಿವ್ಯಾಂಜನ** ಉತ್ತಮವಾದ ಕಾಡಿಗೆ, ಮಂತ್ರ ಶಕ್ತಿಯುಳ್ಳ ಕಾಡಿಗೆ
**ದಿಶಾವಳಿ** ದಿಕ್ಕುಗಳ ಸಮೂಹ
**ದಿಷ್ಟ್ಯಾ** ಮಂಗಳಕರ; ಅದೃಷ್ಟವಶಾತ್
**ದಿಷ್ಣ್ಯ** ಅಸುರರ ಗುರು-ಶುಕ್ರಾಚಾರ್ಯ
**ದೀಕ್ಷಾಚಾರ್ಯ** ರಾಮ
**ದೀಕ್ಷೆ** ಸಂಸ್ಕಾರ
**ದೀಧಿತಿ** ಕಾಂತಿ
**ದೀನ** ನಮ್ರ, ಬಡವ
**ದೀಪನ** ಉತ್ತೇಜಕ, ಹೆಚ್ಚು
**ದೀಪ್ತ** ಪ್ರಕಾಶಉಳ್ಳ, ಕಾಂತಿಯಿಂದ ಕೂಡಿದ
**ದೀಪ್ತಿ** ಬೆಳಕು, ಕಾಂತಿ, ರಶ್ಮಿ, ಕಿರಣ
**ದೀಪ್ತಿಸು** ಪ್ರಕಾಶಿಸು
**ದೀವಟಿಗೆ** ದೀಪ, ಕಕ್ಕಟಿಗೆ, ಪಂಜು
**ದುಂಡಿ** ತುಂಬು ಮೈಯವಳು
**ದುಂಡುನಾಯಿ** ಸ್ವೇಚ್ಛಾವೃತ್ತಿಯನಾಯಿ
**ದುಂದುಭಿ** ಒಂದುವಾದ್ಯ, ನಗಾರಿ; ಅರವತ್ತು ಸಂವತ್ಸರಗಳಲ್ಲಿ ಒಂದು
**ದುಂಬಲಬೀಳು< ದುಂಬಾಲು** ಬೆನ್ನುಹತ್ತು, ಹಿಂಬಾಲಿಸು, ಯಾಚಿಸು, ಬೇಡು
**ದುಃಖಗಳೆಂಬುಳ್ಳಿ** ದುಃಖಗಳೆಂಬ ಪಾಶ, ಉರುಳು
**ದುಕಾನಿ** ಅಂಗಡಿ
**ದುಕೂಲ** ರೇಷ್ಮೆಬಟ್ಟೆ, ಬಟ್ಟೆ, ಸೀರೆ
**ದುಕೂಲಚೋರ** ಕೃಷ್ಣ
**ದುಕ್ಕ(<ದುಃಖ)** ಅಳಲು, ಕಷ್ಟ
**ದುಗುಡ** ತೊಂದರೆ, ದುಃಖ
**ದುಗುಡಿ** ದು:ಖ ಉಳ್ಳವ
**ದುಗುಲ** ದುಕೂಲ, ಬಟ್ಟೆ
**ದುಗ್ಗಾಣಿ** ಎರಡು ಕಾಣಿ, ಕಡಿಮೆ ಬೆಲೆಯ ಒಂದು ತಾಮ್ರದ ನಾಣ್ಯ; ಅಪ್ರಯೋಜಕ
**ದುಗ್ಧ** ಹಾಲು
**ದುಗ್ಧವಾರಿಧಿ, ದುಗ್ಧನಿಧಿ** ಕ್ಷೀರಸಾಗರ, ಹಾಲಿನ ಸಮುದ್ರ
**ದುಗ್ಧಾಬ್ಧಿ** ಹಾಲಿನ ಸಮುದ್ರ
**ದುಗ್ಧಾಬ್ಧಿಜಾತ** ಚಂದ್ರ
**ದುಡಿಗೇಡಿ** ಕೆಲಸ ಮಾಡದವನು, ಶ್ರಮ ಪಡದವನು, ಸೋಮಾರಿ
**ದುಡುಕು** ಮುಂದಾಲೋಚನೆ ಇಲ್ಲದೆ ನುಗ್ಗು, ಆತುರದಿಂದ ಕೂಡಿರುವಿಕೆ, ಗಡಿಬಿಡಿ
**ದುಪ್ಪ, ದುಪ್ಪಿ** ಮೈಮೇಲ ಚುಕ್ಕೆಗಳಿರುವ ಜಿಂಕೆ, ಗಂಡು ಜಿಂಕೆ
**ದುಬುಕು** ಏಟು ಹೊಡೆದಾಗ ಬರುವ ಶಬ್ದ, ಗುದ್ದಿನ ಶಬ್ದ, ಅನುಕರಣ ಶಬ್ದ
**ದುಮ್ಮಾನ** ದುಗುಡ, ದುಃಖ
**ದುಮ್ಮು** ಧೂಳು
**ದುರ<ಧುರ** ಯುದ್ಧ, ಕಾಳಗ
**ದುರಂಧರ** ಶೂರ, ಪರಾಕ್ರಮಿ
**ದುರಾಲೋಕ** ನೋಡಲು ಅಸಾಧ್ಯ
**ದುರಿತ** ಪಾಪ, ಕಷ್ಟ; ಅಮಂಗಲ, ಕೇಡು
**ದುರಿತಕಣ(ನ)ಜ** ಪಾಪವೆಂಬ ಕಣಜ, ಪಾಪಗಳಿಂದ ತುಂಬಿದ ಕಣಜ

Rarest Archiver

**ದುರಿತಗಜ** ಪಾಪವೆಂಬ ಆನೆ
**ದುರಿತರೂಪ** ಮೂರ್ತಿವೆತ್ತ ಪಾಪ
**ದುರಿತವಿಧ್ವಂಸಿನೀ** ಪಾಪಗಳನ್ನು ನಾಶ ಮಾಡುವವಳು–ಲಕ್ಷ್ಮಿ
**ದುರಿತಾಗ್ನಿಗಂಬು** ಪಾಪದ ಬೆಂಕಿಗೆ ನೀರು
**ದುರಿತಾನಳ** ಕೆಟ್ಟ ಬೆಂಕಿ, ಪಾಪವೆಂಬ ಅಗ್ನಿ
**ದುರಿತಾಬ್ಧಿ** ಪಾಪವೆಂಬ ಸಮುದ್ರ
**ದುರಿತಾರಿ** ಪಾಪಗಳ ಶತ್ರು (ಭಗವಂತ)
**ದುರಿತೌಘ** ಪಾಪ ಸಮೂಹ
**ದುರುಪತಿ**<ದ್ರೌಪದಿ ಪಾಂಡವರ ಪತ್ನಿ
**ದುರುಳ** ಕೆಟ್ಟವನು, ದುಷ್ಟ, ನೀಚ
**ದುರ್ಗ** ಕೋಟೆ
**ದುರ್ಗಮ** ಪ್ರವೇಶಿಸಲಾಗದ, ಕಷ್ಟತರವಾದ
**ದುರ್ಗಾರಮಣ** ವಿಷ್ಣು, ನರಸಿಂಹ
**ದುರ್ಜನ** ಕೆಟ್ಟಜನ, ಪಾಪದಿಂದ ಹುಟ್ಟುವವ
**ದುರ್ಜನಾಂತಕ** ದುಷ್ಟರಿಗೆ ಯಮನಾದವನು–ವಿಷ್ಣು
**ದುರ್ಜಯ** ಜಯಿಸಲಶಕ್ಯನಾದವ; ದುರ್ಯೋಧನನ ತಮ್ಮ
**ದುರ್ಧರ** ತಾಳಲು ಅಸಾಧ್ಯವಾದ, ಕಠಿನವಾದ, ನರಕಭಾಜನ
**ದುರ್ಧರ್ಷ** ಎದುರಿಸಲಾಗದ, ಕೊಬ್ಬಿದ, ಸೊಕ್ಕಿನಿಂದ ಕೂಡಿದ
**ದುರ್ನಯ** ಅಧರ್ಮ, ನಯವಿಲ್ಲದ್ದು
**ದುರ್ಭಾವ** ಗರಿಕೆ; ಕೆಟ್ಟ ಯೋಚನೆ
**ದುರ್ಮನ** ಕೆಟ್ಟಮನಸ್ಸು
**ದುರ್ಮಾಯಯುಕ್ತಿ** ಕುತರ್ಕ, ಹುಸಿ ವೇದಾಂತ, ದುಷ್ಟತನದ ಉಪಾಯಗಳು
**ದುರ್ಮೇಧ** ಯಾಗಧ್ವಂಸ
**ದುರ್ಯೋನಿ** ದುಷ್ಟಜನ್ಮ
**ದುರ್ಲೇಖ** ಕೆಟ್ಟ ಹಣೆಬರಹ
**ದುರ್ವಳ** ಪರಮಪಾಪಿ
**ದುರ್ವಾದಿ** ಕೆಟ್ಟವಾದ ಮಾಡುವವನು, ವಿತಂಡವಾದಿ
**ದುರ್ವಾದಿಮತತಿಮಿರ** ಶಾಸ್ತ್ರ ವಿರುದ್ಧವಾದ ಮತಾಂಧಕಾರಕ್ಕೆ ಸೂರ್ಯನಂತಿರುವವನು
**ದುರ್ವಾರ** ದುರ್ಭರ, ಕೆಟ್ಟ ಹೊರೆ
**ದುರ್ವಿನೀತ** ವಿನಯವಿಲ್ಲದವನು
**ದುರ್ವೃತ್ತಿ** ಕೆಟ್ಟ ವರ್ತನೆ
**ದುಶ್ಚ್ಯವನ** ಇಂದ್ರ
**ದುಶ್ಶೀಲ** ಶೀಲಗೆಟ್ಟವ: ಕೆಟ್ಟ ರೀತಿ, ದುರಾಲೋಚನೆ
**ದುಷ್ಪೃತ** ಗರುಡ
**ದುಷ್ಕರ್ಮ** ಕೆಟ್ಟಕಾರ್ಯ, ಪಾಪದ ಕೆಲಸ
**ದುಷ್ಕಾಲ** ಕೆಟ್ಟಕಾಲ
**ದುಷ್ಕೃತ** ಕೆಟ್ಟಕೆಲಸ, ಪಾಪ
**ದುಷ್ಟಜನಮರ್ದನ** ವಿಷ್ಣು
**ದುಷ್ಟಜನಾರ್ದಕ** ದುಷ್ಟಜನರನ್ನು ನಾಶ ಮಾಡುವವನು, ಕತ್ತರಿಸುವವನು–ವಿಷ್ಣು
**ದುಸುಮಾನ**<**ದುಷ್ಮನ್** ವೈರಿ, ಶತ್ರು; ಕೆಟ್ಟವ
**ದುಸ್ತರ** ದಾಟಲಶಕ್ಯವಾದ, ಸಹಿಸಲಾಗದ
**ದುಸ್ತರ್ಕ** ಕೆಟ್ಟ ವಿಚಾರ, ದುರ್ವಾದ
**ದುಸ್ತ್ಯಜ** ಬಿಡಲಾರದ
**ದುಸ್ಸಂಗ** ದುಷ್ಟರ ಸಂಗ, ನೀಚರ ಸಹವಾಸ
**ದುಹಿತೃ** ಮಗಳು; ಹಾಲು ಮಾರುವವಳು
**ದೂಡು** ನೂಕು; ಕಡೆಗಾಣಿಸು
**ದೂರಕನಮಾಡು** ದೂರವಿರಿಸು
**ದೂರಿಕೊ** ನಿಂದಿಸು, ಚಾಡಿ ಹೇಳು
**ದೂರಿಸು** ದೂರಮಾಡು, ನಿಂದಿಸು; ವ್ಯಥೆಪಡು
**ದೂರು** ನಿಂದೆ, ಅಪವಾದ ಹೊರಿಸು
**ದೂರುತಲೈದಾರೆ** ಆಪಾದನೆ ಮಾಡುತ್ತಿದ್ದಾರೆ
**ದೂರ್ವಾಂಕುರ** ಎಳೆಯ ಗರಿಕೆ ಹುಲ್ಲು
**ದೂರ್ವಾಸ** ಅತ್ರಿಯಮಗ, ಕುಂತಿಗೆ ಬಾಲ್ಯದಲ್ಲಿ ಮಂತ್ರಗಳನ್ನು ಉಪದೇಶಿಸಿದವನು, ರುದ್ರನ ಅವತಾರ ರೂಪ

Rarest Archiver

**ದೂರ್ವೆ** ಗರಿಕೆ

**ದೂವಾಳಿ<ದುವ್ವಾಳಿ** ಬೇಗ ಓಡುವಿಕೆ, ನಾಗಾಲೋಟ

**ದೂಷಣ** ಬೈಗಳು, ನಿಂದನೆ

**ದೂಸ** ಒಂದು ಬಗೆಯ ಬಟ್ಟೆ; ಗೂಡಾರ, ಡೇರೆ

**ದೃಕು(ಗು)ಯುಗ** ದೃಷ್ಟಿದ್ವಯ, ಎರಡು ಕಣ್ಣು

**ದೃಕ್ಕು, ದೃಗ್, ದೃಗು** ದೃಷ್ಟಿ, ಕಣ್ಣು

**ದೃಗ್ಬಾಷ್ಪ** ಆನಂದಾಶ್ರು

**ದೃಪದನಂದನೆ** ದ್ರುಪದನ ಮಗಳು–ದ್ರೌಪದಿ

**ದೃಪ್ತ<ದೃಪ್ಯತ್** ಸೊಕ್ಕು, ಹಮ್ಮು

**ದೃಷ್ಟ** ನೋಡಿದ, ಪರಿಶೀಲಿಸಿದ, ಅನುಭವಕ್ಕೆ ಬಂದ

**ದೃಷ್ಟಾಂತ** ಕಂಡದ್ದು; ಉದಾಹರಣೆ, ನಿದರ್ಶನ

**ದೃಷ್ಟಾದೃಷ್ಟ** ಕಂಡದ್ದು ಕಾಣದ್ದು, ಯೋಗ್ಯತಾನುಸಾರ ಕಾಣುವ, ತೋರಿ ತೋರದೆ ಇರುವ

**ದೃಷ್ಟಿನೀರು** ಕಣ್ಣೀರು

**ದೃಹಿಣಪಿತ** ಬ್ರಹ್ಮನ ತಂದೆ–ವಿಷ್ಣು

**ದೃಹಿಣಿ** ಬ್ರಹ್ಮ, ಶಿವ

**ದೆಶೆ** ಸ್ಥಿತಿ, ಅವಸ್ಥೆ, ದಿಕ್ಕು

**ದೆಶೆಗೇಡು** ಕಂಗೆಡು

**ದೆಸೆ** ದಿಕ್ಕು, ಅವಸ್ಥೆ, ಸ್ಥಿತಿ; ಅದೃಷ್ಟ, ಭಾಗ್ಯ

**ದೇ** ಕೊಡು

**ದೇಣಿದಾರ** ಹಣ ಕೊಟ್ಟವನು

**ದೇದೀಪ್ಯ** ಪ್ರಕಾಶಮಾನ

**ದೇವಕೀಜ, ದೇವಕೀಪೋತ, ದೇವಕೇಯ** ಕೃಷ್ಣ

**ದೇವಖಾತ** ದೇವತೆಗಳು ಸ್ನಾನಪಾನಾದಿಗೈಯುವ ಪುಷ್ಕರಿಣಿ, ಸ್ವಾಮಿ ಪುಷ್ಕರಿಣಿ

**ದೇವಗುರು** ಬೃಹಸ್ಪತಿ

**ದೇವತಟ(ಟ)ನಿ** ದೇವನದಿ, ಗಂಗೆ

**ದೇವತರು** ಕಲ್ಪವೃಕ್ಷ

**ದೇವತ್ರ** ದೇವತೆಗಳನ್ನು ರಕ್ಷಿಸುವವ

**ದೇವದೇವೋತ್ತಮ** ವಿಷ್ಣು

**ದೇವಮಾತೆ** ಅದಿತೀದೇವಿ

**ದೇವಮುಖ(ಖಿ)** ದೇವತೆಗಳ ಮುಖ–ಅಗ್ನಿ

**ದೇವರಾಜ** ಇಂದ್ರ

**ದೇವರಾಟ್** ದೇವೇಶ

**ದೇವಲ** ಒಬ್ಬ ವೇದಮಂತ್ರಕಾರ ಮತ್ತು ಪ್ರವರಕಾರ –ಇವನಿಗೆ ಅಸಿತನೆಂಬ ಇನ್ನೊಂದು ಹೆಸರಿದೆ; ಒಬ್ಬ ಋಷಿ

**ದೇವವ್ರತ** ಭೀಷ್ಮ

**ದೇವಶರ್ಮ** ವಾಯುದೇವರ ಶಿಷ್ಯ–ಶ್ರೀನಿವಾಸ ಭಕ್ತ

**ದೇವಶಿಖಾಮಣಿ** ದೇವತಾ ಸಾರ್ವಭೌಮ–ವಿಷ್ಣು

**ದೇವಹೂತಿ** ಕಪಿಲದೇವನ ತಾಯಿ

**ದೇವಹೂತಿಜಜ** ದತ್ತಾತ್ರೇಯ

**ದೇವಾಂಗ, ದೇವಾಂಗವಸ್ತ್ರ** ರೇಷ್ಮೆಬಟ್ಟೆ, ಮಡಿಬಟ್ಟೆ

**ದೇವಾಂಗನೆ** ದೇವತಾಸ್ತ್ರೀ (ವೇದವತಿ ಎಂಬ ದೇವಕನ್ನಿಕೆ)

**ದೇವಾಲ್ಯ<ದೇವಾಲಯ** ದೇವರಗುಡಿ

**ದೇವೇಂದ್ರನ ತಲೆಗೆ ತಂದವ** ನಾರದ

**ದೇವೋತ್ತುಂಗ** ದೇವ ಶ್ರೇಷ್ಠ

**ದೇಶಕಾಲಗುಣಾತೀತ** ಎಲ್ಲವನ್ನೂ ಮೀರಿದವನು –ವಿಷ್ಣು

**ದೇಶಕೆಂಪಾಗು** ಸೂರ್ಯೋದಯವಾಗು

**ದೇಶಿಕ** ಆಚಾರ್ಯ, ಗುರು

**ದೇಶಿಗ** ಪ್ರಯಾಣಿಕ, ಪರದೇಸಿ

**ದೇಸಿಕೆ** ದಿಕ್ಕಿಲ್ಲದವ

**ದೇಹ ದೊರೆತನ** ಇಂದ್ರಿಯಗಳ ಮೇಲೆ ಒಡೆತನ

**ದೇಹನಾಯಕದೇವರು** ಮುಖ್ಯಪ್ರಾಣ

**ದೇಹಪುರ** ದೇಹವೆಂಬ ಪಟ್ಟಣ

**ದೇಹವಿದೇಹ** ಜೀವನ್ಮುಕ್ತನ ಸ್ಥಿತಿ

**ದೇಹಿ** ಕೊಡು ಎಂದು ಕೇಳು, ಯಾಚಿಸು; ಕೊಡು; ಜೀವ, ದೇಹದಲ್ಲಿರುವವ

Rarest Archiver

**ದೇಹಿ ಮೇ ಭದ್ರಂ** ಶ್ರೇಯಸ್ಸನ್ನು ಕೊಡು, ಮಂಗಳವನ್ನು ಕೊಡು
**ದೇಹಿಕ** ಬೇಡುವವ
**ದೈತೇಯ, ದೈತ್ಯ** ರಾಕ್ಷಸ
**ದೈತ್ಯಕುಲಸಂಹಾರ** ವಿಷ್ಣು
**ದೈತ್ಯಮರ್ದನ** ರಾಕ್ಷಸ ಸಂಹಾರಿ–ವಿಷ್ಣು
**ದೈತ್ಯರಾಟ್ ಸೂನು** ದೈತ್ಯಶ್ರೇಷ್ಠನ ಮಗ(ಪ್ರಹ್ಲಾದ)
**ದೈತ್ಯವಿದಾರಣ, ದೈತ್ಯವಿರಾಮ** ರಾಕ್ಷಸ ಸಂಹಾರಕ, ನರಸಿಂಹ
**ದೈತ್ಯಾರಣ್ಯ** ದೊಡ್ಡ ಕಾಡು, ವಿಸ್ತೃತ ಸಾಂದ್ರಕಾಡು
**ದೈತ್ಯೇಂದ್ರ** ದೈತ್ಯರ ಒಡೆಯ
**ದೈವಜ್ಞ** ದೇವರ ಜ್ಞಾನ ಪಡೆದವ; ಭವಿಷ್ಯ ಹೇಳುವವ, ಜ್ಯೋತಿಷಿ
**ದೈವರಿಪು** ದೈವವೈರಿ–ರಾಕ್ಷಸ
**ದೊಂಗಲ<ತೊಂಗಲು** ಗುಡ್ಡದಂತೆ ಮೇಲೆತ್ತಿ ಕಟ್ಟಿದ ಕೂದಲು
**ದೊಂದೆ** ಕಂತೆ, ಕಟ್ಟು; ಪಂಜು
**ದೊಂಬಿ** ಕ್ಷುದ್ರ; ಗೌಜು, ಗದ್ದಲ
**ದೊಡ್ಡಬೆಟ್ಟದಹೆಣ್ಣು** ಹಿಮಗಿರಿಯ ಮಗಳು–ಪಾರ್ವತಿ
**ದೊಡ್ಡಿ** ದನಗಳನ್ನು ಕೂಡುವ ಜಾಗ, ತುರುಮಂಡಿ
**ದೊಡ್ಡಿಗೋವು** ಕೊಟ್ಟಿಗೆಯ ದನ
**ದೊಡ್ಡಿಲಕಾಯಿ, ದೊಡ್ಡಿಳೇಕಾಯಿ** ಕಂಚಿಕಾಯಿ, ಹೇರಳೆಕಾಯಿ
**ದೊತ್ತಳದುಳಿ< ತೊತ್ತಳದುಳಿ** ನಜ್ಜುಗುಜ್ಜಾಗುವಂತೆ ತುಳಿ
**ದೊಮ್ಮೆಗಾರ** ಸಂಭ್ರಮದಿಂದ ಸುತ್ತಾಡುವವನು, ಗಾಬರಿ ಪಡಿಸುವವನು; ಮೋಸಗಾರ
**ದೊರೆಕೊಳ್ಳು** ಪ್ರಾಪ್ತವಾಗು, ಸಿಗು
**ದೋಟಿ** ತುದಿಗೆ ಕುಡುಗೋಲು ಕಟ್ಟಿ ಕಾಯಿ ಹಣ್ಣು ಎಲೆ ಕೀಳಲು ಬಳಸುವ ಜಲ್ಲೆ, ಗಳು
**ದೋರ<ದ್ವಾರ** ಬಾಗಿಲು, ಪೂರ್ಣಹಣ್ಣಾಗದ
**ದೋರಬಂಧನ** ವ್ರತಾದಿಗಳಲ್ಲಿ ಕೈಗೆ ಕಟ್ಟಿಕೊಳ್ಳುವ ದಾರ, ಕಂಕಣ
**ದೋರೆ** ಅರ್ಧ ಮಾಗಿದ, ಹಣ್ಣಾಗಲು ಬಂದ
**ದೋರೆತಿಂತ್ರಿಣಿ** ಹುಣಸೆಯ ದೋರೆಗಾಯಿ
**ದೋರ್ದಂಡ** ತೋಳು
**ದೋರ್ಧೃತಪಾಶದಂಡ** ತೋಳುಗಳಲ್ಲಿ ಹಗ್ಗ ಮತ್ತು ಕಡೆಗೋಲು ಹಿಡಿದುಕೊಂಡವನು–ಉಡುಪಿ ಕೃಷ್ಣ
**ದೋಷಕರಿಪುಕಾಲನಾಶಕ** ದುರ್ಗುಣಗಳೆಂಬ ಶತ್ರುಗಳ ಕುಲವನ್ನು ನಾಶಮಾಡತಕ್ಕವ–ಭೀಮ
**ದೋಷವಿದಾರ** ದೋಷಗಳನ್ನು ನಿವಾರಿಸುವ
**ದೋಷಾದ್ರಿ** ಪಾಪಗಳ ಬೆಟ್ಟ
**ದೋಹ** ಹಾಲನ್ನು ಕರೆಯುವುದು, ಹಾಲು
**ದೌತ್ಯ** ದೂತನ ಕೆಲಸ
**ದೌಶ್ಯಂತಿ** ದುಶ್ಯಂತ ಶಕುಂತಲೆಯರ ಪುತ್ರ ಭರತ, ಇವನಿಂದಲೇ ಭರತದೇಶ ಎಂದು ಹೆಸರು ಬಂದದ್ದು
**ದೌಹಿತ್ರ** ಮಗಳ ಮಗ
**ದ್ಯಾವರು<ದೇವರು** ಭಗವಂತ, ಪರಮಾತ್ಮ
**ದ್ಯು** ಸ್ವರ್ಗ; ದ್ಯುನಾಮಕವಸು–ಭೀಷ್ಮ
**ದ್ಯುಗ** ದೇವತೆ
**ದ್ಯುಣುಕ** ಜಪಮಾಲೆ
**ದ್ಯುತಿ** ಕಾಂತಿ
**ದ್ಯುಧರಾ** ಆಕಾಶ, ಭೂಮಿ
**ದ್ಯುಧವ** ದ್ಯುನಾಮಕಳಾದ ಭಾರತಿಯ ಪತಿ–ಮುಖ್ಯಪ್ರಾಣ
**ದ್ಯುನದಿ** ದೇವನದಿ, ಗಂಗಾನದಿ
**ದ್ಯುನಾಥ** ದೇವತೆಗಳ ಒಡೆಯ–ಇಂದ್ರ; ಸೂರ್ಯ
**ದ್ಯುಮಣಿ** ಸೂರ್ಯ, ಆಕಾಶ ಮಂಡಲ
**ದ್ಯೂತ** ಜೂಜು, ಪಗಡೆಯಾಟ, ಲೆತ್ತ
**ದ್ರವಗುಂದು** ಬತ್ತು, ಒಣಗು, ಬಾಷ್ಪಹೀನವಾಗು
**ದ್ರವಣ** ಹರಿಯುವಿಕೆ; ಪ್ರವೇಶಿಸುವಿಕೆ

Rarest Archiver

**ದ್ರವಿಣ**<ದ್ರವ್ಯ ಧನಕನಕಾದಿ ಸಂಪತ್ತು

**ದ್ರವಿಣಾರ್ಥ** ಸಂಪತ್ತು, ಪುರುಷಾರ್ಥ

**ದ್ರವ್ಯಪೂತಿ** ಸರ್ವ ಪದಾರ್ಥಗಳ ಒಳಗೆ ಹೊರಗೆ ವ್ಯಾಪ್ತನಾದವನು–ಶ್ರೀಹರಿ

**ದ್ರವ್ಯಭ್ರುದ** ನನ್ನದೆಂಬ ಭ್ರಮೆ, ನಾನು ಸಿರಿವಂತ ನೆಂಬ ಅಹಂಕಾರ–ಭ್ರಾಂತಿ

**ದ್ರಷ್ಟಾರ** ಆತ್ಮತತ್ತ್ವವನ್ನು ಕಂಡುಕೊಂಡವನು, ಋಷಿ, ಕವಿ, ಕ್ರಾಂತದರ್ಶಿ

**ದ್ರಾವಿಡವೇದ** ಶ್ರೀವೈಷ್ಣವ ಆಳ್ವಾರರ ಹಾಡುಗಳು

**ದ್ರುಂಕಿಣ** ಬ್ರಹ್ಮ, ಶಿವ

**ದ್ರುಪದಜೆ** ದ್ರೌಪದಿ

**ದ್ರುಮ** ವೃಕ್ಷ, ಗಿಡ, ಮರ

**ದ್ರುಹಿಣ** ಬ್ರಹ್ಮ, ಶಿವ

**ದ್ರುಹಿಣಾಂಡ** ಬ್ರಹ್ಮಾಂಡ

**ದ್ರೋಣಗಿರಿ** ಸಂಜೀವಿನಿ ಪರ್ವತ, ಇಲ್ಲಿಂದ ಹನುಮಂತನು ಸಂಜೀವಿನಿಯನ್ನು ತಂದನು

**ದ್ರೋಣಿ** ಅಶ್ವತ್ಥಾಮ; ಕಣಿವೆ, ಗುಹೆ; ದೋಣಿ; ದೊನ್ನೆ

**ದ್ರೌಣಿ** ಅಶ್ವತ್ಥಾಮ

**ದ್ವಂಗುಳ** ಎರಡು ಅಂಗುಲ

**ದ್ವಂದ್ವ** ತದ್ವಿರುದ್ಧ; ಜೋಡಿ; ಕಲಹ; ಸಂಶಯ, ಚಂಚಲಮನ

**ದ್ವಂದ್ವರೂಪ** ನರ ಮತ್ತು ಸಿಂಹರೂಪ–ನರಸಿಂಹ

**ದ್ವಂದ್ವೌಘ** ಸುಖದುಃಖ ಮುಂತಾದ ದ್ವಂದ್ವಗಳ ಜಾಲ

**ದ್ವಯ** ಎರಡು

**ದ್ವಯಸಾಕ್ಷಿ** "ನನ್ನ ಭಕ್ತರು ಹಾಳಾಗುವುದಿಲ್ಲ" ಮತ್ತು "ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುತ್ತೇನೆ" ಎಂಬ ಭಗವಂತನೇ ಕೊಟ್ಟಿರುವ ಎರಡು ಆಶ್ವಾಸನೆಗಳು

**ದ್ವಾತ್ರಿಂಶ, ದ್ವಾತ್ರಿಂಶತಿ** ಮೂವತ್ತೆರಡು

**ದ್ವಾತ್ರಿಂಶಲ್ಲಕ್ಷಣ, ದ್ವಾತ್ರಿಂಶಲ್ಲಕ್ಷ** 32 ಲಕ್ಷಣಗಳು: 1–5:-- ಭುಜಗಳು, ಕಣ್ಣುಗಳು, ಗಲ್ಲ, ಮೊಣಕಾಲುಗಳು ಮತ್ತು ಉಗುರುಗಳು, ಈ ಐದು ದೀರ್ಘ(ಉದ್ದ)ವಾಗಿರಬೇಕು; 6–10:– ಚರ್ಮ, ಕೇಶ, ಹಲ್ಲು, ಬೆರಳು ಮತ್ತು ಬೆರಳುಗಂಟುಗಳು, ಈ ಐದು ಸೂಕ್ಷ್ಮವಾಗಿರಬೇಕು (ದಪ್ಪಗಿರಬಾರದು); 11–17:– ಅಂಗೈ, ಅಂಗಾಲು, ಕಣ್ಣುತುದಿ, ತಾಲು(ಕಿರುನಾಲಿಗೆ), ತುಟಿ ಹಾಗು ಉಗುರು, ಈ ಏಳು ಕೆಂಪಾಗಿರಬೇಕು; 18–23:– ಎದೆ, ಹೊಟ್ಟೆ, ಹಣೆ, ಭುಜ, ಹಸ್ತ ಮತ್ತು ಮುಖ, ಇವು ಉನ್ನತವಾಗಿರಬೇಕು; 24–26:– ಹಣೆ, ಸೊಂಟ, ಎದೆ, ಈ ಮೂರು ವಿಶಾಲವಾಗಿರಬೇಕು; 27–29:– ಜಂಘೆ(ಕೆಳತೊಡೆ), ಕತ್ತು ಮತ್ತು ಲಿಂಗ ಇವು ಗಿಡ್ಡವಾಗಿರಬೇಕು; 30–32:– ಸ್ವರ, ಸತ್ವ ಹಾಗು ನಾಭಿ ಇವು ಗಂಭೀರವಾಗಿರಬೇಕು

**ದ್ವಾದಶನಾದ** ಯೋಗಿಗಳು ಆಂತರಿಕವಾಗಿ ಆಲಿಸುವ ಹನ್ನೆರಡು ನಾದಗಳು (ಹತ್ತೆಂಬುದಾಗಿ ಸಾಮಾನ್ಯ ಕಲ್ಪನೆ)

**ದ್ವಾದಶನಾಮ** ಹನ್ನೆರಡು ನಾಮಗಳು: ಹೊಟ್ಟೆಯ ಮೇಲೆ ಮೂರು, ಎದೆಯಮೇಲೆ ಒಂದು, ಬಲಮೊಲೆಯ ಮೇಲೆ ಒಂದು, ರಟ್ಟೆಯ ಮೇಲೆ ಎರಡು, ಬೆನ್ನುಹುರಿಯ ಮೇಲೆ ಒಂದು, ಕೊರಳಿಗೆ ಮೂರು, ಹಣೆಯಮೇಲೆ ಒಂದು

**ದ್ವಾದಶಮೂರ್ತಿ** ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಕೃಷ್ಣ

**ದ್ವಾಪರ** ಶಕುನಿ; ದಾಳದ ಒಂದು ಪಕ್ಕ; ಶಂಕೆ, ಸಂದೇಹ; ನಾಲ್ಕು ಯುಗಗಳಲ್ಲಿ ಮೂರನೇಯದು

**ದ್ವಾರಪಾಲಕ** ಬಾಗಿಲು ಕಾಯುವವ, ಪ್ರತಿಹಾರಿ

Rarest Archive

**ದ್ವಾರವೊಂಬತ್ತು** ದೇಹದ ನವರಂಧ್ರ
**ದ್ವಾರಾವತಿ** ದ್ವಾರಕಾಪುರ(ಪಟ್ಟಣ)
**ದ್ವಾರಾವತಿಯದೊರೆ** ದ್ವಾರಕಾಪಟ್ಟಣದ ರಾಜ–ಕೃಷ್ಣ
**ದ್ವಾವಿಕ** ಕರಗುವುದು
**ದ್ವಾಸಪ್ತತಿಸಹಸ್ರ** ಎಪ್ಪತ್ತೆರಡು ಸಾವಿರ
**ದ್ವಿ** ಎರಡು
**ದ್ವಿಜ** ಬ್ರಹ್ಮಜ್ಞಾನಿ, ಬ್ರಾಹ್ಮಣ, ಎರಡನೆಯ ಬಾರಿ ಜನಿಸಿದವ (ಉಪನೀತ); ಪಕ್ಷಿ, ಗರುಡ; ನಕ್ಷತ್ರ
**ದ್ವಿಜಂಗ** ಸರ್ಪ
**ದ್ವಿಜಗಣ** ಹಕ್ಕಿಗಳ ಹಿಂಡು
**ದ್ವಿಜಗಾಮಿನಿ** ಹಂಸಗಾಮಿನಿ–ಸರಸ್ವತಿ
**ದ್ವಿಜಗ್ರಹ** ಗುರುಗ್ರಹ; ಬ್ರಹ್ಮರಾಕ್ಷಸ
**ದ್ವಿಜಧ್ವಜ** ಗರುಡಧ್ವಜನಾದ ಶ್ರೀಹರಿ
**ದ್ವಿಜನಾಥ** ಗರುಡ, ಚಂದ್ರ
**ದ್ವಿಜಪತಿ, ದ್ವಿಜರಾಜ** ಚಂದ್ರ, ಗರುಡ
**ದ್ವಿಜಪತಿಸ್ಯಂದನ** ಗರುಡನನ್ನು ವಾಹನವನ್ನಾಗಿ ಮಾಡಿಕೊಂಡವನು–ಶ್ರೀಹರಿ
**ದ್ವಿಜಫಣಿಪಮೃಡೇಶ** ವಿಷ್ಣು
**ದ್ವಿಜರಾಜಧ್ವಜ** ಗರುಡಧ್ವಜ–ಶ್ರೀಹರಿ
**ದ್ವಿಜರಾಜವದನೆ** ಚಂದ್ರವದನೆ
**ದ್ವಿಜಾರೂಢ** ಗರುಡವಾಹನ–ಶ್ರೀಹರಿ
**ದ್ವಿಜಾವಳಿ** ಪಕ್ಷಿಗಳ ಸಮೂಹ, ಚಂದ್ರನ ಕಿರಣಗಳು
**ದ್ವಿತಯ** ದ್ವಂದ್ವ, ಜೋಡಿ
**ದ್ವಿತೀಯಅವತಾರ** ಭೀಮಸೇನಾವತಾರ
**ದ್ವಿತೀಯಕುಲ** ಕ್ಷತ್ರಿಯಕುಲ
**ದ್ವಿತೀಯೇಶ** ಎರಡನೆಯ ದೇವರು, ಇಂದ್ರ
**ದ್ವಿತ್ವ** ಎರಡು ಬಗೆ
**ದ್ವಿತ್ವವಿಲ್ಲದಸುಖ** ಹುಟ್ಟು ಸಾವಿಲ್ಲದ ಸುಖ–ಮೋಕ್ಷ
**ದ್ವಿದಳ** ಎರಡು ಎಲೆ (ದಳ) ಉಳ್ಳದು; ಎರಡು ಸೈನ್ಯಗಳು
**ದ್ವಿಧಾಭಾವ** ದ್ವಂದ್ವ ಭಾವ, ಆತ್ಮ ಪರಮಾತ್ಮರೆಂಬ ಭೇದ
**ದ್ವಿಪ** ಆನೆ
**ದ್ವಿಪಂಚಶಿರ** ದಶಮುಖನಾದ ರಾವಣ
**ದ್ವಿಪಂಚೇಂದ್ರಿಯಗಳು** ದಶೇಂದ್ರಿಯಗಳು
**ದ್ವಿಪತುಂಡ** ಗಣಪತಿ, (ಆನೆಯಸೊಂಡಿಲಿನವ)
**ದ್ವಿಪದಿ** ಇಂದ್ರ, ಕಾಮ; ಎರಡು ಕಾಲುಳ್ಳದ್ದು
**ದ್ವಿಪವರ** ಗಜರಾಜ
**ದ್ವಿರದ** ಆನೆ
**ದ್ವಿರೇಫ** ಭ್ರಮರ, ದುಂಬಿ
**ದ್ವಿವಿಧ** ಎರಡು ರೀತಿ, ಎರಡು ಬಗೆ
**ದ್ವಿಷೋಡಶ** 2 x 16 =32
**ದ್ವಿಸಾಸಿರಾಂಬಕ** ಎರಡು ಸಾವಿರ ಕಣ್ಣುಳ್ಳವ–ಆದಿಶೇಷ
**ದ್ವೈಪಾಂಯನ** ದ್ವೀಪದಲ್ಲಿ ಜನಿಸಿದವ, ವೇದವ್ಯಾಸದೇವರು
**ದ್ವ್ಯಂಗುಳ** ಎರಡು ಬೆಟ್ಟ
**ದ್ವ್ಯಣುಕಾಲ** ಕಾಲ ವಿಶೇಷ, ಎರಡು ಅಣುವಿನಷ್ಟು ಕಾಲ

## ಧ

**ಧ** ಸಂಖ್ಯೆ ಒಂಬತ್ತು
**ಧಂಧನೆ** ದಂದುಗ, ದಂದಣೆ, ಗಡಿಬಿಡಿ
**ಧಕ್ಕೆ** ಅಪಾಯ, ತೊಂದರೆ
**ಧಗೆ<ದಗೆ** ಶಾಖ, ತಾಪ, ಉರಿ
**ಧಟ್ಟಿ<ದಟ್ಟಿ** ಚಿಕ್ಕಸೀರೆ, ನಡುಪಟ್ಟಿ
**ಧಟ್ಟಿಸು** ಗದರಿಸು; ಒರಸಿಹಾಕು, ಉಜ್ಜು
**ಧಟ್ಟುಗೇರಿ, ಧಟ್ಟುದಿಗಿಲು** ಗಾಬರಿಯಿಂದ ಎದೆ ಡವಡವ ಎನ್ನುವದು

Rarest Archive

**ಧಡಗ** ಹೇರು, ಪೇರು ಕಟ್ಟುವುದು; ತೂಕದಲ್ಲಿ ಸಮತೋಲನ ಮಾಡುವುದು
**ಧಡಾಧಡಾ** ಅನುಕರಣ ಶಬ್ದ, ಧಡ್ ಧಡ್ ಎಂದು ಸದ್ದಾಗು
**ಧಣಿ** ಒಡೆಯ, ಧನವುಳ್ಳವ
**ಧನಂಜಯ** ಅರ್ಜುನ; ಅಗ್ನಿ
**ಧನದ, ಧನಪ** ಕುಬೇರ
**ಧನು** ಬಿಲ್ಲು
**ಧನ್ವಂತರಿ, ಧನ್ವಂತ್ರಿ** ದೇವತೆಗಳ ವೈದ್ಯ; ಸೂರ್ಯ
**ಧಮ** ಅಧಮ, ನೀಚ; ಭಕ್ತ
**ಧಮಕು** ಧಿಮಾಕು, ಸೊಕ್ಕು, ಗರ್ವ
**ಧರ** ಧರಿಸು, ಧರಿಸಿದವ; ಸಂಪತ್ತು
**ಧರಣಿ** ಭೂಮಿ
**ಧರಣಿಗುಬ್ಬಸವಾಗೆ** ಭೂಮಿಯು ಉಬ್ಬಸ ಬಂದಂತೆ ತಲ್ಲಣಿಸಲು
**ಧರಣಿಜಾ, ಧರಣಿಜಾತೆ** ಸೀತೆ
**ಧರಣಿಜಾಪತಿ** ರಾಮ
**ಧರಣಿವಿಬುಧ** ಬ್ರಾಹ್ಮಣ
**ಧರಣಿಸುತೆ** ಸೀತೆ
**ಧರಣಿಸುರ** ಬ್ರಾಹ್ಮಣ
**ಧರಣೀಧರ** ವರಹಾವತಾರ; ಪರ್ವತ
**ಧರಣೀನಾರಿ** ಭೂದೇವಿ
**ಧರಣೀಶ** ರಾಜ, ವರಾಹ
**ಧರಣೀಶವಿಠ್ಠಲ** ಜಗನ್ನಾಥವಿಠ್ಠಲ
**ಧರಧರ** ಪರ್ವತ, ಕಪ್ಪು, ನೀಲ
**ಧರಧರಕ** ಹೆಚ್ಚಾದ, ಮಿಗಿಲಾದ
**ಧರಧರವರ್ಣ** ಕಪ್ಪುವರ್ಣ
**ಧರಾತಳ** ಭೂಮಿ
**ಧರಾದಿಗಳು** ಲಕ್ಷ್ಮಿ ಮತ್ತು ಬ್ರಹ್ಮರುದ್ರಾದಿ ದೇವತೆಗಳು
**ಧರಾಧರ** ಕೂರ್ಮ, ಶ್ರೀಹರಿ
**ಧರಾಮರ** ಭೂಸುರ
**ಧರಾಸುರೇಶ** ಬ್ರಾಹ್ಮಣ
**ಧರಿತ್ರಿ, ಧರೆ** ಭೂಮಿ
**ಧರೆಪುತ್ರಿ** ಸೀತೆ
**ಧರೆಮೂರು** ಸ್ವರ್ಗ, ಮರ್ತ್ಯ, ಪಾತಾಳ
**ಧರೆಯನೊಯ್ದವ** ಭೂಮಿಯನ್ನು ಕದ್ದ ಹಿರಣ್ಯಾಕ್ಷ
**ಧರ್ಮಜ** ಧರ್ಮರಾಯ
**ಧರ್ಮನಿಧಿ** ಧರ್ಮಕ್ಕೆ ಆಶ್ರಯನಾದವ
**ಧರ್ಮಪೌತ್ರ** ಪರೀಕ್ಷಿತ ಮಹಾರಾಜ
**ಧರ್ಮಪ್ರಘಟಕ** ಧರ್ಮಯೋಜಕ–ಶ್ರೀಹರಿ
**ಧರ್ಮಮಂದಿರ** ಧರ್ಮಶಾಲೆ
**ಧರ್ಮಯೂಪ** ನ್ಯಾಯಸ್ಥಾನ, ಧರ್ಮಕ್ಕೆ ಆಧಾರಸ್ತಂಭ–ಶ್ರೀಹರಿ
**ಧರ್ಮವಿದುತ್ತಮ** ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠ–ಶ್ರೀಹರಿ
**ಧರ್ಮವಿದ್ಧರ್ಮಾತ್ಮ** ನಿಜ ಧರ್ಮ ತಿಳಿದವ–ಶ್ರೀಹರಿ
**ಧರ್ಮವೇದ್ಯ** ಧರ್ಮನಿಷ್ಠ
**ಧರ್ಮಸಾಕ್ಷಿ** ಜನರಾಚರಿಸುವ ಧರ್ಮಗಳನ್ನು ಪ್ರತ್ಯಕ್ಷ ನೋಡುವವ–ಶ್ರೀಹರಿ
**ಧರ್ಮಸಾವರ್ಣಿ** ಮನು
**ಧರ್ಮಾನುಜ** ಅರ್ಜುನ, ಭೀಮ
**ಧರ್ಮಾನುಜಸಾರಥಿ** ಅರ್ಜುನನ ಸಾರಥಿ–ಕೃಷ್ಣ
**ಧರ್ಮಾನುಜಾ** ಧರ್ಮರಾಜನ ತಂಗಿ ಯಮುನೆ, ನದೀದೇವತೆ
**ಧರ್ಮೇಂದ್ರಿಯ** ವಿವೇಕಬುದ್ಧಿ
**ಧವ** ಒಡೆಯ, ಪತಿ
**ಧವಳ** ಬಿಳುಪು, ಶ್ರೇಷ್ಠ
**ಧವಳಾಗಾರ, ಧವಳಾರ** ಸುಣ್ಣ ಬಳಿದ ಮನೆ, ಬಿಳಿಯ ಬಣ್ಣದ ಮನೆ
**ಧಾಕ(ಮ)** ಅಂಜಿಕೆ
**ಧಾಟಿ, ಧಾಡಿ** ರೀತಿ, ಶೈಲಿ; ಸರಿಸಮಾನ
**ಧಾತ** ಬ್ರಹ್ಮ

Rarest Archiver

**ಧಾತನಾಂಡ** ಬ್ರಹ್ಮಾಂಡ

**ಧಾತಪಿತ** ಶ್ರೀಹರಿ

**ಧಾತಮಹಿಳೆ** ಸರಸ್ವತೀ

**ಧಾತಮಹಿಳೆತೀರ್ಥ** ಸ್ವಾಮಿ ಪುಷ್ಕರಣೀ ತೀರ್ಥ, ಸರಸ್ವತೀತೀರ್ಥ

**ಧಾತಮುಖ್ಯ** ಬ್ರಹ್ಮನೇ ಮೊದಲಾದ

**ಧಾತು** ಪರಮಾತ್ಮ, ಮೂಲ ವಸ್ತು; ದೇಹದಲ್ಲಿರುವ ರಸ, ರಕ್ತ, ಮಾಂಸ, ಮೇಧಸ್ಸು, ಅಸ್ತಿ, ಮಜ್ಜೆ, ಶುಕ್ಲ ಎಂಬ ಏಳು ಧಾತುಗಳು; ವೀರ್ಯ; ಶಕ್ತಿ

**ಧಾತುಗೆಡು** ನೀತಿ ಮರೆ

**ಧಾತುಗ್ರಂಥಗಳು** ಮೂಲ ಗ್ರಂಥಗಳು, ಆಧಾರ ಶಾಸ್ತ್ರ ಗ್ರಂಥಗಳು

**ಧಾತೃ** ಬ್ರಹ್ಮ

**ಧಾತೃಜನಕ** ಶ್ರೀಹರಿ

**ಧಾತ್ರಿ** ಭೂಮಿ, ತಾಯಿ; ದಾಸಿ; ನೆಲ್ಲಿಕಾಯಿ

**ಧಾತ್ರಿಜ** ನರಕಾಸುರ (ಭೂದೇವಿಯಮಗ)

**ಧಾತ್ರಿಜಾ(ತೆ), ಧಾತ್ರಿಜೆ, ಧಾತ್ರಿಪುತ್ರಿ** ಸೀತೆ

**ಧಾತ್ರಿಫಲ** ನೆಲ್ಲಿಕಾಯಿ

**ಧಾತ್ರಿಮುದ್ರೆ** ಬಲಗೈಯ ಐದೂ ಬೆರಳುಗಳನ್ನು ಚಾಚಿ ಭೂಮಿಯನ್ನು ತೋರಿಸುವ ಹಸ್ತ ಸಂಕೇತ, ಭೂಸ್ಪರ್ಶಮುದ್ರೆ

**ಧಾನಿ**<ದಾನಿ ದಾನ ಮಾಡುವವನು; ಪಾತ್ರೆ, ಕರಂಡಕ

**ಧಾಮ** ಮನೆ, ಮಂದಿರ; ದೇಹ, ಶರೀರ; ಕಿರಣ

**ಧಾಮತ್ರಯ** ಶ್ವೇತದ್ವೀಪ, ಅನಂತಾಸನ, ವೈಕುಂಠ

**ಧಾಮಧೂಮ** ಮನೆಯನ್ನು ಸುಟ್ಟು ಹೊಗೆಯಾಡಿಸುವುದು, ನಾಶಮಾಡುವುದು

**ಧಾಮಪಥ** ಭಕ್ತಿಮಾರ್ಗ

**ಧಾರಣಿ(ಣೆ)** ಧರಿಸುವುದು, ಹಿಡಿಯುವುದು; ಉಪವಾಸದ ವ್ರತ, ನಿಗ್ರಹ; ಭೂಮಿ

**ಧಾರಾಧರಾಭ** ನೀಲಮೇಘದಂತೆ ಕಾಂತಿಯುಳ್ಳ–ಕೃಷ್ಣ

**ಧಾರಿಣಿ** ಭೂಮಿ; ಉಪವಾಸ

**ಧಾರಿಣೀಸುರರು** ಬ್ರಾಹ್ಮಣರು

**ಧಾರಿಸು** ಧಾರಾಕಾರವಾಗಿ ಸುರಿಯುವುದು, ಸ್ರೋತ

**ಧಾರೆ** ನದಿಪ್ರವಾಹ, ಕತ್ತಿಯ ಅಲಗು

**ಧಾರೆಯೆರೆ** ದಾನಮಾಡು, ಮದುವೆ ಮಾಡಿ ಕೊಡು

**ಧಾರ್ತರಾಷ್ಟ್ರ** ಧೃತರಾಷ್ಟ್ರನ ಮಕ್ಕಳು, ದುರ್ಯೋಧನ ಮುಂತಾದವರು

**ಧಾರ್ತರಾಷ್ಟ್ರವೈರಿ** ಭೀಮ

**ಧಾರ್ಯ** ಹಿಡಿತ

**ಧಾವತಿ, ಧಾವತೆ** ಆಯಾಸ, ಆತಂಕ, ತವಕ

**ಧಾಳಿ** ಮುತ್ತಿಗೆ, ಯುದ್ಧ

**ಧಿಕುಧಿಕು**<ಧಿಕ್‌ಧಿಕ್ ಧಿಕ್ಕಾರವಿರಲಿ

**ಧಿಷಣ** ಜಾಣ; ದೇವತೆಗಳ ಗುರು–ಬೃಹಸ್ಪತಿ; ಜಗತ್ತು

**ಧೀ** ಜ್ಞಾನ, ಪಾಂಡಿತ್ಯ, ವಿದ್ವಾಂಸ

**ಧೀಂಕಿಡು** ಹಾರು, ನೆಗೆ

**ಧೀರಮುನಿ** ದೂರ್ವಾಸ; ಮಧ್ವಮುನಿ

**ಧೀವರ** ಬುದ್ಧಿವಂತ; ಮೀನು ಹಿಡಿಯುವವ, ಬೆಸ್ತ

**ಧೀಶ**<**ಅಧೀಶ** ಒಡೆಯ

**ಧೀಸುಧಿ** ಜ್ಞಾನಿ ಮತ್ತು ಪಂಡಿತ

**ಧುನಿ** ನದಿ

**ಧುನಿಪಿತ** ಗಂಗಾಪಿತ

**ಧುಮ್ಮಗೈ** ದಮ್ಮಸ್ಸು ಮಾಡು, ಚೆನ್ನಾಗಿ ಬಡಿದು ಗಟ್ಟಿ ಮಾಡು

**ಧುರ** ನೊಗ; ಸಿರಿ, ಸಂಪತ್ತು; ಕಾಳಗ, ಕದನ

**ಧುರಂಧರ** ನಾಯಕ, ಹೊಣೆಹೊತ್ತಿರುವವನು

**ಧುರದುಂಡಿ** ಧೀರ, ರಣರಂಗಶೂರ

**ಧುರವಿಜಯ** ಯುದ್ಧದಲ್ಲಿ ವಿಜಯ ಸಾಧಿಸುವವ

**ಧುರೀಣ** ನಾಯಕ, ಮುಖಂಡ, ಹೊಣೆಹೊತ್ತವ

**ಧುರ್ಯ** ಯಜಮಾನ, ಪ್ರಮುಖ

Rarest Archiver

**ಧೂತ** ನಿರ್ಧೂತ, ನಿವಾರಣೆ

**ಧೂಪ** ಸಾಂಬ್ರಾಣಿ ಮೊದಲಾದ ಸುವಾಸನೆಯ ಪುಡಿ

**ಧೂಪಾರತಿ** ಐದು ಅಥವಾ ಹತ್ತು ಜಾತಿಯ ಸುಗಂಧದ್ರವ್ಯಗಳನ್ನು ಸೇರಿಸಿ ಹೊಗೆ ಹೊರಡಿಸುವುದು

**ಧೂಮ** ಹೊಗೆ; ಮೋಡ

**ಧೂಮಕೇತು** ಉಲ್ಕೆ, ಅಗ್ನಿ

**ಧೂಮಕೇತುಸಖ** ವಾಯುದೇವರು

**ಧೂಮಕೇತುಸಖಸೂನು** ವಾಯು, ಗರುಡ

**ಧೂಮಕೇತುಸಖಸೂನುವಾಹನ** ವಾಯು ವಾಹನ; ಗರುಡವಾಹನ–ಶ್ರೀಹರಿ

**ಧೂಮಧ್ವಜ** ಅಗ್ನಿ

**ಧೂಮರಜ್ಞಾನ** ಅನಿಶ್ಚಿತಜ್ಞಾನ

**ಧೂಮ್ರ** ಕಪ್ಪುಬಣ್ಣ, ಬೂದುಬಣ್ಣ, ಹೊಗೆ

**ಧೂರ್ಜಟಿ** ಶಿವ

**ಧೂರ್ತ** ದುರಾಚಾರಿ

**ಧೂರ್ತಭಂಜನ** ದುಷ್ಟ ಸಂಹಾರ

**ಧೂರ್ತೆ** ವಂಚಕಿ, ದುರಾಚಾರಿ

**ಧೂರ್ಯ<ಧುರ್ಯ** ಮುಂದಾಳು, ಯಜಮಾನ

**ಧೂಳಿಗೋಟೆ** ಹಾಳಾದ ಕೋಟೆ, ಪುಡಿಪುಡಿಯಾದ ಕೋಟೆ

**ಧೂಳಿದರ್ಶನ** ಕ್ಷೇತ್ರಕ್ಕೆ ಬಂದೊಡನೆ ಸಂಧ್ಯಾ ಸಮಯದಲ್ಲಿ ತೆಗೆದುಕೊಳ್ಳುವ ಮೊದಲ ದರ್ಶನ

**ಧೃತ** ಧರಿಸಿದ, ಹೊಂದಿದ, ಹಿಡಿದ

**ಧೃತನಾಗಾರಿಪದ್ಮ** ಶಂಖ ಚಕ್ರ ಪದ್ಮಗಳನ್ನು ಧರಿಸಿದವ–ಶ್ರೀಹರಿ

**ಧೃತರಥಾಂಗ** ಚಕ್ರವನ್ನು ಧರಿಸಿದವ–ವಿಷ್ಣು

**ಧೃತಾಷಾಢ** ಮುತ್ತುಗದ ಕೋಲನ್ನು ಹಿಡಿದವನು

**ಧೃತಿ** ತಾಳುವಿಕೆ, ಧರಿಸುವಿಕೆ; ತೃಪ್ತಿ, ಧೈರ್ಯ

**ಧೃತಿಪ್ರಭಂಜನ** ವಾಯುದೇವರು

**ಧೃಷ್ಟ** ಸಮರ್ಥ, ಅತಿಶಯ, ಧೈರ್ಯಶಾಲಿ, ಗಟ್ಟಿಗ, ಉದ್ಧಟ

**ಧೇನಿಸು<ಧ್ಯಾನಿಸು** ಸ್ಮರಿಸು, ಧ್ಯಾನ ಮಾಡು

**ಧೇನು** ಕರುಹಾಕಿದ ಹಸು, ಈದ ಆಕಳು

**ಧೇನುಕ** ಕತ್ತೆ

**ಧೇನುಕಾಸುರಮಥನ** ಕೃಷ್ಣ

**ಧೇನುಪಳ್ಳಿ** ಗೋಕುಲ

**ಧೇನುಪಾಲ** ಗೋಪಾಲ

**ಧೇನುವತ್ಸ** ಎಳೆಗರು

**ಧೊರಿ<ದೊರೆ** ರಾಜ, ಅರಸ

**ಧೋಕಾ** ಆಘಾತ; ಮೋಸ, ವಂಚನೆ

**ಧೋತ್ರ** ಪಂಚೆ

**ಧೌತ** ಬಿಳಿ, ಶುಭ್ರ, ತೊಳೆಯಲ್ಪಟ್ಟ

**ಧೌತಪಾಪ** ಪಾಪನಾಶ, ತೊಳೆಯಲ್ಪಟ್ಟ ಪಾಪ

**ಧ್ಯಾತ** ಧ್ಯಾನಕ್ಕೆ ಯೋಗ್ಯ, ಧ್ಯಾನ ಮಾಡುವವ

**ಧ್ಯಾತವ್ಯ** ಧ್ಯಾನದಿಂದ ತಿಳಿಯಲ್ಪಡುವವನು

**ಧ್ಯಾನಕಾನನ** ಧ್ಯಾನಕ್ಕೆ ಅನುಕೂಲವಾದ ಕಾಡು; ಸತತವಾದ ಚಿಂತನೆ

**ಧ್ಯಾಯಿಸು** ಅಧ್ಯಯನಮಾಡು, ಧ್ಯಾನಿಸು

**ಧ್ಯಾಸ** ಧ್ಯಾನ, ಚಿಂತನೆ, ಮನನ, ನೆನಪು

**ಧ್ಯೇಯ** ಧ್ಯಾನಿಸಲ್ಪಡತಕ್ಕುದು

**ಧ್ಯೇಯನ್** ಧ್ಯಾನಕ್ಕೆ ಅರ್ಹನಾದವನು

**ಧ್ರುವ** ಸ್ಥಿರ; ಉತ್ತಾನಪಾದನ ಮಗ

**ಧ್ರುವವರದ** ವಿಷ್ಣು

**ಧ್ವಸ್ತ** ನಾಶ

**ಧ್ವಾಂತ** ಮುಚ್ಚಿದ, ಆವರಿಸಿದ; ಕತ್ತಲೆ, ನರಕ

**ಧ್ವಾನ** ಧ್ವನಿ, ಶಬ್ದ, ನಾದ

Rarest Archiver

# ನ

**ನಂಜಿನೊಡೆಯ** ಆದಿಶೇಷ

**ನಂಜು** ವಿಷ

**ನಂಜೇಶ** ಆದಿಶೇಷ

**ನಂದ** ಆನಂದ, ಸಂತೋಷ

**ನಂದಕಂದ, ನಂದಜ, ನಂದತನುಜ** ನಂದ ಕುಮಾರ–ಕೃಷ್ಣ

**ನಂದತೀರ್ಥ** ಆನಂದತೀರ್ಥ, ಮಧ್ವಾಚಾರ್ಯರು

**ನಂದನ** ಮಗ; ತೋಟ

**ನಂದನಂದ** ಕೃಷ್ಣ

**ನಂದನರಾಣಿ** ಯಶೋದೆ

**ನಂದಮುನಿ** ಆನಂದಮುನಿ ಹೆಸರಿನ ಮಧ್ವಾ ಚಾರ್ಯರು

**ನಂದಿ** ಒಬ್ಬ ಕಪಿ (ಶ್ರೀರಾಮಚಂದ್ರ ಚರಿತ್ರಾನು ಸಂಧಾನದ ಸಂದರ್ಭದಲ್ಲಿ); ಶಿವನ ವಾಹನ

**ನಂದಿಘೋಷ** ಗೂಳಿಯ ಗುಟುರು

**ನಂದಿನೀಧರ** ವೃಷಭಲಾಂಛನ ಉಳ್ಳವನು–ಶಿವ

**ನಂದಿವಾಹನ, ನಂದಿಸ್ಯಂದನ** ಶಿವ

**ನಂದಿಸು** ಆನಂದಪಡು, ಆರಿಸು

**ನಂದು** ಆರಿಹೋಗು

**ನಂಬಿ** ಭಕ್ತ, ನಂಬಿಕಸ್ತ, ಸ್ನೇಹಿತ; ವಿಶ್ವಸಿಸು

**ನಕ್ತ** ರಾತ್ರಿ

**ನಕ್ತಂಚರ** ಕಳ್ಳ, ಪಿಶಾಚಿ ಮೊದಲಾದವು

**ನಕ್ತೇಶ** ಚಂದ್ರ

**ನಕ್ರ** ಮೊಸಳೆ

**ನಕ್ರಭಂಜನ** ಗಜರಾಜನನ್ನು ಹಿಡಿದ ಮೊಸಳೆ ಯನ್ನು ಕೊಂದವ–ವಿಷ್ಣು

**ನಕ್ರಹರ** ಮೊಸಳೆಯನ್ನು ಕೊಂದವ–ವಿಷ್ಣು

**ನಕ್ಷತ್ರಪತಿ, ನಕ್ಷತ್ರದರಸು** ಚಂದ್ರ

**ನಖ** ಉಗುರು; ಒಂದು ಬಗೆಯ ಸುಗಂಧದ್ರವ್ಯ

**ನಖಕ್ಷತ** ಉಗುರುಗಾಯ

**ನಖಚಂದ್ರಿಕೆ** ಉಗುರಿನಿಂದ ಹೊರಟಿರುವ ಬೆಳದಿಂಗಳೆಂಬ ಪ್ರಭೆ, ಉಗುರಿನ ಕಾಂತಿ

**ನಖಮಣಿ** ಉಗುರೆಂಬ ಮಣಿ

**ನಖಶಿಖಪರಿಯಂತ** ಕಾಲಿನ ಉಗುರಿನಿಂದ ಪ್ರಾರಂಭಿಸಿ ತಲೆಯವರೆಗೆ

**ನಖಾಗ್ರ** ಉಗುರಿನ ಕೊನೆ

**ನಖಾನೀಕ** ಉಗುರಿನ ಸಮೂಹ

**ನಗ** ಒಡವೆ, ಆಭರಣ, ಬೆಳ್ಳಿ; ಪರ್ವತ, ಬೆಟ್ಟ, ಮರ

**ನಗಕನಕ** ನಾಣ್ಯ, ಚಿನ್ನ, ಹಣ

**ನಗಚಾಪ** ರುದ್ರ, ಶಿವ

**ನಗಜಾಧವ** ಪಾರ್ವತೀಪತಿ–ಶಿವ

**ನಗಜೆ** ಪಾರ್ವತಿ

**ನಗಜೆಯಾಳ್ದ** ಶಿವ

**ನಗಧರ** ಪರ್ವತವನ್ನು ಧರಿಸಿದವನು, ಗೋವರ್ಧನ ಗಿರಿಯನ್ನೆತ್ತಿದವನು–ಕೃಷ್ಣ

**ನಗರಾಜ** ಪರ್ವತರಾಜ

**ನಗರಿಪುಪುರ** ಅಮರಾವತಿ, ಇಂದ್ರಪುರ, ಸ್ವರ್ಗ

**ನಗವರ** ಮೈನಾಕಪರ್ವತ

**ನಗವೈರಿ** ಪವರ್ತಗಳ ವೈರಿ–ಇಂದ್ರ

**ನಗಸುತೆ** ಪರ್ವತ ರಾಜನ ಮಗಳು–ಪಾರ್ವತಿ

**ನಗೆಪಾಟಲು** ನಗೆಗೇಡು

**ನಗೆಹಾಯಿಸು** ನಗು, ನಗಿಸು

**ನಗೋತ್ತಮ** ಶ್ರೇಷ್ಠ ಪರ್ವತ, ಮೇರು ಪರ್ವತ

**ನಚ್ಚು** ನಂಬು, ವಿಶ್ವಾಸ

**ನಜರು** ಕಾಣಿಕೆ; ಕಣ್ಣೆಂಜಲು, ದೃಷ್ಟಿ

**ನಟನೆ** ಅಭಿನಯ, ಸೋಗು, ವೇಷ

**ನಟಯುವತಿ** ಕಪಟಗಾತಿ; ವೇಶ್ಯೆ

**ನಡತೆ** ರೀತಿ, ವರ್ತನೆ

**ನಡು** ಸೊಂಟ, ಟೊಂಕ, ಮಧ್ಯ

Rarest Archiver

**ನಡುಮನಿಸುತ** ಮಧ್ಯಗೇಹಸುತ–ಮಧ್ವಮುನಿ
**ನಡೆ, ನಡೆವಳಿ** ಆಚಾರ; ಸಲ್ಲು, ಗೌರವಿಸಲ್ಪಡು
**ನತ** ನಮಸ್ಕರಿಸಿದವ, ಬಗ್ಗಿದವ, ಶರಣಾಗತನಾದವ
**ನತಜನ** ಭಕ್ತಜನ, ಶರಣಾದವರು
**ನತಜನಮಂದಾರಕ** ಶರಣಾದ ಜನರ ಪಾಲಿಗೆ ಕಲ್ಪವೃಕ್ಷದಂತಿರುವವ
**ನತಮಿತ್ರ** ಸೂರ್ಯನಿಂದ ನಮಸ್ಕೃತನಾದ–ಗಣಪತಿ
**ನತಿಸು** ನಮಸ್ಕರಿಸು, ಬಾಗು
**ನತ್ತು** ಮೂಗಿನಲ್ಲಿ ಧರಿಸುವ ಮುತ್ತಿನ ಆಭರಣ, ಮೂಗುತಿ
**ನದ** ದೊಡ್ಡ ಹೊಳೆ, ಗಂಡು ಹೊಳೆ, ನದಿಯ ಪುಲ್ಲಿಂಗ ರೂಪ (ಉದಾ: ಬ್ರಹ್ಮಪುತ್ರ), ವರುಣಾದಿ ಪುರುಷಾಭಿಮಾನಿ ನದಿಗಳು, ಪಶ್ಚಿಮದಿಂದ ಹರಿದು ಸದ್ದು ಮಾಡದೇ ಸಮುದ್ರ ಸೇರುವ ನದಿಗಳು, ಉದಾ: ಶೋಣ, ಭದ್ರಾ, ಇತ್ಯಾದಿ
**ನದರು** ದೃಷ್ಟಿ, ಕಣ್ಣುಬೀಳು, ದೃಷ್ಟಿಯಾಗು, ಲಕ್ಷ್ಯ; ಬಹುಮಾನ, ಗೌರವಾರ್ಥವಾಗಿ ಒಯ್ಯುವ ವಸ್ತು, ಕಾಣಿಕೆ
**ನದಿಪುಳಿನ** ನದಿಯ ತೀರದ ಮರಳು
**ನದಿಸುತ** ಗಂಗೆಯ ಮಗ ಭೀಷ್ಮ
**ನನೆ** ಮೊಗ್ಗು, ಮುಗುಳು, ಹೂವು
**ನನ್ನಿ** ಸತ್ಯ, ಪ್ರೀತಿ
**ನಪ್ತ** ಮೊಮ್ಮಗ
**ನಭ** ಆಕಾಶ
**ನಭಗ** ಆಕಾಶದಲ್ಲಿ ಹಾರಾಡುವ ಹಕ್ಕಿ; ಗರುಡ
**ನಭದೀಶ** ಆಕಾಶಕ್ಕೆ ಒಡೆಯ–ಸೂರ್ಯ
**ನಭಸುಳಿ** ಹೃದಯದೊಳಗಿನ ದಹರಾಕಾಶ
**ನಭಸ್ಥ** ಗಗನದಲ್ಲಿರುವ
**ನಭೋಮಾಸ** ಶ್ರಾವಣಮಾಸ
**ನಮಿತ** ವಂದನೆಯನ್ನು ಪಡೆಯುವವ, ಗೌರವಾರ್ಹ
**ನಮುಚಿ** ಜಿಹ್ವಾಭಿಮಾನಿ ದೈತ್ಯ
**ನಮ್ಮಿ** ನಂಬಿ, ಆಶ್ರಯಿಸಿ, ಜೊತೆಯಲ್ಲಿ
**ನಮ್ರ** ನಯ, ವಿನಯ
**ನಮ್ರತ** ವಿನಯದಿಂದ ಕೂಡಿದ, ಬಾಗಿದ
**ನಯನ** ಕಣ್ಣು; ಮಾರ್ಗದರ್ಶನ
**ನರ** ಮನುಷ್ಯ; ಅರ್ಜುನ, ಯಮಪುತ್ರ, ಶೇಷ, ನಾರಾಯಣನ ಸೋದರ
**ನರಕಂಠೀರವ** ವಿಷ್ಣುವಿನ ನಾಲ್ಕನೆಯ ಅವತಾರ–ನರಸಿಂಹ
**ನರಕಭಾಜನ** ನರಕಕ್ಕೆ ಅರ್ಹ
**ನರಕಾಂತ** ಮನುಷ್ಯರ ಯಜಮಾನ, ರಾಜ
**ನರಕೀಟಕ** ಮಾನವ ಹುಳು
**ನರಕೇಶಭೂಷಾ** ಬ್ರಹ್ಮ
**ನರಗುರಿ** ಕೆಲಸಕ್ಕೆ ಬಾರದವನು, ಮೂರ್ಖ ಮನುಷ್ಯ
**ನರಗೇಡಿ** ಕೀಳು ಮನುಷ್ಯ
**ನರಗೊಲಿದವ** ಅರ್ಜುನನಿಗೆ ಒಲಿದವ–ಕೃಷ್ಣ
**ನರಜಗೆಮಾವ** ಅಭಿಮನ್ಯುವಿನ ಮಾವ–ಕೃಷ್ಣ
**ನರದ್ವಿರದಾರಿ** ನರಸಿಂಹ
**ನರನಟನ** ಮನುಷ್ಯರಂತೆ ನಟಿಸುವವ–ಕೃಷ್ಣ
**ನರನಮೊಮ್ಮ** ಅರ್ಜುನನ ಮೊಮ್ಮಗ, ಅಭಿಮನ್ಯುವಿನ ಮಗ–ಪರೀಕ್ಷಿತ ರಾಜ
**ನರನರಸಿ** ಅರ್ಜುನನ ಹೆಂಡತಿ ದ್ರೌಪದಿ
**ನರಪ** ರಾಜ
**ನರಪ್ರತಿಮೆ** ಮಾನವ ಗೊಂಬೆ
**ನರಬೀಗು** ನರಗಳ ಬಿಗುಹು
**ನರಮಹಿಷಪುತ್ರ** ಮನುಷ್ಯ ರೂಪದಲ್ಲಿನ ಕೋಣನ ಪುತ್ರ, ದಡ್ಡ, ಮೂರ್ಖ
**ನರಮೃಗ, ನರಮೃಗಾಕಾರಿ** ನರಸಿಂಹ
**ನರಯಾನ** ಮನುಷ್ಯರು ಹೊತ್ತು ನಡೆವ ಪಲ್ಲಕ್ಕಿ
**ನರವರ** ಮನುಷ್ಯೋತ್ತಮ; ಪರೀಕ್ಷಿತರಾಜ
**ನರವಾಹ** ಕುಬೇರ

Rarest Archives

**ನರಸಂಬಂಧಿಕಕ್ಷೇತ್ರ** ಕರ್ನಾಟಕದ ರಾಯಚೂರು ಜಿಲ್ಲೆಯ ಮಾನವೀ(ಮಾನ್ವಿ) ಕ್ಷೇತ್ರ

**ನರಸಖ** ಅರ್ಜುನನ ಗೆಳೆಯ–ಕೃಷ್ಣ

**ನರಸಾರಥಿ** ಅರ್ಜುನನ ಸಾರಥಿ–ಕೃಷ್ಣ

**ನರಸಿಂಗ, ನರಸಿಂಧೂರಾರಿ** ನರಸಿಂಹ

**ನರಸಿಂಹಾಂಕಮಂದಿರೆ** ನರಸಿಂಹನ ತೊಡೆಯಲ್ಲಿ ಕುಳಿತಿರುವವಳು–ಲಕ್ಷ್ಮಿ

**ನರಸೂತ** ಅರ್ಜುನನ ಸಾರಥಿಯಾದ ಕೃಷ್ಣ

**ನರಹರಿ, ನರಹರಿಯಕ್ಷ** ನರಸಿಂಹ

**ನರಾಂತಕ** ರಾವಣನ ಮಗ

**ನರೆ** ಬಿಳಿಯಕೂದಲು

**ನರ್ಮ** ಆಟ, ಕ್ರೀಡೆ, ಪರಿಹಾಸ, ವಿನೋದ

**ನಲುವು, ನಲುಮು** ಮಕ್ಕಳು, ಮುದುಕರು ವಸಡಿನಿಂದ ತಿನ್ನುವ ಕ್ರಿಯೆ

**ನಲ್ಲೆ** ಪ್ರಿಯತಮೆ

**ನಲ್ವಾತು** ಒಳ್ಳೆಯಮಾತು

**ನವನವ ಹೊಚ್ಚ** ಹೊಸ, ಹೊಸಹೊಸ ಬಗೆ

**ನವನಾಮವನುಧರಿಸಿ** ಹೊಸ ಹೆಸರಿಟ್ಟುಕೊಂಡು

**ನವನಿಧಿ** ಕುಬೇರನ ಒಂಬತ್ತು ಸಂಪತ್ತುಗಳು– ಪದ್ಮ, ಮಹಾಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ಖರ್ವ

**ನವನೀತ** ಬೆಣ್ಣೆ

**ನವನೀತಚೋರ** ಕೃಷ್ಣ

**ನವಪ್ರಜೇಶರು** ಸಪ್ತರ್ಷಿಗಳು, ಸ್ವಾಯಂಭುವ, ಭೃಗು

**ನವಮಾಸಾಸಿತ** ಮಾರ್ಗಶಿರ ಮಾಸದ ಕೃಷ್ಣ ಪಕ್ಷ

**ನವರಂಧ್ರ** ಎರಡು ಕಣ್ಣು, ಎರಡು ಕಿವಿ, ಎರಡು ಮೂಗಿನ ಹೊರಳೆಗಳು, ಬಾಯಿ, ಗುದ, ಉಪಸ್ಥ

**ನವರತುನ**<**ನವರತ್ನ** ಒಂಬತ್ತು ಬಗೆಯ ರತ್ನಗಳು

**ನವರತ್ನಕುಂಡಲಧಾರಿ** ವಿಷ್ಣು

**ನವರತ್ನಮಾಲಿಕೆ, ನವರತ್ನಮಾ** ಒಂಬತ್ತು ನುಡಿಗಳಿರುವ ಹಾಡು

**ನವವಿಧಭಕ್ತಿ** ಶ್ರವಣ, ಕೀರ್ತನ, ಸ್ಮರಣ, ಪಾದ ಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ

**ನವವಿಧಾನ** ಒಂಬತ್ತು ಬಗೆಯ ಪೂಜಾ ಪದ್ಧತಿ

**ನವಾಕ್ಷ** ನವರಂಧ್ರಗಳುಳ್ಳ ಮಾನವ ದೇಹ

**ನವಿರು** ಕೂದಲು

**ನವಿಲುಕಣ್ಣು** ನವಿಲುಗರಿ

**ನವೆ** ಸೊರಗು, ತುರಿಕೆ

**ನವ್ಯಸುಧಾಂಗುಲಿ** ಹೆಬ್ಬೆರಳು

**ನಷ್ಟಜೀವನದಾಸೆ** ಮುಪ್ಪಡರದೆ ಇರಲಿ ಎಂಬ ಬಯಕೆ, ನಶ್ವರ ಜೀವನದ ಆಸೆ

**ನಸಗುಂದು** ಜೀರ್ಣವಾಗು, ಕುಗ್ಗು

**ನಸಗುನ್ನಿ** ತುರುಚೆ ಗಿಡ

**ನಸಿ** ಸೊರಗು, ಬವಳಿಬೀಳು

**ನಸಿನ** ಲಘು, ಹಗುರ; ಸವೆದುಹೋಗು

**ನಹಿಪ್ರತಿ** ಸಾಟಿಯಿಲ್ಲದ

**ನಳನಳಿಸು** ಕೋಮಲವಾದ; ಪ್ರಕಾಶಿಸು, ಹೊಳೆ, ಮನೋಹರ

**ನಳವಾರಿ** ಚಂದ್ರ, ಶೀತಲ ಉದಕ

**ನಳಿ** ಬಾಗು, ಬಗ್ಗು; ಕೋಮಲವಾದ

**ನಳಿನ** ಕಮಲ, ಬಳ್ಳಿ

**ನಳಿನಜ** ಬ್ರಹ್ಮ

**ನಳಿನಜಾಂಡ** ಬ್ರಹ್ಮಾಂಡ

**ನಳಿನದಳಾಂಬಕ** ಕಮಲದಂತೆ ಕಣ್ಣುಳ್ಳ ಪರಮಾತ್ಮ –ವಿಷ್ಣು

**ನಳಿನನಾಭ** ಹೊಕ್ಕುಳಲ್ಲಿ ಕಮಲವುಳ್ಳವನು–ವಿಷ್ಣು

**ನಳಿನಪತ್ರೇಕ್ಷಣ** ಕಮಲದಳ ನಯನ–ಶ್ರೀಹರಿ

**ನಳಿನಭವ** ಬ್ರಹ್ಮ

**ನಳಿನಭವಾಂಡ** ಬ್ರಹ್ಮಾಂಡ

**ನಳಿನಮಿತ್ರ** ಸೂರ್ಯ

Rarest Archiver

**ನಳಿನಮುಖಿ** ಸುಂದರ ಮುಖವುಳ್ಳವಳು
**ನಳಿನಲೋಚನ** ಕಮಲಾಕ್ಷ–ವಿಷ್ಣು
**ನಳಿನಾಕ್ಷಮಣಿ** ಕಮಲಾಕ್ಷಮಣಿ
**ನಳಿನಿಸಂಭವ** ಬ್ರಹ್ಮ
**ನಳಿನೋದರ** ತೆಳ್ಳಗಿನ ಹೊಟ್ಟೆ; ಹೊಟ್ಟೆಯಲ್ಲಿ ಕಮಲವುಳ್ಳ ಶ್ರೀಹರಿ
**ನಳಿನೋದ್ಭವ** ಬ್ರಹ್ಮ
**ನಾಕ** ಸ್ವರ್ಗ
**ನಾಕಋಷಿ** ಸ್ವರ್ಗದ ಋಷಿ ನಾರದ
**ನಾಕಜ** ದೇವತೆ
**ನಾಕಜನ** ದೇವತೆಗಳು
**ನಾಕಜನಿಮ್ನಗಾ** ಸ್ವರ್ಗದಲ್ಲಿ ಹರಿಯುವ ದೇವಗಂಗೆ
**ನಾಕನಾಥ** ಸ್ವರ್ಗಲೋಕದೊಡೆಯ–ಇಂದ್ರ
**ನಾಕನಿಲಯ** ದೇವತೆ
**ನಾಕಪ** ಇಂದ್ರ
**ನಾಕಪುರ** ಸ್ವರ್ಗ, ಅಮರಾವತಿ, ಕೈಲಾಸ, ವೈಕುಂಠ, ಇತ್ಯಾದಿ
**ನಾಕರಿಸು** ನಾಶಪಡಿಸು
**ನಾಕಾದಿಬಲ** ಸ್ವರ್ಗದಲ್ಲಿನ ದೇವತೆಗಳು
**ನಾಕಾಧಿಪ** ಇಂದ್ರ
**ನಾಕಿಗ** ದೇವತೆ
**ನಾಕಿಯರಿಗರಿ** ದೇವತೆಗಳ ವೈರಿ (ರಾಕ್ಷಸ)
**ನಾಕಿಸಖ** ದೇವತೆಗಳಿಗೆ ಪ್ರಿಯ
**ನಾಕೀಶ, ನಾಕೇಶ** ಇಂದ್ರ
**ನಾಕುಪಾತ್ರೆ** ಜಾಗ್ರತ್, ಸ್ವಪ್ನ, ಸುಷುಪ್ತಿ, ತುರ್ಯಾ
**ನಾಕುಬೀದಿ** ನಾಲ್ಕು ವೇದಗಳು
**ನಾಕೇಂದ್ರ** ದೇವೇಂದ್ರ
**ನಾಖತಿ** ಅಳಲು ಇಲ್ಲದ್ದು, ಶಾಂತಿ
**ನಾಗ** ಸರ್ಪ, ಆನೆ; ದುಷ್ಟ, ನೀಚ; ಮೂಗು
**ನಾಗಗಮನೆ** ಗಜಗಮನೆ
**ನಾಗಗಿರಿ** ಶೇಷಾದ್ರಿ, ತಿರುಪತಿಯ ಬೆಟ್ಟ
**ನಾಗಭೃತ** ನಾಗನೊಡನೆ ಆಡಿದವ–ಕೃಷ್ಣ (ಕಾಲೀಯಮರ್ದನ)
**ನಾಗತಲ್ಪ** ಹಾವಿನ ಹಾಸಿಗೆ, ಶೇಷತಲ್ಪ–ಶ್ರೀಹರಿ
**ನಾಗದ್ವಿಟ** ಕಾಳಿಂಗನೆಂಬ ನಾಗನ ವೈರಿ–ಕೃಷ್ಣ
**ನಾಗಧರಸುತ** ಶಿವನ ಮಗ–ಗಣಪತಿ
**ನಾಗನಗರಿ** ಹಸ್ತಿನಾವತಿ
**ನಾಗಪತಿ** ಆದಿಶೇಷ
**ನಾಗಭೂಷಣ** ಸರ್ಪವನ್ನು ಆಭರಣವಾಗುಳ್ಳವನು –ಶಿವ
**ನಾಗಭೋಗವಿಸ್ತರ** ಹರವಾದ ಹಾವಿನ ಮೈ
**ನಾಗಮುರಿಗೆ** ನಾಗಮುರಿ, ತೋಳಿನಲ್ಲಿ ಧರಿಸುವ ಹಾವಿನಾಕಾರದ ಆಭರಣ
**ನಾಗರಾಜ** ಗಜೇಂದ್ರ, ಶೇಷದೇವ
**ನಾಗವಲ್ಲಿ** ವೀಳ್ಯದೆಲೆ
**ನಾಗವೇಣಿ** ಹಾವಿನಂತೆ ಹೆರಳುಳ್ಳ ಸ್ತ್ರೀ
**ನಾಗವೈರಿ** ಸರ್ಪಶತ್ರು–ಗರುಡ
**ನಾಗಶಯನ** ಶೇಷಶಯನ, ಶೇಷಶಾಯಿ, ಹಾವನ್ನೇ ಹಾಸಿಗೆಯಾಗಿ ಉಳ್ಳವ–ಶ್ರೀಹರಿ
**ನಾಗಶಯ್ಯನಂಶಜ** ಚಾರುದೇಷ್ಣ
**ನಾಗಹರಸಖ** ಕೃಷ್ಣ
**ನಾಗಾಭರಣ** ನಾಗನನ್ನು ಆಭರಣವಾಗುಳ್ಳ ಶಿವ
**ನಾಗಾಯುತಬಲಾಢ್ಯ** ಆನೆಯಂಥ ಬಲಶಾಲಿ
**ನಾಗಾರಿ** ಗರುಡ
**ನಾಗಾರಿಗಮನ** ಗರುಡನ ಮೇಲೆ ಪ್ರಯಾಣಿಸುವವನು–ವಿಷ್ಣು
**ನಾಗಾರಿವಾಹನ** ಗರುಡ
**ನಾಗೇಂದ್ರ** ಶೇಷ, ಆದಿಶೇಷ, ಗಜರಾಜ
**ನಾಗೇಂದ್ರಾನನ** ಗಣಪತಿ
**ನಾಗೋತ್ತರೀಯ** ನಾಗರಹಾವನ್ನು ಉತ್ತರೀಯವಾಗುಳ್ಳವ–ಶಿವ
**ನಾಚಗೈ** ನಾಟ್ಯವಾಡು
**ನಾಚು** ನಾಟ್ಯ, ನೃತ್ಯ

Rarest Archiver

**ನಾಟಕಸ್ತ್ರೀ** ನಾಟಕದಲ್ಲಿ ಸ್ತ್ರೀಪಾತ್ರ ಮಾಡುತ್ತಿದ್ದ ಪುರುಷ

**ನಾಟಿ** ಊರಿ, ನಟ್ಟು, ಅಚ್ಚೊತ್ತಿ

**ನಾಟು** ನೆಡು, ಊರು

**ನಾಡಗೂಡ** ನಾಡಿಗೆ, ಸಾಮಾನ್ಯನಿಗೆ

**ನಾಡಜೀವ** ಅಲೆಮಾರಿ ಜೀವ

**ನಾಡದೈವ** ಸಾಮಾನ್ಯ ದೇವತೆ

**ನಾಡಾಡಿ** ನಿಂತಲ್ಲಿ ನಿಲ್ಲದವನು, ನೆಲೆಯಿಲ್ಲದವನು; ಸಾಮಾನ್ಯ, ಪಾಮರ

**ನಾಡು** ದೇಶ

**ನಾಡೆ** ಅಧಿಕವಾಗಿ, ಹೆಚ್ಚಾಗಿ, ವಿಶೇಷವಾಗಿ

**ನಾಡೊಳರ್ಚಕನಾಥೆ** ಜಗತ್ತಿನಲ್ಲಿ ಪೂಜಿಸುವ ಸರ್ವರಿಗೆ ಒಡತಿ–ಲಕ್ಷ್ಮಿ

**ನಾಣ್ಚು** ನಾಚು, ಲಜ್ಜಿತಾಳು

**ನಾತ** ವಾಸನೆ, ಕಂಪು, ಸುವಾಸನೆ, ದುರ್ವಾಸನೆ

**ನಾದ** ಶಬ್ದ

**ನಾದನುಹಾತ<ನಾದಅನಾಹತ** ಯೋಗಿಗಳು ಆಲಿಸುವ ಅನಾಹತನಾದ

**ನಾದಬ್ರಹ್ಮ** ನಾದಸ್ವರೂಪಿ ಬ್ರಹ್ಮ; ಪಂಢರಾಪುರ ಪಾಂಡುರಂಗ ಗಾನಬ್ರಹ್ಮ

**ನಾದು** ಮಿದಿ, ಕಲಸು; ಒದ್ದೆಮಾಡು, ತೋಯಿಸು

**ನಾನೆಂಬುವುದು** ನಾನು ಎನ್ನುವ ಅಹಂಕಾರ

**ನಾನ್ನುಡಿ<ನಾಣ್ಣುಡಿ** ನಾಡುನುಡಿ, ಗಾದೆಮಾತು

**ನಾನ್ಯಃಪಂಥ, ನಾನ್ಯಪಥ** ಬೇರೊಂದು ಮಾರ್ಗವಿಲ್ಲ, ಬೇರೆ ಹಾದಿ ಇಲ್ಲ

**ನಾಭಿ** ಹೊಕ್ಕಳು

**ನಾಮಧಾರಕ** ಹೆಸರನ್ನು ಹೊತ್ತವ

**ನಾಮಧಾರಿ** ಹರಿದಾಸ ದೀಕ್ಷೆ ಹೊಂದಿದವ, ವೈಷ್ಣವ

**ನಾಮಮುದ್ರಿಕೆ** ಹರಿದಾಸ ದೀಕ್ಷೆ, ಅಂಕಿತ

**ನಾಮಾಂಕಿತ** ಹೆಸರು ಪಡೆದ, ಪ್ರಸಿದ್ಧವಾದ

**ನಾಯಕನರಕ** ಮಹಾನರಕಗಳು; ತಾಮಿಸ್ರ, ರೌರವ, ಕುಂಭೀಪಾಕ, ವಜ್ರ ಕಂಟಕ ಮೊದಲಾದುವು 29 ನರಕಗಳು

**ನಾಯಕಿ** ಒಡತಿ

**ನಾಯುಂಡ** ನಾಯಿ ತಿಂದುಳಿದದ್ದು

**ನಾರ** ದೋಷದೂರ

**ನಾರಂಗ** ಕಿತ್ತಲೆ

**ನಾರಂದ** ನಾರದ

**ನಾರಗ** ನಾರಾಯಣ, ಅಜಮಿಳನ ಮಗ

**ನಾರದನನೀಚಯೋನಿ** ಶೂದ್ರ ಜನ್ಮ

**ನಾರದವರದ** ವಿಷ್ಣು

**ನಾರಸೀರೆ** ಚೀರಾಜಿನ, ನಾರುಮಡಿ

**ನಾರಾ** ದೋಷರಹಿತಳು–ಲಕ್ಷ್ಮಿ

**ನಾರಾಚ** ಬಾಣ

**ನಾರಾಯಣವೇಶ್ಮ** ನಾರಾಯಣನದೇವಸ್ಥಾನ, ವಿಷ್ಣು ದೇವಾಲಯ

**ನಾರಾಯಣಿ** ಹರಿಯ ಸ್ತ್ರೀರೂಪ, ಮೋಹಿನೀ ರೂಪದ ವಿಷ್ಣು; ಉಡುಪಿ ಕೃಷ್ಣನ ಶುಕ್ರವಾರದ ಮೋಹಿನಿ ಅಲಂಕಾರ

**ನಾರಾಯಣೀ** ಲಕ್ಷ್ಮಿ

**ನಾರಿ** ಹೆಣ್ಣು; ಬಿಲ್ಲಿನ ಹೆದೆ

**ನಾರೀಚೋರ** ರಾವಣ

**ನಾರೀಚೋರಪುರ** ಲಂಕೆ

**ನಾರು** ಸುವಾಸನೆ ಬರು, ಪರಿಮಳಿಸು, ಕೆಟ್ಟವಾಸನೆ ಬರು

**ನಾರುವಸ್ತ್ರಾಜಿನ** ನಾರುಮಡಿ, ನಾರುಬಟ್ಟೆ

**ನಾರೆಯಣ<ನಾರಾಯಣ** ಶ್ರೀಹರಿ

**ನಾಲಗೆಯನಾದ** ಸೊಲ್ಲು, ಮಾತು, ಧ್ವನಿ

**ನಾಲೆಮಾಡು** ಹೋಲಿಸು; ಕಾಲುವೆಮಾಡು

**ನಾಲ್ಕುಕುದುರೆ** ಚತುರ್ವಿಧ ಪುರುಷಾರ್ಥ

**ನಾಲ್ಕುಗುಣ** ಭಕ್ತಿ, ಜ್ಞಾನ, ಕರ್ಮ, ಯೋಗ, ಈ 4 ಹಾದಿಗಳು; ಇದಕ್ಕೆ ಪಂಥರಾಜವೆನ್ನುತ್ತಾರೆ;

Rarest Archive

ಸತ್, ಚಿತ್, ಆನಂದ, ಆತ್ಮ–ಈ 4 ಗುಣಗಳು ಮನುಷ್ಯರಿಂದ ಉಪಾಸ್ಯ ಗುಣಗಳು

**ನಾಲ್ಕುನಿರ್ದೋಷಂಗಳು** ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ–ಈ ನಾಲ್ಕು ದೋಷಗಳು ಇಲ್ಲದ್ದು

**ನಾಲ್ಕುಮಡಿ** ನಾಲ್ಕುಪಟ್ಟು, ನಾಲ್ಕರಷ್ಟು

**ನಾಲ್ಕುಮುಖದಬೂಚಿ** ಬ್ರಹ್ಮ; ಮಕ್ಕಳಿಗೆ ಹೆದರಿಸಲು ಬಳಸುವ ಶಬ್ದ ಬೂಚಿ (ದೆವ್ವ)

**ನಾಲ್ಮೊಗ** ಬ್ರಹ್ಮ

**ನಾವಾ, ನಾವೆ** ಹಡಗು, ದೋಣಿ

**ನಾಶ** ಹಾಳು, ಕೇಡು

**ನಾಸ, ನಾಸಿಕ** ಮೂಗು

**ನಾಸಜ** ಮೂಗಿನಿಂದ ಪ್ರಕಟನಾದವ–ವರಾಹ

**ನಾಸಾಪುಟ** ಮೂಗಿನ ಹೊಳ್ಳೆ

**ನಾಸಾಭರಣ** ಮೂಗುತಿ

**ನಾಸಿಕಾ** ರಾಟಿಯ ಒಂದು ಭಾಗ; ಮೂಗುಳ್ಳವಳು

**ನಾಸಿಕಾಧರ** ಸೊಂಡಿಲನ್ನುಳ್ಳವನು–ಗಣಪತಿ

**ನಾಸ್ತಿ** ಇಲ್ಲದಿರುವಿಕೆ

**ನಾಸ್ತಿಕ** ದೇವರು ಮತ್ತು ವೇದಗಳನ್ನು ನಂಬದ ನಿರೀಶ್ವರವಾದಿ

**ನಾಳ** ದೇಟು, ದಂಟು

**ನಾಳಿಕಾನನ** ಕಮಲಮುಖ

**ನಾಳಿನಗ್ರಾಸ** ಭವಿಷ್ಯತ್ತಿನ ಆಹಾರ, ಮುಂದಣ ಜನ್ಮಕ್ಕೆ ಸಾಧನೆ

**ನಿಂದಿತಾಚಾರ** ಸಲ್ಲದ ನಡವಳಿಕೆ, ವಿಕೃತಾಚಾರ

**ನಿಂದ್ಯ<ನಿಂದೆ** ನಿಂದನೀಯ

**ನಿಂದ್ಯಸಪ್ತಜ್ಞಾನ** ಸಪ್ತವ್ಯಸನಗಳು

**ನಿಂದ್ರಿಸು<ನಿಂದಿಸು** ತೆಗಳು, ನಿಲ್ಲಿಸು

**ನಿಂದ್ರು** ನಿಲ್ಲು

**ನಿಂಬ** ಮಂದಾರವೃಕ್ಷ; ನಿಂಬೆ

**ನಿಂಬದಯುಗಳ** ಬೇವಿನ ಎಸಳಿನ ಜೋಡಿ

**ನಿಃಶಂಕ** ಸಂಶಯವಿಲ್ಲದ

**ನಿಕರ** ಸಮೂಹ

**ನಿಕರುಂಬ, ನಿಕಾಯ** ಗುಂಪು, ಸಮೂಹ

**ನಿಕಷ** ಒರೆಗಲ್ಲು

**ನಿಕಾರ** ಕೊಲ್ಲುವುದು; ಸಮೂಹ

**ನಿಕೃಂತ<ನಿಕೃತ** ತೆಗೆದುಹಾಕಿದ

**ನಿಕೃಂತನ** ಓಡಿಸುವವ

**ನಿಕೇತನ** ಮನೆ

**ನಿಕ್ಕರ<ನಿಕೃಷ್ಟ** ಕೀಳು, ನೀಚ

**ನಿಕ್ಷೇಪ** ಗುಪ್ತಧನ, ಇಡುಗಂಟು ಇಡಲ್ಪಟ್ಟ ದ್ರವ್ಯ, ಹುಗಿದಿಟ್ಟಸಂಪತ್ತು

**ನಿಖತಿ** ನೈರುತ್ಯ ದಿಕ್ಕಿನ ಅಭಿಮಾನಿ

**ನಿಖಿಲ** ಎಲ್ಲ, ಸಕಲ, ಶೇಷವಿಲ್ಲದ; ಹೆಚ್ಚಿನ ಮಾತು

**ನಿಖಿಲವ್ಯಾಪ್ತ** ಜಗತ್ತಿನ ಒಳಗೂ, ಹೊರಗೂ ವ್ಯಾಪಿಸಿರುವವನು, ಸರ್ವವ್ಯಾಪ್ತ–ಶ್ರೀಹರಿ

**ನಿಖಿಳ** ಎಲ್ಲ, ಸಕಲ, ಶೇಷವಿಲ್ಲದ, ಸಮಸ್ತ; ಹೆಚ್ಚಿನ ಮಾತು

**ನಿಖಿಳಕಥೆ** ಸಮಸ್ತ ಕಥೆ–ಭಾಗವತ ಪುರಾಣ

**ನಿಖಿಳೇಷ್ಟ** ಸಕಲ ಇಷ್ಟಾರ್ಥ

**ನಿಗಡ** ಸಂಕೋಲೆ

**ನಿಗಮ** ವೇದ, ಆಗಮ ಶಾಸ್ತ್ರಗಳು

**ನಿಗಮಗೋಚರ** ಜ್ಞಾನದ ಕಣ್ಣಿಗೆ ಕಾಣುವವನು; ವೇದಗಮ್ಯ, ಜ್ಞಾನಗಮ್ಯ, ವೇದಗಳಿಗೆ ಕಾಣಿಸುವವ–ಪರಮಾತ್ಮ

**ನಿಗಮತತಿ** ವೇದಸಮೂಹ

**ನಿಗಮಧರ** ಬ್ರಹ್ಮ

**ನಿಗಮಾಂಗ** ವೇದಶ್ರುತಿ

**ನಿಗಮಾವಳಿ** ವೇದಗಳ ಸಮೂಹ

**ನಿಗಮಾಸನ್ನ** ವೇದಕ್ಕೆ ಹತ್ತಿರವಾದವನು, ವೇದಪೀಠ

**ನಿಗಳ** ಸಂಕೋಲೆ, ಸರಪಣಿ, ಹಗ್ಗ

**ನಿಗಳಕಂಠ** ಸಂಕೋಲೆ, ಬೇಡಿ

**ನಿಗ್ರಹ** ನಿಯಂತ್ರಣ, ಸ್ವೀಕಾರ ಮಾಡದಿರುವಿಕೆ, ಭರ್ತ್ಸನ

Rarest Archiver

**ನಿಘ** ಪಾಪ

**ನಿಘೃಣ** ದಯಾಶೂನ್ಯ, ನಿರ್ದಯಿ, ಕೀಳು ಮನುಷ್ಯ

**ನಿಚಯ** ಸಮೂಹ

**ನಿಚ್ಚ** ನಿತ್ಯ, ನಿರಂತರ

**ನಿಚ್ಚಟ** ಕಪಟವಿಲ್ಲದಿರುವುದು, ಸ್ಥಿರವಾದುದು

**ನಿಚ್ಚಣಿಕೆ<ನಿಃಶ್ರೇಣಿಕಾ** ಏಣಿ, ನಿಚ್ಚಣಿಗೆ

**ನಿಜ** ಸತ್ಯ, ದಿಟ, ತನ್ನದು, ಸ್ವಂತವಾದುದು

**ನಿಜಆತ್ಮಜ** ಸ್ವಂತ ಮಗ

**ನಿಜಕಳತ್ರ** ತನ್ನ ಪತ್ನಿ

**ನಿಜಗತಿ** ಮೋಕ್ಷ, ಮುಕ್ತಿ

**ನಿಜಣಿಪತಿ** ದೇವತೆಗಳ ಒಡೆಯ

**ನಿಜಪದ** ನಿಜವಾದ ಪದವಿ, ಮೋಕ್ಷ

**ನಿಜಪದವಿ** ಸ್ವರೂಪಜ್ಞಾನ, ಮುಕ್ತಿ

**ನಿಜಭೋಗ** ರತಿಸುಖ

**ನಿಜಪರ್ಯ** ತನಗಿಂತಲೂ ಶ್ರೇಷ್ಠ

**ನಿಜಸತಿ** ನಿತ್ಯಾ ಅವಿಯೋಗಿನಿ, ನಿಯತಪತ್ನಿ, ತನ್ನ ಹೆಂಡತಿ

**ನಿಜಸುಖಪರಿಪೂರ್ಣ** ಆತ್ಮ ತೃಪ್ತ

**ನಿಟಿಲ** ಹಣೆ, ಫಾಲ

**ನಿಟಿಲನಯನ, ನಿಟಿಲನೇತ್ರ, ನಿಟಿಲಾಂಬಿಕ, ನಿಟಿಲಾಕ್ಷಿ** ಹಣೆಯಲ್ಲಿ ಕಣ್ಣುಳ್ಳವ–ಶಿವ

**ನಿಟ್ಟಿಸು** ನೇರವಾಗಿ ನೋಡು

**ನಿಟ್ಟೆಲುಬು** ನಿಡಿದಾದ ಮೂಳೆ

**ನಿಡಿ** ಉದ್ದವಾದ

**ನಿಡಿಗರುಳ** ಉದ್ದನೆಯ ಕರುಳನ್ನುಳ್ಳವ

**ನಿಡಿಗುರುಳು** ಉದ್ದವಾದ ಕೂದಲು

**ನಿಡಿದು** ಉದ್ದವಾದುದು

**ನಿಡಿಶಿಖಿ** ಉದ್ದನೆಯ ಕೂದಲು

**ನಿಡುಗಂಗಳು** ದೊಡ್ಡ ಕಣ್ಣುಗಳು

**ನಿಡುಶಿಖಿ** ಉದ್ದ ಜಂಡಿಕೆ

**ನಿತಂಬೆ** ಚೆಲುವೆ

**ನಿತರ<ಅನಿತರ** ಎಲ್ಲ

**ನಿತ್ತರಿಸು** ಕಾಲವನ್ನು ಕಳೆ; ತಾಳು, ಸಹಿಸು; ದಾಟು, ಪಾರಾಗು

**ನಿತ್ಯ** ಪ್ರತಿದಿನ, ಅನಂತ, ಶಾಶ್ವತ

**ನಿತ್ಯಗುಣಾರ್ಣವ** ಅನಾದ್ಯನಂತಗುಣಗಳುಳ್ಳ–ಶ್ರೀಹರಿ

**ನಿತ್ಯತೃಪ್ತ** ಯಾವಾಗಲೂ ತೃಪ್ತಿಯಿಂದಿರುವವ–ಶ್ರೀಹರಿ

**ನಿತ್ಯನಿರವಯ** ಯಾವಾಗಲೂ ನಾಶವಾಗದ–ಶ್ರೀಹರಿ

**ನಿತ್ಯಭಿನವ** ನಿತ್ಯನೂತನ

**ನಿತ್ಯಭೋಗ** ಸಕಾಮಕರ್ಮಗಳ ಸತ್ಫಲ

**ನಿತ್ಯಮುಕ್ತಳು** ಲಕ್ಷ್ಮಿ

**ನಿತ್ಯಮುತ್ತೈದೆ** ದೇವತಾ ಸ್ತ್ರೀ; ವೇಶ್ಯೆ

**ನಿತ್ಯಂಯಾತ್ರೆ** ಶುಕ್ಲವೃತ್ತಿ, ದಿನವೂ ಭಿಕ್ಷೆಗಾಗಿ ಹೋಗುವುದು

**ನಿತ್ಯರಲಿನಿತ್ಯ** ದೇವತೆಗಳ ಮನಸ್ಸಿನಲ್ಲಿ ನೆಲೆಸಿರುವ ಶ್ರೀಹರಿ, ಅನಾದಿನಿತ್ಯ

**ನಿತ್ಯರು** ದೇವತೆಗಳು

**ನಿತ್ಯವಸ್ತು** ಸನಾತನವಾದ, ನಾಶರಹಿತವಾದ, ಶಾಶ್ವತರೂಪದ ಬ್ರಹ್ಮ

**ನಿತ್ಯಸುಖ** ಶಾಶ್ವತ ಸುಖ

**ನಿತ್ಯಾವಿಯೋಗಿನಿ** ಶ್ರೀಹರಿಯಿಂದ ಎಂದೂ ವಿಯೋಗವಿಲ್ಲದ ಲಕ್ಷ್ಮಿ

**ನಿದರುಶನ<ನಿದರ್ಶನ** ದೃಷ್ಟಾಂತ, ದೃಶ್ಯ, ನೋಟ

**ನಿದಾನ** ಹಗ್ಗ; ಮೂಲಕಾರಣ

**ನಿದ್ರೆ** ಸುಷುಪ್ತಿ, ನಿದ್ದೆ; ಅಜ್ಞಾನ

**ನಿದ್ರೆಭರ** ನಿದ್ರೆಯವೇಗ

**ನಿಧನ** ಸಾವು, ಮರಣ, ಕೊನೆ, ಅಂತ್ಯ; ಜಗತ್ತನ್ನು ಲಯಗೊಳಿಸುವವ(ಲಯಕಾರಿ)–ಶ್ರೀಹರಿ

**ನಿಧಾನ** ಐಶ್ವರ್ಯ, ಸಂಪತ್ತು, ಹುದುಗಿಟ್ಟ ಧನ, ದ್ರವ್ಯ; ನಿಶ್ಚಯ, ಸಾವಕಾಶ

Rarest Archiver

**ನಿಧಾನಿ** ಜ್ಞಾನಿ; ಆಶ್ರಯದಾತ; ಸಂಪತ್ತುಳ್ಳವ
**ನಿಧಾನಿಸು** ಪರೀಕ್ಷಿಸು, ವಿಚಾರಮಾಡು
**ನಿನಗಿದಿರಧಿಕ** ನಿನಗೆ ಪ್ರತಿ ಮತ್ತು ಉತ್ತಮ, ನಿನಗಿಂತ ಹೆಚ್ಚು
**ನಿನದ** ಶಬ್ದ
**ನಿನ್ನಂಗ** ನಿನಗೆ ಅಧೀನ
**ನಿನ್ನಣುಗ** ನಿನ್ನ ಭಕ್ತ
**ನಿನ್ನರಿ** ನಿನ್ನ ವೈರಿ
**ನಿಪುಣ** ಜಾಣ, ಜ್ಞಾನಿ
**ನಿಬಿಡ** ತುಂಬಿದ, ದಟ್ಟವಾದ, ಸಾಂದ್ರ
**ನಿಬ್ಬಣ<ದಿಬ್ಬಣ** ಮದುವೆಯ ಮೆರವಣಿಗೆ, ವಧೂವರರಿಗೆ ಕೊಡುವ ವಸ್ತುಗಳ ಪ್ರದರ್ಶನ
**ನಿಬ್ಬರ<ನಿರ್ಭರ** ವೇಗ, ತ್ವರೆ; ನಿತ್ಯ; ತುಂಬಿದ
**ನಿಬ್ಬಿಡೆ<ನಿರ್ಭಿಡೆ** ದಾಕ್ಷಿಣ್ಯರಹಿತ, ನಿರ್ದಾಕ್ಷಿಣ್ಯ, ಸಂಕೋಚವಿಲ್ಲದ
**ನಿಭ** ಬೆಳಕು, ಪ್ರಭೆ; ಕಪಟ, ವಂಚನೆ; ಸಮಾನ, ಎಣೆ
**ನಿಮಿತ್ತ, ನಿಮಿತ್ಯ** ಕಾರಣ, ಗುರಿ, ಉದ್ದೇಶ; ಶಕುನ, ಕಣಿ
**ನಿಮಿಷ** ಕಣ್ಣು ಮುಚ್ಚಿ ತೆಗೆಯುವುದು, ಒಂದುಸಲ ರೆಪ್ಪೆ ಹೊಡೆಯುವ ಸಮಯ, ಎರಡು ಲವ ಕಾಲ
**ನಿಮ್ನ** ಆಳ, ತಗ್ಗು
**ನಿಮ್ನನಾಭಿ** ಆಳವಾದ ಹೊಕ್ಕಳು
**ನಿಯಂತೃ** ನಿಯಮನ ಮಾಡುವವನು, ನಿಯಂತ್ರಿಸುವವನು
**ನಿಯಂತ್ರಣ** ಹತೋಟಿ, ಹಿಡಿತ, ಕಟ್ಟುಪಾಡು
**ನಿಯತ** ನಿಶ್ಚಿತವಾದ, ಸ್ಥಿರವಾದ
**ನಿಯಮ** ಶೌಚ, ತಪಸ್, ತುಷ್ಟಿ, ಸ್ವಾಧ್ಯಾಯ ಹಾಗೂ ಹರಿಪೂಜೆ ಎಂಬ ಐದು ವಿಧ
**ನಿಯಮನ** ಆಜ್ಞಾಧಾರಕ, ವಶದಲ್ಲಿರಿಸಿಕೊಳ್ಳುವುದು, ಅಂಕೆಯಲ್ಲಿರಿಸಿಕೊಳ್ಳುವುದು
**ನಿರಂಜನ** ಪರಿಶುದ್ಧನಾದವನು, ಪರಮಾತ್ಮ
**ನಿರಂಜನೀ** ಲಕ್ಷ್ಮಿ
**ನಿರಕ್ಷರ** ಓದು ಬರಹ ಬಾರದವನು
**ನಿರಕ್ಷರಕುಕ್ಷಿ** ಅಜ್ಞಾನಿ, ಹುಂಬ
**ನಿರಜ** ಧೂಳಿಲ್ಲದ, ನಿರ್ಮಲ
**ನಿರತ** ಆಸಕ್ತ, ತೊಡಗಿಸಿಕೊಂಡ
**ನಿರತಿಶಯ** ಅತಿಶಯವಲ್ಲದ, ಸಾಟಿಯಿಲ್ಲದ
**ನಿರನಿಷ್ಟ** ಅನಿಷ್ಟವಿಲ್ಲದ, ಅಪ್ರಿಯರಹಿತ
**ನಿರಪೇಕ್ಷ** ಒಂದು ರೀತಿಯ ಭಕ್ತಿ
**ನಿರಯ** ನರಕ, ತಮಸ್ಸು; ಅಜ್ಞಾನ; ಪಾಪ
**ನಿರಯಾಣ<ನಿರ್ಯಾಣ** ಮಾಯವಾಗುವಿಕೆ, ಅದೃಶ್ಯವಾಗುವಿಕೆ; ಮರಣ
**ನಿರಯದ ಬಟ್ಟೆ** ನರಕದ ದಾರಿ
**ನಿರಯದೂರ** ನರಕದಿಂದ ದೂರವಿರುವವನು, ಪುಣ್ಯವಂತ
**ನಿರಯಭಾಗಿ** ಅಜ್ಞಾನಿ
**ನಿರವದ್ಯ** ಪರಿಶುದ್ಧ, ಕಳಂಕರಹಿತ
**ನಿರವಧಿಕ** ಕಾಲಾತೀತ, ತನಗಿಂತ ಶ್ರೇಷ್ಠರಿಲ್ಲದವನು, ಸರ್ವೋತ್ತಮ–ಶ್ರೀಹರಿ
**ನಿರವಾಣಿ<ನಿರ್ವಾಣಿ** ಬೆತ್ತಲೆ (ಬೌದ್ಧಾವತಾರ); ಶರೀರದ ಗೊಡವೆಯನ್ನು ಬಿಟ್ಟ ವಿರಾಗಿ
**ನಿರಶನ** ಉಪವಾಸ
**ನಿರಸ** ರಸವಿಲ್ಲದ, ಒಣಗಿದ, ನಿಃಸತ್ವ
**ನಿರಸ್ತ** ಚದುರಿಸಲ್ಪಟ್ಟ, ಹೊರಹಾಕಿದ
**ನಿರಲೀಷ** ಸತ್ಯ, ನಿರಲೀಕ, ಪ್ರಾಮಾಣಿಕ
**ನಿರಾಕಾರ** ಆಕಾರವಿಲ್ಲದವ, ಅನಂತ ರೂಪದವ, ಶೂನ್ಯ
**ನಿರಾಕುಲ** ಕ್ಲೇಶರಹಿತ, ತೊಂದರೆಯಿಲ್ಲದ
**ನಿರಾಮಯ** ದುಃಖವಿಲ್ಲದ, ರೋಗರಹಿತ
**ನಿರಾವರಣ** ಮಾಯದ ಮುಸುಕಿಲ್ಲದ
**ನಿರಾಶಿಶ** ಆಸೆ ಇಲ್ಲದ
**ನಿರಾಸಕ** ತೆಗೆಯುವುದು, ನಾಶಮಾಡುವುದು

Rarest Archiver

**ನಿರಿ** ನಿರಿಗೆ, ಸೀರೆಯ ಮಡಿಕೆ

**ನಿರೀಹ** ಇಚ್ಛಾರಹಿತ

**ನಿರುಗೆ** ಕೋರಿಕೆ

**ನಿರುಜ** ನಿರ್ದೋಷ; ರೋಗವಿಲ್ಲದ; ದಿಟ

**ನಿರುತ** ಧರ್ಮ, ಶ್ರದ್ಧೆ, ಸದಾ ಧರ್ಮಶ್ರದ್ಧೆಉಳ್ಳವನು; ಸತ್ಯ, ನಿತ್ಯ, ನಿಶ್ಚಯ

**ನಿರುತಿ** ನೈಋತ್ಯದಿಕ್ಕಿನ ಒಡೆಯ: ರಾಕ್ಷಸ

**ನಿರುಪಮ** ಸಾಟಿಯಿಲ್ಲದ, ಅತಿಶಯವಾದ

**ನಿರುಪಾಧಿಕ** ಆಶಾರಹಿತನಾದ, ತೊಂದರೆ ಇಲ್ಲದ

**ನಿರುಪಾನಂದಾತ್ಮ** ಉಪಮೆಯಿಲ್ಲದ ಆನಂದಾದಿ ಸುಖಗಳನ್ನು ಅನುಭವಿಸುವವನು

**ನಿರುಮಾಲ್ಯ<ನಿರ್ಮಾಲ್ಯ** ದೇವರ ಪೂಜೆ ಮಾಡಿದ ಅನಂತರ ತೆಗೆದ ಹೂವು

**ನಿರೂಪ** ಅಪ್ಪಣೆ, ಆಜ್ಞೆ

**ನಿರ್ಗತಾಶನ** ನಿತ್ಯತೃಪ್ತ, ಊಟವಿಲ್ಲದವನು

**ನಿರ್ಗತಿ** ಅಸಹಾಯಕಸ್ಥಿತಿ, ಗತಿಇಲ್ಲದಿರುವಿಕೆ

**ನಿರ್ಗಳಿತ** ಕೆಳಗೆ ಹರಿಯುತ್ತಿರುವ

**ನಿರ್ಗಳಿತಶೋಣಿತ** ಕೆಳಕ್ಕೆ ಹರಿಯುತ್ತಿರುವ ರಕ್ತ

**ನಿರ್ಗುಣ** ಪ್ರಾಕೃತ ಗುಣಗಳಿಲ್ಲದವ, ಗುಣಾತೀತ, ಪರಮಾತ್ಮ

**ನಿರ್ಗುಣಮೂರ್ತಿ** ಶ್ರೀಹರಿ

**ನಿರ್ಘಣತನ** ದಯಾಶೂನ್ಯ, ನಿರ್ದಯ

**ನಿರ್ಘಣವೃತ್ತಿ** ಅಂತಃಕರಣವಿಲ್ಲದವ, ಕಟುಕ

**ನಿರ್ಘೃಣಿ** ಕ್ರೂರಿ

**ನಿರ್ಜರ** ಮುಪ್ಪಿಲ್ಲದವನು, ದೇವತೆ

**ನಿರ್ಜರತತಿ** ದೇವತೆಗಳ ಸಮೂಹ

**ನಿರ್ಜರತರಂಗಿಣಿ** ದೇವಗಂಗೆ

**ನಿರ್ಜರತರು** ಕಲ್ಪವೃಕ್ಷ

**ನಿರ್ಜರಪತಿಶತ್ರುಸತಿ** ಇಂದ್ರಜಿತನ ಹೆಂಡತಿಯಾದ ಸುಲೋಚನೆ

**ನಿರ್ಜರವ್ರಾತ** ದೇವತೆಗಳ ಸಮೂಹ

**ನಿರ್ಜರೇಶ** ಇಂದ್ರ, ಕೃಷ್ಣ

**ನಿರ್ಜರೋತ್ತಂಸ** ಶ್ರೇಷ್ಠರಾದ ಸುರ–ಇಂದ್ರ, ವಾಯು

**ನಿರ್ಜಿತ** ಸೋಲಿಲ್ಲದವನು, ಅಜೇಯ, ಗೆದ್ದ

**ನಿರ್ಜಿತಮಾಯ** ಅಜ್ಞಾನವನ್ನು ಗೆದ್ದವನು, ಜ್ಞಾನಪೂರ್ಣನಾದವನು

**ನಿರ್ಣಯ** ತೀರ್ಮಾನ, ಕೊನೆಯ ಮಾತು

**ನಿರ್ಣೀತ** ನಿಶ್ಚಯಿಸಿದ, ನಿರ್ಣಯವಾದ

**ನಿರ್ತ<ನಿರುತ** ನಿಜ

**ನಿರ್ದಾಯಕ** ಅಖಂಡ, ಪರಿಪೂರ್ಣ

**ನಿರ್ದೋಷ** ಅಜ್ಞಾನ ದುಃಖಾದಿ ದೋಷರಹಿತನಾದ ಶ್ರೀಹರಿ

**ನಿರ್ಧೂತ** ತೊಡೆದು ಹಾಕುವುದು

**ನಿರ್ಧೂತೆ** ತೊಳೆಯುವವಳು

**ನಿರ್ಧೂಮ** ಹೊಗೆಯಿಲ್ಲದ, ಸುಡು; ಪರಿಹರಿಸಿದವ

**ನಿರ್ಭರ** ರಭಸ; ಸಂಪೂರ್ಣಭಾರ, ಬಹಳ, ಅತಿಶಯ

**ನಿರ್ಭಾರಕ** ಸಂಪೂರ್ಣ; ಭಾರವಹಿಸುವ

**ನಿರ್ಭೀತಿ** ಭೀತಿಯಿಲ್ಲದ

**ನಿರ್ಮಮ** ಅಹಂಕಾರವಿಲ್ಲದವನು

**ನಿರ್ಮಲ** ಸ್ವಚ್ಛ, ಶುದ್ಧ

**ನಿರ್ಮಲಚಿತ್ತ** ವಿಶುದ್ಧಾತ್ಮ, ಶುದ್ಧಮನಸ್ಕ

**ನಿರ್ಮಲಸ್ವಾಂತ** ಪರಿಶುದ್ಧವಾದ ಮನಸ್ಸು, ನಡುಗುವ ಶರೀರ, ಕೃಶವಾದ ಶರೀರ

**ನಿರ್ಮೋಕ** ಪೊರೆಬಿಡುವುದು

**ನಿರ್ಲಯ** ನಾಶರಹಿತ, ಅವಿನಾಶಿ

**ನಿರ್ಲಿಪ್ತ** ಅಂಟಿಕೊಳ್ಳದ, ಅನಾಸಕ್ತ

**ನಿರ್ಲೇಪ** ಅಂಟದ, ಲೇಪವಿಲ್ಲದ

**ನಿರ್ವಾಣ** ಬೆತ್ತಲೆ; ಮುಕ್ತಿ, ಮೋಕ್ಷ

**ನಿರ್ವಾಣಿ** ಮುಕ್ತಿದಾಯಕ

**ನಿರ್ವಾದ** ವಾದರಹಿತ

**ನಿರ್ವಾಹ** ಆಧಾರ, ಆಶ್ರಯ

Rarest Archiver

**ನಿರ್ವಿಕಲ್ಪ** ಬದಲಾಗದ

**ನಿರ್ವಿಣ್ಣ, ನಿರ್ವಿಣ್ಣ್ಯ** ದುಃಖಿತ, ನಿರಾಶೆಗೊಂಡ

**ನಿರ್ವೀರ್ಯ** ನಿಶ್ಶಕ್ತನಾದವ, ವೀರ್ಯವಿಲ್ಲದವ

**ನಿರ್ವೇದ** ವೈರಾಗ್ಯ, ವಿರಕ್ತಿ

**ನಿರ್ವ್ಯಳೀಕ** ಸತ್ಯ, ಸುಳ್ಳಿಲ್ಲದ

**ನಿರ್ವ್ಯಾಜ** ಕಾರಣವಿಲ್ಲದ, ನಿಷ್ಕಾಮ

**ನಿರ್ಹಣ** ಪೂರೈಕೆ ಅಥವಾ ನಾಶ, ಪರಿಹಾರ್ಯ

**ನಿರ್ಹೇತುಕ** ಕಾರಣವಿಲ್ಲದ

**ನಿಲ(ಳ)ನುಡಿ** ನೆಲೆಯಾಗುವ ಮಾತು, ನಿಲ್ಲುವ ಮಾತು

**ನಿಲವರ** ವಾಸಸ್ಥಳ

**ನಿಲು** ಬಾಗಿಲಿನ ಎಡಬಲದ ಕಂಬ

**ನಿಲುಹು<ನಿಲುವು** ಮಡಕೆ ಇಡುವ ಹಗ್ಗದ ಜಾಳಿಗೆ

**ನಿವಹ** ಗುಂಪು, ಸಮೂಹ, ಮರುದ್ಗಣಗಳಲ್ಲೊಂದು ಗುಂಪು

**ನಿವಾಂತ** ಶಾಂತ

**ನಿವಾತ** ಮನೆ, ನಿವಾಸ; ಕವಚ; ವಾಯುರಹಿತವಾದ ಸ್ಥಳ

**ನಿವಾರಣೆ** ಕಳೆಯುವಿಕೆ, ಹೋಗಲಾಡಿಸುವಿಕೆ, ನಿಲ್ಲಿಸುವಿಕೆ

**ನಿವಾರಿಸು** ಕಳೆ, ತಡೆ

**ನಿವಾಳಿ** ದುಷ್ಟದೃಷ್ಟಿ ನಿವಾರಿಸುವುದು, ದೃಷ್ಟಿದೋಷ ತೆಗೆಯುವುದು

**ನಿವಿಷ್ಟ** ಸೇರಿದ, ಕೂಡಿದ

**ನಿವೃತಿ<ನಿವೃತ್ತಿ** ವಿಶ್ರಾಂತಿ, ಬಿಡುಗಡೆ, ಪರಿಹಾರ; ಪರಮಸುಖ, ಆತ್ಮಾನಂದ

**ನಿವೃತ್ತಿಪಥ** ಮೋಕ್ಷದ ದಾರಿ

**ನಿವೃತ್ತಿವರ್ತ್ಮ** ನಿವೃತ್ತಿಯ ದಾರಿ, ಬಿಡುಗಡೆಯ ಮಾರ್ಗ

**ನಿಶಾಕ, ನಿಶಾಚರ, ನಿಶಾಟ, ನಿಶಿಚರ** ರಾತ್ರಿವೇಳೆ ಸಂಚರಿಸುವವ, ರಾಕ್ಷಸ, ಪಿಶಾಚ

**ನಿಶಾಕರ** ಚಂದ್ರ

**ನಿಶಾಟಕುಲವೈರಿ, ನಿಶಾಟದಲ್ಲಣ** ದೈತ್ಯವೈರಿ–ವಿಷ್ಣು

**ನಿಶಾಣ<ಶಾಣ** ಒರೆಗಲ್ಲು

**ನಿಶಾಪತಿ** ಚಂದ್ರ

**ನಿಶಿ** ಕತ್ತಲು, ರಾತ್ರಿ

**ನಿಶಿಚರೇಶ** ನಿಶಾಚರೇಶ, ರಾಕ್ಷಸರಾಜ

**ನಿಶಿತ** ಹರಿತ

**ನಿಶಿತಕುಠಾರ** ಹರಿತವಾದ ಕೊಡಲಿ

**ನಿಶಿತಮಾರ್ಗಣ** ಹರಿತವಾದ ಬಾಣ

**ನಿಶಿತಿ** ತೀಕ್ಷ್ಣವಾದ

**ನಿಶಿದಿನ** ರಾತ್ರಿ–ಹಗಲು

**ನಿಶಿಪೆಸರಸುರ** ತಮನೆಂಬ ರಾಕ್ಷಸ

**ನಿಶೆ** ಕತ್ತಲು

**ನಿಶೆಪೆಸರ** ತಮನೆಂಬ ಹೆಸರಿನ

**ನಿಶ್ಚಿಂತಪದ** ಶಾಶ್ವತ ನೆಲೆ, ಮೋಕ್ಷ

**ನಿಶ್ಚೇಷ್ಟ** ಚಲನೆಯಿಲ್ಲದ, ಅಲುಗಾಟವಿಲ್ಲದ

**ನಿಶ್ಶಾನಿ<ನಿಶಾನಿ** ಗುರುತು; ಧ್ವಜ, ಬಾವುಟ

**ನಿಶ್ವಾಂತ** ಪ್ರಶಾಂತ

**ನಿಶ್ವಾಸ** ಉಸಿರು ಬಿಡುವುದು; ಸಾವು

**ನಿಶ್ಶಾಂತ** ಅಶಾಂತ, ಉಗ್ರ

**ನಿಷ** ಕಿರಾತ, ದುಷ್ಟ

**ನಿಷೂದನ** ಕೊಲ್ಲುವವ; ನಾಶ ಮಾಡತಕ್ಕ

**ನಿಷೇಚಕ** ಪಾಪ ತೊಳೆಯುವವ, ಅಭೀಷ್ಟ ಕೊಡುವವ–ಶ್ರೀಹರಿ

**ನಿಷ್ಕಳಂಕ** ಕಳಂಕವಿಲ್ಲದವ, ಪರಿಶುದ್ಧ

**ನಿಷ್ಕಾಮ** ಕಾಮನಾರಹಿತ, ಪ್ರತಿಫಲಾಪೇಕ್ಷೆಇಲ್ಲದ

**ನಿಷ್ಕಿಂಚನ** ಅನಪೇಕ್ಷಿತ

**ನಿಷ್ಕೃತಿ** ಹೊರಹೋಗುವಿಕೆ, ಪ್ರಾಯಶ್ಚಿತ್ತ; ಪಾಪರಹಿತ

**ನಿಷ್ಠೆ** ಇರುವಿಕೆ, ಸ್ಥಿತಿ; ಶ್ರದ್ಧೆ

**ನಿಸ್ತಂದ್ರ** ನಿರಾಯಾಸ

Rarest Archiver

**ನಿಸ್ತುಲ** ಅಸಮಾನ
**ನಿಸ್ತ್ರೈಗುಣ್ಯ** ಸತ್ವರಜತಮೋಗುಣ ರಹಿತ
**ನಿಸ್ವಜನ** ಬಂಧುಗಳಿಲ್ಲದ; ಬಡಜನ
**ನಿಸ್ಸಾಳ** ಒಂದು ಬಗೆಯ ಚರ್ಮವಾದ್ಯ
**ನಿಸ್ಸೀಮ** ಅಳತೆಗೆ ನಿಲಿಕದವನು, ಸೀಮಾತೀತ, ಅಪ್ರಮೇಯ–ಶ್ರೀಹರಿ
**ನಿಹಿತಸುಖ** ಶಾಶ್ವತಸುಖ
**ನೀಂಟಿಸು<ನಿಟ್ಟಿಸು** ಎವೆಯಿಕ್ಕದೆ ನೋಡು, ಒಂದೇಸಮನೆ ನೋಡು, ನೇರವಾಗಿ ನೋಡು
**ನೀಕರಿಸು** ತಿರಸ್ಕರಿಸು, ಧಿಕ್ಕರಿಸು
**ನೀಗದ** ಅಸಾಧ್ಯವಾದ
**ನೀಗು** ಬಿಡು, ಕಳೆ, ತೊಲಗಿಸು
**ನೀಚಯೋನಿ** ಕೀಳು ಜನ್ಮ
**ನೀಚವೃತ್ತಿ** ಕೆಟ್ಟ ಉದ್ಯೋಗ, ಕೀಳು ವೃತ್ತಿ; ಸೇವಾವೃತ್ತಿ
**ನೀಟ, ನೀಟು** ನೇರವಾದ, ನೆಟ್ಟಗಿನ; ಉಚಿತ; ಚೆಲುವು
**ನೀಟಾದವರು** ಋಜುಗಳು; ಸಿರಿವಂತರು
**ನೀಟುಗಾಯ** ಸುಂದರ
**ನೀಟುಗಾರ** ನೇರವಾಗಿ ನಡೆಯುವವನು
**ನೀಟುಸೂತ್ರ** ಸರಳವಾದ ಮಾರ್ಗ
**ನೀಡ** ಗೂಡು
**ನೀಡು** ಚಾಚು, ಕೊಡು
**ನೀತ** ಉಚಿತ, ಕ್ರಮವಾದ; ವಿನೀತ
**ನೀತವರಿ** ಮಾರ್ಗತಿಳಿ
**ನೀತೆ** ಪರಿಶುದ್ಧಳು
**ನೀಪ** ಕದಂಬವೃಕ್ಷ, ತಾಳೆಮರ, ಕಡವದ ಮರ
**ನೀರಗೌಡಿ** ನೀರು ಹೊತ್ತು ತರಲು ನೇಮಿಸಿದ ಆಳು
**ನೀರಜ** ಪರಿಶುದ್ಧ, ಪಾಪರಹಿತ; ತಾವರೆ, ಕಮಲ
**ನೀರಜಜಾಂಡ** ದೋಷರಹಿತ ಬ್ರಹ್ಮಾಂಡ
**ನೀರಜನಯನ** ಕಮಲದಂತೆ ಕಣ್ಣುಳ್ಳವ–ಶ್ರೀಹರಿ
**ನೀರಜಭವ** ಬ್ರಹ್ಮ
**ನೀರಜಾಂಬಕ, ನೀರಜಾಕ್ಷ** ತಾವರೆಯಂತೆ ಕಣ್ಣುಳ್ಳವ–ಶ್ರೀಹರಿ
**ನೀರಜಾಕ್ಷಿ** ಕಮಲದಂತೆ ಕಣ್ಣುಳ್ಳವಳು–ಲಕ್ಷ್ಮಿ
**ನೀರಜಾಲಯೆ** ಕಮಲದಲ್ಲಿ ವಾಸಿಸುವವಳು–ಲಕ್ಷ್ಮಿ
**ನೀರಜಾಸನ** ಬ್ರಹ್ಮ
**ನೀರಡಿ** ನೀರಿನ ಕೆಳಗು, ಪಾತಾಳ
**ನೀರಡಿಕೆ** ಬಾಯಾರಿಕೆ, ಸೇದೆ, ತೃಷೆ
**ನೀರದ** ಮೋಡ
**ನೀರದನೀಲ** ಮೋಡದಂತೆ ನೀಲವರ್ಣ, ನೀಲಮೇಘಶ್ಯಾಮನಾದ ಕೃಷ್ಣ
**ನೀರದವರ್ಣ** ಮೋಡದ ಬಣ್ಣವುಳ್ಳವ–ವಿಷ್ಣು
**ನೀರಧಿ** ಸಮುದ್ರ
**ನೀರಧಿಸುತೆ** ಲಕ್ಷ್ಮಿ
**ನೀರಪ್ರದ** ಮೇಘ, ಮೋಡ
**ನೀರಪ್ರದಾಭ** ಮೋಡದಂತೆ ನೀಲವರ್ಣವುಳ್ಳವ–ವಿಷ್ಣು
**ನೀರಬೊಬ್ಬುಳಿ** ನೀರಗುಳ್ಳೆ
**ನೀರಮಸ್ತಕದಲ್ಲಿಧರಿಸಿದವ** ಗಂಗೆಯನ್ನು ತಲೆಯಲ್ಲಿ ಹೊತ್ತವ–ಶಿವ
**ನೀರಮೇಲಿನ ಗುಳ್ಳೆ** ಅಶಾಶ್ವತ, ಕ್ಷಣಿಕ
**ನೀರಾಜನ** ಪೂಜೆಗಾಗಿ ಸಿದ್ಧಗೊಳಿಸಿದ ದೀಪ, ಮಂಗಳಾರತಿ
**ನೀರಾಜಿಸು** ಆರತಿಯನ್ನು ಎತ್ತು
**ನೀರಾಡು** ಸ್ನಾನಮಾಡು, ಮಜ್ಜನಮಾಡು
**ನೀರಿನಗಿರಿ** ಹಿಮವತ್ಪರ್ವತ
**ನೀರುಕಾವಡಿ** ನೀರನ್ನು ಹೊರಲು ಬಳಸುವ ಬಿದಿರಿನ ಸಾಧನ
**ನೀರುಪತಿ** ವರುಣ
**ನೀರುಳ್ಳಿ** ಉಳ್ಳೇಗಡ್ಡೆ, ಈರುಳ್ಳಿ
**ನೀರೆ** ಸ್ತ್ರೀ, ಚೆಲುವೆ
**ನೀರೇರುಹ** ಕಮಲ

Rarest Archiver

**ನೀರೊಳ್ಳಿ(ಳ್ಳೆ)** ನೀರುಹಾವು
**ನೀಲ** ನೀಲಿ ರತ್ನ; ಒಂದು ಕಪಿ
**ನೀಲಕಂಠ, ನೀಲಕಂಧರ** ಕಪ್ಪುಕಂಠಉಳ್ಳ ವಿಷಕಂಠ–ಶಿವ
**ನೀಲಕುಂತಳ** ಕಪ್ಪು ಕೂದಲು
**ನೀಲಗಳ** ನೀಲಕಂಠ–ಶಿವ
**ನೀಲಗ್ರೀವ** ನವಿಲು; ನೀಲಕಂಠನಾದ ಶಿವ
**ನೀಲಘನ** ಕಪ್ಪಾದ ಮೋಡ
**ನೀಲಘನಾಭ** ನೀಲಮೇಘದಂತೆ ಕಾಂತಿಯುಳ್ಳವ
**ನೀಲದಬಾವುಲಿ** ಕಿವಿಯ ತುದಿಗೆ ತೊಡುವ ನೀಲಿಹರಳಿನ ಆಭರಣ
**ನೀಲನಳ** ಇವರಿಬ್ಬರೂ ವಾನರ ವೀರರು
**ನೀಲನೀರದ** ನೀಲಮೇಘ, ಕಪ್ಪು ಮೋಡ
**ನೀಲನೀರದವರ್ಣ** ಮೋಡದಂತೆ ಕಡುನೀಲಿ ಬಣ್ಣ ಉಳ್ಳವ, ನೀಲಮೇಘಶ್ಯಾಮ–ಕೃಷ್ಣ
**ನೀಲಮುತ್ತು** ನೀಲ ಮತ್ತು ಮುತ್ತು
**ನೀಲಮೇಘಶ್ಯಾಮ** ನೀಲಿಯಾದ ಮೋಡದ ಬಣ್ಣವುಳ್ಳ–ಕೃಷ್ಣ
**ನೀಲಲೋಹಿತ** ನೀಲವರ್ಣದ ಕುತ್ತಿಗೆ ಉಳ್ಳವ–ಶಿವ
**ನೀಲವರ್ಣ** ಕೃಷ್ಣ
**ನೀಲಾಂಬುದ** ಕಪ್ಪುಮೋಡ
**ನೀಲಾಬ್ಜ** ಕನ್ನೈದಿಲೆ
**ನೀಲಾಭ** ನೀಲಚ್ಛಾಯೆಯುಳ್ಳವನು
**ನೀಲಾಭೆ** ನೀಲಚ್ಛಾಯೆಯುಳ್ಳವಳು
**ನೀಲೋತ್ಪಲ** ಕನ್ನೈದಿಲೆ, ನೀಲಿ ಕಮಲ
**ನೀವಾರ** ಕಾಡಿನಲ್ಲಿ ಬೆಳೆಯುವ ಬತ್ತ
**ನೀವಿ** ಸ್ತ್ರೀಯರು ಸೀರೆಯನ್ನು ಉಡುವಾಗ ಹಾಕುವ ಪ್ರಾರಂಭದ ಗಂಟು, ನೆರಿಗೆಕಟ್ಟು
**ನೀವು** ಕೈಯಿಂದ ತೀಡು, ಉಜ್ಜು
**ನೀಸು** ಕೊನೆಗಾಣಿಸು
**ನೀಹಾರ** ಹಿಮ, ಇಬ್ಬನಿ
**ನೀಳ್ದೆರಗು** ನಿಡಿದಾಗಿ ಬೀಳು, ಸಾಷ್ಟಾಂಗ ನಮಸ್ಕಾರ
**ನುಗುಳು, ನುಸಳು** ಜಾರು, ನುಣುಚು, ನುಗ್ಗು
**ನುಗ್ಗು** ಪುಡಿ; ಒಳಗೆ ಪ್ರವೇಶಿಸು
**ನುಡಿಅಂಬು** ಮಾತೆಂಬ ಬಾಣ, ವಾಕ್ಶರ
**ನುಡಿಎರಡಾಗು** ಕೊಟ್ಟ ಮಾತಿಗೆ ತಪ್ಪು, ಸುಳ್ಳಾಡು
**ನುಡಿಯಕದ್ದೊಯ್ದವ** ವೇದಗಳನ್ನು ಅಪಹರಿಸಿದ ತಮನೆಂಬ ದೈತ್ಯ
**ನುಡಿವೆಣ್ಣು** ಸರಸ್ವತಿ
**ನುತ** ಸ್ತುತಿಸಲ್ಪಡುವ
**ನುತಿ** ಹೊಗಳಿಕೆ, ಸ್ತುತಿ
**ನುತ್ಯ** ನುತಿಸಲ್ಪಡುವ
**ನುದಿಸು** ಪ್ರಕಾಶಗೊಳಿಸು; ಹೋಗಲಾಡಿಸು, ತಳ್ಳು
**ನುಲಿ** ಹೊಸೆ, ಹಂಬಿಗೆ, ಹಗ್ಗ, ಹುರಿ
**ನುಲ್ಕಿ**<**ನುಲಿಕೆ** ದಾರ
**ನುಸಿ** ಹುಡಿ, ಸಣ್ಣಪುಟ್ಟ, ನೊರಜು
**ನೂತನಾವರಣ** ಹೊಸಕೋಟೆ
**ನೂಪುರ** ಕಾಲಂದುಗೆ, ನೇವುರ
**ನೂರುಕಲ್ಪಧರ್ಮ** ನೂರುಕಲ್ಪಗಳಲ್ಲಿ ಸಾಧಿಸ ಬಹುದಾದ ಪುಣ್ಯ
**ನೂರುತಡ** ನೂರುಬಾರಿ
**ನೂರುಪರ್ವತವರುಷ** ಏಳುನೂರು ವರ್ಷಗಳು
**ನೂರುಮುಖ** ಶತಾನಂದ, ಬ್ರಹ್ಮ
**ನೂಲಮಾಲೆ** ಗುಣರಹಿತವಾದದ್ದು, ನಿಸ್ಸಾರ ವಾದದ್ದು
**ನೃ** ನರ, ಮನುಷ್ಯ
**ನೃಕಂಠೀರವ** ನೃಸಿಂಹ, ನರಸಿಂಹ
**ನೃತ** ಸತ್ಯ
**ನೃಪ, ನೃಪತಿ** ದೊರೆ, ಅರಸ
**ನೃಪನಭೃತ್ಯರು** ಕಾಲಾಖ್ಯ–ಯಮನ ದೂತರು, ರಾಜಭೃತ್ಯರು
**ನೃಪರಘಾತ** ಪರಶುರಾಮ
**ನೃಪಲ** ನರಮಾಂಸ

Rarest Archiver

**ನೃಪಶು** ತಿಳಿಗೇಡಿ; ದ್ವಿಪಾದ ಪಶು, ನರಪಶು, ಮನುಷ್ಯ

**ನೃಪಾಲರು** ಮರುತ್ತ, ಸಹೋತ್ರ, ಅಂಗರಾಜ, ಶಿಬಿ, ರಾಮ, ಭಗೀರಥ, ದಿಲೀಪ, ಮಾಂಧಾತ, ಯಯಾತಿ, ಅಂಬರೀಶ, ಶಶಬಿಂದು, ಗಯಾ, ರಂತಿದೇವ, ಭರತ, ಪೃಥು, ಪರಶುರಾಮ– ಈ 16 ಮಂದಿ

**ನೃಶಂಸ** ಕ್ರೂರಿ

**ನೆಗಹು, ನೆಗಪು** ನಿಲ್ಲುವಿಕೆ, ಎತ್ತು, ಚಿಮ್ಮು

**ನೆಗಳು** ಅಜ್ಞಾನ; ಕೈಗೊಳ್ಳು; ಪ್ರಸಿದ್ಧಿ, ಪ್ರಸಿದ್ಧಿ ಪಡೆ, ಮಾಡು; ಮೊಸಳೆ

**ನೆಗೆಣ್ಣಿ, ನೆಗೆಹೆಣ್ಣು** ಭಾವ ಅಥವಾ ಮೈದುನನ ಹೆಂಡತಿ, ಓರಗಿತ್ತಿ

**ನೆಗ್ಗು** ಪುಡಿಗುಟ್ಟು, ಚೂರುಮಾಡು

**ನೆಗ್ಗೊತ್ತು** ಹಾಳು ಮಾಡು

**ನೆಚ್ಚು** ನಂಬು, ವಿಶ್ವಾಸವಿಡು

**ನೆಣ** ಕೊಬ್ಬು, ಮೇದಸ್ಸು, ಜಿಡ್ಡು

**ನೆತ್ತ** ಕಣ್ಣು, ನೇತ್ರ; ಜೂಜು, ಪಂದ್ಯ, ಪಗಡೆಯಾಟ

**ನೆತ್ತರು** ರಕ್ತ

**ನೆತ್ತಿ** ತಲೆಯ ಮಧ್ಯಭಾಗ, ತುದಿ, ಶಿಖರ

**ನೆತ್ತಿಯಗೊಂಡೆ** ಒಂದು ಆಭರಣ

**ನೆನವು** ಸ್ಮರಣೆ, ನೆನಪು

**ನೆನೆಯಕ್ಕಿ** ತೊಯ್ದಿದ ಅಕ್ಕಿ; ಒಂದು ಬಗೆಯ ಔಷಧಿ ಸಸ್ಯ

**ನೆಮ್ಮು** ಆಶ್ರಯಿಸು

**ನೆಮ್ಮುಗೆ** ಆಶ್ರಯ

**ನೆರಪು, ನೆರಹು** ಒಟ್ಟುಗೂಡು, ಗುಂಪುಗೂಡು

**ನೆರವು** ಸಹಾಯ

**ನೆರೆ** ಕಠಿಣವಾದ; ಚೆನ್ನಾದ, ಹೆಚ್ಚಾದ; ಸೇರು, ಒಂದಾಗು, ಕೂಡು (ಸಂಯೋಗ ಹೊಂದು); ಸಮೀಪ, ಅಕ್ಕಪಕ್ಕ; ಕೊಡು; ಪೂರ್ಣ

**ನೆರೆದೂರ** ಸ್ವಲ್ಪದೂರ, ಹತ್ತಿರ

**ನೆರೆನಂಬು** ಚೆನ್ನಾಗಿ ಶ್ರದ್ಧೆಯಿಡು

**ನೆರೆಪರೆ** ನರೆಗೂದಲು ಮತ್ತು ಸುಕ್ಕು ಗಟ್ಟಿದ ಚರ್ಮ, ಬಿಳಿಯ ಕೂದಲು

**ನೆರೆಬಾಳು** ಚೆನ್ನಾಗಿ ಬಾಳು

**ನೆರೆಸು** ಕೂಡಿಸು, ಕಲೆಹಾಕು

**ನೆಲಕಟ್ಟು, ನೆಲೆಕಟ್ಟು** ಸಮನಾದ ನೆಲ

**ನೆಲಕಲ** ಲೋಭಿ, ಕೃಪಣ

**ನೆಲನಳೆದು, ನೆಲನಳೆದುವಮೂರ** ಹರಿಯ ವಾಮನಾವತಾರ (ತ್ರಿವಿಕ್ರಮ)

**ನೆಲಬಟ್ಟೆ** ಭೂಮಾರ್ಗ

**ನೆಲವು, ನೆಲು, ನೆಲುವು** ಹಾಲು, ಮೊಸರಿನ ಪಾತ್ರೆಗಳನ್ನು ಇಡಲು ಇಳಿಬಿಡುವ ಹಗ್ಗದ ಜಾಳಿಗೆ, ಉಗ್ಗ

**ನೆಲೆ** ವಾಸಸ್ಥಳ, ಮನೆ, ಮೂಲಸ್ಥಾನ; ರಹಸ್ಯ

**ನೆಲೆಗಾಣು** ಗತಿಗಾಣು, ಆಶ್ರಯ ಹೊಂದು

**ನೆಲೆತಪ್ಪು** ಸ್ಥಿತಿಗೆಡು, ದೆಸೆಗೆಡು, ನಿರಾಶ್ರಿತನಾಗು

**ನೆಲೆನಿಭ** ಆಧಾರ, ಮೂಲ; ಭೂಮಿ, ಆಕಾಶ

**ನೆಲ್ಲನಿಲ್ಲು** ಬತ್ತದ ಗೊಣಬೆ, ಮೆದೆ; ಬೂದಿ

**ನೆಲ್ಲು** ಬತ್ತ

**ನೆವ** ನೆಪ

**ನೆಳಲಕಾಣದೆ** ಸುಳಿವು–ಸೂಚನೆ ತಿಳಿಯದೆ

**ನೆಳಲು** ಕತ್ತಲು, ಛಾಯೆ

**ನೇಜಂಯ** ಭಲ್ಲೆ, ಭರ್ಜಿ, ನಾರಾಚ

**ನೇಜಿ** ಭತ್ತ, ರಾಗಿ, ಮುಂತಾದವುಗಳ ಸಸಿ

**ನೇಣ್, ನೇಣು** ಹಗ್ಗ, ರಜ್ಜು

**ನೇಣುಸಿರಿ** ಚೆಲುವಾದ ಹಗ್ಗ

**ನೇತಾರ** ನಾಯಕ, ಮುಂದಾಳು

**ನೇತಿ–ನೇತಿ** ಇದಲ್ಲ–ಇದಲ್ಲ; (ಬ್ರಹ್ಮತತ್ತ್ವವು ವರ್ಣನಾತೀತವು)

**ನೇತಿ**<ನ+ಇತಿ ಅಲ್ಲ ಎಂದು

**ನೇತುರ**<ನೇತ್ರ ಕಣ್ಣು

**ನೇಮ** ವ್ರತ

Rarest Archiver

**ನೇರಂದ** ಬಹಳ ಚಂದವಾದ, ಸುಂದರವಾದ
**ನೇವರಿಸು** ಸವರು, ಉಗುರಿಸು
**ನೇವಳ, ನೇವಾಳ** ಸರ, ಕಂಠಿಹಾರ, ಉಡಿದಾರ, ಕಟಿಸೂತ್ರ
**ನೇಸರು** ಸೂರ್ಯ
**ನೇಹ** ಸ್ನೇಹ; ಎಣ್ಣೆ
**ನೇಹಿಗ** ಸ್ನೇಹಿತ
**ನೈಮಿತ್ತಿಕ** ಹಬ್ಬ, ಗ್ರಹಣ ಮುಂತಾದ ಪರ್ವಗಳಿಗೆ ಸಂಬಂಧಿಸಿದ, ನಿಮಿತ್ತ (ಕರ್ಮ); ಶಕುನ ಹೇಳುವವನು, ಜ್ಯೋತಿಷಿ
**ನೈಮಿಶಾರಣ್ಯ** ಆಯೋಧ್ಯೆಯಿಂದ ಮುಂದೆ ಒಂದು ಕಾಡು, ಸೂತರು ಇಲ್ಲಿ ಸನಕಾದಿಗಳಿಗೆ ಪುರಾಣ ಹೇಳುತ್ತಿದ್ದರೆಂದು ತಿಳಿಸಲಾಗಿದೆ
**ನೊಂದ** ದುಃಖಪಟ್ಟ
**ನೊಗ** ಪಲ್ಲಕ್ಕಿಯನ್ನು ಹೊರುವ ಸಾಧನ, ಚಕ್ಕಡಿ ಎಳೆಯಲು ಎತ್ತು ಕಟ್ಟುವ ಸಾಧನ
**ನೊರಜ, ನೊರಜು** ಸೊಳ್ಳೆ, ಒಂದು ಜಾತಿಯ ಕೀಟ
**ನೊಸಲು** ಹಣೆ
**ನೋಂಪಿ, ನೋಯಿ, ನೋಹಿ** ವ್ರತ
**ನೋಕನೀಯ** ವೃದ್ಧಿಹ್ರಾಸರಹಿತ, ನಿತ್ಯ ಪರಿಪೂರ್ಣ, ಸರ್ವೋತ್ತಮ–ವಿಷ್ಣು
**ನೋನು** ವ್ರತಮಾಡು
**ನೋಯನೀಯನೆ** ಸಾಧನರಹಿತ ನಿತ್ಯಪೂರ್ಣ ಕಾಮ
**ನೌಕೆ** ಹಡಗು
**ನೌಬತ್ತು** ಮಂಗಳಸೂಚಕ ವಾದ್ಯ
**ನೌಲು** ನವಿಲು
**ನ್ಯಗ್ರೋಧಪತ್ರ** ಆಲದ ಎಲೆ
**ನ್ಯಸ್ತ** ಇಡಲ್ಪಟ್ಟ, ಇರಿಸಿದ
**ನ್ಯಾಯಾರ್ಜಿತ** ನ್ಯಾಯವಾಗಿ ಸಂಪಾದಿಸಿದ
**ನ್ಯಾಸ** ಇಡಲ್ಪಟ್ಟದ್ದು, ಇಡುವಿಕೆ, ಪ್ರತಿಷ್ಠಾಪನೆ
**ನ್ಯಾಸಮಂತ್ರ** ತತ್ತ್ವನ್ಯಾಸ ಮಂತ್ರ(ದೇವರ ಪೂಜೆಗೆ ಸಂಬಂಧಿಸಿದ್ದು)
**ನ್ಯೂನ** ತಪ್ಪು, ಕುಂದು, ಕೊರತೆ

## ಪ

**ಪ** ಪಾಲಿಸುವವನು; ಕುಡಿ
**ಪಂಕ** ಕೆಸರು; ದೋಷ, ಪಾಪ
**ಪಂಕಜ** ತಾವರೆ
**ಪಂಕಜತನುಜ** ಕಮಲದಿಂದ ಹುಟ್ಟಿದವನು–ಬ್ರಹ್ಮ
**ಪಂಕಜನಾಭ** ಹೊಕ್ಕುಳಲ್ಲಿ ಕಮಲವುಳ್ಳವನು–ವಿಷ್ಣು
**ಪಂಕಜನೂಪುರ** ತಾವರೆ ಹೂವಿನ ಆಕಾರದಲ್ಲಿರುವ ಕಾಲುಂಗುರ/ಕಾಲಂದಿಗೆ
**ಪಂಕಜನೇತ್ರೆ** ಕಮಲದಂತೆ ಸುಂದರವಾದ ಕಣ್ಣುಗಳುಳ್ಳವಳು–ಲಕ್ಷ್ಮಿ
**ಪಂಕಜಪಾಣಿ** ಎರಡೂ ಕೈಗಳಲ್ಲಿ ಕಮಲಾಧಾರಿಣಿ –ಲಕ್ಷ್ಮಿ
**ಪಂಕಜಮಿತ್ರ** ಸೂರ್ಯ
**ಪಂಕಜಮುಖಿ** ಕಮಲದಂತೆ ಸುಂದರವಾದ ಮುಖವುಳ್ಳವಳು–ಲಕ್ಷ್ಮಿ
**ಪಂಕಜವೈರಿ** ಚಂದ್ರ
**ಪಂಕಜಸಖ** ಸೂರ್ಯ
**ಪಂಕಜಾಂಬಕ, ಪಂಕಜಾಕ್ಷ** ಕಮಲದಂತೆ ವಿಶಾಲವಾದ ಕಣ್ಣುಳ್ಳವ–ವಿಷ್ಣು
**ಪಂಕಜಾಸನ** ತಾವರೆಯನ್ನು ಪೀಠವಾಗುಳ್ಳ ಬ್ರಹ್ಮ
**ಪಂಕಜೇಕ್ಷಣ** ಕಮಲದಂತೆ ಕಣ್ಣುಳ್ಳವನು–ವಿಷ್ಣು
**ಪಂಕಜೋದ್ಭವ** ಬ್ರಹ್ಮ
**ಪಂಕಜೋದ್ಭವನಯ್ಯ** ಬ್ರಹ್ಮದೇವರ ತಂದೆ–ವಿಷ್ಣು
**ಪಂಕಾಲಯ** ಕೆಸರಿನ ಮನೆ; ಸರೋವರ, ಕೆರೆ

Rarest Archive

**ಪಂಕೇಜ, ಪಂಕೇರುಹ** ಕಮಲ

**ಪಂಕೇರುಹೇಕ್ಷ** ತಾವರೆ ಕಣ್ಣಿನವನು

**ಪಂಕ್ತಿ(ಜ್ತಿ)** ಸಾಲು; ಐದು, ಹತ್ತು

**ಪಂಗು** ಕುಂಟ, ಹೆಳವ

**ಪಂಜ್ತೆಸ್ಯಂದನ** ದಶರಥ

**ಪಂಚ** ವಿಸ್ತಾರವಾದ

**ಪಂಚಆತ್ಮಗಳು** ದೇಹ, ಇಂದ್ರಿಯಗಳು, ಮನಸ್ಸು, ಬುದ್ಧಿ, ಅವ್ಯಕ್ತ

**ಪಂಚಉಪವಾಯುಗಳು** ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ

**ಪಂಚಕಜ್ಜಾಯ** ಅವಲಕ್ಕಿ, ಎಳ್ಳು, ಕೊಬ್ಬರಿ, ಬೆಲ್ಲ, ಕಡಲೆಗಳು ಸೇರಿ ಆದ ಪದಾರ್ಥ

**ಪಂಚಕಷ್ಟ, ಪಂಚಕ್ಲೇಶ** ಅವಿದ್ಯೆ, ಅಸ್ಮಿತ, ರಾಗ, ದ್ವೇಷ ಮತ್ತು ಅಭಿನಿವೇಶ

**ಪಂಚಕೃಷ್ಣಾ** ಪಂಚಕೃಷ್ಣಾರಣ್ಯ ಕ್ಷೇತ್ರ; ತಿರು ಕೋಯಿಲೂರು ಪ್ರದೇಶ ?

**ಪಂಚಕೋಶ** ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಮತ್ತು ಆನಂದಮಯ. ಈ ಕೋಶಗಳಲ್ಲಿ ಆತ್ಮನು ಸಂಚರಿಸುತ್ತಿರುವನು

**ಪಂಚಗಂಗಾ** ಕಾಶಿಯಲ್ಲಿ ಯಮುನಾ, ಸರಸ್ವತಿ, ಕಿರಣಾ ಮತ್ತು ಧೂತಪಾಪಾ ನದಿಗಳು ಗುಪ್ತ ರೀತಿಯಲ್ಲಿ ಗಂಗೆಗೆ ಬಂದು ಕೂಡುವುದರಿಂದ ಈ ಹೆಸರಾಗಿದೆ; ಕಾಶಿಯಲ್ಲಿ ಒಂದು ಕ್ಷೇತ್ರ

**ಪಂಚಗವ್ಯ** ಹಸುವಿನ ಹಾಲು, ಮೊಸರು, ತುಪ್ಪ, ಗಂಜಲ, ಸಗಣಿಗಳ ಮಿಶ್ರಣ

**ಪಂಚಜ್ಞಾನೇಂದ್ರಿಯಗಳು** ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು

**ಪಂಚತ್ರಿಂಶತ್ಕೋಟಿ** ಮೂವತ್ತೈದು ಕೋಟಿ

**ಪಂಚತ್ವಐದಿಸು** ಕೊಲ್ಲು, ಸಾಯಿಸು, ಲಯ ಹೊಂದಿಸು,

**ಪಂಚದಿವ್ಯಅಮೃತಾನ್ನ** ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ, ಪೇಯ ಎಂಬ ಐದು ಬಗೆಯ ಆಹಾರಗಳು

**ಪಂಚದೇವರು** ಪಂಚಾಯತನ, ಸೂರ್ಯ, ಗಣಪತಿ, ದುರ್ಗೆ, ಶಿವ, ವಿಷ್ಣು ಎಂಬ ಐದು ದೇವತೆಗಳು

**ಪಂಚದ್ವಯಾನನ** ರಾವಣ

**ಪಂಚಧಾರೆ** ಸಕ್ಕರೆ

**ಪಂಚನಂದನ** ಮಾರುತಿ

**ಪಂಚಪಂಚಕ್ರೋಶ** ಇಪ್ಪತ್ತೈದು ಕ್ರೋಶ, ಎಪ್ಪತ್ತೈದು ಮೈಲಿ

**ಪಂಚಪಂಚರೂಪ** ಅನಿರುದ್ಧ, ಪ್ರದ್ಯುಮ್ನ, ಸಂಕರ್ಷಣ, ವಾಸುದೇವ ನಾರಾಯಣ–ಇವು ತಮ್ಮ ತಮ್ಮೊಳಗೆ ತಿರುಗಿ ಇಪ್ಪತ್ತೈದು ರೂಪಗಳು

**ಪಂಚಪರಣ, ಪಂಚಪ್ರಾಣ** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂಬ ಐದು ವಾಯುಗಳು

**ಪಂಚಪರ್ವ** ಪಂಚ ಕಷ್ಟಗಳು

**ಪಂಚಪ್ರಾಣಾಧಾರ** ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ಐದು ಪ್ರಾಣಗಳಲ್ಲೂ ವ್ಯಾಪ್ತನಾದ ವಿಷ್ಣು

**ಪಂಚಬಂಧ** ಭವಬಂಧ; ಆಯು, ಕರ್ಮ, ಧನ, ವಿದ್ಯೆ, ಮೃತ್ಯು

**ಪಂಚಬಾಣ** ಮನ್ಮಥ

**ಪಂಚಬಾಣನಯ್ಯ, ಪಂಚಬಾಣ** ಶ್ರೀಹರಿ

**ಪಂಚಭಕ್ಷ್ಯ** (1) ಅತಿರಸ, ಹೋಳಿಗೆ, ಲಡ್ಡು, ಜಿಲೇಬಿ, ಅಪೂಪ ಅಥವಾ ಅಪ್ಪಂ (2) 5 ಬಗೆಯ ಭಕ್ಷ್ಯಗಳು–ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯ, ಪೇಯ

**ಪಂಚಭೂತಗಳು** ಭೂಮಿ, ನೀರು, ಅಗ್ನಿ, ವಾಯು, ಆಕಾಶ

Rarest Archiver

**ಪಂಚಭೇದ** ಜೀವ ಜೀವಕೆ ಭೇದ, ಜೀವ ಜಡಕೆ ಭೇದ, ಜಡ ಜಡಕೆ ಭೇದ, ಜೀವ ಪರಮಾತ್ಮಗೆ ಭೇದ, ಜಡ ಪರಮಾತ್ಮಗೆ ಭೇದ

**ಪಂಚಮಹಾಪಾತಕ** 5 ಮಹಾಪಾಪಗಳು – ಚಿನ್ನವನ್ನು ಕದಿಯುವುದು, ಹೆಂಡವನ್ನು ಕುಡಿಯುವುದು, ಗುರುಪತ್ನೀ ಗಮನ, ಬ್ರಹ್ಮಹತ್ಯೆ ಹಾಗೂ ಇವುಗಳನ್ನು ಮಾಡುವವರ ಸ್ನೇಹಮಾಡುವುದು

**ಪಂಚಮಹಾಭೂತ** ಪೃಥ್ವಿ, ಅಪ್, ತೇಜ, ವಾಯು, ಆಕಾಶ

**ಪಂಚಮಹಾಯಜ್ಞ** ವೇದ, ದೇವತೆಗಳು, ಪಿತೃ, ಮನುಷ್ಯ ಮತ್ತು ಸೃಷ್ಟಿಯ ಎಲ್ಲ ಜೀವಗಳಿಗೆ ಮಾಡುವ ಬಲಿ

**ಪಂಚಮಾರ್ಗ** ಧೂಮಾದಿಮಾರ್ಗ, ಅರ್ಚಿರಾದಿ ಮಾರ್ಗ, ಬ್ರಹ್ಮಯಾನಮಾರ್ಗ, ಶೇಷಮಾರ್ಗ ಮತ್ತು ಗರುಡಮಾರ್ಗ ಎಂಬ ಐದು ಮರಣದದಾರಿಗಳು

**ಪಂಚಮುಖ** ಸಿಂಹ; ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪರಶಿವನ ಐದು ಮುಖಗಳು

**ಪಂಚಮುದ್ರೆಗಳು** ಕೈಯಿಂದ ತೋರುವ ಸಂಕೇತಗಳು: ಗರುಡ, ಶಂಖ, ಚಕ್ರ, ಮೇರು ಮತ್ತು ಧೇನು ಮುದ್ರೆಗಳು; ಅಥವಾ ಆವಾಹನೀ, ಸ್ಥಾಪನೀ, ಸನ್ನಿಧಾಪನಿ, ಸಂದೋಧಿನೀ, ಸಂಮುಖ್ಯಕರಣೀ; ಅಥವಾ ಚಕ್ರ, ಶಂಖ, ಗದಾ, ಪದ್ಮ, ನಾರಾಯಣ

**ಪಂಚಮೋಕ್ಷ** ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ, ಸಾರ್ಷ್ಟಿ

**ಪಂಚಯಜ್ಞ** ದೇವಪೂಜೆ, ಬ್ರಹ್ಮಯಜ್ಞ, ವೈಶ್ವದೇವ, ಬಲಿಹರಣ, ಅತಿಥಿಪೂಜೆ

**ಪಂಚರು** ಪಂಚೇಂದ್ರಿಯಗಳು

**ಪಂಚವಕ್ತ್ರ** ಶಿವ; ಪಂಚಮುಖ ವಾಯು; ನಾರಸಿಂಹರೂಪ; ಸಿಂಹ

**ಪಂಚವಣ್ಣೆ, ಪಂಚವಣ್ಣಿಗೆ** ಐದು ಬಗೆಯ ಬಣ್ಣಗಳು– ಬಿಳುಪು, ಕಪ್ಪು, ಕೆಂಪು, ಹಳದಿ, ಹಸಿರು

**ಪಂಚವದನ** ಸಿಂಹ, ಐದುಮುಖವುಳ್ಳ ಶಿವ

**ಪಂಚವಾದ್ಯ** ಮದ್ದಳೆ, ಜಾಗಟೆ, ತಾಳ, ತಮ್ಮಟೆ, ಭೇರಿ

**ಪಂಚವಿಂಶಾಖ್ಯ** ಇಪ್ಪತ್ತೈದನೆಯವನು– ಚತುರ್ವಿಂಶತಿ ತತ್ತ್ವದ ಒಡೆಯ–ವಾಯು

**ಪಂಚಶರ** ತಾವರೆ, ಅಶೋಕ, ಮಾವು, ನವಮಲ್ಲಿಗೆ ಮತ್ತು ನೈದಿಲೆಗಳೆಂಬ ಐದು ಹೂ ಬಾಣಗಳು; ಈ ಪಂಚಬಾಣಗಳುಳ್ಳ ಮನ್ಮಥ

**ಪಂಚಶರಪಿತ** ಶ್ರೀಹರಿ

**ಪಂಚಶರಹರ** ಮನ್ಮಥನನ್ನು ಕೊಂದ ಶಿವ

**ಪಂಚಸಂಸ್ಕಾರ** ತಪ್ತಮುದ್ರೆ, ನಾಮೋಚ್ಚಾರಣ, ಜಪ, ಊರ್ಧ್ವಪುಂಡ್ರ, ಭಗವದರ್ಚನೆಯೆಂಬ ಐದು ಸಂಸ್ಕಾರಗಳು

**ಪಂಚಸರುತಿ** ರೂಪ–ರಸಾದಿ ಪಂಚ ವಿಷಯಗಳಲ್ಲಿ ಆಸಕ್ತಿ

**ಪಂಚಸಾಮ** ಆಡು, ಕುರಿ, ಹಸು, ಅಶ್ವ, ಮನುಷ್ಯ ಎಂಬ ಐದು ಸಾಧು ಪ್ರಾಣಿಗಳು; ಗಾಯತ್ರ ಸಾಮ, ಸುಬ್ರಹ್ಮಣ್ಯಸಾಮ, ಬೃಹತ್‌ಸಾಮ, ರಥಂತರಸಾಮ ಹಾಗೂ ವೈರೂಪಸಾಮ ಎಂಬ ಐದು ಸಾಮಗಳು

**ಪಂಚಸುಧೆ** ಪಂಚಾಮೃತ

**ಪಂಚಸೂನಶರ** ಮನ್ಮಥ

**ಪಂಚಸೂನಶರನಪಿತ** ಶ್ರೀಹರಿ

**ಪಂಚಾಂಗ** ವಿಸ್ತಾರ, ತಳಹದಿ

**ಪಂಚಾಕ್ಷರಿ** "ಕೃಷ್ಣಾಯ ನಮಃ" ಎಂಬ ಐದಕ್ಷರಗಳ ಮಂತ್ರ

Rarest Archive

**ಪಂಚಾಗ್ನಿ** ಮುಖದಲ್ಲಿ ಆಹವನೀಯಾಗ್ನಿ, ಹೃದಯದಲ್ಲಿ ಗಾರ್ಹಸ್ಪತ್ಯಾಗ್ನಿ, ನಾಭಿಯಲ್ಲಿ ದಕ್ಷಿಣಾಗ್ನಿ, ಸವ್ಯಪಾರ್ಶ್ವದಲ್ಲಿ ಸಾವಸತ್ತಿ, ಎಡದಲ್ಲಿ ಸಭ್ಯಂಚಿತ ಎಂಬ ಐದು ಅಗ್ನಿಗಳು ಅಥವಾ ದ್ಯು, ಪರ್ಜನ್ಯ, ಧರಾ, ಪುಂ, ಸ್ತ್ರೀ

**ಪಂಚಾಘ** ಪಂಚ ಪಾಪಗಳು

**ಪಂಚಾನನ** ಸಿಂಹ, ಐದು ಮುಖವುಳ್ಳ ಶಿವ

**ಪಂಚಾಬ್ದ** ಐದು ವರುಷ

**ಪಂಚಾಮೃತ** ದೇವಮೂರ್ತಿಗಳಿಗೆ ಅಭಿಷೇಕ ಮಾಡುವ ಹಾಲು, ಮೊಸರು, ತುಪ್ಪ, ಸಕ್ಕರೆ ಹಾಗೂ ಜೇನುತುಪ್ಪದ ಸಂಯೋಜನೆ

**ಪಂಚಾರತಿ** ಐದು ಕಡೆಗಳಲ್ಲಿ ಬತ್ತಿಯಿಟ್ಟು ಬೆಳಗಬಹುದಾದ ಅಗಲದ ಆರತಿ

**ಪಂಚಾಶದ್ವರ್ಣ** ಐವತ್ತೊಂದು ವರ್ಣಗಳು

**ಪಂಚಾಸ್ಯ** ಸಿಂಹ

**ಪಂಚಾಸ್ಯಭೋಗಿ** ಐದು ಹೆಡೆಯ ಸರ್ಪ

**ಪಂಚಿಕೆ** ಪಂಚಾಂಗ; ವ್ಯಾಖ್ಯಾನ

**ಪಂಚೀಕರಣ** ಪಂಚೀಕರಣ ಮಾಡುವವ; ಆಕಾಶ, ವಾಯು, ಅಗ್ನಿ, ಆಪಃ, ಭೂಮಿಗಳನ್ನು ಮೂಲ ಪ್ರಕೃತಿಯಲ್ಲಿ ಲಯ ಮಾಡುವುದು, ಪಂಚಭೂತಗಳ ಹೊಂದಿಕೆ; ಕುಲಕರಣಿ ಉದ್ಯೋಗ

**ಪಂಚೆ** ಸಾಮೀಪ್ಯ, ಸಾನ್ನಿಧ್ಯ; ಅಂಗ ವಸ್ತ್ರ ಉಡುವ ವಸ್ತ್ರ; ಪರಿಚಯ

**ಪಂಚೇಂದ್ರಿಯ, ಪಂಚೈವರು** ಐದು ಇಂದ್ರಿಯಗಳು

**ಪಂಚೇಂದ್ರಿಯುಗಳು** ಜ್ಞಾನೇಂದ್ರಿಯಗಳು; ಕರ್ಮೇಂದ್ರಿಯಗಳು

**ಪಂಜ** ಬೆಕ್ಕು, ಹುಲಿ, ಚಿರತೆ ಮುಂತಾದ ಪ್ರಾಣಿಗಳ ಉಗುರು ಸಹಿತವಾದ ಮುಂಗಾಲು; ಪಂಜರ

**ಪಂಜರದೋತಿ** ಪಂಜರಾಕಾರವಾಗಿ ಇರುವ ಕಿವಿಯ ಆಭರಣ, ಜುಮುಕಿ

**ಪಂಜು** ದೀವಟಿಗೆ

**ಪಂಟಿ** ಊಟ, ಭೋಜನ

**ಪಂಟಿಸು** ಸುತ್ತುವರಿ, ಪ್ರತಿಭಟಿಸು; ಹರಟು, ಹಾಳುಹರಟೆ, ನಿರರ್ಥಕವಾದ ಮಾತು

**ಪಂಟು** ಹರಟು, ವ್ಯರ್ಥಮಾಡು

**ಪಂಡಿತ** ಬುಧಗ್ರಹ; ಶಾಸ್ತ್ರ ಓದಿದವ, ವಿದ್ವಾಂಸ

**ಪಂಡಿತಮಾನಿಪಿಶುನ** ನಾನೇ ಪಂಡಿತನೆಂದು ಹೇಳಿಕೊಳ್ಳುವವ

**ಪಂತ** ಒಡೆಯ(ಮರಾಠಿ); ಶಾಲಾ ಉಪಾಧ್ಯಾಯ, ಪಂಡಿತ

**ಪಂತಿದೇರ** ದಶರಥ

**ಪಂತೋಜ** ಉಪಾಧ್ಯಾಯ

**ಪಂಥ** ಸಂಕಲ್ಪ, ಶಪಥ, ಪ್ರತಿಜ್ಞೆ, ಹಟ, ಜಿದ್ದು; ಪಂದ್ಯ; ಪಥ, ದಾರಿ

**ಪಂಥಗಾರತಿ, ಪಂಥಗಾರ್ತಿ** ಪಣ ತೊಟ್ಟವಳು, ಹಟಮಾರಿ

**ಪಂಥಗಾರಿಕೆ** ಪಣತೊಡುವುದು

**ಪಂಥಪಾಡು** ಜಿದ್ದಿನಕಷ್ಟ, ತೊಂದರೆ; ದಾರಿ

**ಪಂಥವಾಡು** ಜಿದ್ದುಕಟ್ಟು

**ಪಂದಿ** ಹಂದಿ

**ಪಂಪಾಲಯ** ಪಂಪಾಪತಿ ಇರುವ ಹಂಪೆ

**ಪಂಶುಪುರ** ಮಂಡಿಪಾಳ್ಯ ಗ್ರಾಮ

**ಪಕ್ಕ** ರೆಕ್ಕೆ, ಗರಿ; ಬದಿ, ಮಗ್ಗುಲು

**ಪಕ್ವ** ಮಾಗಿದ, ಪಳಗಿದ

**ಪಕ್ಷ** ಬದಿ, ಮಗ್ಗುಲು, ಪಕ್ಕ, ಎಡ, ಬಲ; ರೆಕ್ಕೆ; ಹದಿನೈದು ದಿನಗಳ ಕಾಲ

**ಪಕ್ಷಪಾತ** ಭೇದ, ವಂಚನೆ

**ಪಕ್ಷಪ್ರಾಯಶ್ಚಿತ್ತ** ಹದಿನೈದು ದಿನಗಳಿಗೊಮ್ಮೆ ಮನದ ಶುದ್ಧೀಕರಣಕ್ಕಾಗಿ ಮಾಡುವ ವ್ರತ, ಹರಿದಿನ, ಏಕಾದಶಿ

**ಪಕ್ಷಮಾಸ** ಭಾದ್ರಪದ ಕೃಷ್ಣಪಕ್ಷ

Rarest Archiver

**ಪಕ್ಷಿದೇರ** ಗರುಡನನ್ನು ವಾಹನವಾಗಿ ಉಳ್ಳವನು–ಶ್ರೀಹರಿ

**ಪಕ್ಷಿಪ, ಪಕ್ಷಿಪತಿ** ಗರುಡ

**ಪಕ್ಷಿಪತಿಸತಿ** ಗರುಡನ ಪತ್ನಿಯಾದ ಸೌಪರ್ಣಿಕ

**ಪಕ್ಷಿರಾಜ, ಪಕ್ಷೀಂದ್ರ, ಪಕ್ಷೀಶ** ಗರುಡ

**ಪಕ್ಷಿವಾಹನ, ಪಕ್ಷೀಂದ್ರವಾಹನ** ಗರುಡವಾಹನ–ವಿಷ್ಣು

**ಪಕ್ಷ್ಮ** ಕಣ್ಣಿನ ರೆಪ್ಪೆ

**ಪಗಡಿ(ಡೆ)** ಲೆತ್ತ, ಜೂಜು

**ಪಗೆ** ಶತ್ರು

**ಪಗೆದಲ್ಲಣ** ಶತ್ರುಗಳನ್ನು ನಡುಗಿಸುವವನು

**ಪಚಾರಿಸು** ಹೀಯಾಳಿಸು

**ಪಚ್ಚ** ಹಸಿರುಬಣ್ಣ; ಶೃಂಗಾರ, ಅಲಂಕಾರ

**ಪಚ್ಚೆ** ಹಸಿರು; ನವರತ್ನಗಳಲ್ಲಿ ಒಂದು ರತ್ನ

**ಪಚ್ಚೆತೆನೆ** ಹಸಿರು ಬಣ್ಣದ ಕದಿರಿನಿಂದ ಕೂಡಿದ ಒಂದು ಬಗೆಯ ಸುಗಂಧ ಸಸ್ಯ ಮತ್ತು ಅದರ ತೆನೆ

**ಪಚ್ಚೆಬಾವುಲಿ** ಪಚ್ಚೆಯಿಂದ ಮಾಡಿದ ಕರ್ಣಾಭರಣ

**ಪಟ** ಬಟ್ಟೆ, ವಸ್ತ್ರ; ಬಾವುಟ

**ಪಟಲ** ತೆರೆ, ಪರದೆ; ಸಮೂಹ

**ಪಟಲು** ಗೌಸು, ಹೊದಿಕೆ, ಮುಸುಕು, ತೆರೆ; ಮಾಳಿಗೆ, ಚಾವಣಿ; ಗುಂಪು

**ಪಟವಾಸ** ಒಳ ಉಡುಪು

**ಪಟವಾಳಿ, ಪಟ್ಟಾವಳಿ** ರೇಷ್ಮೆ ವಸ್ತ್ರ

**ಪಟಹ** ಒಂದು ಬಗೆಯ ಚರ್ಮವಾದ್ಯ, ನಗಾರಿ

**ಪಟಿ** ತೆರೆ, ಪರದೆ

**ಪಟಿಗ<ಘಟಿಂಗ** ಸಮರ್ಥ, ದಕ್ಷ; ನೀತಿಗೆಟ್ಟವನು, ಭಂಡ, ಪೋಕರಿ

**ಪಟೀರ** ಶ್ರೀಗಂಧ, ಚಂದನ

**ಪಟು** ಬಲಿಷ್ಠ

**ಪಟುತನ** ಸಾಮರ್ಥ್ಯ

**ಪಟುತರ** ಸಮರ್ಥ, ಬಲಿಷ್ಠವಾದ

**ಪಟುತರಾಂಗ** ಅತ್ಯಂತ ಸಮರ್ಥವಾದ ಅವಯುವವುಳ್ಳವ (ಶ್ರೀಹರಿಯು ರೂಪ, ಅವಯವಗಳಿಗೆ ಭೇದ ಇಲ್ಲ)

**ಪಟ್ಟಮಂಚ** ಸಿಂಹಾಸನ; ರೇಷ್ಮೆ ವಸ್ತ್ರ ಕೂಡಿದ ಮಂಚ

**ಪಟ್ಟಮಹಿಷಿ** ಪಟ್ಟದರಾಣಿ, ರುಕ್ಮಿಣಿ, ಲಕ್ಷ್ಮೀದೇವಿ

**ಪಟ್ಟಸಾಲೆ** ಪಡಸಾಲೆ, ಹಜಾರ

**ಪಟ್ಟಸ್ತ್ರೀ** ಧರ್ಮಪತ್ನಿ

**ಪಟ್ಟಿಬಡ್ಡಿ** ಲೆಕ್ಕವಿಟ್ಟ ಬಡ್ಡಿ ಹಣ

**ಪಟ್ಟು** ಪಟ್ಟ, ಪಟ್ಟೆ; ಬೆಲೆಬಾಳುವ ವಸ್ತ್ರ, ರೇಷ್ಮೆಬಟ್ಟೆ; ಸರದಿ

**ಪಟ್ಟೆ** ರೇಷ್ಮೆಸೀರೆ, ರೇಷ್ಮೆ ಮಡಿ

**ಪಟ್ಟೆಪೀತಾಂಬರ** ರೇಷ್ಮೆ ಪೀತಾಂಬರ

**ಪಟ್ಟೆಯಹಾವಿಗೆ** ಕಾಲಿಗೆ ಹಾಕುವ ರೇಷ್ಮೆಯ ಮೆಟ್ಟು

**ಪಠನ** ನಾಮಜಪ; ಉಚ್ಚಾರಣೆ

**ಪಠಾಲ<ಪಾಟಲ** ದಾಸವಾಳ

**ಪಡಗ** ಪಾತ್ರೆ; ಮಣ್ಣಿನ ಗಡಿಗೆ

**ಪಡಿ** ಒಂದು ಅಳತೆ, (ಇಲ್ಲಿ ಸಾಕಷ್ಟು, ಅಧಿಕ ಪ್ರಮಾಣದಲ್ಲಿ); ದಿನ ನಿತ್ಯದ ಆಹಾರ ಪದಾರ್ಥ, ನಿರ್ದಿಷ್ಟವಾದ ಆಹಾರ; ಸಮ, ಪ್ರತಿ, ಸಾಟಿಯಾದ; ಬದಲು, ವಿರುದ್ಧ, ಎದುರು; ಮೆಟ್ಟಿಲು

**ಪಡಿಪದಾರ್ಥ** ಊಟದ ಬದಲಾಗಿ ಕೊಡುವ ಧಾನ್ಯಾದಿ ಪರಿಕರ, ಉಲುಪೆ, ಸೀದಾ

**ಪಡಿಪಾಟಲು, ಪಡಿಪಾಟು** ದುಃಖ, ಪೇಚಾಟ, ತೊಂದರೆ

**ಪಡಿಪಾನ** ಆಹಾರ–ನೀರು

**ಪಡಿಹಾರ<ಪ್ರತಿಹಾರ** ದ್ವಾರಪಾಲಕ

**ಪಡುವಣ, ಪಡುವಲ** ಪಶ್ಚಿಮ

**ಪಡುವಲಾಬ್ಧಿ** ಪಶ್ಚಿಮ ದಿಕ್ಕಿನ ಸಮುದ್ರ

**ಪಡೆ** ಹೊಂದು; ಸೈನ್ಯ; ಪೊಟರೆ

Rarest Archiver

**ಪಣ** ಸಂಕಲ್ಪ, ಶಪಥ; ಪಂದ್ಯ; ಹಣ, ದುಡ್ಡು, ಎಂಬತ್ತು ಕವಡೆ ಬೆಲೆಯ ಒಂದು ನಾಣ್ಯ

**ಪಣವ** ಒಂದು ಬಗೆಯ ಚರ್ಮವಾದ್ಯ; ದುಂದುಭಿ

**ಪಣಿ** ಕೋಲು, ದೊಣ್ಣೆ

**ಪಣೆ** ಹಣೆ, ನೊಸಲು

**ಪಣ್ಣು** ಹಣ್ಣು; ಮಾಡು

**ಪಣ್ಯ, ಪಣ್ಣೆಯ** ತೋಟ, ಬಾಗಾಯ್ತು

**ಪಣ್ಯಾಂಗನೆ** ಸೂಳೆ, ವೇಶ್ಯೆ

**ಪತಂಗ** ದೀಪದ ಹುಳು, ಚಿಟ್ಟೆ; ಸೂರ್ಯ

**ಪತನ** ಅವನತಿ, ಕೀಳುದೆಸೆ, ಬೀಳುವುದು

**ಪತನವಾದಿಂದ್ರಿಂಯ** ಪಂಚೇಂದ್ರಿಯುಗಳು ಕಳೆಗುಂದುವದು, ಇಂದ್ರಿಯಶಕ್ತಿ ಕುಗ್ಗುವುದು

**ಪತಾಕ(ಕೆ)** ಬಾವುಟ, ಧ್ವಜ

**ಪತಿ** ಯಜಮಾನ, ಒಡೆಯ, ವಿಷ್ಣು

**ಪತಿಕರಿಸು** ದಯೆತೋರು, ಅನುಗ್ರಹಿಸು, ಅಂಗೀಕರಿಸು, ಸ್ವೀಕರಿಸು, ಕಾಪಾಡು

**ಪತಿತ** ವೈದಿಕತತ್ತ್ವ ಬಾಹಿರ; ಪಾಪಿ, ಭ್ರಷ್ಟ

**ಪತಿತಪಾವನ** ಪಾಪಿಗಳನ್ನು ಉದ್ಧಾರ ಮಾಡುವವನು–ಶ್ರೀಹರಿ

**ಪತಿವ್ರತೆ** ಗರತಿ

**ಪತಿಷ್ಟ** ತೀಕ್ಷ್ಣ

**ಪತ್ತಲ** ತೆಳುವಾದ ಸೀರೆ

**ಪತ್ತು** ಹತ್ತು; ಪಂಜು, ಉರಿ

**ಪತ್ರ** ಎಲೆ, ಲೇಖ

**ಪತ್ರತಾಪಕ** ಶಿವ

**ಪತ್ರಶಾಕ** ಸೊಪ್ಪಿನ ಅಡುಗೆ

**ಪತ್ರಶಾಯಿ** (ಆಲದ) ಎಲೆಯ ಮೇಲೆ ಮಲಗಿದವ –ವಿಷ್ಣು

**ಪಥ** ಹಾದಿ

**ಪಥಗತಿ** ಮೋಕ್ಷದ ದಾರಿ

**ಪಥಿಕ** ದಾರಿಗ, ದಾರಿಹೋಕ

**ಪದ** ಕಾಲುಭಾಗ; ಕಾಲು, ಪಾದ; ಮೋಕ್ಷ

**ಪದತೋಯ** ಪಾದದ ನೀರು, ಪಾದೋದಕ; ಉಂಗುಷ್ಟದಲಿ ಜನಿಸಿದ ಗಂಗೆ

**ಪದನಖ** ಪಾದದ ಉಗುರು, ಕಾಲುಗುರು

**ಪದನಳಿನ, ಪದಪದುಮ** ಪಾದಪದ್ಮ, ಪಾದ ಎನ್ನುವ ಕಮಲ

**ಪದಪಾಂಶು(ಸು)** ಪಾದಧೂಳಿ

**ಪದಯುಗ** ಪಾದದ್ವಯ, ಎರಡು ಪಾದಗಳು

**ಪದರ** ಒಂದಾದಮೇಲೆ ಒಂದು, ಪೊರೆ

**ಪದರಜ** ಪದಧೂಳಿ

**ಪದರಾಗಿ** ಶ್ರೀಚರಣದಲ್ಲಿ ಪ್ರೀತಿ ಇರುವವನು

**ಪದವಾರಿಜ** ಪಾದಕಮಲ

**ಪದವಿ** ಅಧಿಕಾರಸ್ಥಾನ, ಮುಕ್ತಿ, ಸುಖ ಕಡಿಮೆಯಾಗದ ಸ್ಥಾನ

**ಪದಾತಿ** ಕಾಲಾಳು, ನಡೆದಾಡುವವ, ಸೇನೆಯಲ್ಲಿ ಕಾಲಾಳಿನ ಪಡೆ

**ಪದಾಬ್ಜ** ಪಾದಕಮಲ

**ಪದಾಬ್ಜಭೃಂಗಳೆ** ಚರಣಗಳೆಂಬ ತಾವರೆಯಲ್ಲಿ ಸುಳಿದಾಡುವ ದುಂಬಿ

**ಪದುಮಕರ** ಪದ್ಮದಂತಹ ಕೈ

**ಪದುಮಕಲ್ಪ** ಜಗತ್ತಿನ ಕೊನೆಗಾಲ, ಒಂದು ಕಾಲಾವಧಿ

**ಪದುಮಗರ್ಭ** ವಿಷ್ಣು

**ಪದುಮಜ** ಬ್ರಹ್ಮ

**ಪದುಮಜಾಂಡ** ಬ್ರಹ್ಮಾಂಡ

**ಪದುಮಜಾಂಡೋದರ** ಬ್ರಹ್ಮಾಂಡವನ್ನು ಉದರದಲ್ಲಿ ಧರಿಸಿದವ–ವಿಷ್ಣು

**ಪದುಮಪೀಠಪದಾರ್ಹ** ಬ್ರಹ್ಮ ಪದವಿಗೆ ಬರುವ ವಾಯುದೇವರು

**ಪದುಮಮಾಲಾ** ಪದ್ಮದ ಮಾಲೆ ಧರಿಸಿದವನು–ವಿಷ್ಣು

**ಪದುಮಸಂಭವ** ಬ್ರಹ್ಮ

Rarest Archiver

**ಪದುಮಸಂಭವಪಿತ** ವಿಷ್ಣು

**ಪದುಮಸಖ** ಸೂರ್ಯ

**ಪದುಮಾಕ್ಷ** ಕಮಲದ ಬೀಜ; ತುಳಸೀ ಮಣಿಯ ಮಾಲೆಯೊಂದಿಗೆ ಭಾಗವತರು ಕಮಲದ ಬೀಜಗಳ ಸರವನ್ನೂ ಕೊರಳಲ್ಲಿ ಧರಿಸುತ್ತಾರೆ; ಹೆಂಗಸರು ಜಪಕ್ಕೂ ಬಳಸುತ್ತಾರೆ; ಕಮಲಾಕ್ಷ–ಶ್ರೀಹರಿ

**ಪದುಮೆ** ಲಕ್ಷ್ಮಿ

**ಪದುಮೇಶ** ಲಕ್ಷ್ಮೀಪತಿ–ಶ್ರೀಹರಿ

**ಪದುಳ** ಕ್ಷೇಮ, ನೆಮ್ಮದಿ; ಹೆಚ್ಚು

**ಪದೋಪದಿಗೆ** ಉದ್ದಕ್ಕೂ, ಮತ್ತೆ ಮತ್ತೆ

**ಪದ್ದು** ಹದ್ದು

**ಪದ್ಮ>ಪದುಮ** ತಾವರೆ

**ಪದ್ಮಕರ** ಕಮಲದಂಥ ಕೈ

**ಪದ್ಮಜ** ಬ್ರಹ್ಮ

**ಪದ್ಮಜಗಪದಾರ್ಹ** ಬ್ರಹ್ಮ ಪದವಿಗೆ ಬರುವ ಅರ್ಹತೆಯುಳ್ಳವನು

**ಪದ್ಮದೇಶ** ಆಕಾಶರಾಜನ ದೇಶ

**ಪದ್ಮನಾಭ** ಹರಿ

**ಪದ್ಮನಾಭನದಿನ** ಹರಿದಿನ, ಏಕಾದಶಿ

**ಪದ್ಮಭವ** ಬ್ರಹ್ಮ

**ಪದ್ಮಭವತಾತ** ನಾರಾಯಣ

**ಪದ್ಮಮುಖಿ** ಕಮಲದಂತಹ ಮುಖವುಳ್ಳವಳು–ಲಕ್ಷ್ಮಿ

**ಪದ್ಮರಾಗ** ಕಮಲದ ಬಣ್ಣ; ಕೆಂಪು ರತ್ನ, ಮಾಣಿಕ್ಯ

**ಪದ್ಮಸಂಭವ** ಬ್ರಹ್ಮ

**ಪದ್ಮಸಂಭವಪಿತ** ಶ್ರೀಹರಿ

**ಪದ್ಮಾಂಘ್ರಿ** ಪಾದಕಮಲ

**ಪದ್ಮಾಕ್ಷ** ಕಮಲಾಕ್ಷ; ಚಂದ್ರಹಾಸನ ಹಿರಿಯ ಹೆಂಡತಿ ಚಂಪಕಮಾಲಿನಿಯ ಮಗ

**ಪದ್ಮಾನನೆ** ಕಮಲದಂತೆ ಮುಖವುಳ್ಳವಳು

**ಪದ್ಮಿನಿ** ಸುಂದರಿಯರಲ್ಲಿ ಶ್ರೇಷ್ಠವರ್ಗದ ಸ್ತ್ರೀ, ಹಸ್ತಿನಿ, ಶಂಖಿನಿ, ಚಿತ್ತಿನಿ ಮತ್ತು ಪದ್ಮಿನಿಯೆಂಬ ಸ್ತ್ರೀಯರ ನಾಲ್ಕು ಜಾತಿಗಳಲ್ಲಿ ಕೊನೆಯವಳು

**ಪದ್ಮಿನಿಸದನ** ವಿಷ್ಣು

**ಪದ್ಮೇಶ** ಲಕ್ಷ್ಮಿಯ ಗಂಡ ವಿಷ್ಣು

**ಪನಸ, ಪನಸು** ಹಲಸು

**ಪನಿವಾರ** ಹಣ್ಣಿನ ನೈವೇದ್ಯ, ಪ್ರಸಾದ, ಚರುಪು

**ಪನ್ನಂಗ** ಪಲ್ಲಕ್ಕಿಯ ಮೇಲುಹೊದಿಕೆ; ಪಲ್ಲಂಕ, ಮಂಚ; ಹಾವು

**ಪನ್ನಗ** ಹಾವು, ಕಾಲೀಯ ಸರ್ಪ, ಶೇಷ; ಸತ್ಯ

**ಪನ್ನಗಧರ** ಶಿವ

**ಪನ್ನಗನಗ** ಶೇಷಾದ್ರಿ, ತಿರುಪತಿ

**ಪನ್ನಗನಗನಗರ** ತಿರುಪತಿ

**ಪನ್ನಗಭೂಷಣ** ಶಿವ

**ಪನ್ನಗರಾಜ** ಆದಿಶೇಷ

**ಪನ್ನಗವೇಣಿ** ಹಾವಿನಂತೆ ಉದ್ದ ಜಡೆ ಉಳ್ಳವಳು

**ಪನ್ನಗಶಯನ** ಶೇಷಶಾಯಿ–ವಿಷ್ಣು

**ಪನ್ನಗಾಚಲ** ತಿರುಪತಿಯ ಬೆಟ್ಟ, ಶೇಷಾದ್ರಿ

**ಪನ್ನಗಾಚಲವಾಸ** ವೇಂಕಟೇಶ

**ಪನ್ನಗಾದ್ರಿ** ಶೇಷಾಚಲ, ತಿರುಪತಿ

**ಪನ್ನಗಾಧಿಪ** ಆದಿಶೇಷ

**ಪನ್ನಗಾರಿ** ಗರುಡ

**ಪನ್ನಗಾರಿಧ್ವಜ** ಗರುಡಧ್ವಜ–ಶ್ರೀಹರಿ

**ಪನ್ನಗಾರಿವಾಹನ** ಗರುಡವಾಹನ–ವಿಷ್ಣು

**ಪನ್ನಗಾಶನ** ಸರ್ಪವನ್ನು ಆಹಾರವಾಗಿ ತಿನ್ನುವ ಗರುಡ

**ಪನ್ನಗಾಶನತುರಗ** ಗರುಡನನ್ನು ಕುದುರೆಯಾಗುಳ್ಳವ–ವಿಷ್ಣು

**ಪನ್ನಗೇಂದ್ರ** ಆದಿಶೇಷ

**ಪನ್ನಗೇಂದ್ರವಾಸ** ಓಂಕಾರರೂಪ–ಭಗವಂತ, ಶೇಷಾಚಲವಾಸ–ವೇಂಕಟೇಶ

**ಪನ್ನಿ** ಬಿಂಕ, ಒಣಹೆಮ್ಮೆ

Rarest Archive

**ಪನ್ನೀರು** ಸುಗಂಧದ ನೀರು

**ಪಪ್ಪಡ** ಹಪ್ಪಳ

**ಪಯ** ನೀರು, ಹಾಲು

**ಪಯಸ್ವಿನಿ** ಗಯೆಯಲ್ಲಿರುವ ನದಿಯ ಹೆಸರು; ಹಾಲು, ಹಾಲು ಕರೆಯುವ ಹಸು

**ಪಯಸ್ಸಿಂಧು, ಪಯಾಂಬುಧಿ** ಹಾಲಿನ ಸಮುದ್ರ

**ಪಯೋಜ** ಕಮಲ

**ಪಯೋಜಜ** ಬ್ರಹ್ಮ

**ಪಯೋಜಜಾಂಡ** ಬ್ರಹ್ಮಾಂಡ

**ಪಯೋಜಸಂಭವ** ಬ್ರಹ್ಮ

**ಪಯೋದ** ಮೋಡ

**ಪಯೋದಧಿ** ಹಾಲಿನ ಸಮುದ್ರ

**ಪಯೋಧರ** ಸ್ತನ, ಮೋಡ

**ಪಯೋಧಿ, ಪಯೋನಿಧಿ** ಕ್ಷೀರ ಸಮುದ್ರ, ಸಮುದ್ರ

**ಪಯೋನಿಧಿಸುತೆ** ಕ್ಷೀರಸಮುದ್ರದಲ್ಲಿ ಹುಟ್ಟಿದವಳು –ಲಕ್ಷ್ಮಿ

**ಪಯೋಬ್ಧಿಶಯನ** ಕ್ಷೀರಸಾಗರ ಶಯನ–ವಿಷ್ಣು

**ಪರ** ಶ್ರೇಷ್ಠ, ಸರ್ವೋತ್ತಮ, ಪರಮ ಜಗತ್ತಿನಿಂದ ಭಿನ್ನವಾದವನು–ಶ್ರೀಹರಿ; ಮುಕ್ತಿ

**ಪರಂಗಿ** ಪಾಶ್ಚಾತ್ಯ ದೇಶದವನು, ಯೂರೋಪ್ ಖಂಡದವನು, ಇಂಗ್ಲಿಷರವನು

**ಪರಂಜ, ಪರಂಜಳ<ಪ್ರಾಂಜಲ** ಕತ್ತಿಯ ಅಲಗು; ನೊರೆ, ಬುರುಗು; ಸ್ಪಷ್ಟ, ನಿರಾಳ, ನಿರ್ಮಲ

**ಪರಂತಪ** ಶತ್ರುನಾಶಕ

**ಪರಂಧಾಮ** ಶ್ರೇಷ್ಠವಾದ ನೆಲೆ, ಸ್ವರ್ಗ, ವೈಕುಂಠ; ಶ್ರೀಹರಿ

**ಪರಕೆ** ಹರಕೆ

**ಪರಕೋಟಿ** ಅಸಂಖ್ಯವಾದುದು

**ಪರಗತಿ** ಮೋಕ್ಷ

**ಪರಜನ್ಮ** ಅವತಾರ

**ಪರಜು** ಕತ್ತಿಯ ಹಿಡಿ, ಖಡ್ಗ, ಧಾರೆ

**ಪರಡು** ಹಿಮ್ಮಡಿಯ ಗಂಟು, ಗುಲ್ಫ

**ಪರಣ<ಪ್ರಾಣ** ಹರಣ–ಪ್ರಾಣ, ಜೀವ; ಎಲ್ಲ ಪ್ರಾಣಿಗಳಲ್ಲಿರುವ ಚಿದ್ವಸ್ತು.; ಅತ್ಯಂತ ಪ್ರಿಯನಾದವನು; ಜೀವನದ ಒಡೆಯ

**ಪರತಂತ್ರವಿದೂರ** ಸರ್ವಸ್ವತಂತ್ರ ಶ್ರೀಹರಿ

**ಪರತತ್ತ್ವ** ಮೋಕ್ಷ, ದೇವರು, ಪಾರಮಾರ್ಥಿಕ ತತ್ತ್ವ

**ಪರತರ** ಶ್ರೇಷ್ಠ

**ಪರತಾ** ಮತ್ತೆ

**ಪರದ** ಮುಕ್ತಾಯ, ತೆರೆ; ಹರದ, ವ್ಯಾಪಾರಿ

**ಪರದಕುಶಲ** ಪರಲೋಕದ ವಿಚಾರ

**ಪರದಪದವಿ** ಮುಕ್ತಿ

**ಪರದಾರಗಮನ** ಪರಸತಿಯನ್ನು ಕೂಡುವುದು

**ಪರದೇಶಿ** ದಿಕ್ಕಿಲ್ಲದ

**ಪರದೈವತ** ಸರ್ವೋತ್ತಮ–ಶ್ರೀಹರಿ

**ಪರಪಂಚ<ಪ್ರಪಂಚ** ಸಂಸಾರ, ಜನನ ಮರಣಗಳೆಂಬ ಪ್ರವಾಹ

**ಪರಪಂಥ** ಶತ್ರುಗಳ ಮಾರ್ಗ

**ಪರಪಾಕನೇಮ** ಬೇರೆಯವರು ಮಾಡಿದ ಅಡುಗೆಯನ್ನು ಉಣ್ಣದಿರುವ ನಿಯಮ

**ಪರಪುಟ್ಟ** ಪರರಿಂದ ಪೋಷಿತ; ಕೋಗಿಲೆ

**ಪರಬೊಮ್ಮ<ಪರಬ್ರಹ್ಮ** ಪರಾತ್ಪರ ವಸ್ತು

**ಪರಬ್ರಹ್ಮರೂಪ** ಶ್ರೀಹರಿ

**ಪರಮ** ಶ್ರೇಷ್ಠ

**ಪರಮಗತಿ** ಸದ್ಗತಿ

**ಪರಮನಿರ್ಘೃಣ** ಕರುಣರಹಿತನಾದ

**ಪರಮಪದ, ಪರಮಪದವಿ** ಮೋಕ್ಷ, ವೈಕುಂಠ, ಮುಕ್ತಿ

**ಪರಮಪುರುಷ** ಪೂರ್ಣನೂ ಜ್ಞಾನಸ್ವರೂಪನೂ ಆದವನು–ಶ್ರೀಹರಿ

**ಪರಮಮಂಗಳಮೂರ್ತಿ** ವಿಷ್ಣು

**ಪರಮವೈಷ್ಣವ** ಪರಮ ವಿಷ್ಣುಭಕ್ತ–ಶಿವ

**ಪರಮಸುಖಗತಿ** ಮೋಕ್ಷ

**ಪರಮಸುಹೃತ್** ಉತ್ತಮ ಹೃದಯವುಳ್ಳವನು

Rarest Archive

**ಪರಮಹಂಸ** ಯತಿ, ಶ್ರೇಷ್ಠವರ್ಗದ ಸನ್ಯಾಸಿ
**ಪರಮಾನ್ನ** ಸವಿಯಾದ ಊಟ, ಪಾಯಸ
**ಪರಮಾಹಿ** ಶ್ರೇಷ್ಠಸರ್ಪ, ಆದಿಶೇಷ
**ಪರಮೇಷ್ಠಿ** ಬ್ರಹ್ಮ
**ಪರಮೇಷ್ಠಿಜನಕ** ಶ್ರೀಹರಿ
**ಪರಮೋಲ್ಲಾಸ** ಬಿಂಬರೂಪಿ ಪರಮಾತ್ಮನ ನಿರಂತರ ದರ್ಶನದಿಂದುಂಟಾಗುವ ಆನಂದ ಉಳ್ಳವ
**ಪರವಣಿ<ಪರ್ವ** ಹಬ್ಬ, ಪರ್ವಕಾಲ; ಕೀಲು, ಸಂದು
**ಪರವಸ್ತು** ಪರಮಾತ್ಮ, ಪರಬ್ರಹ್ಮ-ಶ್ರೀಹರಿ
**ಪರವೆಮಾಡು** ತಡೆಮಾಡು, ಗಮನ ಹರಿಸದಿರು
**ಪರಶು** ಕೊಡಲಿ
**ಪರಶುಧರ, ಪರಶುಹಸ್ತ** ಕೊಡಲಿಯನ್ನು ಹಿಡಿದ ಪರಶುರಾಮ
**ಪರಸ<ಸ್ಪರ್ಶ** ಸ್ಪರ್ಶಮಣಿ
**ಪರಸಮಯ** ಎರಡನೆಯ ಮತ, ತತ್ತ್ವಗಳು
**ಪರಸು(ಶು)** ಹರಸು; ಸ್ಪರ್ಶಮಣಿ; ಕೊಡಲಿ
**ಪರಾ, ಪಶ್ಯಂತೀ, ಮಧ್ಯಮಾ, ವೈಖರೀ** ನಾಭಿಮೂಲದಿಂದ ಹೊರಹೊಮ್ಮುವ ಶಬ್ದವು ಈ ನಾಲ್ಕು ಹಂತಗಳಲ್ಲಿ ಹಾದು ವಾಕ್ ಎನಿಸಿಕೊಳ್ಳುತ್ತದೆ
**ಪರಾಕು** ಮನ್ನಿಸು, ಪಾಲಿಸು; ಎಚ್ಚರಿಕೆ, ಕೇಳು, ಗಮನವಿಡು; ಹೊಗಳು (ನಿಂದಿಸು ಎಂಬ ವ್ಯಂಗ್ಯಾರ್ಥವಿದೆ), ಸ್ತುತಿ; ಅಲಕ್ಷ್ಯ, ಉದಾಸೀನ ಮಾಡು, ಅಸಡ್ಡೆ ತೋರಿಸು
**ಪರಾಕ್ಷರ** ಲಕ್ಷ್ಮಿಗಿಂತ ಉತ್ತಮನಾದ ಶ್ರೀಹರಿ
**ಪರಾಗ** ಹೂವಿನಲ್ಲಿರುವ ಹುಡಿ, ಹೂವಿನೊಳಗಿನ ಧೂಳು
**ಪರಾಗತಿ** ಮೋಕ್ಷ
**ಪರಾಙ್ಮುಖ** ವಿಮುಖ, ತಿರುಗಿಸಿದ ಮುಖ, ಪರಮಾತ್ಮನಿಗೆ ವಿಮುಖ
**ಪರಾತ್ಪರ** ಪರಬ್ರಹ್ಮ, ಬ್ರಹ್ಮರುದ್ರಾದಿಗಳಿಗಿಂತ ಶ್ರೇಷ್ಠನಾದವನು-ಶ್ರೀಹರಿ
**ಪರಾಧೀನ** ಬೇರೆಯವರ ಅಧೀನ, ಪರಮಾತ್ಮನ ಅಧೀನ
**ಪರಾನಂದ** ಪರಮಾತ್ಮ-ಶ್ರೀಹರಿ
**ಪರಾಭಕ್ತಿ** ಯಾವ ಕಾಮನೆಯೂ ಇಲ್ಲದೆ ಮಾಡುವ ಭಕ್ತಿ
**ಪರಾಭವ** ಸೋಲು
**ಪರಾಭೂತಷಡ್ವರ್ಗ** ಅರಿಷಡ್ವರ್ಗಗಳನ್ನು ಜಯಿಸುವುದು
**ಪರಾಮರಿಸು** ಬಿನ್ನಹಕೇಳು, ಲಾಲಿಸು, ವಿಚಾರಿಸು
**ಪರಾಮರ್ಶ** ಉಪಚಾರ
**ಪರಾಯಣ** ಉತ್ತಮದಾರಿ, ಉತ್ತಮಗತಿ ಆಸಕ್ತ
**ಪರಾಯು** ಬ್ರಹ್ಮದೇವರ ಆಯುಷ್ಯ
**ಪರಾವರ** ಎಲ್ಲವನ್ನೂ ಒಳಗೊಂಡಿರುವ; ಸರ್ವಶ್ರೇಷ್ಠ-ಶ್ರೀಹರಿ
**ಪರಾವರಿ** ಲಕ್ಷ್ಮಿ
**ಪರಾವರೇಶ** ಲಕ್ಷ್ಮೀಶ-ಶ್ರೀಹರಿ
**ಪರಾಶರ** ಶಕ್ತಿ ಮಹರ್ಷಿಯ ಮಗ, ವಸಿಷ್ಠನ ಮೊಮ್ಮಗ, ವ್ಯಾಸ ಮಹರ್ಷಿಯ ತಂದೆ
**ಪರಾಶರವರದ** ವಿಷ್ಣು
**ಪರಾಶರಸೂನು, ಪರಾಶರಾತ್ಮಜ** ವೇದವ್ಯಾಸ, ವ್ಯಾಸಮುನಿ
**ಪರಾಸ್ತ್ರ** ದಿವ್ಯಾಸ್ತ್ರ
**ಪರಿ** ಬಗೆ, ರೀತಿ, ಸ್ಥಿತಿ, ಸ್ಥಾನ; ಪರಿಹರಿಸು, ಕಳೆ; ಚಲಿಸು
**ಪರಿಖೆ** ಕಾಲುವೆ; ಸುರಂಗ, ಕಂದಕ
**ಪರಿಘ** ಗದೆ
**ಪರಿಚಾರಕ** ಸೇವಕ
**ಪರಿಚ್ಛಿನ್ನ** ಮುರಿದ, ತುಂಡುಗಳನ್ನಾಗಿಸಿದ
**ಪರಿಚ್ಛೇದ** ವಿಂಗಡಿಸಿದ ಪ್ರಕಾರ, ಸರ್ಗ, ಅಧ್ಯಾಯ; ನಿರ್ಧಾರ; ಮಿತಿ, ಗಡಿ

Rarest Archive

**ಪರಿಣಯ** ವಿವಾಹ

**ಪರಿತಾಪ** ಅತಿಯಾದ ದುಃಖ

**ಪರಿತೋಷ** ಅತಿಯಾದ ಆನಂದ

**ಪರಿಪಂಥಿ** ಹಗೆ, ಶತ್ರು, ವಿರೋಧಿ

**ಪರಿಪಾಟಿ** ಸಾಲು

**ಪರಿಭವ** ಅಪಮಾನ, ಸೋಲು, ತಿರಸ್ಕಾರ

**ಪರಿಭ್ರಮಣ** ತಿರುಗುವುದು, ಸುತ್ತುವುದು

**ಪರಿಮಳವಿವೃತ್ತಿ** ಶ್ರೀರಾಘವೇಂದ್ರಸ್ವಾಮಿಗಳು ರಚಿಸಿದ 'ಪರಿಮಳ' ಎಂಬ ನ್ಯಾಯಸುಧಾ ವ್ಯಾಖ್ಯಾನ

**ಪರಿಮೋದ** ಅತ್ಯಾನಂದ

**ಪರಿಯಂಕ<ಪರ್ಯಂಕ** ಹಾಸಿಗೆ, ಮಂಚ, ವಿಷ್ಣುವಿನ ಮಂಚ-ಶೇಷ

**ಪರಿಯಂತ<ಪರ್ಯಂತ** ಅಲ್ಲಿಯವರೆಗೆ

**ಪರಿಯಾಪ್ತ<ಪರ್ಯಾಪ್ತ** ಪೂರ್ಣ

**ಪರಿಯಾಯ<ಪರ್ಯಾಯ** ಬೇರೆಯಾಗು, ಬದಲಾಗು

**ಪರಿರಂಭ** ಅಪ್ಪುಗೆ, ಆಲಿಂಗನ

**ಪರಿವಟ್ಟ** ಶಿರಸ್ತ್ರಾಣ, ರುಮಾಲು

**ಪರಿವಾಣ** ಹರಿವಾಣ, ತಟ್ಟೆ

**ಪರಿವೃಢ** ಒಡೆಯ, ಪ್ರಭು, ಶ್ರೀಹರಿ

**ಪರಿವೆ** ಅರಿವು, ಜ್ಞಾನ

**ಪರಿವೇಷಣ** ಸುತ್ತು, ಆವರಿಸಿರುವುದು

**ಪರಿವ್ರಾಜ(ಕ)** ಸನ್ಯಾಸಿ

**ಪರಿಶೋಷಿಸು** ಬತ್ತಿಸು

**ಪರಿಸರನಮತ** ವಾಯುಮತ, ವೈಷ್ಣವಮತ

**ಪರಿಸ್ತರಣ** ಹಬ್ಬುವುದು; ಹೋಮಕುಂಡದ ಸುತ್ತ ಹಾಕುವ ದರ್ಭೆಯ ಕಟ್ಟು, ಕಾರಣೆ

**ಪರಿಹರ** ಪರಿಹಾರ; ತ್ಯಜಿಸುವುದು

**ಪರಿಹಾಸ** ವಿನೋದ

**ಪರೀಕ್ಷಿತ** ಚಂದ್ರವಂಶದ ಅನುಶುಷನಮಗ

**ಪರುಟ, ಪರುಟವ** ವಿಸ್ತಾರ, ಹರಹು; ಬೇಸರ ತರಿಸುವ ಮಾತು

**ಪರುಟಾಕ್ಷಹಾರಿ** ಹಿರಣ್ಯಾಕ್ಷನನ್ನು ಕೊಂದವ-ಶ್ರೀಹರಿಯ ವರಾಹಾವತಾರ

**ಪರುಠವಿಸು** ಸಿದ್ಧಗೊಳಿಸು, ಅಣಿಗೊಳಿಸು; ವಿಸ್ತರಿಸು

**ಪರುಷ<ಸ್ಪರ್ಶ, ಪರುಷಮಣಿ** ತನ್ನನ್ನು ಸೋಕಿದ ಇತರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ಮಣಿ, ಸ್ಪರ್ಶಶಿಲೆ

**ಪರುಷೆ** ಜಾತ್ರೆ

**ಪರೆ** ಹರಡು, ವ್ಯಾಪಿಸು

**ಪರೇತ** ಹೆಣ, ಶವ

**ಪರೇತೇಶ್ವರ** ಯಮ

**ಪರೇಪಿತ<ಪ್ರಪಿತ** ಮುತ್ತಜ್ಜ

**ಪರೇಶ** ಪರಮಾತ್ಮ-ವಿಷ್ಣು

**ಪರೋಪರಿ** ಪದೇಪದೇ, ವಿಧವಿಧವಾಗಿ

**ಪರ್ಜನ್ಯ** ಮಳೆ, ಮೋಡ; ದ್ವಾದಶಾದಿತ್ಯರಲ್ಲಿ ಒಬ್ಬ

**ಪರ್ಜನ್ಯರೊಳು** ಪರ್ಜನ್ಯನಾಮಕ ಸೂರ್ಯನಲ್ಲಿರುವ ವಾಸುದೇವ

**ಪರ್ಣ** ಎಲೆ

**ಪರ್ಣಾಶನ** ಎಲೆಯನ್ನು ಆಹಾರವಾಗಿ ಸ್ವೀಕರಿಸುವುದು

**ಪರ್ಣಶಾಲೆ** ಎಲೆಮನೆ, ಎಲೆ ಮತ್ತು ಹುಲ್ಲಿನ ಗುಡಿಸಲು

**ಪರ್ಬ** ಹಬ್ಬ

**ಪರ್ಯಂತ** ಅವರೋಹಣ-ತಾರತಮ್ಯದ ರೀತಿ(ಯಲ್ಲಿ); ವರೆಗೂ

**ಪರ್ವಕಾಲಗಳು** ಹಬ್ಬ ಹರಿದಿನಗಳು; ಪಕ್ಷದ ಹುಣ್ಣಿಮೆ, ಅಮಾವಾಸ್ಯೆ, ಅಷ್ಟಮಿ, ಚತುರ್ದಶೀ, ಗ್ರಹಣ ಮೊದಲಾದ ವಿಶೇಷ ಕಾಲಗಳು

**ಪರ್ವತೇಶನಣುಗಿ** ಪಾರ್ವತಿ

**ಪಲಾಂಡು** ಈರುಳ್ಳಿ

Rarest Archiver

**ಪಲುಕು** ಕೆಡುಕನ್ನು ನುಡಿ
**ಪಲ್ಗಳು** ಹಲ್ಲುಗಳು
**ಪಲ್ಗಿರಿದು** ಹಲ್ಲುಕಿರಿದು
**ಪಲ್ಯ** ತರಕಾರಿ
**ಪಲ್ಲಣ<ಹಲ್ಲಣ** ಜೀನು
**ಪಲ್ಲಯಿಸು** ಚಿಗಿ
**ಪಲ್ಲವ** ಚಿಗುರು
**ಪಲ್ಲವನಿಕರ** ಚಿಗುರಿನ ಸಮೂಹ
**ಪಲ್ಲವಪಾಣಿ** ಚಿಗುರಿನಂತೆ ಕೆಂಪಾದ ಕೈಗಳನ್ನುಳ್ಳವಳು, ಎಳೆ ಚಿಗುರಿನಂತೆ ಮೃದುವಾದ ಹಸ್ತ
**ಪಲ್ಲವಾಧರೆ** ಚಿಗುರಿನಂತೆ ಕೆಂದುಟಿಯುಳ್ಳವಳು
**ಪಲ್ಲವಾರುಣ** ಚಿಗುರಿನಂತೆ ಕೆಂಪಾದ
**ಪಲ್ಲವಿಸು** ಚಿಗುರು
**ಪಲ್ಲು** ಹಲ್ಲು
**ಪಲ್ಲೆಯವಬೀರಿ** ಪಲ್ಲೆಯದ ಹಬ್ಬ ಮಾಡಿ; ಹಲ್ಲು ಕಿರಿದು
**ಪಲ್ಲೈಸು** ಜೀನುಹಾಕು; ಚಿಗುರು
**ಪವಡಿ(ಳಿ)ಸು** ಮಲಗು
**ಪವಣ** ಹವಣ; ಸುಲಭ
**ಪವನ** ವಾಯು
**ಪವನಜ** ಆಂಜನೇಯ
**ಪವನಜಪರಿವಾರ** ಭೀಮಸೇನನೇ ಮೊದಲಾದವರು
**ಪವನದಲದಿ** ಗಾಳಿಯಮೇಲೆ
**ಪವನನಂದನ, ಪವನಸುತ** ಹನುಮಂತ
**ಪವನನಯ್ಯ, ಪವನಪ** ವಿಷ್ಣು
**ಪವನಮತ** ಮಧ್ವಮತ
**ಪವನಸಖ** ಇಂದ್ರ, ಅಗ್ನಿ
**ಪವನಾತ್ಮ** ವಾಯುದೇವನಿಗೆ ಆತ್ಮನಾಗಿರುವವನು –ಶ್ರೀಹರಿ
**ಪವಮಾನ** ವಾಯುದೇವರು
**ಪವಮಾನಮತ** ಮಧ್ವಮತ
**ಪವಳ** ಹವಳ
**ಪವಳಿ<ಪೌಳಿ** ಪ್ರಾಕಾರ
**ಪವಿ** ವಜ್ರ, ವಜ್ರಾಯುಧ
**ಪವಿತ್ರ** ಚಕ್ರ; ಶುದ್ಧ
**ಪವಿಧರ** ವಜ್ರಾಯುಧಧರ–ಇಂದ್ರ
**ಪವುಜು<ಫೌಜು** ಸೈನ್ಯ
**ಪಶುಗಾಹಿ** ಪಶುಗಳನ್ನು ಕಾಯುವವ
**ಪಶುಘಾತಕ** ಕಟುಕ
**ಪಶುಜನರು** ಅಜ್ಞಾನಿಗಳು
**ಪಶುಪ, ಪಶುಪತಿ** ಶಿವ
**ಪಶುಪತಿಧನುಭಂಜನ** ಶಿವನ ಧನುಸ್ಸನ್ನು ಮುರಿದವ–ರಾಮ
**ಪಶುಪಾಲ** ಕೃಷ್ಣ
**ಪಶ್ಚಾತ್** ಅನಂತರ
**ಪಶ್ಚಿಮದರಂಗನಾಥ, ಪಶ್ಚಿಮರಂಗ** ಶ್ರೀರಂಗಪಟ್ಟಣದ ರಂಗನಾಥ
**ಪಶ್ಚಿಮಾಂಬುಧಿ** ಪಡುವಣ, ಕಡಲು, ಅರಬ್ಬೀ ಸಮುದ್ರ
**ಪಶ್ಚಿಮಾಂಬುಧಿತಡಿ** ಉಡುಪಿ
**ಪಶ್ಚಿಮಾಂಬುಧಿತಡಿವಾಸ** ಉಡುಪಿಯ ಕೃಷ್ಣ
**ಪಶ್ಯಮುದ** ನೋಡುವಿಕೆಯಿಂದಾದ ಸಂತೋಷ
**ಪಸರ** ಅಂಗಡಿ
**ಪಸರಿಸು** ವಿಸ್ತರಿಸು, ಹರಡು
**ಪಸವ** ಆಹಾರ
**ಪಸಾರ, ಪಸಾರು** ಹರಡಿರುವ ಸ್ಥಿತಿ, ಸರಕು, ಅಂಗಡಿ; ಅಂಗಳ
**ಪಸಿ** ಹಸಿ
**ಪಸುಗೆ** ಭಾಗ
**ಪಸುಳೆ** ಪುಟ್ಟ ಮಗು, ಶಿಶು
**ಪಳ<ಪಲ** ಒಂದು ಕಾಲಮಾನ, 6 ಪ್ರಾಣಕಾಲ= 60 ಗುರು= 960 ನಿಮಿಷ; ಹಣ್ಣು, ಫಲ
**ಪಳಿ** ನಿಂದೆ, ಹಳಿ

Rarest Archiver

**ಪಳಿದೆ, ಪಳಿದ್ಯ** ಮಜ್ಜಿಗೆಹುಳಿ, ಮಜ್ಜಿಗೆಯಿಂದ ತಯಾರಿಸಿದ ಸಾರು

**ಪಳ್ಳಿ** ಹಳ್ಳಿ, ಗೊಲ್ಲರ ಕೇರಿ, ವೃಂದಾವನ

**ಪಳ್ಳಿಗಾರ್ಧಟ** ಹಳ್ಳಿಯ ವೀರ–ಕೃಷ್ಣ

**ಪಾಂಗ–ಅಪಾಂಗ** ಕಡೆಗಣ್ಣಿನ ನೋಟ, ಕಟಾಕ್ಷ

**ಪಾಂಚಜನ್ಯ** ಕೃಷ್ಣನ ಶಂಖ

**ಪಾಂಚಾಲಿ(ಳಿ)** ದ್ರೌಪದಿ

**ಪಾಂಡವಪಕ್ಷ** ಪಾಂಡವಪ್ರಿಯ–ಕೃಷ್ಣ

**ಪಾಂಡವಪರಿಪಾಲ, ಪಾಂಡವಬಂಧು** ಕೃಷ್ಣ

**ಪಾಂಡು** ಪಾಂಡವರ ತಂದೆಯ ಹೆಸರು; ವೇದವ್ಯಾಸರ ಕೃಪಾ ಕಟಾಕ್ಷದಿಂದ ಹುಟ್ಟಿದವ

**ಪಾಂಡುನಂದನ** ಧರ್ಮರಾಜ

**ಪಾಂಡುರ** ಹಳದಿ ಮಿಶ್ರಿತ ಬಿಳಿ ಬಣ್ಣ

**ಪಾಂಡುರಂಗ** ಪಂಢರಪುರದಲ್ಲಿಯ ಪುಂಡಲೀಕ ವರದ–ಶ್ರೀಹರಿ

**ಪಾಂಡುರೋಗ** ಕಾಮಾಲೆ, ಕಾಮಣಿ

**ಪಾಂಡ್ಯದೇಶ** ತಮಿಳುನಾಡಿನ ಒಂದು ಪ್ರದೇಶ

**ಪಾಂತ್ರಾತ್ಮಕಶ್ರಾದ್ಧ** ಪಿತೃಸಂಬಂಧ ಶ್ರಾದ್ಧ

**ಪಾಂಥ** ಪ್ರಯಾಣಿಕ

**ಪಾಂಶು(ಸು)** ಧೂಳು

**ಪಾಕ** ಅಡಿಗೆ; ಜಿಹ್ವಾಭಿಮಾನಿ ದೈತ್ಯ

**ಪಾಕದಮನಪ್ರಸ್ಥ** ಇಂದ್ರಪ್ರಸ್ಥ

**ಪಾಕಪ, ಪಾಕರಿಪು, ಪಾಕವೈರಿ, ಪಾಕಶಾಸನ** ಇಂದ್ರ

**ಪಾಕಶಾಸನನುಜ** ಇಂದ್ರನ ತಮ್ಮ–ಉಪೇಂದ್ರ; ವಾಮನ

**ಪಾಕಶಾಸನಪುರ** ಪುರಂದರಗಡ

**ಪಾಕಾರಿ** ಪಾಕಾಸುರ ವೈರಿ–ಇಂದ್ರ

**ಪಾಕಿ** ಅಡಿಗೆಯವನು

**ಪಾಕಿಯಳು** ಅಡುಗೆಯವಳು

**ಪಾಗ** ಹಾಗ, ಒಂದು ನಾಣ್ಯ

**ಪಾಗಾಣತಿ** ಕುದುರೆಲಾಯದ ಕಸಗುಡಿಸುವವಳು

**ಪಾಗುಡ** ಉಡುಗೊರೆ, ಕಾಣಿಕೆ

**ಪಾಚಕ** ಅಡಿಗೆಯವನು

**ಪಾಚು** ಮಲಗು, ಶಯನಿಸು

**ಪಾಜಿ** ಕೀಳು ಮನುಷ್ಯ; ಅಲ್ಪವಾದುದು, ಚಿಕ್ಕದು; ಗಮ್ಮ

**ಪಾಟನ** ಒಡೆಯುವುದು, ಕೀಳುವುದು

**ಪಾಟಪಡು** ಪಾಡುಪಡು, ಕಷ್ಟಪಡು

**ಪಾಟಬದ್ಧ** ನಿಶ್ಚಿತ ರೀತಿಯ ಜೀವನವಿಲ್ಲದ

**ಪಾಟಲ** ಎಳೆಗೆಂಪುಬಣ್ಣ; ಪಾದರಿ ಹೂ

**ಪಾಟಲಾಧರ** ಕೆಂಪು ತುಟಿ

**ಪಾಟವ** ಶಕ್ತಿ

**ಪಾಟಿ** ಸಮಾನ; ಸೋಲು

**ಪಾಟಿಸು** ಗಮನಿಸು, ಸಂತೋಷಪಡು, ಬಯಸು; ಹೊರತೆಗೆ, ಕಿತ್ತುಹಾಕು; ಆಧಿಕ್ಯ

**ಪಾಟೀರ** ಹರವು

**ಪಾಟು** ಬೀಳುವಿಕೆ, ಪಾಡು, ಹಾಡು

**ಪಾಠಕ** ಓದುವವ, ಸ್ತುತಿ ಪಾಠಕ; ಭಟ್ಟಂಗಿ, ಹೊಗಳುಭಟ್ಟ

**ಪಾಠಿಸು** ವಾದಿಸು, ಚರ್ಚೆಮಾಡು

**ಪಾಠೀಣ(ನ)** ಉಪನ್ಯಾಸಕ, ಪ್ರವೀಣ; ಮೀನು

**ಪಾಡಂಬಡು** ಪಾಡುಪಡು, ಕಷ್ಟಪಡು

**ಪಾಡಗ** ಕಡಗದ ರೀತಿಯ ಆಭರಣ, ಕಾಲು ಬಳೆ

**ಪಾಡು** ಹಾಡು

**ಪಾಡುಪಂಥ** ಪ್ರತಿಜ್ಞೆ

**ಪಾಣಿ** ಹಸ್ತ; ಯೋಗ್ಯ ವ್ಯಕ್ತಿ

**ಪಾಣಿಹರಿಗೋಲು** ಕೈಯಿಂದ ನಡೆಸುವ ಸಣ್ಣ ದೋಣಿ

**ಪಾತಕ** ಪಾಪ, ದೋಷ

**ಪಾತಕವನನಿಧಿಪೋತ** ಪಾಪಸಮುದ್ರಕ್ಕೆ ದೋಣಿ

**ಪಾತಕಾಂಬುಧಿ** ಪಾಪವೆಂಬ ಸಮುದ್ರ

**ಪಾತಕಿ** ಪಾಪಿ

**ಪಾತರ** ಪಾತ್ರ, ನಟನೆ

Rarest Archive

**ಪಾತಾಳಪ** ಪಾತಾಳದ ಒಡೆಯ, ಶೇಷದೇವ
**ಪಾತಿಬದ್ಧ** ನಿಶ್ಚಿತ ರೀತಿಯ ಜೀವನವಲ್ಲದ
**ಪಾತ್ರ** ಪಾತರದವ, ನಟನೆಯವ; ವೇಶ್ಯೆ
**ಪಾತ್ರವಾಡು** ನಾಟ್ಯವಾಡು
**ಪಾಥಚರ** ಮೀನು
**ಪಾಥಸ್** ನೀರು
**ಪಾಥೇಯ** ಬುತ್ತಿ
**ಪಾಥೋಜ** ಕಮಲ
**ಪಾಥೋಧಿ** ಸಾಗರ, ಸಮುದ್ರ
**ಪಾದತ್ರಯ** ತ್ರಿವಿಕ್ರಮ
**ಪಾದತ್ರಾಣ** ಕಾಲಿನಶಕ್ತಿ, ಒದಿಕೆ
**ಪಾದಪಾಂಸು** ಪಾದಧೂಳಿ, ಕಾಲಿನಧೂಳು
**ಪಾದಪುಂಡರೀಕ** ಬಿಳಿಯ ತಾವರೆಯಂತೆ ಪಾದವುಳ್ಳವ
**ಪಾದರ** ಹಾದರ, ವ್ಯಭಿಚಾರ
**ಪಾದರಜ** ಕಾಲಿನಧೂಳು
**ಪಾದರಾಜೀವ** ಪಾದಕಮಲ
**ಪಾದರಿ** ಪಾಟಲ ವೃಕ್ಷ, ಪಾದರಹೂವಿನ ಮರ; ವೇಶ್ಯೆ
**ಪಾದವನಜಯುಗ್ಮ** ಚರಣಕಮಲದ್ವಯ
**ಪಾದಸಂಹನ** ಪಾದವನ್ನು ತೊಳೆಯುವುದು
**ಪಾದಸುವಾರಿಜ, ಪಾದಜಲಜ** ಪಾದಕಮಲ, ಚರಣಕಮಲ
**ಪಾದಾಂಗುಲಿ** ಕಾಲಿನ ಹೆಬ್ಬೆರಳು
**ಪಾದಾಂಬುಜ, ಪಾದಾಂಭೋಜ** ಪಾದಕಮಲ
**ಪಾದಾಹತ** ಕಾಲಿನಿಂದ ತುಳಿಯಲ್ಪಟ್ಟ
**ಪಾದ್ಯ** ಕಾಲು ತೊಳೆಯುವ ನೀರು
**ಪಾನೀಯಜ** ಕಮಲ
**ಪಾನೀಯಜಭವಾಂಡ** ಬ್ರಹ್ಮಾಂಡ
**ಪಾನೀಯಜಾಂಬಕ** ಪುಂಡರೀಕಾಕ್ಷ, ಕಮಲಾಕ್ಷ–ಶ್ರೀಹರಿ
**ಪಾನೀಯಧರ** ಮೋಡ
**ಪಾಪಟೆ** ಪರ್ಪಟ, ಹಾವುಮೆಕ್ಕೆ ಗಿಡ
**ಪಾಪಪುಂಜ** ಪಾಪಗಳ ರಾಶಿ
**ಪಾಪವಿದೂರ** ವಿಷ್ಣು
**ಪಾಪಾಟವಿ** ಪಾಪವೆಂಬ ಅಡವಿ
**ಪಾಪಾದ್ರಿಕುಲಿಶ** ಪಾಪಗಳ ಪರ್ವತಕ್ಕೆ ಕೊಡಲಿ
**ಪಾಪೋಸು** ಪಾದರಕ್ಷೆ, ಚಪ್ಪಲಿ; ಪಾಪಗಳೆಲ್ಲವೂ
**ಪಾಪೌಘ** ಪಾಪಗಳ ಸಮೂಹ
**ಪಾಮರ** ತಿಳುವಳಿಕೆ ಇಲ್ಲದವನು, ಶ್ರೀಸಾಮಾನ್ಯ; ಪಾಪಿ, ಅಸಂಸ್ಕೃತ
**ಪಾಯ** ಪಾದ; ಕಾಲಿನ ಆಭರಣ; ರೀತಿ
**ಪಾಯಕ** ಕಾಲಾಳು, ಸೇವಕ, ಪದಾತಿ
**ಪಾಯವಟ್ಟು** ಕಾಲುಗೆಜ್ಜೆ
**ಪಾಯಸ** ಮಾಲೀದಿ, ಬಟ್ಟಿವಿ, ಗೌಲಿ, ಪರಡಿ ಮುಂತಾದವುಗಳಿಂದ ತಯಾರಿಸಿದ ಸಿಹಿ ಅಡುಗೆ
**ಪಾಯು** ಗುದದ್ವಾರ
**ಪಾಯೆಪೋಸು** ಪಾದರಕ್ಷೆ, ಚಪ್ಪಲಿ
**ಪಾಯ್ದಟ್ಟ** ಕಾಲಿನ ಆಭರಣ, ಪೆಂಡೆಯ
**ಪಾಯ್ದಳ** ಪದಾತಿ ಸೈನ್ಯ
**ಪಾಯ್ವಟ್ಟ, ಪಾಯ್ವಟ್ಟು** ಕಾಲಿನ ಆಭರಣ, ಪೆಂಡೆಯ
**ಪಾರ** ದಡ, ತೀರ, ತುದಿ, ಕೊನೆ
**ಪಾರಂಪದ** ಪರಮಪದ, ಮುಕ್ತಿ
**ಪಾರಗ** ಪಂಡಿತ, ನಿಪುಣ; ತೀರವನ್ನು ದಾಟಿದವನು
**ಪಾರಣೆ** ಉಪವಾಸ ಮುರಿಯುವುದು, ಉಪವಾಸಾ ನಂತರದ ಊಟ
**ಪಾರವ<ಪಾರ್ವ** ಬ್ರಾಹ್ಮಣ
**ಪಾರಾಯಣ** ದಾಟುವುದು; ಮೊದಲಿನಿಂದ ಕೊನೆಯವರೆಗೆ ಓದುವುದು
**ಪಾರಾವತ** ಪಾರಿವಾಳ
**ಪಾರಾವಾರ** ಎಲ್ಲೆ, ಮೇರೆ; ಸಮುದ್ರ, ಕಡಲು

Rarest Archiver

**ಪಾರಾಶರ** ವೇದವ್ಯಾಸ, ಪರಾಶರ ಮಹರ್ಷಿಯ ಮಗ
**ಪಾರಿ<ಪಹರೆ** ಕಾವಲು
**ಪಾರು** ಹಾರು, ಭೇದಿಸು, ತತ್ತರಿಸು
**ಪಾರುಗಾಣಿಸು** ಪರಿಹರಿಸು, ದಡಸೇರಿಸು
**ಪಾರುಪತ್ಯ** ಯಜಮಾನಿಕೆ
**ಪಾರ್ಥ** ಅರ್ಜುನ
**ಪಾರ್ಥಪ** ಕೃಷ್ಣ
**ಪಾರ್ಥಸಖ** ಅರ್ಜುನನ ಮಿತ್ರ–ಕೃಷ್ಣ
**ಪಾರ್ಥಸಾರಥಿ** ಕೃಷ್ಣ
**ಪಾರ್ಥಸುತ** ಅಭಿಮನ್ಯು
**ಪಾರ್ಥಸೂತ** ಪಾರ್ಥಸಾರಥಿ–ಕೃಷ್ಣ
**ಪಾರ್ಥಿವ** ರಾಜ, ಕ್ಷತ್ರಿಯ
**ಪಾರ್ಥಿವಾಂತಕ** ಕ್ಷತ್ರಿಯರ ವೈರಿ–ಪರಶುರಾಮ
**ಪಾರ್ವ** ಬ್ರಾಹ್ಮಣ
**ಪಾರ್ವಖಗ** ಹಾರುವ ಹಕ್ಕಿ
**ಪಾರ್ವತಿ** ಪರ್ವತರಾಜನ ಮಗಳು, ಶಿವನ ಹೆಂಡತಿ
**ಪಾರ್ವತೀಶ** ಶಿವ
**ಪಾರ್ವೇಂಟೆ** ಹಬ್ಬದ ಬೇಟೆ
**ಪಾರ್ಷದ<ಪಾರಿಷದ** ಸೇವಕ, ಬಾಗಿಲು ಕಾಯುವವ
**ಪಾರ್ಷದಾನೀಕ** ಸೇವಕರ ಸಮೂಹ
**ಪಾರ್ಷ್ಣಿ** ಹಿಮ್ಮಡಿ
**ಪಾಲಟ** ಪಲ್ಲಟ, ಬದಲು
**ಪಾಲನ** ರಕ್ಷಿಸುವುದು, ಕಾಪಾಡುವುದು
**ಪಾಲನೆರೆ** ಹಾಲನ್ನು ಎರೆ
**ಪಾಲಬಾಲೆ** ಕ್ಷೀರಸಾಗರದಲ್ಲಿ ಹುಟ್ಟಿದವಳು–ಲಕ್ಷ್ಮಿ
**ಪಾಲಯಚಂದನ** ಹಣೆಯಲ್ಲಿ ಧರಿಸಿದ ಶ್ರೀಗಂಧ
**ಪಾಲವಲಿಜೆ** ಹಾಲು ಮತ್ತು ಅವಲಕ್ಕಿ
**ಪಾಲವಾರಿಧಿಶಯ್ಯ** ವಿಷ್ಣು
**ಪಾಲಸಾಗರ, ಪಾಲಾಬ್ಧಿ** ಹಾಲಿನ ಸಮುದ್ರ
**ಪಾಲಾಬ್ಧಿಜಾಪತಿ** ಲಕ್ಷ್ಮೀದೇವಿಯ ಪತಿ, ಒಡೆಯ–ಶ್ರೀಹರಿ
**ಪಾಲಾಬ್ಧಿಶಾಯಿ** ಕ್ಷೀರಸಮುದ್ರದಲ್ಲಿ ಮಲಗಿರುವವ–ಶ್ರೀಹರಿ
**ಪಾಲಾಬ್ಧಿಸಂಜಾತೆ** ಲಕ್ಷ್ಮಿ
**ಪಾಲಿ(ಳಿ)** ಸರದಿ, ಕ್ರಮ, ಸಾಲು; ಸುತ್ತ
**ಪಾಲಿಸು** ರಕ್ಷಿಸು, ಕಾಪಾಡು
**ಪಾಲೋಗರ** ಹಾಲುಅನ್ನ, ಕ್ಷೀರಾನ್ನ
**ಪಾಲ್ಗಡಲೊಡೆಯ** ಹಾಲಿನ ಕಡಲಿನ ಒಡೆಯ–ವಿಷ್ಣು
**ಪಾಲ್ಗೊಡ** ಹಾಲಿನ ಕೊಡ
**ಪಾಲ್ಮೊಸರು** ಹಾಲು–ಮೊಸರು
**ಪಾವ(ಲಿ)ಳಿ** ನಾಲ್ಕಾಣೆ (ಇಂದಿನ ಇಪ್ಪತ್ತೈದು ಪೈಸೆಯ ನಾಣ್ಯ)
**ಪಾವಕ** ಅಗ್ನಿ, ಬೆಂಕಿ
**ಪಾವಕಜ** ಅಗ್ನಿಯ ಮಗ
**ಪಾವಕಾಹುತಿ** ಬೆಂಕಿಗೆ ಹಾಕುವ ಆಹುತಿ, ಯಜ್ಞ, ಹೋಮ
**ಪಾವಡ, ಪಾವಡಿ, ಪಾವಡೆ** ವಸ್ತ್ರ, ಬಟ್ಟೆ, ಲಂಗ
**ಪಾವನ, ಪಾವನ್ನ** ಪವಿತ್ರ, ಶುದ್ಧ, ಪುಣ್ಯಮಯ
**ಪಾವನಗಾತ್ರ** ಅಪ್ರಾಕೃತಶರೀರ, ದಿವ್ಯದೇಹವುಳ್ಳವನು–ವಿಷ್ಣು
**ಪಾವನಿ** ಪವನನ ಮಗ ಹನುಮ, ಭೀಮ, ಮಧ್ವ
**ಪಾವಮಾನಿ** ವಾಯು, ಹನುಮ, ಭೀಮ, ಮಧ್ವ
**ಪಾವಿನಬಾಣ, ಪಾವಿನಶರ** ಸರ್ಪಾಸ್ತ್ರ
**ಪಾವುಗೆ** ಪಾದುಕೆ, ಚಪ್ಪಲಿ
**ಪಾಶ** ಹಗ್ಗ, ಉರುಲು
**ಪಾಶಧರ** ಗಣಪತಿ, ಯಮ, ವರುಣ
**ಪಾಶಪಾಹಿ** ವರುಣ, ಯಮನಿಂದ ರಕ್ಷಿಸುವವ
**ಪಾಶಬದ್ಧಕ** ಬಂಧನಕ್ಕೊಳಗಾದ, ಕಟ್ಟಲ್ಪಟ್ಟ
**ಪಾಶಾಂಕುಶಧರ** ಪಾಶ–ಅಂಕುಶಗಳನ್ನು ಧರಿಸಿದವನು ಗಣಪತಿ

Rarest Archive

**ಪಾಶ್ಯಗಾರ** ಬೇಟೆಯಲ್ಲಿ ಬಲೆ ಹೂಡುವವನು, ಮೋಸಗಾರ

**ಪಾಷಂಡ(ಡಿ)** ಪಾಖಂಡಿ, ಸಂಪ್ರದಾಯ ವಿರೋಧಿ, ನಾಸ್ತಿಕ, ರೂಢಧರ್ಮ ವಿರೋಧಿ

**ಪಾಷಂಡಮತ** ವೇದ ವಿರೋಧಿ ಮತ, ನಾಸ್ತಿಕ ಮತ

**ಪಾಷಾಣ** ಕಲ್ಲು; ಕಲ್ಲುಪ್ಪು; ವಿಷ

**ಪಾಸಟಿ** ಸಮಾನ, ಹೋಲಿಕೆ

**ಪಾಸು** ಬಲೆ; ಲೆತ್ತದಾಳ, ಪಗಡೆಯಹಾಸು

**ಪಾಹಿ** ಶರಣು, ಕಾಪಾಡು

**ಪಾಳತಿ** ಸರದಿಪ್ರಕಾರ ಕಾಯುವುದು

**ಪಾಳೆ** ಹಾಳೆ, ಪಟ್ಟಿ

**ಪಾಳೆಯ** ಬೀಡು, ಶಿಬಿರ

**ಪಿಂಗ(ಲ)ಳ** ಕಂದುಬಣ್ಣ; ಸೂರ್ಯನ ಸೇವಕ

**ಪಿಂಗಟ** ಹಿಂದೆ

**ಪಿಂಗಾಕ್ಷಿ** ಕಂದುಬಣ್ಣದ ಕಣ್ಣು; ಕಂದುಬಣ್ಣದ ಕಣ್ಣುಳ್ಳವಳು

**ಪಿಂಗು** ಹಿಂಗು, ಇಂಗು, ಬತ್ತು, ಇಲ್ಲವಾಗು

**ಪಿಂಛ** ನವಿಲುಗರಿ

**ಪಿಂಡ** ದೇಹ; ಅನ್ನ

**ಪಿಂಡಾಂಡ** ದೇಹ, ಜೀವಾತ್ಮ

**ಪಿಂತು** ಮುಂಚೆ, ಮೊದಲು, ಹಿಂದೆ

**ಪಿಕ** ಕೋಗಿಲೆ

**ಪಿಟ್ಟಕ್ಕ** ಹನ್ನೆರಡನೆಯ ಶತಮಾನದ ಒಬ್ಬ ಭಕ್ತೆ

**ಪಿಡಿ** ಹಿಡಿಕೆ, ಹಿಡಿ

**ಪಿಡಿಯವಲು** ಒಂದು ಹಿಡಿ ಅವಲಕ್ಕಿ

**ಪಿಡುಗು** ತೊಂದರೆ, ಕಷ್ಟ, ರೋಗ

**ಪಿತಾಮಹ** ಬ್ರಹ್ಮ, ಕೌರವ ಪಾಂಡವರಿಗೆ ಸಂಬಂಧಿಸಿದಂತೆ ಭೀಷ್ಮ

**ಪಿತೃ** ತಂದೆ; ಸ್ವರ್ಗಸ್ಥರಾದ ಹಿರಿಯ, ಪೂರ್ವಜ

**ಪಿತೃದ್ರೋಹಿ** ತಂದೆಗೆ ದ್ರೋಹ ಮಾಡಿದವನು–ಪ್ರಹ್ಲಾದ

**ಪಿತೃಯಾನ** ಪಿತೃಗಳ ಪ್ರಯಾಣಮಾರ್ಗ

**ಪಿತ್ರುಗ** ದುಂಬಿ

**ಪಿನಾಕ** ಶಿವನ ತ್ರಿಶೂಲ, ಶಿವನ ಬಿಲ್ಲು

**ಪಿನಾಕಧರ** ಪಿನಾಕವೆಂಬ ಬಿಲ್ಲು ಧರಿಸಿರುವ ಶಿವ

**ಪಿನಾಕಿ** ಶಿವ

**ಪಿಪಾಸು** ಬಾಯಾರಿಕೆಯುಳ್ಳವನು

**ಪಿಪಾಸೆ** ನೀರಡಿಕೆ, ಬಾಯಾರಿಕೆ, ದಾಹ

**ಪಿಪೀಲಿಕ** ಇರುವೆ

**ಪಿಪ್ಪಲ** ಅಶ್ವತ್ಥವೃಕ್ಷ, ಅರಳಿಮರ

**ಪಿರಿದು** ದೊಡ್ಡದು

**ಪಿರಿಯ** ಹಿರಿಯ

**ಪಿಲ್ಯ, ಪಿಲ್ಲೆ<ಪಿಳ್ಳೆ** ಹುಡುಗ; ಕಾಲಿಗೆ ಧರಿಸುವ ಆಭರಣ, ಕಾಲುಂಗುರ

**ಪಿಲ್ಲಿ** ಬೆಕ್ಕು, ಮಾರ್ಜಾಲ

**ಪಿಶಿತ** ಮಾಂಸ, ಬಾಡು

**ಪಿಶಿತಾಶಿ** ಮಾಂಸ ತಿನ್ನುವವಳು, ರಾಕ್ಷಸಿ

**ಪಿಶುನ** ಚಾಡಿ, ದೂರು, ಚಾಡಿಕೋರ

**ಪಿಶುನತೆ** ಪಿಸುಣತೆ, ಚಾಡಿ, ದೂರು

**ಪಿಸುಣ** ಚಾಡಿಕೋರ

**ಪಿಳಂಗವಾಸ** ಕಾಳಿಂಗ ಸರ್ಪ; ಕಂದುಬಣ್ಣದ ಮೈಯುಳ್ಳವ–ಕೃಷ್ಣ

**ಪಿಳ್ಳಂಗೋವಿ** ಕೊಳಲು

**ಪೀಕು** ಹೊರಹಾಕು

**ಪೀಕುದಾನಿ** ಕಾಳಂಜಿ, ಉಗುಳುವ ಪಾತ್ರೆ

**ಪೀಡೆಪೆಚ್ಚದಂತೆ** ದುಃಖ ಹೆಚ್ಚದಿರುವಂತೆ

**ಪೀತ** ಹಳದಿ

**ಪೀತದನುಜ** ಹಿರಣ್ಯಾಕ್ಷ/ಹಿರಣ್ಯಕಶಿಪು

**ಪೀತವಾಸ** ಪೀತಾಂಬರ, ಹಳದಿಬಟ್ಟೆ

**ಪೀನ** ತುಂಬಿದ; ವಿಶೇಷವಾದ

**ಪೀನವಕ್ಷ** ತುಂಬಿದ ಎದೆ

**ಪೀನಸರೋಗ, ಪೀನಾಶಿರೋಗ** ಮೂಗು ಕಟ್ಟಿಕೊಂಡು ಗೊರಗೊರನೆ ಉಸಿರಾಡುವಂಥ ರೋಗ

Rarest Archiver

**ಪೀಯೂಷ** ಅಮೃತ, ಹಾಲು
**ಪೀಯೂಷಸಿಕ್ತ** ಅಮೃತದಿಂದ ಕೂಡಿದ
**ಪೀವರ** ದೊಡ್ಡ, ಪುಷ್ಟ, ತುಂಬಿದ
**ಪೀವರೋರು** ಪುಷ್ಟವಾದ ತೊಡೆ
**ಪುಂಗ, ಪುಂಗವ** ಎತ್ತು, ಗೂಳಿ; ಶ್ರೇಷ್ಠವ್ಯಕ್ತಿ
**ಪುಂಚ** ಹುತ್ತ
**ಪುಂಚಪ್ರಸ್ಥ** ಹುತ್ತಗಳಿಂದ ಕೂಡಿರುವ ವನಪ್ರದೇಶ
**ಪುಂಜ** ಸಮೂಹ, ಗುಂಪು
**ಪುಂಜವನ** ಗುಂಪಾಗಿರುವ ಉದ್ಯಾನ
**ಪುಂಡ, ಪುಂಡಗಾರ** ತಂಟೆಕೋರ, ತುಂಟ
**ಪುಂಡರೀಕ** ಬ್ರಹ್ಮ; ಒಬ್ಬ ವಿಷ್ಣುಭಕ್ತನ ಹೆಸರು; ಬಿಳಿಯ ತಾವರೆ
**ಪುಂಡರೀಕವರದ** ಪುಂಡರೀಕನಿಗೆ ಒಲಿದ ವಿಷ್ಣುವಿನ ವಿಠ್ಠಲರೂಪ
**ಪುಂಡರೀಕಾಕ್ಷ** ಬಿಳಿಯ ತಾವರೆ, ಕಮಲದಂತೆ ಕಣ್ಣುಳ್ಳವನು–ವಿಷ್ಣು
**ಪುಂಡರೀಕಾಯತ** ಕಮಲದಂತೆ ಅಗಲವಾದ
**ಪುಂಡರೀಕೋದ್ಭವ** ಬ್ರಹ್ಮ
**ಪುಂಡಿ** ಒಂದು ಜಾತಿಯ ಸಸ್ಯ, ಕೀರೆ
**ಪುಂಡು** ಬಂಟಾ(ಡಾ)ಟ, ಕೊಂಡಾಟ
**ಪುಂಡ್ರ** ಮೇಲುಮುಖವಾಗಿ ಧರಿಸುವ ನಾಮ, ಗಂಧ–ಭಸ್ಮದಲೇಪ
**ಪುಂಶ್ಚಲಿ** ಗಂಡುಬೀರಿ, ಪುರುಷ ಲಂಪಟೆ; ಜಾರೆ
**ಪುಂಸ** ಪುರುಷ, ಗಂಡಸು
**ಪುಕ್ಕಸಾಟಿ** ಪುಕ್ಕಟೆ, ಬೆಲೆಯಿಲ್ಲದ
**ಪುಗಡಿ** ಹೆಣ್ಣು ಮಕ್ಕಳು ಆಡುವ ಒಂದು ಆಟ
**ಪುಗುಡಿ** ಪಲ್ಲಿ, ಲಾಗ
**ಪುಚ್ಛ** ಬಾಲ
**ಪುಟ** ಲೋಹ ಮುಂತಾದುವನ್ನು ಕರಗಿಸಿ ಶುದ್ಧ ಮಾಡುವಿಕೆ; ಹಾರಾಟ, ಜಿಗಿತ
**ಪುಟಮಾಡು** ಹೆಚ್ಚು ಮಾಡು
**ಪುಟ್ಟಕದಳಿ** ಮಿಟ್ಟಲೆ ಬಾಳೆ
**ಪುಟ್ಟದಾಸ** ಧ್ರುವರಾಯ
**ಪುಟ್ಟು** ಹುಟ್ಟು
**ಪುಡಿಸು** ಮಣ್ಣುಗೂಡಿಸು
**ಪುಣ್ಯಕಾಲಗಳು** ಸಂಕ್ರಮಣ, ಗ್ರಹಣ ಇತ್ಯಾದಿ ಕಾಲಗಳು
**ಪುಣ್ಯಕೋಟಿ** ಕಂಚಿಯ ವರದರಾಜನ ಗುಡಿಯ ವಿಮಾನದ ಹೆಸರು
**ಪುಣ್ಯನದಿ** ಗಂಗಾನದಿ
**ಪುತ್ತಳಿ** ಗೊಂಬೆ, ಪ್ರತಿಮೆ
**ಪುದುಗು** ಹುದುಗು, ಮರೆಯಾಗು
**ಪುನಗು** ಒಂದು ಜಾತಿಯ ಕಾಡು ಬೆಕ್ಕಿನಿಂದಾಗುವ ಸುಗಂಧ ದ್ರವ್ಯ
**ಪುನರಪಿ, ಪುನರೇವ** ಪುನಃಪುನಃ, ಮತ್ತೆಮತ್ತೆ
**ಪುನರ್ವಸು** ಒಂದು ನಕ್ಷತ್ರ; ತನ್ನ ಭಕ್ತರು ಪುನಃ ಪುನಃ ಆರೋಗ್ಯ–ಆಯುಷ್ಯ–ಐಶ್ವರ್ಯಾದಿಗಳನ್ನು ಹೊಂದುವಂತೆ ಅನುಗ್ರಹಿಸುವವನು–ಶ್ರೀಹರಿ
**ಪುನೀತ** ಪವಿತ್ರ, ಪರಿಶುದ್ಧ
**ಪುನ್ನಾಗ** ಶ್ರೇಷ್ಠ, ಮುಖ್ಯಸ್ಥ; ಸುರಹೊನ್ನೆ; ಶ್ರೇಷ್ಠವಾದ ಆನೆ
**ಪುನ್ನಾಗಕರ** ಶ್ರೇಷ್ಠವಾದ ಆನೆಯ/ಐರಾವತದ ಸೊಂಡಿಲು
**ಪುನ್ನಾಗಫಲ** ಜಾಯೀಕಾಯಿ
**ಪುನ್ನಾಮಕ** ಪುರುಷ ಶಬ್ದವಾಚ್ಯ
**ಪುಬ್ಬು** ಹುಬ್ಬು
**ಪುರ** ದೇಹ; ತ್ರಿಪುರ; ಊರು, ಪಟ್ಟಣ, ರಾಜಧಾನಿ
**ಪುರಂಜನ** ಜೀವ ಜನ್ಮಕ್ಕೆ ಕಾರಣನಾದವನು–ಕಾಮ; ನಿತ್ಯಸಂಸಾರಿ ಜೀವರಭಿಮಾನಿ–ಶ್ರೀಹರಿ
**ಪುರಂದರ** ಇಂದ್ರ, ಶಿವ
**ಪುರಂದರಾನುಜ** ವಾಮನ, ಉಪೇಂದ್ರ
**ಪುರಂದರಾಲಯಘಟ್ಟ** ಪುರಂದರಗಡ
**ಪುರಂಧ್ರಿ** ಹಿರಿಯ ಮುತ್ತೈದೆ, ಸುಮಂಗಲಿ, ಮಾತೆ

Rarest Archiver

**ಪುರಜಿದ್ವರೇಣ್ಯ** ತ್ರಿಪುರದಹನಕಾರ ಶಿವ, ವಿಷ್ಣು

**ಪುರತ್ರಿತಯ** ತಾರಕಾಸುರನ ಮೂರು ಮಕ್ಕಳು, ಇವರನ್ನು ಈಶ್ವರನು ಒಂದೇ ಬಾಣದಿಂದ ಸಂಹರಿಸಿದನು; ತ್ರಿಪುರ

**ಪುರರಿಪು, ಪುರವೈರಿ** ಶಿವ

**ಪುರಸತಿ** ತ್ರಿಪುರಾಸುರನ ಪತ್ನಿಯರು

**ಪುರಸ್ಸರ<ಪುರಸ್ಕಾರ** ಆದರ, ಸತ್ಕಾರ, ಭಕ್ತಿ

**ಪುರಹರ** ಶಿವ

**ಪುರಾಕೃತ** ಹಿಂದೆಮಾಡಿದ

**ಪುರಾಣಪುರುಷೋತ್ತಮ** ವಿಷ್ಣು

**ಪುರಾರಿ** ಶಿವ

**ಪುರುದ** ಬಂಗಾರ

**ಪುರುಷ** ಗಂಡು; ವಿವೇಕ; ಬ್ರಹ್ಮ; ದೇಹಗತ ಜೀವ

**ಪುರುಷಪ್ರಧಾನ** ಬ್ರಹ್ಮ, ಪುರುಷರಲ್ಲಿ ಪ್ರಧಾನ

**ಪುರುಷಬೀಜ** ಪುರುಷಕಾರಣ, ಮುಖ್ಯಕಾರಣ

**ಪುರುಷಮೃಗ** ಮನುಷ್ಯನ ಮುಖದ ನಾಲ್ಕು ಕಾಲಿನ ಕಾಲ್ಪನಿಕ ಪ್ರಾಣಿ

**ಪುರುಷಸೂಕ್ತ** ಋಗ್ವೇದದ ಹತ್ತನೆಯ ಮಂಡಲ ದಲ್ಲಿ ಏಕ ದೈವತ್ವವಾದಿಯಾದ ಸೂಕ್ತ

**ಪುರುಷೋತ್ತಮ** ನಾರಾಯಣ

**ಪುರುಹೂತ** ಇಂದ್ರ

**ಪುರುಹೂತನಂದನ** ಅರ್ಜುನ

**ಪುರುಹೂತರಾರ್ಯ** ಪುರಂದರದಾಸರು

**ಪುರುಹೂತವೈರಿ** ರಾವಣ

**ಪುರುಳು** ಸತ್ವ, ಅರ್ಥ

**ಪುರೋಚನ** ದುರ್ಯೋಧನನ ಮಂತ್ರಿಗಳಲ್ಲೊಬ್ಬ

**ಪುರ್ಬು** ಹುಬ್ಬು

**ಪುಲಿತೊವಲು** ಹುಲಿಯ ಚರ್ಮ

**ಪುಲಿನಗರ್ತ** ಉಸುಕಿನತಗ್ಗು, ಮರಳಿನಗುಳಿ

**ಪುಲ್ಕಸ, ಪುಲ್ಕಸಿ** ಚಂಡಾಲ, ಚಂಡಾಲರವಳು

**ಪುಲ್ಲಿಗೆ** ಹೋಳಿಗೆ

**ಪುಲ್ಲು** ಹುಲ್ಲು

**ಪುವರ್ಗ** ಪುರುಷನಾಮಕ ಶ್ರೀಹರಿಯ ಭಕ್ತವರ್ಗ

**ಪುಷ್ಕರ** 26ನೇ ಕಕ್ಷೆಯ ಕರ್ಮಜದೇವತೆ; ತಾವರೆ, ಕಮಲ, ಕೊಳ

**ಪುಷ್ಕರಕೇಶ** ಬಲರಾಮ

**ಪುಷ್ಕರಕೇಶನನುಜ** ಬಲರಾಮನ ತಮ್ಮ–ಕೃಷ್ಣ

**ಪುಷ್ಕರಜಾಪ್ತ** ನೀರಿನಲ್ಲಿ ಹುಟ್ಟಿದ ಕಮಲಕ್ಕೆ ಆಪ್ತ, ಸೂರ್ಯ

**ಪುಷ್ಕರಿಣಿ** ಕೊಳ, ಹೊಂಡ, ಸರೋವರ

**ಪುಷ್ಕಳ** ಬಹಳ, ವಿಪುಲ, ಶ್ರೇಷ್ಠ, ಉತ್ತಮ

**ಪುಷ್ಪುರ** ತ್ರಿಪುರ

**ಪುಷ್ಯರಾಗ** ಒಂದು ಬಗೆಯ ರತ್ನ

**ಪುಸಿ** ಸುಳ್ಳು, ಮಿಥ್ಯ

**ಪುಸ್ತ** ಬಳಿಯುವುದು, ಸವರುವುದು

**ಪುಳಕ** ರೋಮಾಂಚನ

**ಪುಳಿಂದ** ಬೇಡ; ಪುಳಿಂದ ದೇಶ, ಒಬ್ಬ ರಾಜ

**ಪುಳಿಂದೆ** ಬೇಡತಿ

**ಪುಳಿನ** ಮರಳು

**ಪೂಗ** ಅಡಿಕೆ, ಅಡಿಕೆಮರ; ರಾಶಿ

**ಪೂಗಣೆ** ಮನ್ಮಥನ ಹೂಬಾಣ

**ಪೂಗಣೇಶ** ಕಾಮ

**ಪೂಗಾರ** ಹೂವಾಡಿಗ

**ಪೂಗಿಫಲ** ಅಡಿಕೆ

**ಪೂಗೋಲು** ಹೂವಿನಬಾಣ

**ಪೂತ** ಪವಿತ್ರ, ಶುದ್ಧವಾದ, ಶ್ರೇಷ್ಠವಾದ; ಹೂಬಿಟ್ಟ

**ಪೂತಾತ್ಮ** ಪವಿತ್ರವಾದ ಆತ್ಮ, ವಿಷ್ಣು (ಸಹಸ್ರನಾಮ ಗಳಲ್ಲೊಂದು)

**ಪೂತಾಬ್ಜ** ಅರಳಿದ ಕಮಲ

**ಪೂತಿ** ಒಂದು ಬಗೆಯ ಸುಗಂಧ ದ್ರವ್ಯ; ದುರ್ವಾಸನೆ

**ಪೂದೋಟ** ಹೂದೋಟ

**ಪೂಬಿಲ್ಲನಯ್ಯ** ಕಾಮನ ತಂದೆ–ವಿಷ್ಣು

**ಪೂಯ** ಕೀವು, ರಸಿಕೆ

Rarest Archiver

**ಪೂಯಶೋಣಿತ** ಏಳು ಪ್ರಧಾನ ನರಕಗಳಲ್ಲಿ ಒಂದು
**ಪೂರ** ಪ್ರವಾಹ, ಪೂರ್ತಿ
**ಪೂರಕ** ಪ್ರಾಣಾಯಾಮ ಮಾಡುವ ಉದ್ದೇಶದಿಂದ ಉಸಿರನ್ನು ಒಳಕ್ಕೆಳೆದುಕೊಳ್ಳುವುದು; ಸಹಕಾರಕ
**ಪೂರಣ<ಪೂರ್ಣ** ತುಂಬ
**ಪೂರತಿ<ಪೂರ್ತಿ** ಪೂರ್ಣ
**ಪೂರಾಯ** ಪರಿಪೂರ್ಣ
**ಪೂರಿತ** ಪೂರ್ತಿ, ಪೂರ
**ಪೂರಿಸು** ನೆರವೇರಿಸು, ಪೂರೈಸು
**ಪೂರ್ಣಚರಿತ** ಅರಿತುಕೊಳ್ಳಲು ಸಾಧ್ಯವಿರದಂತಹ ಮಹಾಮಹಿಮ
**ಪೂರ್ಣಪ್ರಜ್ಞ, ಪೂರ್ಣಮತಿ** ಮಧ್ವಾಚಾರ್ಯ
**ಪೂರ್ಣವೇತ್ತೃ** ಪೂರ್ಣಜ್ಞಾನಿ
**ಪೂರ್ಣಿಮಾಸ** ಹುಣ್ಣಿಮೆ ಮತ್ತು ಅಮಾವಾಸ್ಯೆ
**ಪೂರ್ಣೇಂದು** ಹುಣ್ಣಿಮೆಚಂದ್ರ, ಪೂರ್ಣಚಂದ್ರ
**ಪೂರ್ವಕರ್ಮ** ಹಿಂದಿನ ಕರ್ಮ
**ಪೂರ್ವಜಾತ** ದೈತ್ಯ
**ಪೂರ್ವದರಂಗನಾಥ** ತಮಿಳುನಾಡಿನ ಶ್ರೀರಂಗದ ರಂಗನಾಥ, ಅಂತ್ಯರಂಗ
**ಪೂರ್ವದೇವ** ದೈತ್ಯ
**ಪೂರ್ವದೇವರು** ಶ್ರೀಹರಿಯನ್ನು ಹೊರುವ ಗರುಡ, ಪೂರ್ವದ ಅಭಿಮಾನಿ–ಇಂದ್ರ
**ಪೂರ್ವಪಾರ್ಥ** ಹಿಂದಿನ ಜನ್ಮದಲ್ಲಿ ಅರ್ಜುನನಾಗಿದ್ದವನು
**ಪೂರ್ವವನಧಿ** ಬಂಗಾಳಕೊಲ್ಲಿ
**ಪೂರ್ವಸಂಚಿತ** ಪೂರ್ವ ಜನ್ಮದಲ್ಲಿ ಸಂಗ್ರಹಿಸಿದ, ಪ್ರಾರಬ್ಧಕರ್ಮ
**ಪೂರ್ವಾರ್ಜಿತ** ಹಿಂದಿನಿಂದ ಬಂದುದು
**ಪೂವರ್ಷ, ಪೂವಳೆ** ಹೂವಿನ ಮಳೆ, ಪುಷ್ಪವೃಷ್ಟಿ
**ಪೂವಿನಶರಪಿತ** ಮನ್ಮಥನ ತಂದೆ–ಶ್ರೀಹರಿ
**ಪೂವಿಲ್ಲ** ಮನ್ಮಥ
**ಪೂವಿಲ್ಲನಯ್ಯ** ಮನ್ಮಥನ ತಂದೆ–ವಿಷ್ಣು
**ಪೂಶರ** ಮನ್ಮಥ
**ಪೂಶರಪಿತ** ಶ್ರೀಹರಿ
**ಪೂಷ** ಸೂರ್ಯ
**ಪೂಸರ<ಪುಷ್ಪಶರ** ಹೂವಿನಸರ, ಮನ್ಮಥ
**ಪೂಸರನಯ್ಯ** ಕಾಮನತಂದೆ–ವಿಷ್ಣು
**ಪೂಸರಳ** ಪೂಬಿಲ್ಲ–ಕಾಮ
**ಪೂಸು** ಲೇಪಿಸು, ಬಳಿ
**ಪೃಕು** ಬೇರೆ
**ಪೃತನ, ಪೃತನೆ** ಯುದ್ಧ, ಸೈನ್ಯ, ಪಡೆ
**ಪೃಥಕ್, ಪೃಥಕು** ಬೇರೆ, ಪ್ರತ್ಯೇಕ
**ಪೃಥಗ್ಗತಿ** ಬೇರೆ ಗತಿ
**ಪೃಥಿವಿಪತಿ** ರಾಜ
**ಪೃಥಿವಿಸುತೆ** ಭೂಮಿಯ ಮಗಳು–ಸೀತೆ
**ಪೃಥು** ದೊಡ್ಡ; ವೇನನ ಶರೀರದಿಂದ ಹುಟ್ಟಿದ ರಾಜ; ಭಗವಂತನ ಆವೇಶಾವತಾರ
**ಪೃಥುಕ** ಹುಡುಗ, ಬಾಲಕ; ಅವಲಕ್ಕಿ
**ಪೃಥುಲ** ವಿಶಾಲವಾದ
**ಪೃಥುಲ(ಳ)** ದೊಡ್ಡದಾದ, ವಿಸ್ತಾರವಾದ, ಅಸಂಖ್ಯವಾದ, ವಿಶಾಲವಾದ
**ಪೃಥ್ವಿ** ಭೂಮಿ
**ಪೃಥ್ವಿಜೆ>ಪೃಥಿವಿಜೆ** ಸೀತೆ
**ಪೃಥ್ವಿಭಾರ** ಭೂಮಿಗೆಭಾರ, ಧರೆಗೆ ಭಾರ, ಕೆಲಸಕ್ಕೆ ಬಾರದವ
**ಪೆಂಟಿ>ಪೆಂಟೆ** ಹೆಂಟೆ, ಮುದ್ದೆ, ಹೊರೆ
**ಪೆಂಡಾರ** ಪೆಂಡೆಯ, ಅಂದುಗೆ; ದರೋಡೆಕಾರ, ಪಿಂಡಾರಿ
**ಪೆಂಡಿ** ಪಿಂಡಿ, ಕಟ್ಟು
**ಪೆಂಡೆ, ಪೆಂಡೆಯ, ಪೆಂಡ್ಯ** ಕಾಲಿನ ಆಭರಣ, ಕಾಲಿನ ಬಳೆ, ಅಂದುಗೆ
**ಪೆಂಡೆಮೇವು** ಕಾಳುಕಡ್ಡಿ, ಹುಲ್ಲಿನ ಹೊರೆ

Rarest Archiver

**ಪೆಂಡೆಯಭೇದ** ಕಾಲಿನ ಆಭರಣ ವಿಶೇಷ

**ಪೆಂಪು** ಹಿರಿಮೆ, ಕೀರ್ತಿ

**ಪೆಚ್ಚಿಸು** ಅಂಟಿಸು; ಹೆಚ್ಚಿಸು

**ಪೆಟಲಂಬು** ಸಿಡಿಗುಂಡು, ತುಪಾಕಿ, ಸೋರುಪ್ಪಿನ ಸಹಾಯದಿಂದ ಎಸೆಯುವ ಬಾಣ

**ಪೆಡಕು** ಹೆಕ್ಕತ್ತು, ಕತ್ತಿನ ಹಿಂಭಾಗ

**ಪೆಡೆದ(ಲಿ)ಲೆ** ಆದಿಶೇಷ

**ಪೆರಸಾರು** ಹಿಂದಕ್ಕೆ ಸರಿ, ಹಿಂಜರಿ

**ಪೆರೆ** ಚಂದ್ರ

**ಪೆರೆಯನೊಸಲು** ಚಂದ್ರನಂತಿರುವ ಹಣೆ

**ಪೆರ್ಚು** ಅಧಿಕ, ಹೆಚ್ಚು

**ಪೆರ್ದೊಡೆ** ದೊಡ್ಡ ತೊಡೆ

**ಪೆರ್ಬುಬ್ಬು** ದೊಡ್ಡ ಹುಬ್ಬು

**ಪೆರ್ಮೆ** ಹೆಮ್ಮೆ

**ಪೇಣ, ಪೈಣ** ಪ್ರಯಾಣ, ಪಯಣ

**ಪೇರು** ಅಡಕು, ಒಟ್ಟು, ಒಟ್ಟಿಲು, ರಾಶಿ; ಹೆಸರು(ಮೂಲ ತಮಿಳು)

**ಪೇರುರ** ವಿಶಾಲವಾದ ಎದೆ

**ಪೇಶಲ, ಪೈಶಲ** ಮೃದುವಾದ; ವಿಷ್ಣು (ಸಹಸ್ರ ನಾಮಗಳಲ್ಲಿ ಒಂದು)

**ಪೇಶಸ್ಕಾರಿ, ಪೇಷ್ಕಾರಿ** ಕಂದಾಯ ವಸೂಲು ಮಾಡುವ ಒಬ್ಬ ಅಧಿಕಾರಿ

**ಪೈಜಣ** ಕಿರುಗೆಜ್ಜೆಗಳಿಂದ ಕೂಡಿದ ಕಾಲಿನ ಆಭರಣ, ಅಂದುಗೆ

**ಪೈತೃಕ** ಪಿತೃಕಾರ್ಯದಿನ, ಶ್ರಾದ್ಧದ ದಿವಸ

**ಪೈಲ** ಒಬ್ಬ ಋಷಿ

**ಪೈಸರಿಸು** ಹಿಮ್ಮೆಟ್ಟು, ಹಿಂಜರಿ

**ಪೊಂಕ** ಬಿಂಕ, ಗರ್ವ

**ಪೊಂಗಣ್ಣ** ಹಿರಣ್ಯಾಕ್ಷ

**ಪೊಂಗಲು** ದೇವರಿಗೆ ಮಾಡುವ ನೈವೇದ್ಯ ಪದಾರ್ಥ, ಹುಗ್ಗಿ

**ಪೊಂಗು** ಹಿಗ್ಗು

**ಪೊಂಗೊಳಲು** ಬಂಗಾರದ ಕೊಳಲು

**ಪೊಂದು** ಪಡೆ, ಹೊಂದು; ಮರಣಹೊಂದು

**ಪೊಂದೇರು** ಚಿನ್ನದ ರಥ

**ಪೊಂಬಕ್ಕಿ** ಗರುಡ

**ಪೊಂಬಕ್ಕಿತೇರ** ವಿಷ್ಣು

**ಪೊಂಬಟ್ಟಲು** ಬಂಗಾರದ ಬಟ್ಟಲು

**ಪೊಂಬಟ್ಟೆ** ಸುವರ್ಣಾಂಬರ, ಪೀತಾಂಬರ

**ಪೊಂಬಣ್ಣ** ಬಂಗಾರದ ಬಣ್ಣ

**ಪೊಂಬಸಿರ, ಪೊಂಬಸುರ** ಬ್ರಹ್ಮ

**ಪೊಂಬಾಳೆ** ಹೊಂಬಾಳೆ, ಅಡಕೆ ಅಥವಾ ತೆಂಗಿನ ಹೂವು

**ಪೊಂಬುಟ್ಟಿ** ಬಂಗಾರದ ಬುಟ್ಟಿ

**ಪೊಂಬ್ಬರಿವಾಣ** ಚಿನ್ನದ ತಟ್ಟೆ

**ಪೊಕ್ಕುಳಪೂ** ಹೊಕ್ಕುಳಿನ ಹೂವು, ಪದ್ಮನಾಭ–ಶ್ರೀಹರಿ

**ಪೊಕ್ಕುಳು** ಹೊಕ್ಕುಳು, ನಾಭಿ

**ಪೊಗರ್, ಪೊಗರು** ಕಾಂತಿ, ಪ್ರಕಾಶ; ಸೊಕ್ಕು, ಗರ್ವ

**ಪೊಗಳಿಕೆ** ಸ್ತುತಿ, ಹೊಗಳಿಕೆ

**ಪೊಗು** ಹೊಗು, ಪ್ರವೇಶಿಸು, ಒಳಸೇರು

**ಪೊಟ್ಟ** ಹೊಣೆಯಿಲ್ಲದ

**ಪೊಟ್ಟೆ** ಹೊಟ್ಟೆ, ಬಸಿರು

**ಪೊಟ್ಟೆಗುಡುವು** ಗುಡಾಣದಂತೆ ಹೊಟ್ಟೆ ಬೆಳೆಸಿಕೊಂಡವನು

**ಪೊಟ್ಟೆಪೊರೆ** ಹೊಟ್ಟೆಹೊರೆ, ಹೊಟ್ಟೆ ತುಂಬಿಕೊಳ್ಳು

**ಪೊಡಮುಡು** ನಮಸ್ಕರಿಸು, ಶರಣಾಗು

**ಪೊಡವಿ** ಪೃಥ್ವಿ, ಭೂಮಿ, ನೆಲ

**ಪೊಡವಿಚ** ಗ್ರಾಮೀಣ; ಅನಾಗರೀಕ, ಮೂರ್ಖ

**ಪೊಡವಿಪತಿ** ಅರಸ, ವಿಷ್ಣು

**ಪೊಡವಿಪಾಲಕ** ರಾಜ, ಶ್ರೀಹರಿ

**ಪೊಡವಿಯಾಣ್ಮ** ರಾಜ, ಭೂಮಿಯ ಒಡೆಯ, ಹದಿನಾಲ್ಕು ಲೋಕದೊಡೆಯ–ಶ್ರೀಹರಿ

Rarest Archiver

**ಪೊಡವಿಹೊತ್ತಿಹಮಂಚ** ಶೇಷಶಯನ–ಆದಿ ಶೇಷನ ಸಾವಿರ ಹೆಡೆಗಳಲ್ಲಿಯ ಒಂದು ಹೆಡೆಯ ಮೇಲೆ ಭೂಮಿ ನಿಂತಿದೆ

**ಪೊಡೆ** ಹೊಡಿ, ಬಡಿ; ಪೈರಿನಲ್ಲಿ ತೆನೆಗೆ ಮೊದಲಿನ ಸ್ಥಿತಿ, ಹೊಡೆ; ಹೊಟ್ಟೆ, ಬಸಿರು

**ಪೊಡೆದಾರ** ಉಡಿದಾರ

**ಪೊನ್ನಂಬರ** ಚಿನ್ನದ ಕಾಂತಿಯುಳ್ಳ ಬಟ್ಟೆ; ಅವ್ಯಾಕೃತಾಕಾಶ

**ಪೊನ್ನವಸ್ತ್ರ** ಪೀತಾಂಬರ

**ಪೊಮ್ಮರಿಮೃಗ** ಚಮರಿಮೃಗ

**ಪೊರಗು** ಹೊರಗು, ಆಚೆ

**ಪೊರಮಡಿಸು** ಹೊರ ಹೊರಡಿಸು

**ಪೊರೆ** ಕಾಪಾಡು, ರಕ್ಷಿಸು; ಸಮೀಪ; ಹೊರೆ

**ಪೊಲೆ** ಹೊಲೆ

**ಪೊಸ** ಹೊಸ

**ಪೊಳಕು** ಆಕೃತಿ, ಆಕಾರ

**ಪೊಳಲು** ಪಟ್ಟಣ, ನಗರ

**ಪೊಳ್ವೆಕಾಯ** ಪೊಳೆಯುವ ಶರೀರ, ಮೀನು, ಮಚ್ಛಾವತಾರಿ

**ಪೋಕ** ನೀಚ, ದುಷ್ಟ; ನಿಷ್ಪ್ರಯೋಜಕ, ಅಲೆಯುವವ, ಪೋಲಿ, ತುಂಟ

**ಪೋಕದೈವ** ಅಲ್ಪ ದೇವತೆ, ಕ್ಷುದ್ರ ದೇವತೆ

**ಪೋಕರಿ** ಹುಡುಗಾಟಿಕೆಯವ; ಪೋಲಿ

**ಪೋಕಳಿಸು** ಹೀಯಾಳಿಸು

**ಪೋಕು** ನೀಚ, ದುಷ್ಟ, ಕೆಡುಕು

**ಪೋಗಾದು** ಹೋಗಬೇಡ

**ಪೋಗು** ಹೊರಗೆ ಹೋಗು

**ಪೋಚು** ಅಲ್ಪ, ತುಚ್ಛ

**ಪೋಟಿ** ಸಾಮ್ಯ, ಹೋಲಿಕೆ; ಸಂಬಂಧ

**ಪೋಟುಕಾಸು** ಒಡಕು ಬಿಲ್ಲೆ, ಸಲ್ಲದ ನಾಣ್ಯ, ಖೋಟಾ ನಾಣ್ಯ

**ಪೋಡಿಸು** ಹೋಲಿಸು, ಹೊಂದಿಸು

**ಪೋತ** ಮಗು, ಬಾಲಕ, ಮರಿ; ನಾವೆ, ಹಡಗು; ಹೋತ

**ಪೋತಕ** ಹರಿಗೋಲು, ದಾಟಿಸುವವ

**ಪೋತಪಾಲ** ಕರುವಿನ ಪೋಷಕ

**ಪೋತರಾಜ** ಟಗರು

**ಪೋತ್ರ** ಹಂದಿಯ ಮುಖ

**ಪೋತ್ರಿ** ಹಂದಿ

**ಪೋರ** ಚಿಕ್ಕ ಹುಡುಗ, ಬಾಲಕ, ತುಂಟಹುಡುಗ, ಬಾಲಕೃಷ್ಣ

**ಪೋರಪಟು** ಬಾಲಕೃಷ್ಣ

**ಪೋರಿ** ತುಂಟಹುಡುಗಿ, ಬಾಲಕಿ

**ಪೋಲುವೆ, ಪೋಲ್ವೆ** ಹೋಲಿಕೆ, ಸಾಮ್ಯ

**ಪೌಂಡ್ರಕ** ರೂಪಾಭಿಮಾನಿ ದೈತ್ಯ; ಪೌಂಡ್ರಕ ವಾಸುದೇವ

**ಪೌಗಂಡ** ವಯಸ್ಸಿಗೆ ಬರದ ಬಾಲಕ

**ಪೌತ್ರ** ಮಗನ ಮಗ, ಮೊಮ್ಮಗ

**ಪೌತ್ರಾಯಣ** ಒಬ್ಬ ರಾಜ

**ಪೌರತ್ರಂಯ** ತ್ರಿಪುರ, ರಾಕ್ಷಸರ ಮೂರು ಪಟ್ಟಣಗಳು

**ಪೌಲಸ್ತ್ಯ** ಪುಲಸ್ತ್ಯನ ಮಗ ರಾವಣ

**ಪೌಲೋಮಿ** ಪುಲೋಮನ ಮಗಳು ಶಚಿ–ಇಂದ್ರನ ಹೆಂಡತಿ

**ಪ್ಯಾಟಿ<ಪೇಟೆ** ನಗರ, ಪಟ್ಟಣ

**ಪ್ರಕಟ** ಕಾಣುವಿಕೆ, ಪ್ರಚುರಪಡುವುದು

**ಪ್ರಕಾಂಡ** ಶಾಖೆ, ಮರದ ಕಾಂಡ, ಬೊಡ್ಡೆ; ಉತ್ತಮ, ಶ್ರೇಷ್ಠ

**ಪ್ರಕಾಶನೀ** ಸುಷುಮ್ನಾ ನಾಡಿಯ ಐದು ಭಾಗಗಳಲ್ಲಿ ಪೂರ್ವ ಭಾಗ

**ಪ್ರಕೃಷ್ಟ** ಎಳೆಯಲ್ಪಟ್ಟ, ಜಗ್ಗಲ್ಪಟ್ಟ; ಉತ್ತಮವಾದ, ಶ್ರೇಷ್ಠವಾದ

**ಪ್ರಕೃಷ್ಟವಾದಿ** ಸರ್ವೋತ್ತಮನೆಂದು ಹೇಳುವವ, ಪ್ರಕಾಂಡವಾದಿ

Rarest Archiver

ಪ್ರಕ್ಷಿಪ್ತ ಬಿಡಲ್ಪಟ್ಟ, ತೊರೆದ; ಕ್ಷೋಭೆಗೊಳಗಾದ; ಸುಪ್ತ
ಪ್ರಖರ ಅತಿತೀಕ್ಷ್ಣವಾದ, ಅತಿತೇಜಸ್ಸುಳ್ಳ
ಪ್ರಖ್ಯಾತಿ ಕೀರ್ತಿ, ಪ್ರಸಿದ್ಧಿ
ಪ್ರಗಟ ಪ್ರಕಟ
ಪ್ರಗ್ರಹ ಹಗ್ಗ, ಸೆರೆ, ಬಂಧನ
ಪ್ರಚಯ ಸಮೂಹ, ಗುಂಪು
ಪ್ರಚುರ ಆಧಿಕ್ಯ, ಹೆಚ್ಚಳ; ಪ್ರಸಿದ್ಧವಾದುದು
ಪ್ರಚೇತಸ ವರುಣ, ಒಬ್ಬ ಮುನಿ
ಪ್ರಚ್ಛನ್ನ ಮರೆಮಾಡಿದ, ಮುಚ್ಚಲ್ಪಟ್ಟ, ಗುಪ್ತವಾದ
ಪ್ರಜಾನೀಕ ಪ್ರಜೆಗಳ ಸಮೂಹ
ಪ್ರಜ್ಜಾರ ಪ್ರಸಿದ್ಧಜಾರ, ವ್ಯಭಿಚಾರಿ
ಪ್ರಜ್ಞಾ ಜ್ಞಾನ, ಒಳಮನದ ಜ್ಞಾನ
ಪ್ರಜ್ಞಾಮೇಧಾಧೃತಿಸ್ಥಿತಿ ಅರಿವು, ಬುದ್ಧಿ; ಧೃಡತೆಸ್ಥಿತಿ
ಪ್ರಜ್ಞಾಶ್ರೀದ ವಾಯುದೇವರು
ಪ್ರಣತ ಬಾಗಿದ, ನಮಸ್ಕರಿಸಿದ, ಭಕ್ತ, ಶರಣಾದವ
ಪ್ರಣತಜನ ಭಕ್ತರು, ವಂದಿಸಿದ ಜನ
ಪ್ರಣತನಾಗು ಬಾಗು, ನಮಸ್ಕರಿಸು
ಪ್ರಣತಪಾಲಕ ಶರಣಾಗತರಕ್ಷಕ–ಶ್ರೀಹರಿ
ಪ್ರಣತಾರ್ತಿಹರ ಶರಣಾಗತರ ಕಷ್ಟಗಳ ನಿವಾರಕ–ವಿಷ್ಣು
ಪ್ರಣತಿ ನಮಸ್ಕಾರ, ಬಾಗುವಿಕೆ
ಪ್ರಣತೆ ಹಣತೆ
ಪ್ರಣಮ<ಪ್ರಣಾಮ ದೀರ್ಘದಂಡ ನಮಸ್ಕಾರ
ಪ್ರಣಯನ ಸ್ಥಳದಿಂದ ಸ್ಥಳಕ್ಕೆ ಸಾಗಿಸು; ಮದುವೆ
ಪ್ರಣವ ಓಂಕಾರ
ಪ್ರಣವದುಂದುಭಿ ಓಂಕಾರನಾದ ಧ್ವನಿ
ಪ್ರಣವರೂಪ ಓಂಕಾರರೂಪದ ದೇವರು
ಪ್ರಣವವರ್ಣ ಓಂಕಾರವಾಚ್ಯನಾದ ಶ್ರೀಹರಿ
ಪ್ರಣವಾಕಾರ ಓಂಕಾರ
ಪ್ರಣವಾಕ್ಷರ ಓಂ ನಮೋ ನಾರಾಯಣ, "ಓಂ"
ಪ್ರಣಿತ ನಮಸ್ಕರಿಸಿದ, ಶರಣಾಗತ
ಪ್ರಣೀತಿಸು ಬೆಳಗಿಸು
ಪ್ರಣೀತ ಉಕ್ತ
ಪ್ರತಕ ಅವಲಕ್ಕಿ
ಪ್ರತತಿ ಹರಹು, ವಿಸ್ತಾರ, ಸಮೂಹ
ಪ್ರತಾನ ಸಮೂಹ
ಪ್ರತಿ ಸಮ; ವಿರುದ್ಧ, ಎದುರು
ಪ್ರತಿಕಕ್ಷಿ ವಿರೋಧಿ
ಪ್ರತಿಕೂಲ ತೊಂದರೆ, ವಿರೋಧ, ಪ್ರತಿಪಕ್ಷ
ಪ್ರತಿಪದಿ(ದೆ) ಪಾಡ್ಯಮಿ
ಪ್ರತಿಪಾಲಕ ರಕ್ಷಕ, ಕಾಪಾಡುವವನು
ಪ್ರತಿಬಂಧಕ ಅಡ್ಡಿಮಾಡುವ, ತೊಂದರೆಪಡಿಸುವ
ಪ್ರತಿಭವಾತ ಮರುತ; ಪ್ರತಿಭಾಸಂಪನ್ನನಾದ ವಾಯುದೇವ
ಪ್ರತಿಲೋಮ ಕ್ರಮಕ್ಕೆ ವಿರುದ್ಧವಾದ; ಕೆಳಜಾತಿಯ ಗಂಡು ಹಾಗೂ ಮೇಲ್ಜಾತಿಯ ಹೆಣ್ಣಿನ ಸಂಗದಿಂದ ಹುಟ್ಟಿದ ಸಂತಾನ
ಪ್ರತಿವಾಸರ ದಿನದಿನವೂ, ಎಡೆಬಿಡದೆ
ಪ್ರತಿಶಬ್ದ ಪ್ರತಿಧ್ವನಿ; ಪ್ರತಿಯೊಂದು ಶಬ್ದ, ಎಲ್ಲ ಶಬ್ದಗಳು
ಪ್ರತಿಸಾರ ದುಃಖ
ಪ್ರತಿಹತ ಎದಿರೇಟು; ಕೆಳಕ್ಕೆಬಿದ್ದ, ತಿರಸ್ಕರಿಸಲ್ಪಟ್ಟ
ಪ್ರತೀಕ ಪ್ರತಿಬಿಂಬ, ಪ್ರತಿರೂಪ; ಚಿಹ್ನೆ, ಗುರುತು; ವಿಗ್ರಹ
ಪ್ರತೀತಿ ಜನಜನಿತವಾಗಿಬಂದ ತಿಳಿವಳಿಕೆ, ನಿಶ್ಚಿತ ಜ್ಞಾನ, ಆಪ್ತ ವಾಕ್ಯ
ಪ್ರತ್ಯಗಾತ್ಮ ಹೃದಯಗುಹೆಯಲ್ಲಿ ನಿಂತ ಹರಿರೂಪ
ಪ್ರತ್ಯಯ ನಂಬಿಕೆ, ವಿಶ್ವಾಸ; ಜ್ಞಾನ; ವ್ಯಾಕರಣದ ಭಾಗ
ಪ್ರತ್ಯರ್ಥಿ ವೈರಿ, ಹಗೆ, ಶತ್ರು
ಪ್ರತ್ಯಹಂ ಪ್ರತಿದಿನ, ಪ್ರತಿನಿತ್ಯ
ಪ್ರತ್ಯಾಹಾರ ಸಾಮೀಪ್ಯ; ಯೋಗದ ಅಷ್ಟಾಂಗ ಗಳಲ್ಲೊಂದು ಅಂಗ

Rarest Archiver

**ಪ್ರತ್ಯುಪಕೃತಿ** ಪ್ರತ್ಯುಪಕಾರ
**ಪ್ರಥಮಕುಲ** ಬ್ರಾಹ್ಮಣ
**ಪ್ರಥಮಗೇಯ** ಆದಿಯಲ್ಲಿ ಪೂಜಿಸಲ್ಪಡುವ ಗಣಪತಿ
**ಪ್ರಥಮಯುಗ** ತ್ರೇತಾಯುಗ
**ಪ್ರಥಮಾಂಗ** ಮೊದಲನೆಯ ವಸ್ತು ಅಥವಾ ವ್ಯಕ್ತಿ; ವಾಯುದೇವರು
**ಪ್ರಥಮಾವತಾರ** ಮಾರುತಿ ಅವತಾರ
**ಪ್ರಥಿತ** ಹೆಸರುವಾಸಿಯಾದ
**ಪ್ರಥಿತಾರ್ಥ** ಪ್ರಸಿದ್ಧವಾದ ಅರ್ಥ
**ಪ್ರದ** ಕೊಡುವವನು
**ಪ್ರದಯುಮ್ನ** ಪ್ರದ್ಯುಮ್ನ, ಕಾಮ, ಮನ್ಮಥ; ಮನ್ಮಥನೇ ಶ್ರೀಕೃಷ್ಣನಿಗೆ ಪ್ರದ್ಯುಮ್ನನಾಗಿ ಹುಟ್ಟಿದ
**ಪ್ರದರ** ಬಾಣ
**ಪ್ರದಾತ್ರಿ** ಕೊಡುವವಳು
**ಪ್ರದಾಯಕ** ಕೊಡುವವನು
**ಪ್ರದೋಷ** ರಾತ್ರಿಯ ಮೊದಲಭಾಗ, ಮುಸ್ಸಂಜೆ; ಅಪರಾಧ, ತಪ್ಪು
**ಪ್ರದ್ಯುಮ್ನಸುತೆಯರು** ಭಗವಂತನ ಪ್ರದ್ಯುಮ್ನ ರೂಪದಿಂದ ಆವಿರ್ಭವಿಸಿದವರು–ಸರಸ್ವತಿ, ಭಾರತಿ
**ಪ್ರದ್ಯೋತ** ಸೂರ್ಯ, ಮಿಂಚು, ಕಿರಣ
**ಪ್ರದ್ಯೋತಸನ್ನಿಭ** ಸೂರ್ಯಕಿರಣಕ್ಕೆ ಸದೃಶನಾದ ಗಣಪತಿ
**ಪ್ರದ್ರಾವಣಿಕ** ನುರಿತ ವ್ಯಾಪಾರಿ
**ಪ್ರಧಾನಪುರುಷೇಶ** ದೇವದೇವೇಶ ಶ್ರೀಹರಿ
**ಪ್ರಧ್ವಂಸ** ಸಂಪೂರ್ಣನಾಶ
**ಪ್ರಪಂಚಕ** ವಂಚಕ, ಮೋಸಗಾರ
**ಪ್ರಪಂಚಿಗ** ಸಂಸಾರದಲ್ಲಿ ಆಸಕ್ತಿಯುಳ್ಳವ, ಲೌಕಿಕ
**ಪ್ರಪದ** ಕಾಲಿನ ಮುಂಭಾಗ
**ಪ್ರಪನ್ನ** ಶರಣಾಗತ, ಭಕ್ತ
**ಪ್ರಪನ್ನಪಾಲ** ಭಕ್ತರನ್ನು ಪಾಲಿಸುವವನು–ವಿಷ್ಣು
**ಪ್ರಪನ್ನವತ್ಸಲ** ಶರಣು ಬಂದವರ ಮೇಲೆ ಪ್ರೀತಿ ತೋರುವವ–ವಿಷ್ಣು
**ಪ್ರಪೂಜಿಸು** ಚೆನ್ನಾಗಿ ಪೂಜಿಸು
**ಪ್ರಬಂಧ** ಕಾವ್ಯ
**ಪ್ರಬಂಧಗೀತ** ಸಂಗೀತಯೋಗ್ಯ ಗೀತೆಗಳು
**ಪ್ರಬುದ್ಧ** ಪ್ರೌಢ, ಜ್ಞಾನಿ, ವಿದ್ವಾಂಸ
**ಪ್ರಭಂಜನ** ವಾಯು, ಬಿರುಗಾಳಿ; ಮುರಿಯುವುದು
**ಪ್ರಭಕೆಪ್ರಭಾಕರ** ಬೆಳಕಿಗೆ ಬೆಳಕೀಯುವ ಸೂರ್ಯ
**ಪ್ರಭವ** ಮೂಲಕಾರಣ; ಅರವತ್ತು ಸಂವತ್ಸರಗಳಲ್ಲೊಂದು
**ಪ್ರಭಾ, ಪ್ರಭೆ** ಬೆಳಕು, ಪ್ರಕಾಶ
**ಪ್ರಭಾಕರ** ಸೂರ್ಯ
**ಪ್ರಭಾತ** ಬೆಳಗಿನ ಸಮಯ
**ಪ್ರಮತಿ** ಬುದ್ಧಿಶಾಲಿ
**ಪ್ರಮಥ** ಶಿವನ ಪರಿವಾರದಲ್ಲಿ ಒಬ್ಬ
**ಪ್ರಮಿತ** ಜ್ಞಾನಿ
**ಪ್ರಮಿತಿ** ಅಳತೆ; ನಿಶ್ಚಿತಜ್ಞಾನ, ಯಥಾರ್ಥಜ್ಞಾನ
**ಪ್ರಮೆ** ಜ್ಞಾನಪೂರ್ಣತೆ
**ಪ್ರಮೆಗಳು** ತತ್ತ್ವಗಳು
**ಪ್ರಮೇಯ** ಅಳೆಯಬೇಕಾದುದು, ಮಿತಿಯುಳ್ಳದ್ದು
**ಪ್ರಮೇಹ** ಒಂದು ಬಗೆಯ ಗುಹ್ಯರೋಗ
**ಪ್ರಮೋದ** ಹಿಗ್ಗು, ಸಂತೋಷ, ಪ್ರಕೃಷ್ಟಾನಂದ; ಅರವತ್ತು ಸಂವತ್ಸರಗಳಲ್ಲಿ ಒಂದು
**ಪ್ರಮೋದಿ** ಮೋಕ್ಷಾನಂದ ಕೊಡುವವನು, ಆನಂದ ಹೊಂದುವವನು
**ಪ್ರಯಾಗಮಾಧವ** ಪ್ರಯಾಗದಲ್ಲಿರುವ ಮಾಧವ, ವಿಷ್ಣು
**ಪ್ರವಣ** ಆಸಕ್ತಿಯುಳ್ಳವನು, ಚಿಂತಕ, ನಿಷ್ಠಾವಂತ
**ಪ್ರವರ** ಶ್ರೇಷ್ಠ, ಮೊದಲಿಗ, ಗೋತ್ರಮೂಲ
**ಪ್ರವರ್ಗ** ವಿಶೇಷವಾದ ಗುಂಪು
**ಪ್ರವರ್ತಕ** ಪ್ರೇರಕ, ಮೂಲಪುರುಷ

Rarest Archive

**ಪ್ರವರ್ತಿ** ಕಾರ್ಯ ನಡೆಸುವವನು
**ಪ್ರವಹನು** ಪ್ರವಹವಾಯು, ಭೂತವಾಯುವಿನ ಪ್ರಧಾನಾಭಿಮಾನಿ; ಜಡ
**ಪ್ರವಾಹ** ಹರಿಯುವಿಕೆ, ಮುಂದೆ ಸಾಗುವಿಕೆ
**ಪ್ರವಾಳ** ಹವಳ; ಚಿಗುರು
**ಪ್ರವಿತತ** ಶ್ರೇಷ್ಠವಾದ; ವ್ಯಾಪ್ತ
**ಪ್ರವಿತಾತ್ಮ** ಶುದ್ಧರಾದವರ ಹೃದಯವಾಸಿ
**ಪ್ರವಿಮಲಾತ್ಮ** ಪರಿಶುದ್ಧವಾದ ಆತ್ಮ
**ಪ್ರವಿವಿಕ್ತ** ನಿರ್ಲಿಪ್ತ, ಪ್ರತ್ಯೇಕ; ವಾಸನಾಮಯ ಕರ್ಮ, ಮಾನಸಿಕ ಕರ್ಮ
**ಪ್ರವಿವಿಕ್ತಭುಕ್** ಸಾರವನ್ನಷ್ಟೇ ಸ್ವೀಕರಿಸುವಾತ, ಸ್ವಾಖ್ಯರಸ ಭುಂಜಿಸುವವ
**ಪ್ರವಿಷ್ಠ** ಪ್ರವೇಶ; ಪೂರ್ಣವ್ಯಾಪ್ತ
**ಪ್ರವೃತ್ತಿಪ್** ಆಸಕ್ತಿ ಕೊಡುವವನು
**ಪ್ರವೃತ್ತಿಮಾರ್ಗ** ವ್ಯಾವಹಾರಿಕ ಮಾರ್ಗ, ಕಾಮ್ಯ ಮಾರ್ಗ
**ಪ್ರಶಸ್ತಿ** ತೃಪ್ತಿಕರ; ಬಿರುದು, ಹೊಗಳಿಕೆ
**ಪ್ರಶಾಸನ** ಆದೇಶ
**ಪ್ರಸಂಗ** ಮಾತುಕತೆ; ಸಂದರ್ಭ
**ಪ್ರಸಕ್ತಿ** ವಿಶೇಷ ಆಸಕ್ತಿ, ತೊಡಗುವಿಕೆ, ಪ್ರಸಂಗ
**ಪ್ರಸನ್ನ** ಸಂತೃಪ್ತ, ಶಾಂತ, ನಿರ್ಮಲವಾದ
**ಪ್ರಸನ್ನವದನೆ** ಶಾಂತ ಮುಖಭಾವದವಳು
**ಪ್ರಸರ** ಸಮೂಹ, ವಿಸ್ತಾರ
**ಪ್ರಸಾದತ್ರಯ** ಉತ್ತಮ, ಮಧ್ಯಮ, ಅಧಮ
**ಪ್ರಸುಖಾತ್ಮ** ಪೂರ್ಣಾನಂದ ಸ್ವರೂಪಿ
**ಪ್ರಸೂತಿ** ದಕ್ಷಪ್ರಜೇಶ್ವರನ ಮಡದಿ
**ಪ್ರಸೂನ** ಜಾತ, ಹುಟ್ಟು, ಉತ್ಪತ್ತಿ; ಹೂವು
**ಪ್ರಸ್ಕನ್ನ** ಚೆಲ್ಲಿದ, ಜಾರಿದ
**ಪ್ರಸ್ತ** ಹಬ್ಬ, ಶೋಭನ, ಶುಭಸಮಾರಂಭದ ಭೋಜನಕೂಟ
**ಪ್ರಸ್ಫುರತ್** ವಿಶೇಷವಾಗಿ ಪ್ರಕಾಶಿಸುವ
**ಪ್ರಸ್ಫುರಿತ** ನಡುಗುವ; ಚಲಿಸುವ
**ಪ್ರಹರ** ಹೊಡೆತ, ಪೆಟ್ಟು; ಮೂರು ಗಂಟೆಗಳ ಅವಧಿ
**ಪ್ರಹರಿ** ಕಾವಲುಗಾರ
**ಪ್ರಹಸ್ತ** ರಾವಣನ ಮಂತ್ರಿ
**ಪ್ರಹೃಷ್ಟತನು** ಸಂತೋಷಗೊಂಡ ಶರೀರ, ಸಂತೃಪ್ತ ಶರೀರ
**ಪ್ರಹ್ಲಾದವರದ** ನರಸಿಂಹ
**ಪ್ರಳಯ** ನಾಶ, ಹಾಳು; ಅಪಾರವಾದ ನೀರಿನಲ್ಲಿ ಜಗತ್ತೆಲ್ಲ ಮುಳುಗಿ ನಾಶವಾಗಿ ಹೋಗುವುದು
**ಪ್ರಳಾಪ** ಪ್ರಲಾಪ, ದುಃಖ, ಅಳು
**ಪ್ರಾಂಜಲಿ** ಬೊಗಸೆ; ಕೈಮುಗಿದು
**ಪ್ರಾಕ್** ಹಿಂದಿನ, ಪೂರ್ವಕಾಲದ
**ಪ್ರಾಕಾಮ್ಯ** ತನ್ನ ಇಚ್ಛೆಗೆ ತಡೆಯಿಲ್ಲದಿರುವುದು, ಇಚ್ಛಿಸಿದ ಕಾರ್ಯ ನೆರವೇರಿಸುವ ಒಂದು ಸಿದ್ಧಿ (ಅಷ್ಟಸಿದ್ಧಿಗಳಲ್ಲೊಂದು)
**ಪ್ರಾಕಾರ** ಪಾಗಾರ, ಗೋಡೆ, ಹೊರವಲಯದ ಗೋಡೆ
**ಪ್ರಾಕು** ಪೂರ್ವಕಾಲ, ಹಿಂದಿನಕಾಲ
**ಪ್ರಾಕೃತ** ಸಂಸಕೃತವಲ್ಲದ್ದು(ಇಲ್ಲಿ ಕನ್ನಡ), ಲೋಕಭಾಷೆ ; ಪ್ರಕೃತಿ ಸಹಜವಾದ; ಪಾಮರ, ಪೂರ್ವಜ, ಹಿಂದಿನವ
**ಪ್ರಾಗ್** ಮುಂಚಿನ, ಹಿಂದಿನ, ಮೊದಲಿನ, ಪೂರ್ವದ
**ಪ್ರಾಗ್ಜೋತಿಷ** ಭೂತಭವಿಷ್ಯಗಳನ್ನು ತಿಳಿದವನು; ಒಂದು ಪಟ್ಟಣದ ಹೆಸರು
**ಪ್ರಾಜ್ಞ** ಎಲ್ಲವನ್ನು ಬಲ್ಲವನು, ವಿದ್ವಾಂಸ, ತಿಳಿದವನು, ನಿಪುಣ
**ಪ್ರಾಣ** ವಾಯು, ಮಾರುತಿ; ಜೀವ
**ಪ್ರಾಣಗಂಡ** ಪ್ರಾಣಕ್ಕೆ ಆಪತ್ತು ತರುವ, ವಿಪತ್ತು
**ಪ್ರಾಣಪಂಚಕರೂಪ** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಐದು ರೂಪಗಳು

Rarest Archive

**ಪ್ರಾಣಪ್ರತಿಷ್ಠೆ** ವಿಗ್ರಹಗಳಲ್ಲಿ ದೇವತಾ ಶಕ್ತಿಯನ್ನು ನೆಲೆಗೊಳಿಸುವುದು
**ಪ್ರಾಣಪ್ರಭ** ಜೀವದ ಒಡೆಯ
**ಪ್ರಾಣಪ್ರಿಯ** ಮಿತ್ರ, ಪ್ರಾಣನಿಗೆ ಮಿತ್ರನಾದ ಶಿವ, ಅತ್ಯಂತ ಪ್ರೀತಿಪಾತ್ರ
**ಪ್ರಾಣವಾಯುಗಳು** ಪ್ರಾಣ, ಅಪಾನ, ವ್ಯಾನ ಉದಾನ, ಸಮಾನವಾಯುಗಳು
**ಪ್ರಾಣಸುತ** ವಾಯುಸುತ, ಹನುಮ, ಭೀಮ, ಮಧ್ವಾಚಾರ್ಯರು
**ಪ್ರಾಣಸೇವಕ** ವಾಯುದೇವರ ದೂತ; ಆತ್ಮೀಯ ಸೇವಕ
**ಪ್ರಾಣಾವಿಷ್ಟ** ಶಕ್ತಿ ಮತ್ತು ಆವೇಶದಿಂದ ಕೂಡಿದ, ಪ್ರಾಣಾವೇಶಯುತ
**ಪ್ರಾಣೇಶ** ಜೀವೋತ್ತಮ–ವಾಯುದೇವರು
**ಪ್ರಾತರಾಹುತಿ** ವೈದಿಕ ಪದ್ಧತಿಯಂತೆ ಮುಂಜಾನೆ ಕೊಡುವ ಆಹುತಿ(ಅಗ್ನಿನಾಮಕ)–ವೈಶ್ವದೇವ
**ಪ್ರಾದುರ್ಭಾವ** ಕಣ್ಣಿಗೆ ಕಾಣುವುದು, ಗೋಚರಿಸುವುದು, ಉಂಟಾಗುವುದು, ಅವತರಿಸುವುದು
**ಪ್ರಾದೇಶ** ಗೇಣು, ಚೋಟು; ಸಂಕರ್ಷಣ
**ಪ್ರಾನ** ಒಂದು ಬಗೆಯ ಆಯುಧ
**ಪ್ರಾಪ್ತ** ಒದಗಿದ
**ಪ್ರಾಪ್ತಿ** ದೊರೆಯುವುದು, ಪಡೆದುಕೊಳ್ಳುವುದು, ತನಗೆ ಇಷ್ಟ ಬಂದ ವಸ್ತುವನ್ನು ಹೊಂದುವುದು
**ಪ್ರಾಯೋಪವೇಶ** ಅನ್ನ ನೀರುಗಳನ್ನು ತೊರೆದು ಪ್ರಾಣ ಬಿಡುವುದು, ಸಾವಿಗೆ ಕಾರಣವಾಗುವಂಥ ಉಪವಾಸ ಕೈಗೊಳ್ಳುವುದು
**ಪ್ರಾರಬ್ಧ** ವಿಧಿ
**ಪ್ರಾರಬ್ಧಕರ್ಮ** ಈಗ ಅನುಭವಿಸುತ್ತಿರುವ ಸಂಚಿತಕರ್ಮದಲ್ಲಿಯ ಭಾಗ, ಅನಾದಿಕರ್ಮ
**ಪ್ರಾವರ್ತಕ** ಆವರಿಸಲ್ಪಟ್ಟವನು
**ಪ್ರಾವರ್ತನ** ಬಿಂಕ
**ಪ್ರಾವೃಟ್** ಮಳೆಗಾಲ
**ಪ್ರಾವೃತ** (ಸಂಸಾರದಿಂದ) ಮುತ್ತಲ್ಪಟ್ಟವ, ಆವರಿಸಲ್ಪಟ್ಟವ
**ಪ್ರಾಶನ** ತಿನ್ನುವುದು, ತಿನ್ನಿಸುವುದು
**ಪ್ರಾಶಿಸು** ತಿನ್ನಿಸು, ಕುಡಿಸು
**ಪ್ರಾಸು** ಒಂದು ಬಗೆಯ ಆಯುಧ; ಪ್ರಾಸ, ಸಮಸ್ವರಗಳ ಯೋಜನೆ
**ಪ್ರೀಣನ** ತೃಪ್ತನಾಗುವಿಕೆ, ಸಂತುಷ್ಟನಾಗುವಿಕೆ
**ಪ್ರೀತಿಭಾಜನ** ಪ್ರೀತಿಪಾತ್ರ
**ಪ್ರೇಕ್ಷಿಸು** ನೋಡು, ಕಾಣು
**ಪ್ರೇಕ್ಷೆ** ನೋಟ, ದೃಶ್ಯ; ಬುದ್ಧಿ, ತಿಳಿವು
**ಪ್ರೇರಕ** ಪ್ರೇರೇಪಣೆ ಮಾಡುವವ; ಮನಸ್ಸು; ಅಹಂಕಾರ ಬುದ್ಧಿ
**ಪ್ರೇಷ್ಠ** ಪ್ರೀತ್ಯಾಸ್ಪದ
**ಪ್ರೇಷ್ಠತಮ** ಪ್ರಿಯತಮ, ಶ್ರೇಷ್ಠ
**ಪ್ರೋಕ್ತ** ಹೇಳಲ್ಪಟ್ಟ, ಪ್ರಕಟಿಸಿದ
**ಪ್ರೋಚ್ಚ** ಶ್ರೇಷ್ಠ
**ಪ್ರೋತ** ಹೊರಹೊಮ್ಮಿದ
**ಪ್ರೋದ್ಯತ್** ಹೆಚ್ಚಾದ ಬೆಳಕು
**ಪ್ರೋದ್ಯಾರ್ಕನಿಭ** ಹೊಳೆಯುವ ಸೂರ್ಯನ ಕಾಂತಿ
**ಪ್ರೋನ್ನಿತಂಬ** ವಿಸ್ತಾರವಾದ ಪಿರ್ರೆ, ದೊಡ್ಡಕುಂಡೆ
**ಪ್ರೌಢ** ಅನುಭವಿ, ಪ್ರಬುದ್ಧನಾದ, ಜ್ಞಾನಿಯಾದ ಭಕ್ತ
**ಪ್ರೌಢಜನೇಶ್ವರಿ** ಜ್ಞಾನಿಜನರ ನಿಯಾಮಕ ದೇವತೆ ಲಕ್ಷ್ಮಿ
**ಪ್ರೌಢಿ** ಧೈರ್ಯ, ಪ್ರಬುದ್ಧನಾದವನು
**ಪ್ರೌಢಿಮೆ** ನೈಪುಣ್ಯ, ಪಾಂಡಿತ್ಯ
**ಪ್ಲಕ್ಷ** ಬಸರಿ (ಬಸರಿಮರ)
**ಪ್ಲವ** ನೆಗೆತ, ಜಿಗಿತ; ತೇಲುವಿಕೆ, ಈಜುವಿಕೆ; ಹರಿಗೋಲು
**ಪ್ಲವಂಗ** ಪ್ಲವಗ, ಕಪಿ, ಕೋತಿ, ಕುಪ್ಪಳಿಸಿ ಮುಂದೆ ಸರಿಯುವ ಪ್ರಾಣಿ; ಅರವತ್ತು ಸಂವತ್ಸರಗಳಲ್ಲಿ ಒಂದು
**ಪ್ಲವಂಗನಾಯಕ** ಹನುಮಂತ
**ಪ್ಲವಿಸು** ನೆಗೆ; ಈಜು

Rarest Archive

# ಫ

**ಫಕ್ಕನೆ** ಕೂಡಲೆ, ಇದ್ದಕ್ಕಿದ್ದಂತೆ, ತಟ್ಟನೆ

**ಫಕ್ಕಸಾರಿ** ಸುಮ್ಮನೆ, ಬೆಲೆಯಿಲ್ಲದೆ, ಪುಗಸಟ್ಟೆ, ಪುಕ್ಕಸಾಟೆ

**ಫಕ್ತ** ಕೇವಲ(ಮರಾಠಿ ಶಬ್ದ)

**ಫಜ್ಜಿಗೆ** ಗುರಿಮುಟ್ಟುವ ಸ್ಥಳ

**ಫಣ** ಹಾವಿನ ಹೆಡೆ

**ಫಣಕೇತನ** ಸರ್ಪಧ್ವಜ–ದುರ್ಯೋಧನ

**ಘಣಫಲ<ಪ್ರಾಣಪಳ** ಒಂದು ಗಳಿಗೆಗಿಂತ ಕಡಿಮೆ ಕಾಲ ಪ್ರಮಾಣವನ್ನು ಸೂಚಿಸುವ ಜ್ಯೋತಿಶ್ಯಾಸ್ತ್ರದ ಪದಗಳು(10 ಗುರು–ಒಂದು ಪ್ರಾಣ, 6ಪ್ರಾಣ–1ಪಳ)

**ಫಣಿ** ಹೆಡೆ ಇರುವ ಜೀವಿ, ಹಾವು, ಸರ್ಪ, ಶೇಷ, ಹಾವಿನ ಹೆಡೆ, ರಾಹು (ಇವನಿಗೆ ಸರ್ಪರೂಪ ವಿದೆ)

**ಫಣಿಕೇತನ** ದುರ್ಯೋಧನ

**ಫಣಿಗಳತಾಯಿ** ಸಾರಸೆ, ಕದ್ರು

**ಫಣಿತಲ್ಪ** ಶೇಷಶಾಯಿ–ವಿಷ್ಣು

**ಫಣಿಧರ** ಹಾವನ್ನು ಧರಿಸಿದ ಶಿವ

**ಫಣಿಪ, ಫಣಿಪತಿ** ಆದಿಶೇಷ

**ಫಣಿಪಗಿರಿ** ಶೇಷಗಿರಿ

**ಫಣಿಪಬಾಣ** ಸರ್ಪಬಾಣ

**ಫಣಿಫಣ** ಹಾವಿನ ಹೆಡೆ

**ಫಣಿಬಾಣ** ಕರ್ಣನು ಅರ್ಜುನನ ಮೇಲೆ ಬಿಟ್ಟ ಬ್ರಹ್ಮಾಸ್ತ್ರ ಸಂಯುಕ್ತ ನಾಗಾಸ್ತ್ರ

**ಫಣಿಯಪೆಡೆ** ಹಾವಿನ ಹೆಡೆ, ಕಾಳಿಂಗನ ಹೆಡೆ

**ಫಣಿರಿಪು** ಗರುಡ

**ಫಣಿವೇಣಿ** ಹಾವಿನಂತೆ ಉದ್ದವಾದ ಜಡೆಯುಳ್ಳವಳು

**ಫಣಿಶಾಯಿ** ಶೇಷಶಾಯಿ–ವಿಷ್ಣು

**ಫಣಿಸತಿ** ಶೇಷದೇವರ ಪತ್ನಿಯಾದ ವಾರುಣಿ

**ಫಣಿಹರ** ಗರುಡ

**ಫಣೀಂದ್ರ** ಶೇಷ

**ಫಲ** ಹಣ್ಣು, ಬೆಳೆ, ಪೈರು; ಫಲಿತಾಂಶ, ಪ್ರಯೋಜನ

**ಫಲಕಾಲ** ಶಾಪವಿಮೋಚನಕಾಲ, ಪರ್ವಕಾಲ

**ಫಲಭೇದ** ಕರ್ಮಾನುಸಾರ ದೊರೆಯುವ ಫಲದಲ್ಲಿನ ವ್ಯತ್ಯಾಸ

**ಫಲಶ್ರುತಿ** ಲಾಭವನ್ನು ಹೇಳುವಿಕೆ

**ಫಲುಗುಣ, ಫಲ್ಗುಣ(ನ)** ಅರ್ಜುನ

**ಫಲುಗುಣಾಗ್ರಜ** ಭೀಮ

**ಫಲ್ಗುಣಸಖ** ಅರ್ಜುನನ ಸಖ–ಕೃಷ್ಣ

**ಫಲ್ಗುನ** ಅರ್ಜುನ

**ಫಳ<ಪಲ** ಕಾಲದ ಒಂದು ಪ್ರಮಾಣ

**ಫಾಕಿಸು** ತೇಜವನ್ನು ವ್ಯಾಪಿಸು

**ಫಾಲ** ಹಣೆ, ನೊಸಲು

**ಫಾಲನಯನ, ಫಾಲನೇತ್ರ** ಹಣೆಯಲ್ಲಿ ಕಣ್ಣುಳ್ಳವ–ಶಿವ

**ಫಾಲಾಕ್ಷಸಖ** ವಿಷ್ಣು

**ಫಾಲಾಕ್ಷಿ** ಹಣೆಗಣ್ಣು

**ಫಿತವಿ<ಫಿದ್ವಿ** ಭೇದಬುದ್ಧಿ; ಸೇವಕ

**ಫುಗುಡಿ** ಹೆಣ್ಣುಮಕ್ಕಳ ಒಂದು ಆಟ

**ಫುಲ್ಲ** ಹೂವು, ಕಮಲ; ಅರಳು

**ಫುಲ್ಲಂಬ** ಹೂಬಾಣದವ ಮನ್ಮಥ

**ಫುಲ್ಲನಾಭ** ಹೊಕ್ಕುಳಲ್ಲಿ ಹೂವುಳ್ಳವ–ವಿಷ್ಣು

**ಫುಲ್ಲಭವ** ಕಮಲದಲ್ಲಿ ಹುಟ್ಟಿದವ–ಬ್ರಹ್ಮ

**ಫುಲ್ಲಲೋಚನ** ಹರಿಣಾಕ್ಷ, ಜಿಂಕೆಯ ಕಣ್ಣಿನವನು–ವಿಷ್ಣು

**ಫುಲ್ಲಲೋಚನೆ** ಹೂವಿನಂಥ ಕಣ್ಣುಳ್ಳವಳು, ವಿಶಾಲನೇತ್ರೆ

**ಫುಲ್ಲಾಕ್ಷ** ಅರಳಿದ ಕಮಲದಂತಿರುವ ಕಣ್ಣುಳ್ಳವನು –ಶ್ರೀಹರಿ

Rarest Archive

**ಘುಳೈಸು** ಅರಳು
**ಘೇಡನೆ(ಮ)** ಸೇಡು ತೀರಿಸಿಕೊಳ್ಳು
**ಘೇಣ** ಮಿರುಗು
**ಘೇನ** ನೊರೆ, ಬುರುಗು
**ಘೇರಿಹೊಡೆ** ಅಲೆದಾಡು, ಸುತ್ತಿಬರು
**ಘೋಡಣಿ** ಒಗ್ಗರಣೆ
**ಘೌಜು** ಸೈನ್ಯ, ದಂಡು

## ಬ

**ಬಂಕ** ಮುಖ್ಯಮನೆಗೆ ಹೊಂದಿಕೊಂಡು ಮುಂಗಡೆಯಲ್ಲಿರುವ ಪಡಸಾಲೆ, ಜಗುಲಿ, ಹಜಾರ
**ಬಂಗಾರದೊಡಲ** ಬ್ರಹ್ಮ
**ಬಂಗಿ** ಅಮಲು ಬರಿಸುವ ಸೊಪ್ಪು, ಭಂಗೀ ಸೊಪ್ಪು, ಗಾಂಜಾ
**ಬಂಟ** ಶೂರ, ಸೇವಕ, ಯೋಧ
**ಬಂಡ** ಸರಕು, ವಸ್ತು, ದ್ರವ್ಯ; ನಾಚಿಕೆಗೇಡಿ
**ಬಂಡಣ** ಯುದ್ಧ, ಕಾಳಗ
**ಬಂಡಾಗು** ತೊಂದರೆಗೆ ಒಳಗಾಗು; ನಿಷ್ಫಲವಾಗು
**ಬಂಡಿಅಸುರ** ಹಿಡಿಂಬ
**ಬಂಡಿಕಾಲ** ಶಕಟಾಸುರ
**ಬಂಡಿನಡೆಸು** ಸಾರಥಿಯಾಗು
**ಬಂಡಿಬೋವ** ಬಂಡಿ ಹೊಡೆಯುವವ, ಸಾರಥಿ, ಕೃಷ್ಣ
**ಬಂಡು** ದಂಗೆ, ಬಂಡಾಯ; ಕೀಳು ನಡತೆ; ಮಕರಂದ, ಮಧು
**ಬಂಡುಣಿ** ದುಂಬಿ, ಭ್ರಮರ, ಜೇನು ನೊಣ
**ಬಂಡುಮಾಡು** ಅಪಮಾನ ಮಾಡು
**ಬಂಡುಮಾತು** ಅಶ್ಲೀಲವಾದ ಮಾತು, ಅಪಕೀರ್ತಿ ತರುವ ಮಾತು
**ಬಂದಿ** ತೋಳ್ಬಂದಿ; ಸೆರೆಯಾಳು
**ಬಂದಿಜನ** ಸ್ತುತಿಪಾಠಕರು, ಹೊಗಳುಭಟ್ಟರು, ವಂದಿಗಳು
**ಬಂದುಗೆವಾಯ** ಬಂಧೂಕ ಹೂವಿನಂತಿರುವ ಬಾಯುಳ್ಳವನು
**ಬಂದುಹೋದುದೆಲ್ಲ** ಹುಟ್ಟು ಸಾವುಗಳೆಲ್ಲ
**ಬಂಧನ** ತೊಡಕು, ಕಟ್ಟು, ಸಂಕೋಲೆ, ಕರ್ಮ ಬಂಧನ
**ಬಂಧುರ** ಸುಂದರವಾದ; ಸಮತಲವಲ್ಲದ, ಬಾಗಿದ; ಗೋಮೋದಕ
**ಬಂಬಲು** ಗೊಂಚಲು, ಜೊಂಪೆ; ಎಳೆಯ ತೆಂಗಿನಕಾಯಿಯ ತಿರುಳು; ನೀರಿನಿಂದ ಕಲಸಿದ ಪಾಯಸದಂತಹ ಮಣ್ಣು ಅಥವಾ ಬೇರೆ ಪದಾರ್ಥ
**ಬಕ** ಒಂದುಜಾತಿಯ ಜಲಚರಪಕ್ಷಿ; ಬಕ ದಾಲ್ಭ್ಯನೆಂಬ ಋಷಿ; ಭೀಮನು ಮಲ್ಲಯುದ್ಧ ದಲ್ಲಿ ಕೊಂದ ಏಕಚಕ್ರನಗರದ ಅಧಿಪತಿ(ರಾಕ್ಷಸ)
**ಬಕವಿದಾರಣ** ಕೃಷ್ಣಾವತಾರದಲ್ಲಿ ಬಕಾಸುರನನ್ನು ನಿಗ್ರಹಿಸಿದವನು
**ಬಕವೈರಿ** ಭೀಮಸೇನ
**ಬಕುಳಪುಷ್ಪ** ರಂಜದಹೂ, ನಾಗಕೇಸರ ಹೂವು
**ಬಕ್ಕಟ್ಟೆಬಯಲು** ಬಟ್ಟಬಯಲು, ಶೂನ್ಯ
**ಬಕ್ಕಣ** ತಿಂಡಿ, ಭಕ್ಷ್ಯ; ಜೇಬು, ಕಿಸೆ; ಕುದುರೆಯ ಬಾಯಿಗೆ ಕಟ್ಟುವ ಮೇವುಚೀಲ
**ಬಕ್ಕದಾಸ** ಜ್ಞಾನ ಭಕ್ತಿ ವೈರಾಗ್ಯಗಳ ಅಭಾವ ವುಳ್ಳದಾಸ, ಬರಿಯ ದಾಸ
**ಬಕ್ಕೆ** ಒಂದು ಜಾತಿಯ ಹಲಸಿನ ಹಣ್ಣು
**ಬಗಿ** ಸೀಳು
**ಬಗೆ** ಬುದ್ಧಿ, ಮನಸ್ಸು, ಹೃದಯ; ರೀತಿ, ತರಹ
**ಬಗ್ಗಡಹೊಯ್ಯು** ಕೆಸರು ಅಥವಾ ಮಣ್ಣನ್ನು ಹೊಯ್ಯು

Rarest Archiver

**ಬಟ್ಟಲೆಣ್ಣೆಮಂಡೆ** ಸ್ನಾನಕ್ಕಾಗಿ ಎಣ್ಣೆ ಹಚ್ಚಿಕೊಂಡ ತಲೆ

**ಬಟು, ಬಟುವು** ವೃತ್ತಾಕಾರವಾದುದು, ದುಂಡಗಿರುವುದು, ಗುಂಡಗಿರುವುದು

**ಬಟ್ಟ**<ವೃತ್ತ ದುಂಡಾದ, ಸುಂದರವಾದ

**ಬಟ್ಟಗಣ್ಣು** ಗುಂಡಾಗಿರುವ ಕಣ್ಣು

**ಬಟ್ಟಮುಖ** ದುಂಡು ಮುಖ

**ಬಟ್ಟಮುತ್ತು** ದುಂಡಾಗಿರುವ ಮುತ್ತು

**ಬಟ್ಟಲವೀಳ್ಯ** ವೀಳೆಯದ ತಬಕ

**ಬಟ್ಟು** ಗುಂಡಾದ; ಬೊಟ್ಟು, ತಿಲಕ; ಮೂಗುತಿ

**ಬಟ್ಟೆ** ವಸ್ತ್ರ; ದಾರಿ

**ಬಟ್ಟೆಗಳೆ** ವಸ್ತ್ರಾಪಹರಣ

**ಬಟ್ಟೆಬಡಕ** ಸ್ಥಿರವಾದ ನೆಲೆಯಿಲ್ಲದವ

**ಬಡಗಿಮುಟ್ಟದ** ಅಪ್ರಾಕೃತವಾದ

**ಬಡನಡು** ಕೃಶವಾದ (ಚಿಕ್ಕ) ಸೊಂಟವುಳ್ಳವಳು

**ಬಡಬಾನಲ** ಸಮುದ್ರ ಗರ್ಭದಲ್ಲಿ ಇರುವ ಬೆಂಕಿ

**ಬಡರುದೈನ್ಯ** ದೈನ್ಯಪಡುವುದಿಲ್ಲ, ದೀನರಂತೆ ಯಾಚಿಸುವುದಿಲ್ಲ

**ಬಡವು** ದುರ್ಬಲತೆ, ಬಡಪ್ರಾಣಿ, ದಿಕ್ಕಿಲ್ಲದವನು

**ಬಡಸಲಾಪವೆ** ಉಂಟುಮಾಡಲು ಸಾಧ್ಯವೆ

**ಬಡಿಗಲ್ಲು** ಬಲೆಯ ತುದಿಗೆ ಕಟ್ಟಿದ ಜಡಪದಾರ್ಥ

**ಬಡಿವಾರ** ಬಡಾಯಿ, ಡೌಲು, ಒಣಹೆಮ್ಮೆ, ವಯ್ಯಾರ, ಜಂಭ, ಬಿನ್ನಾಣ

**ಬಡಿಸು** ಉಣಬಡಿಸು; ಆವರಿಸು; ತಗುಲಿಸು

**ಬಣ** ಗುಂಪು, ಪಂಗಡ

**ಬಣಗು** ಕೀಳು, ಅಲ್ಪ, ಕ್ಷುದ್ರ, ನಿಸ್ಸಾರ, ತುಚ್ಛ, ನೀಚ

**ಬಣತಿಗೆ** ಬಂದಳಿಕೆ, ಪರಾವಲಂಬಿ ಸಸ್ಯ, ಬಳ್ಳಿ

**ಬಣವೆ** ಹುಲ್ಲಿನ ರಾಶಿ, ಮೆದೆ

**ಬಣ್ಣ** ಸೀರೆ, ಬಟ್ಟೆ, ಮಾನ, ಕಾಂತಿ, ಅಂತರ್ಯ

**ಬಣ್ಣದಬೀಸಣಿಕೆ** ಆಕರ್ಷಕ ವಸ್ತು; ಹೊರಮಿಂಚಿನ ಹೆಣ್ಣು

**ಬಣ್ಣದಾಟ** ಚಿತ್ರ ವಿಚಿತ್ರವಾದ ಆಟಗಳು, ಓಕುಳಿ ಆಡುವುದು

**ಬಣ್ಣಬಿಳುಪಿನಮಂಚ** ಶೇಷಶಯನ–ಶ್ರೀಹರಿ (ಶೇಷನ ಮೈಬಣ್ಣ ಬಿಳುಪು)

**ಬಣ್ಣವಕಾಯ್ದ** ವಸ್ತ್ರಾಪಹರಣವನ್ನು ತಡೆದವ, ಗೌರವವನ್ನು ಕಾಪಾಡಿದವ–ಕೃಷ್ಣ

**ಬಣ್ಣಿಗೆ** ಬಣ್ಣದ ಮಾತು

**ಬಣ್ಣಿಗೆಯಮನೆ** ಬಿಳಿ, ಕೆಂಪು, ಕಪ್ಪು ಬಣ್ಣಗಳಿಂದ ಕೂಡಿದ ಮನೆ

**ಬಣ್ಣಿಸು** ವರ್ಣಿಸು

**ಬತ** ವ್ರತ, ನಿಯಮ

**ಬತ್ತಲಚ್ಚಂದಿಯಾಡು** ಬತ್ತಲೆಯಾಗಿ ಕುಣಿ

**ಬತ್ತಲೆರಾಹುತ** ಕಲ್ಕಿ, ಬಟ್ಟೆ ಬಿಟ್ಟು ವಿವಸ್ತ್ರನಾಗಿ ಕುದುರೆ ಹತ್ತಿದವನು; ಕಡಿವಾಣ, ಜೀನು ಇಲ್ಲದ ಕುದುರೆ ಹತ್ತಿದವನು

**ಬತ್ತಲೆಸುಳಿದಾತ** ಬುದ್ಧ, ಬೌದ್ಧಾವತಾರ

**ಬತ್ತೀಸ** ಮೂವತ್ತೆರಡು (ರಾಗಗಳು)

**ಬತ್ತೀಸರಾಗ** ತ್ರಯದಶದ್ವಯರಾಗ ನೋಡಿ

**ಬದರ** ನಿಶಾಕರ, ಚಂದ್ರ

**ಬದರಧರ** ಚಂದ್ರಧರ–ಶಿವ

**ಬದರಸನ್ನಿಭಕಾಯ** ಚಂದ್ರಸದೃಶ ಕಾಂತಿಯುಕ್ತ ಶರೀರವುಳ್ಳವನು

**ಬದರಿ** ಎಲಚಿಹಣ್ಣು, ಬೋರೆ, ಎಲಚೀಗಿಡ, ಹತ್ತಿಗಿಡ; ಹಿಮಾಲಯದಲ್ಲಿರುವ ಪುಣ್ಯಕ್ಷೇತ್ರ

**ಬದರಿವಾಸ** ವೇದವ್ಯಾಸ

**ಬದರೀಶ** ಬದರೀನಾರಾಯಣ

**ಬದಿ** ಅಕ್ಕ, ಪಕ್ಕ, ಒಡ್ಡು, ಬದು; ಕೆಸರು, ರಾಡಿ

**ಬದಿಗ** ಹತ್ತಿರದಲ್ಲಿರುವವನು–ಭಕ್ತ, ಜತೆಗಾರ, ಸೇವಕ

**ಬದುವು** ಹೊಲದ ಅಂಚು, ತೆವರು

**ಬದೆಗ** ಅಲ್ಪ, ನೀಚ, ವ್ಯಭಿಚಾರಿ

Rarest Archive

**ಬದ್ಧ** ಗಟ್ಟಿಯಾದ, ನಿಸ್ಸಂಶಯವಾದ; ಸಂಪ್ರದಾಯ ಕ್ಕೊಳಗಾದ; ತಯಾರಾದ, ಸಿದ್ಧವಾದ, ಕಟ್ಟಲ್ಪಟ್ಟ; ಯೋಗ್ಯ, ಕಟ್ಟು

**ಬದ್ಧಜಾತಿ** ಕಟ್ಟುಪಾಡು ಇರುವ ಜಾತಿ, ನಿಬಂಧನೆಗೆ ಒಳಪಟ್ಟ ಜಾತಿ

**ಬದ್ಧಮಾಡು** ಕಟ್ಟು

**ಬದ್ಧವಶ, ಬದ್ಧವಹ** ಕಟ್ಟುನಿಟ್ಟಿಗೆ ಒಳಗಾದ

**ಬದ್ಧವಾಹನ** ನೆಲದ ಮೇಲೆ ಓರಣವಾಗಿ ಹೋಗುವ ವಾಹನ

**ಬದ್ಧಾಂಜಲಿ** ಮುಗಿದಕೈ, ಒಡ್ಡಿದ ಬೊಗಸೆ

**ಬದ್ಧಾಗು** ಗಾಢವಾಗು, ದೃಢವಾಗು, ಬದ್ಧವಾಗು

**ಬಧಿರ** ಕಿವುಡ

**ಬಧಿರತ್ವ** ಕಿವುಡತನ

**ಬನ್ನ** ಕಷ್ಟ, ಕೇಡು, ತೊಂದರೆ, ಭಂಗ, ದುಃಖ, ಅವಮಾನ

**ಬನ್ನಣೆ, ಬಣ್ಣನೆ** ಬಲಶಾಲಿ; ಜ್ಞಾನಿ; ಅವಮಾನ; ಹೊಗಳುವಿಕೆ; ವರ್ಣನೆ

**ಬನ್ನದಾಸ** ತೊಂದರೆಗೊಳಗಾದವ, ಯಃಕಶ್ಚಿತ್ ಮನುಷ್ಯ

**ಬನ್ನಬಡು** ಕಷ್ಟಪಡು

**ಬಪ್ಪು** ಬರು

**ಬಬ್ಬರ** ಜೋರು, ಅಬ್ಬರ

**ಬಬ್ಬುಳಿ** ನೀರಗುಳ್ಳೆ; ಒಂದು ಜಾತಿಯ ಮುಳ್ಳು ಗಿಡ, ಜಾಲಿ

**ಬಯಲಸೀರೆ** ಆಕಾಶವೆಂಬ ಸೀರೆ, ದಿಗಂಬರ

**ಬಯಲಾಸೆ** ವ್ಯರ್ಥವಾದ ವ್ಯಾಮೋಹ

**ಬಯಲಿಗೆನಿರ್ಬಯಲು** ಸಾಂತದಿಂದ ಅನಂತ ವಾಗುವುದು

**ಬಯಲಿನಡಂಬ** ಒಣಹೆಮ್ಮೆ

**ಬಯಲು** ಶೂನ್ಯ; ವಿಸ್ತಾರವಾದ ಜಾಗ; ವ್ಯರ್ಥ ವಾದುದು; ಗೋಚರಿಸುವುದು

**ಬಯಲುಡಂಭಕ** ಹುರುಳಿಲ್ಲದ್ದು

**ಬಯಲುಮಮತೆ** ನಿಮಿತ್ತ ಪ್ರೀತಿ, ಹುಸಿ ವಿಶ್ವಾಸ

**ಬರ** ವರ, ಅನುಗ್ರಹ; ಕ್ಷಾಮ; ಹತ್ತಿರ

**ಬರಗು** ಒಂದು ಬಗೆಯ ಧಾನ್ಯ (ಬಿತ್ತಿದ ಇಪ್ಪತ್ತು ದಿನಗಳಲ್ಲಿ ಬೆಳೆಯುತ್ತದೆ; ಬರಗಾಲದಲ್ಲಿ ಇದನ್ನು ಬಿತ್ತಿ ಬೆಳೆಯುವ ಪರಂಪರೆ ಇದೆ)

**ಬರಡು** ಒಣಗಿದ್ದು, ನಿರುಪಯುಕ್ತ

**ಬರಮ** ಬ್ರಹ್ಮ

**ಬರಲೀಸು** ಬರಗೊಡು

**ಬರವು** ಬರುವಿಕೆ

**ಬರಿ** ಸುಮ್ಮನೆ, ಕೇವಲ, ವ್ಯರ್ಥವಾದುದು

**ಬರಿಕೈ** ಬರಿದು ಮಾಡು, ಖಾಲಿ ಕೈ

**ಬರು** ಬರಿದೆ

**ಬರುವೆಡರು** ಹುಟ್ಟು–ಸಾವು

**ಬರೆದಬರೆಹ, ಬರೆಹ** ಹಣೆಬರಹ, ವಿಧಿಲಿಖಿತ

**ಬರ್ಮಣರು** ಬ್ರಹ್ಮ, ಬ್ರಾಹ್ಮಣ

**ಬರ್ಹ** ನವಿಲುಗರಿ

**ಬರ್ಹಿ>ಬರುಹಿ** ದರ್ಭೆ, ದರ್ಭೆಯ ಕಟ್ಟು; ನವಿಲು; ಅಗ್ನಿ; ತುಂಡು

**ಬರ್ಹಿಪಿಚ್ಛಲಾಂಛೆ** ನವಿಲುಗರಿಯನ್ನು ತಲೆಯಲ್ಲಿ ಚಿಹ್ನೆಯಾಗುಳ್ಳವಳು

**ಬಲ** ಬಲರಾಮ

**ಬಲಗೊಳ್** ಪ್ರದಕ್ಷಿಣೆ ಮಾಡು, ನಮಸ್ಕರಿಸು

**ಬಲದೇವ** ವಾಯುದೇವ, ಬಲರಾಮ

**ಬಲದೇವಾನುಜ** ಬಲದೇವನ ತಮ್ಮ–ಕೃಷ್ಣ

**ಬಲಭದ್ರ ರಾಯ** ಬಲರಾಮ

**ಬಲಮೂಲ** ಬಲಿತ ಸುಗಂಧದ ಬೇರು

**ಬಲರಿಪು, ಬಲವೈರಿ, ಬಲಾರಿ** ಬಲನೆಂಬ ರಾಕ್ಷಸನಿಗೆ ವೈರಿಯಾದ ಇಂದ್ರ

**ಬಲಿ** ವಿರೋಚನನ ಮಗ ಬಲಿಚಕ್ರವರ್ತಿ

**ಬಲಿಇಡು** ಬಲಿಕೊಡು

**ಬಲಿಗಾಯತವಾದ** ಬಲಿಗೆ ಸಿದ್ಧವಾದ

**ಬಲಿದು** ಸಮರ್ಥವಾಗಿ, ಅಧಿಕವಾಗಿ

Rarest Archiver

**ಬಲಿಪ್ರಕ್ಷಾಲಿತಪಾದ** ಬಲಿ ಚಕ್ರವರ್ತಿಯಿಂದ ಪಾದಗಳನ್ನು ತೊಳೆಸಿಕೊಂಡವನು-ಶ್ರೀಹರಿ
**ಬಲಿಹರಣ** ಪಶುಪಕ್ಷಿಗಳಿಗೆ ಆಹುತಿಕೊಡುವಿಕೆ
**ಬಲೀಂದ್ರ** ಬಲಿರಾಜ
**ಬಲೀಂದ್ರವರದ** ವಾಮನ
**ಬಲುನಿದಾನಿ** ಶಾಂತಸ್ವಭಾವಿ; ಪರಮಶುದ್ಧಿಯುಳ್ಳವ
**ಬಲುಭವ** ಬಹಳ ಜನನ, ಮತ್ತೆ ಮತ್ತೆ ಹುಟ್ಟುವುದು, ಜನ್ಮಾಂತರ
**ಬಲುಮೆ** ಸಾಮರ್ಥ್ಯ, ಪರಾಕ್ರಮ
**ಬಲುಹು** ಸಾಮರ್ಥ್ಯ; ಬಲಾತ್ಕಾರ; ಬಹಳ
**ಬಲೆ** ಜಾಲ, ಸಂಸಾರ, ಬಂಧನ
**ಬಲ್ಪಂಥ, ಬಲುಪಂಥ** ಛಲ; ಮಾನ
**ಬಲ್ಪು** ಶಕ್ತಿ, ಬಲ, ಪರಾಕ್ರಮ
**ಬಲ್ಲರಿಯ** ಚೆನ್ನಾಗಿ ತಿಳಿದವನು, ಬಲ್ಲವನು
**ಬಲ್ಲಿದ** ಬಲವಂತ, ಶ್ರೇಷ್ಠ, ಬಲಿಷ್ಠ; ಬಲ್ಲವನು, ತಿಳಿದವನು, ಜ್ಞಾನಿ; ಶ್ರೀಮಂತ
**ಬವಣೆ** ಕಷ್ಟ, ತೊಂದರೆ
**ಬವನಾಶಿ(ಸಿ)** ದಾಸರು ಬಳಸುವ ಭಿಕ್ಷಾಪಾತ್ರೆ
**ಬವರ** ಯುದ್ಧ, ಧುರ, ಕಾಳಗ
**ಬವ್ವ, ಬವ್ವ** ಎಲ್ಲೆಡೆ ವ್ಯಾಪಿಸುವ ದೆವ್ವ, ಗುಮ್ಮ
**ಬಸವಳಿ** ಬಳಲಿಕೆ, ಆಯಾಸ
**ಬಸಿ** ಒಸರು, ಜಿನುಗು, ನೀರು ಸೋರುವಂತೆ ಮಾಡು; ಬೀಳು, ವಶವಾಗು
**ಬಸಿಬಸಿರೊಳು** ಜನ್ಮಜನ್ಮದಲ್ಲಿ
**ಬಸಿರ್, ಬಸಿರು, ಬಸುರು** ಹೊಟ್ಟೆ, ಗರ್ಭ; ಮನಸ್ಸು, ಅಂತರ್ಯ
**ಬಸಿವಲೆ** ಒಲೆಗಳಲ್ಲಿ ಒಂದು ವಿಧ, ಬಸಿದೊಲೆ; ಖಾಲಿಪಾತ್ರೆ
**ಬಸೆ** ಕೊಬ್ಬು, ನೆಣ
**ಬಸೆವಸೆಖಂಡ** ನೆಣಗೂಡಿದ ಮಾಂಸ
**ಬಸ್ತಕ** ಹೋತ, ಗಂಡು ಆಡು
**ಬಹರಿ** ಪೀಠ
**ಬಹಳಕಂಠಾರಿ** ದಶಕಂಠ ರಾವಣನ ಶತ್ರು-ರಾಮ
**ಬಹಿರಭೂಮಿ** <ಬಹಿರ್ಭೂಮಿ ಹೊರಗಡೆ ಮಲವಿಸರ್ಜನೆಗೆ ಹೋಗುವ ಸ್ಥಳ
**ಬಹಿರಾವರಣ** ಆಕಾಶ, ಬ್ರಹ್ಮಾಂಡದ ಹೊರಗಿನ ಆವರಣ
**ಬಹಿರಾವರಣಉದಕ** ತ್ರಿವಿಕ್ರಮನ ನಖದಿಂದ ಇಳಿದು ಬಂದ ಗಂಗಾಜಲ, ಬ್ರಹ್ಮಾಂಡ ಕಟಾಹದ ಹೊರಗಿನಿಂದ ಬಂದ ಗಂಗೆ
**ಬಹುಕರ** ಅಧಿಕ ಕೈಗಳು
**ಬಹುಗಿರಿಬೆನ್ನಲಿ ತಾಳ್ದೆ** ಕೂರ್ಮಾವತಾರ (ಮೇರು ಹೊತ್ತವ)
**ಬಹುಮೂತ್ರ** ಗಳಿಗೆ ಗಳಿಗೆಗೂ ಮೂತ್ರ ವಿಸರ್ಜನೆಯ ರೋಗ
**ಬಹ್ವಾಶನ** ಹೊಟ್ಟೆಬಾಕ
**ಬಳಗುಳ್ಳಿ (ಬಳಕು)** ಹೊಯ್ದಾಡುವ, ಅತ್ತಿತ್ತ ಅಲೆದಾಡುವ
**ಬಳಲು** ಬಾಡು, ಶ್ರಮಿಸು
**ಬಳವಿ** ಬೆಳವಣಿಗೆ, ಮೇಲೇರುವಿಕೆ
**ಬಳಿವಿಡಿ** ಅನುಸರಿಸು, ದಾರಿಹಿಡಿ
**ಬಳೆ** ವೃದ್ಧಿಯಾಗು, ಹೆಚ್ಚಾಗು
**ಬಳ್ಳಿಗೊಳು** ವಿಸ್ತಾರವಾಗು, ಹಬ್ಬು, ಆವರಿಸು
**ಬಳ್ಳು** ನರಿ
**ಬಾಂಜಡೆಯ** ಶಿವ
**ಬಾಂದಳಪುರ** ಸ್ವರ್ಗ, ಊರ್ಧ್ವಲೋಕ
**ಬಾಂದು** ಒಡ್ಡು, ಕಟ್ಟೆ
**ಬಾಂಪೊಳೆ, ಬಾಂಬೊಳೆ** ಬಾನಿನ ಹೊಳೆ, ಗಂಗೆ
**ಬಾಕುಲಿ(ಳಿ)ಕ** ಆಶೆಬುರುಕ, ಕೂಳಬುಕ್ಕ; ಸೇವಕ
**ಬಾಕುಳಿ** ಹೆಬ್ಬಯಕೆ, ಅತ್ಯಾಸೆ
**ಬಾಕುಳಿಗವೃತ್ತಿ** ವ್ಯಾಕುಲ ವೃತ್ತಿ, ಹರಿಸೇವೆಯಲ್ಲಿಯೇ ತೊಡಗಿದವ, ಹರಿದಾಸರ ಪ್ರವೃತ್ತಿ
**ಬಾಗಿಲುಗಳೊಂಬತ್ತು** ದೇಹದ ನವರಂಧ್ರ

Rarest Archives

**ಬಾಜಾಬಜಂತ್ರಿ** ಓಲಗ ಮತ್ತಿತರ ಮಂಗಳ ವಾದ್ಯಗಳು

**ಬಾಜಾರ>ಬಜಾರ್** ಪೇಟೆಬೀದಿ

**ಬಾಜುಬಂದಿ** ತೋಳ್ಬಂದಿ, ಆಭರಣ

**ಬಾಟ** ಹೆದ್ದಾರಿ, ರಾಜಮಾರ್ಗ

**ಬಾಡ** ಕನಕದಾಸರ ಅರಮನೆ ಇದ್ದ ಸ್ಥಳ; ಬಂಕಾಪುರದಿಂದ 3 ಮೈಲಿ ದೂರದಲ್ಲಿದೆ. ಇಲ್ಲಿಂದ ಆದಿಕೇಶವಮೂರ್ತಿಯನ್ನು ಒಯ್ದು ಕಾಗಿನೆಲೆಯಲ್ಲಿ ಸ್ಥಾಪಿಸಿದರು

**ಬಾಣ** ಒಬ್ಬ ದೈತ್ಯ

**ಬಾಣಪಂಚಕ** ಕಾಮ

**ಬಾಣಬಾಹುಚ್ಛೇದ** ಬಾಣಾಸುರನ ಕೈಗಳನ್ನು ಕತ್ತರಿಸಿದವ–ಕೃಷ್ಣ

**ಬಾಣಬಿರುಸು** ಸಿಡಿಮದ್ದು, ಪಟಾಕಿ

**ಬಾಣಸಿಗ** ಅಡುಗೆಯವ

**ಬಾಣಸು** ಅಡಿಗೆ

**ಬಾಣಾರಿ** ಶ್ರೀಹರಿ

**ಬಾಣಾಸುರ** ಬಲಿಚಕ್ರವರ್ತಿಯ ಹಿರಿಯ ಮಗ

**ಬಾತಿಬಸಿದು** ಮಾತು ಸರಿಸಿ

**ಬಾತಿಬಸಿವದ್ಯಾಕೆ** ಮಾತಾಡುವುದೇಕೆ

**ಬಾತಿಯಿಲ್ಲ** ಪ್ರಯೋಜನವಿಲ್ಲ

**ಬಾತೀಗೆ, ಬಾತೆಗೆ** ಜೀವನಕ್ಕೆ; ಪ್ರಯೋಜನಕ್ಕೆ

**ಬಾತೆ** ಬಾಳ್ವೆ

**ಬಾದರಾಯಣ** ವೇದವ್ಯಾಸರು; ಹಳೆಯ

**ಬಾನ್, ಬಾಂದಳ** ಆಕಾಶ

**ಬಾನ** ಆಕಾಶ

**ಬಾನ್ದಳದಬುಡ** ಬದುಕು, ಜೀವನ

**ಬಾನ್ನದಿ** ಗಂಗೆ

**ಬಾನ್ನವಿರ** ಗಗನಕೇಶ–ಶಿವ

**ಬಾಪುರಿ** ಒಂದು ಬಗೆಯ ಆಭರಣ, ತೋಳಬಳೆ, ಬಾಹುಪೂರ

**ಬಾಯನಾದ** ಗೋಳಾಟ

**ಬಾಯಾರ** ಬಾಯ್ತುಂಬ

**ಬಾಯಿಂದಬೆನ್ನಿಗೆ** ಬಾಯಿಂದ ತಿಂದ ಆಹಾರ ಬೆನ್ನಿನ ಮೂಲಕ ಜೀರ್ಣವಾಗಿ ದೂರವಾದಂತೆ

**ಬಾಯಿತಂಬುಲ** ಬಾಯಿಂಯಲ್ಲಿ ಜಗಿದ ತಾಂಬೂಲ, ಎಂಜಲು

**ಬಾಯಿನಾರು** ಬಾಯಿಯ ವಾಸನೆ, ದುರ್ವಾಸನೆ ಆವರಿಸು

**ಬಾಯಿಬಡುಕ, ಬಾಯ್ಬಡುಕ** ವಾಚಾಳಿ, ನಿಂದಕ, ಬಡಾಯಿ ಕೊಚ್ಚುವವ

**ಬಾರಿ** ಸರದಿ, ಸಲ; ಏತದ ಬಾವಿಯ ಇಳಿಜಾರು

**ಬಾಲಕೇರಾಲಯ** ಹುಡುಗಿಯರ (ಗೋಪಿಯರ) ಮನೆ

**ಬಾಲಬ್ರಾಹ್ಮಣ** ವಾಮನ

**ಬಾಲಮೃಕಂಡು** ಮಾರ್ಕಂಡೇಯ(ಬಾಲಕ)

**ಬಾಲರಾಜಾಂಕಿತ** ಬಾಲಚಂದ್ರನಿಂದ ಶೋಭಿಸುವ

**ಬಾಲಶಶಿಧರ** ಎಳೆಯ ಚಂದ್ರನನ್ನು ಹಣೆಯಲ್ಲಿ ಧರಿಸಿದವ–ಶಿವ

**ಬಾಲಾರಿ** ರಾವಣನ ಮಗನಾದ ಇಂದ್ರಜಿತನ ಶತ್ರು–ಲಕ್ಷ್ಮಣ

**ಬಾಲಾರ್ಕ** ಬಾಲಸೂರ್ಯ, ಉದಯಸೂರ್ಯ

**ಬಾಲಿಶ** ಹುಡುಗುತನ; ಮೂರ್ಖತನ

**ಬಾಲೇಂದು** ಬಾಲಚಂದ್ರ, ಬಿದಿಗೆಯ ಚಂದ್ರ

**ಬಾವನ್ನ** ಶ್ರೀಗಂಧ, ಚಂದನ

**ಬಾವುಗ** ಗಂಡು ಬೆಕ್ಕು

**ಬಾವುಲಿ** ಒಂದು ಬಗೆಯ ಕಿವಿಯಾಭರಣ

**ಬಾಸುಳು** ಬಾಸುಂಡೆ

**ಬಾಸೆ** ನಾಭಿಯಿಂದ ಎದೆಯವರೆಗೆ ಇರುವ ಕೂದಲು

**ಬಾಹನ್ನಕ** ಬರುವವರೆಗೆ

**ಬಾಹು** ತೋಳು, ಭುಜ

**ಬಾಹುಜ** ಕ್ಷತ್ರಿಯ

Rarest Archives

**ಬಾಹುಪುರಿ<ಬಾಹುಪೂರ** ತೋಳಬಂದಿ

**ಬಾಹುಲ** ಕಾರ್ತೀಕಮಾಸ

**ಬಾಹುಲೇಯ** ಬಹುಲಾ ಎಂಬ ನಕ್ಷತ್ರದಿಂದ ರಕ್ಷಿತನಾದ ಸ್ಕಂದ

**ಬಾಹ್ಯಅಧರ** ಹೊರತುಟಿ

**ಬಾಹ್ಯಾಂತ್ರ** ಹೊರಗೂ ಒಳಗೂ

**ಬಾಳಘ** ಬದುಕಿನ ಪಾಪ

**ಬಾಳು** ಜೀವಿಸು, ಬದುಕು

**ಬಾಳೆ** ಕದಳಿ

**ಬಿಂಕ** ಸೊಕ್ಕು

**ಬಿಂದಲಿ** ಚಿಕ್ಕ ಮಕ್ಕಳ ಮುಂಗೈಗೆ ತೊಡಿಸುವ ಆಭರಣ

**ಬಿಂದು** ರೂಪ; ಹನಿ, ತೊಟ್ಟು

**ಬಿಂಬ** ತೋಳ್ಬಂದಿ; ಮೂರ್ತಿ; ತೊಂಡೆಹಣ್ಣು; ನೃಸಿಂಹ

**ಬಿಂಬಫಲಾಧರೆ** ತೊಂಡೆಹಣ್ಣಿನಂತೆ ಕೆಳದುಟಿಯುಳ್ಳವಳು, ಹೆಂಗಸು, ಸ್ತ್ರೀ

**ಬಿಂಬಾಧರ** ತೊಂಡಹಣ್ಣಿನಂತೆ ಹೊಳಪುಳ್ಳ ಕೆಳದುಟಿ; ಕೆಂಪಾಗಿರುವ ತುಟಿ

**ಬಿಂಬೋಷ್ಠ** ತೊಂಡೆಹಣ್ಣಿನಂತ ತುಟಿ, ಪ್ರಕಾಶಮಾನವಾದ ತುಟಿ

**ಬಿಕನಾಸಿ** ಭಿಕ್ಷುಕ, ತಿರುಕ, ಗತಿಯಿಲ್ಲದವನು; ಅಲ್ಪ, ಕ್ಷುದ್ರ

**ಬಿಕ್ಕು** ಬಿಕ್ಕಳಿಸು

**ಬಿಕ್ಕುದಿ** ಭಿಕ್ಷೆ ಬೇಡುವ ದೇವತೆಗಳು ?

**ಬಿಕ್ಕಳು** ಬಿಕ್ಕಿ ಬಿಕ್ಕಿ ಅಳು

**ಬಿಗಿದರ್ಥಿ** ಅತ್ಯಂತ ಪ್ರೀತಿ

**ಬಿಗುರು ವಾತ** ವಾತದಿಂದ ಬರುವ ಅದುರುವ ರೋಗ

**ಬಿಚ್ಚುಬಳೆ** ಅಗಲವಾದ ಬಳೆ, ಕಂಕಣ

**ಬಿಚ್ಚೇರು** ಭಿಕ್ಷೆಯವರು

**ಬಿಜಯಂಗೈಸು** ದಯಮಾಡಿಸು

**ಬಿಟ್ಟಿ<ಬಿಟ್ಟಿ<ವಿಟ್ಟಿ** ವಿಷ್ಟು; ಚಾಕರಿ

**ಬಿಟ್ಟಿಕೂಳು** ಪುಕ್ಕಟ್ಟೆ ಸಿಗುವ ಅನ್ನ

**ಬಿಟ್ಟುಕಳೆ** ದೂರಮಾಡು, ಕೈಬಿಡು

**ಬಿಡ(ಡೆ)ಯ** ಗುಂಪು, ಸಮೂಹ; ದಾಕ್ಷಿಣ್ಯ, ಲಜ್ಜೆ, ನಾಚಿಕೆ, ಭಿಡೆ, ಕೋಪ, ಸೆಣಸು

**ಬಿಡಾರ** ವಸತಿ, ತಂಗುವಸ್ಥಳ

**ಬಿಡಾಲ** ಬೆಕ್ಕು

**ಬಿಡಿಮುತ್ತು** ಬೇರೆಬೇರೆ ಇರುವ ಮುತ್ತು

**ಬಿಡೌಜ** ಇಂದ್ರ

**ಬಿತಿಆವು** ಬಿಸಿಹಾಲು (ಬಾಲಭಾಷೆ)

**ಬಿತ್ತ** ಬೆಳೆ ಬರಲು ಭೂಮಿಯಲ್ಲಿ ಹಾಕುವ ಬೀಜ

**ಬಿತ್ತರ** ವಿಸ್ತಾರ

**ಬಿತ್ತರಿಸು** ವಿಸ್ತರಿಸು, ತಿಳಿಸು

**ಬಿತ್ತಿದಾತ** ಬಿತ್ತುವುದಕ್ಕೆ ಪ್ರೇರಕನಾದ ಶ್ರೀಹರಿ

**ಬಿತ್ತು** ಬೀಜವನ್ನು ಭೂಮಿಗೆ ಹಾಕು

**ಬಿದಿರು** ಚೆದರು, ಹರಡು; ಬೊಂಬು, ಗಳು

**ಬಿದ್ದಿನ** ಅತಿಥಿ, ಅಭ್ಯಾಗತ; ಬೀಗ, ಸಂಬಂಧಿ

**ಬಿನಗು, ಬಿನುಗು** ಕ್ಷುದ್ರ, ವ್ಯರ್ಥ, ಕ್ಷುಲ್ಲಕ, ಹೀನ, ತುಚ್ಛ, ಅಲ್ಪ, ನೀಚ

**ಬಿನುಗುದೈವ** ಕ್ಷುದ್ರ ದೇವರು, ಹೀನ ದೇವರು

**ಬಿನುಗುಬೇಡತಿ** ಅಲ್ಪಳಾದ ಶಬರಿ

**ಬಿನ್ನಣ<ಬಿನ್ನಾಣ** ವೈಯ್ಯಾರ; ಜಾಣತನ

**ಬಿನ್ನಪ** ವಿಜ್ಞಾಪನೆ, ಪ್ರಾರ್ಥನೆ, ಮನವಿ, ವಿನಂತಿ

**ಬಿನ್ನವಿಸು, ಬಿನ್ನೈಸು** ವಿಜ್ಞಾಪಿಸು, ಅರಿಕೆಮಾಡಿಕೊ

**ಬಿರಿದುಬಿರಿದು, ಬಿರಿಬಿರಿದು** ಉಬ್ಬಿ ಉಬ್ಬಿ

**ಬಿರಿಬಿರಿದುಬಿಚ್ಚು** ಹಿಗ್ಗಿ ಹಿಗ್ಗಿ ಹಿರೇಕಾಯಿ ಆಗು, ಸಂತೋಷ ಪಡು

**ಬಿರಿಸುಬಿಂಕದನುಡಿ** ಒರಟಾದ ವೈಯಾರದ ಮಾತು

**ಬಿರುದಂಕ** ಮಾನದಗುರುತನ್ನು ಚಿಹ್ನೆಯಾಗಿ ಉಳ್ಳವ, ಬಿರುದಾಂಕಿತ

**ಬಿರುದು** ಗೌರವ ಸೂಚಕವಾಗಿ ಕೊಡುವ ಪ್ರಶಸ್ತಿ

Rarest Archiver

**ಬಿರುಸು** ಕಠಿಣ, ಗಟ್ಟಿ

**ಬಿಲ** ಶ್ರೀಹರಿಯ ನಾಭಿಪ್ರದೇಶ (ಭೂತತ್ವ); ಡೊಗರು, ಹೋರು

**ಬಿಲೇಶಯ** ಬಿಲದಲ್ಲಿ ವಾಸಿಸುವ ಪ್ರಾಣಿ, ಸರ್ಪ, ಹಾವು

**ಬಿಲ್ಲಾಗು** ನಮ್ರನಾಗು, ಬಾಗು, ನಮಸ್ಕರಿಸು

**ಬಿಲ್ಲು** ಧನುಸ್ಸು, ಚಾಪ

**ಬಿಲ್ಲುಬಿಳಿಯ** ಬೆಳ್ಗಬ್ಬು ಬಿಲ್ಲಾಗುಳ್ಳವ ಕಾಮ

**ಬಿಲ್ಲುಹಬ್ಬ** ಕೃಷ್ಣನನ್ನು ಮೋಸಗೊಳಿಸಬೇಕೆಂದು ಕಂಸ ಹೂಡಿದ ಧನುರ್ಯಾಗ

**ಬಿಲ್ಲೋಜ** ಬಿಲ್ವಿದ್ಯೆಯ ಗುರು, ಧನುರ್ವಿದ್ಯಾ ವಿಶಾರದ

**ಬಿಸ<ವಿಷ** ವಿಷ; ನೀರು; ಕಮಲದದೇಟು

**ಬಿಸಜ** ಕಮಲ, ತಾವರೆ

**ಬಿಸಜಜಭವಾಂಡ** ಬ್ರಹ್ಮಾಂಡ

**ಬಿಸಜಜಾಂಡ** ಬ್ರಹ್ಮಾಂಡ

**ಬಿಸಜನಾಭ** ಕಮಲನಾಭ–ವಿಷ್ಣು

**ಬಿಸಜನಾಭನದಿನ** ಪದ್ಮನಾಭನೆನಿಸಿದ ವಿಷ್ಣುವಿನ ದಿನ, ಏಕಾದಶಿ

**ಬಿಸಜಪದಪದವಿ** ಬ್ರಹ್ಮಪದವಿ

**ಬಿಸಜಭವ** ಬ್ರಹ್ಮ

**ಬಿಸಜಮಿತ್ರ** ಸೂರ್ಯ

**ಬಿಸಜಮಿತ್ರನಪುತ್ರ** ಕಮಲದ ಗೆಳೆಯನಾದ ಸೂರ್ಯನ ಮಗ ಯಮ, ಸುಗ್ರೀವ, ಕರ್ಣ, ಶನೈಶ್ಚರ

**ಬಿಸಜಸಂಭವ** ಬ್ರಹ್ಮ

**ಬಿಸಜಸಖ** ಸೂರ್ಯ

**ಬಿಸಜಾಕ್ಷ** ಕಮಲದಂತೆ ಕಣ್ಣುಳ್ಳವನು–ಶ್ರೀಹರಿ

**ಬಿಸಜಾಕ್ಷಿ** ಕಮಲದಂತೆ ಕಣ್ಣುಳ್ಳವಳು–ಲಕ್ಷ್ಮಿ

**ಬಿಸಜಾಪ್ತ** ಸೂರ್ಯ

**ಬಿಸಜಾಪ್ತಸುತ** ಕಮಲದ ಗೆಳೆಯನಾದ ಸೂರ್ಯನ ಮಗ ಯಮ, ಸುಗ್ರೀವ, ಕರ್ಣ, ಶನೈಶ್ಚರ

**ಬಿಸಜಾಪ್ತಸುತಾಗ್ರಜ** ವಾಲಿ

**ಬಿಸನಾಡು** ಬಿಸಾಡು, ಚೆಲ್ಲು, ಎಸೆ

**ಬಿಸನಿಧಿ** ಸಮುದ್ರ

**ಬಿಸರುಹ** ಕಮಲ

**ಬಿಸರುಹನಾಭ** ಪದ್ಮನಾಭ–ವಿಷ್ಣು

**ಬಿಸರುಹಾಕ್ಷ** ಕಮಲದಂತೆ ಕಣ್ಣುಳ್ಳವನು–ವಿಷ್ಣು

**ಬಿಸರುಹಾಪ್ತ** ಸೂರ್ಯ

**ಬಿಸಿಅರಿಸಿನ** ಅಶಾಶ್ವತ; ಅರಿಸಿನಕ್ಕೆ ಹೆಚ್ಚು ಬಿಸಿ ತಾಗಿದರೆ ಅದರ ಬಣ್ಣ ಹಾರುತ್ತದೆ

**ಬಿಸಿಗದಿರ್** ರಶ್ಮಿ, ಸೂರ್ಯನ ಕಿರಣ

**ಬಿಸಿಗದಿರ** ಸೂರ್ಯ

**ಬಿಸಿಲದೊರೆ** ಬಿಸಿಲ್ಗುದುರೆ, ಸೂರ್ಯ

**ಬಿಸಿಲಿನವಾರಿ, ಬಿಸಿಲುಕುದುರೆ** ಮರೀಚಿಕೆ, ಬಯಲು ಸೀಮೆಯಲ್ಲಿ ಬೇಸಿಗೆಯ ದಿನಗಳಲ್ಲಿ ಭೂಮಿಯೊಳಗಿಂದ ಮೇಲೇಳುವ ಹವೆಯಿಂದ ಉಂಟಾಗುವ ದೃಶ್ಯ

**ಬಿಸುರುಹನಯನ** ತಾವರೆಗಣ್ಣಿನವನು–ವಿಷ್ಣು

**ಬೀ** ನಷ್ಟವಾಗು, ನಾಶವಾಗು

**ಬೀಗಮುದ್ರೆಗಳಿಲ್ಲದೂರು** ದೇಹ

**ಬೀಜನಾಮ** ಓಂಕಾರ

**ಬೀಜಮಾತು** ಶಾಸ್ತ್ರದ ಮಾತುಗಳ ರಹಸ್ಯ (ಸಾರಾಂಶ), ಪ್ರಣವ

**ಬೀಜಾಕ್ಷರ** ಮಂತ್ರದ ಮೂಲ ಅಕ್ಷರ

**ಬೀಡು** ಮನೆ, ವಾಸಸ್ಥಳ, ವಸತಿ

**ಬೀದಿವರಿ** ಮುನ್ನುಗ್ಗು

**ಬೀಯ** ವ್ಯಯ, ನಷ್ಟ, ಖರ್ಚು

**ಬೀರ** ಒಬ್ಬ ದೇವತೆ, ವೀರಭದ್ರ, ಕುರುಬರ ದೇವತೆ; ವೀರ, ಕಲಿ, ಶೂರ

**ಬೀಸೂರಿಗೆ** ಒಂದು ಬಗೆಯ ಹೋಳಿಗೆ

**ಬೀಳು** ನಿಷ್ಪ್ರಯೋಜಕ, ಹಾಳು, ಬರಡು

**ಬೀಳುಗೊಡು** ಹಾಳು ಬಿಡುವುದು, ಕಾಲಕಳೆ

**ಬೀಳುಮಾಡು** ಹಾಳುಮಾಡು, ವ್ಯರ್ಥಗೊಳಿಸು

Rarest Archive

**ಬೀಳುವಳ್ಳಿ** ಹಾಳು ಹಳ್ಳಿ
**ಬುಕ್ಕಟ್ಟಿ** ಸ್ನಾನ(ಮಕ್ಕಳ ಭಾಷೆ)
**ಬುಕ್ಕಿಟ್ಟು** ಸುಗಂಧದ ಪುಡಿ
**ಬುಕ್ಕಿಟ್ಟುಲಾಡು** ಮುಸಲ್ಮಾನರ ಹಬ್ಬಗಳಲ್ಲಿ ಸುಗಂಧ ದ್ರವ್ಯಗಳನ್ನು/ಬಣ್ಣದ ಪುಡಿಗಳನ್ನು ಎರಚಾಡುವುದು
**ಬುಗುಡಿ** ಮುತ್ತಿನ ಓಲೆ, ಒಂದು ಬಗೆಯ ಕಿವಿಯ ಆಭರಣ
**ಬುಗ್ಗಿ, ಬುಗ್ಗೆ** ಕೆನ್ನೆ, ಕಪಾಳ; ಚಿಲುಮೆ
**ಬುಡ** ತಳ, ಕೆಳಭಾಗ
**ಬುಡುಗುಳಿ** ನೀರಲ್ಲಿ ಮುಳುಗಿ ಮೀನು ಹಿಡಿಯುವ ಒಂದು ಪಕ್ಷಿ
**ಬುದಬುದ<ಬುದ್ಬುದ** ಗುಳ್ಳೆ, ನೊರೆ
**ಬುದ್ದಲಿ** ಎಣ್ಣೆ ತುಂಬುವ ಚರ್ಮದ ಚೀಲ
**ಬುದ್ಧಿ** ತಿಳುವಳಿಕೆ, ಸ್ವಭಾವ; ಮನಸ್ಸಿನ ಪ್ರಬೇಧ
**ಬುದ್ಧಿಸೂರಾಡು** ಸಂಭ್ರಾಂತನಾಗು, ಕಂಗೆಡು
**ಬುಧ** ನವಗ್ರಹಗಳಲ್ಲೊಂದು; ಚಂದ್ರನಿಂದ ಬೃಹಸ್ಪತಿಯ ಪತ್ನಿಯಾದ ತಾರೆಯಲ್ಲಿ ಜನಿಸಿದವ; ವಿದ್ವಾಂಸ, ಜ್ಞಾನಿ
**ಬುಧಕಟಕಾಬ್ಜ** ಮಿತ್ರ ಪಂಡಿತ
**ಬುಧಜನ** ಪಂಡಿತರು, ಜ್ಞಾನಿಜನ, ವಿದ್ವಾಂಸರು
**ಬುಧನುತ** ಪಂಡಿತರಿಂದ ಹೊಗಳಿಸಿಕೊಳ್ಳುವವನು
**ಬುಧಸೌಮನಸಾಗ್ರಣಿ** ಜ್ಞಾನಿ; ದೇವತೆಗಳಿಗಿಂತ ಶ್ರೇಷ್ಠ
**ಬುಧಾಳಿ** ವಿದ್ವಜ್ಜನ ಸಮೂಹ, ಪಂಡಿತ ಮಂಡಲಿ
**ಬುಲಾಕು** ಮೂಗಿನ ಸಿಂಬೆಯಲ್ಲಿ ಧರಿಸುವ ಒಂದು ಬಗೆಯ ಆಭರಣ
**ಬುಲ್ಲಿ** ಬಾಲಕನ ಜನನೇಂದ್ರಿಯ
**ಬುವಿ** ಭೂಮಿ, ಪ್ರಪಂಚ
**ಬುವಿಜೆ** ಸೀತೆ
**ಬೂಚಿ** ಗುಮ್ಮ, ಬವ್ವ, ಆಕಳಕರು, ಹುಳು
**ಬೂಟಕ** ಡಂಭ, ಮೋಸ, ಕಪಟ
**ಬೂಟಕಿ** ಬೂಟಾಟಿಕೆ
**ಬೂಟಾಟ, ಬೂಟಿಕೆ** ಬೂಟಾಟಿಕೆ, ಆಡಂಬರ
**ಬೃಂದ** ವೃಂದ, ಸಮೂಹ
**ಬೃಂದಾರಕ** ದೇವತೆ, ಸ್ವರ್ಗ, ದೇವಲೋಕಕ್ಕೆ ಸೇರಿದ
**ಬೃಂದಾರಕೇಂದ್ರ** ದೇವೇಂದ್ರ
**ಬೃಹತಿ** ಮೂವತ್ತಾರು ಅಕ್ಷರದ ಒಂದು ಛಂದಸ್ಸಿನ ಹೆಸರು; ಎಲ್ಲಕ್ಕಿಂತ ಹಿರಿದಾದ–ಶ್ರೀಹರಿ
**ಬೃಹದ್ರಥ** ಜರಾಸಂಧನ ತಂದೆ, ಮಗಧ ದೇಶದ ಅರಸು; ಇಂದ್ರ
**ಬೃಹದ್ರಥಕುವರ** ಬೃಹದ್ರಥನ ಮಗನಾದ ಜರಾಸಂಧ; ಅರ್ಜುನ; ಇಂದ್ರನ ಮಗನಾದ ವಾಲಿ
**ಬೆಂಡಾಗು** ದಣಿ, ಆಯಾಸಗೊಳ್ಳು
**ಬೆಂಬೀಳು** ಹಿಂಬಾಲಿಸು
**ಬೆಚ್ಚಡೆ** ತಬ್ಬಿಬ್ಬು, ಅಚ್ಚರಿ, ಕಂಗೆಡು
**ಬೆಚ್ಚಳಿಸು, ಬೆಜ್ಜರ** ಕಕ್ಕಾಬಿಕ್ಕಿ, ತಬ್ಬಿಬ್ಬು
**ಬೆಚ್ಚು** ಹೆದರು, ಭಯಬೀಳು; ಪಶು ಪಕ್ಷಿಗಳನ್ನು ಬೆದರಿಸಲು ಕಟ್ಟಿರುವ ಸಾಧನ
**ಬೆಟ್ಟದಣುಗೆ** ಪಾರ್ವತಿ
**ಬೆಟ್ಟದರಿ** ಪರ್ವತಗಳ ವೈರಿ–ಇಂದ್ರ
**ಬೆಟ್ಟದಾತ್ಮಜೆ** ಪಾರ್ವತಿ
**ಬೆಟ್ಟದೊಡೆಯ** ಪರ್ವತರಾಜ, ವೇಂಕಟೇಶ
**ಬೆಟ್ಟಬೆರಳಲಿಪೊತ್ತ** ಗೋವರ್ಧನಗಿರಿಯನ್ನು ಬೆರಳಿನಿಂದ ಎತ್ತಿ ಹಿಡಿದ ಕೃಷ್ಣ
**ಬೆಡಗು** ಅತಿಶಯ; ವೈಯ್ಯಾರ, ಒನಪು
**ಬೆತ್ತ<ವೇತ್ರ** ದಾಸರ ಕೈಗೋಲು, ದಂಡ
**ಬೆತ್ತಹಿಡಿಸು** ದಾಸದೀಕ್ಷೆ ಕೊಡಿಸು
**ಬೆದಕು** ಕೆದಕು, ಹುಡುಕು, ಶೋಧಿಸು
**ಬೆನಕ** ಗಣಪತಿ
**ಬೆನ್ನಬರು** ಸಂಗಡ ಬರುವುದು, ಹಿಂಬಾಲಿಸು
**ಬೆನ್ನಲಿಬಂದವ** ಒಡಹುಟ್ಟಿದವ, ತಮ್ಮ
**ಬೆನ್ನೀಡು** ಆಶ್ರಯ ಕೊಟ್ಟು

Rarest Archiver

**ಬೆನ್ನುಕಲ್ಲಾಗು** ಕೂರ್ಮಾವತಾರ
**ಬೆನ್ನುಗೊಳು** ಬೆನ್ನು ಹತ್ತು, ಹಿಂಬಾಲಿಸು
**ಬೆನ್ನುಬೀಳು** ಮರೆಹೋಗು
**ಬೆಮೆ<ಭ್ರಮೆ** ಭ್ರಾಂತಿ, ಗೊಂದಲ
**ಬೆರಗಿನರೋಗ** ಭಯ ದಿಗಿಲಿನ ರೋಗ
**ಬೆರಗು** ಭ್ರಾಂತಿ, ಭ್ರಮೆ
**ಬೆರಸು** ಕೂಡಿಸು
**ಬೆರಳುಇಲ್ಲದಕ್ಕೆ** ಸೊಂಡಿಲನ್ನು ಕೈಯಾಗಿ ಬಳಸುವ ಆನೆ
**ಬೆರಳೆಣಿಸು** ಜಪ ಮಾಡು
**ಬೆರೆ** ಸೇರು, ಕೂಡು
**ಬೆಸಗೊಳ್** ಕೇಳು, ಪ್ರಶ್ನಿಸು
**ಬೆಸನ** ಕೆಲಸ, ಕರ್ತವ್ಯ; ಅಪ್ಪಣೆ; ವ್ಯಸನ, ಚಿಂತೆ
**ಬೆಸಸು** ಹೇಳು, ಆಜ್ಞಾಪಿಸು
**ಬೆಳಕು** ಜ್ಞಾನ; ದೈವ
**ಬೆಳದಿಂಗಳಪೊಂಗು** ಬೆಳದಿಂಗಳ ಉದಯ, ಬೆಳದಿಂಗಳಂತೆ ತಂಪಾಗಿ ಸುಂದರವಾಗಿ ಕಾಣು
**ಬೆಳವಲಹಣ್ಣು** ಬೇಲದ ಹಣ್ಣು
**ಬೆಳುತಿರೆ** ಪರಿಶುದ್ಧ ಭೂಮಿ
**ಬೆಳ್ನುಡಿ** ಸವಿನುಡಿ, ಜ್ಞಾನದ ನುಡಿ
**ಬೆಳ್ಳಕ್ಕಿ** ಕೊಕ್ಕರೆ, ಬೆಳ್ಳಗಿನ ಹಕ್ಕಿ
**ಬೆಳ್ಳಿಕಣ್ಣಿನವ** ಬೆಳ್ಳಿ ಬಂಗಾರ ಧನಗಳಲ್ಲಿ ಆಸಕ್ತಿಯುಳ್ಳವ
**ಬೆಳ್ಳಿಗದ್ದುಗಿಪುರ** ರಜತಪೀಠಪುರ–ಉಡುಪಿ
**ಬೆಳ್ಳುಡೆ** ಮಡಿ ಬಟ್ಟೆ, ಬಿಳಿಯ ವಸ್ತ್ರ
**ಬೇಕಾರ್ಹಣ** ಬೇಕಾದ ಪೂಜೆ
**ಬೇಗಡೆ** ಕಾಗೆ ಬಂಗಾರ, ಮಿಂಚುವ ಬಣ್ಣ ಬಣ್ಣದ ಕಾಗದ
**ಬೇಗೆಗಣ್ಣ** ಹಣೆಗಣ್ಣಿನಲ್ಲಿ ಬೆಂಕಿಯಿರುವವನು–ಶಿವ
**ಬೇಟ** ಪ್ರಣಯ; ಆಸೆ
**ಬೇಟೆ** ಕ್ರೂರ ಮೃಗಗಳನ್ನು ಕೊಲ್ಲುವುದು
**ಬೇಡ** ಒಂದು ಜಾತಿ, ಬೇಟೆಯಾಡುವವರು; ಹೇಡಿ
**ಬೇಡು** ಕೇಳು, ಯಾಚಿಸು, ಬಯಸು
**ಬೇತಾಳ** ಪಿಶಾಚಿ, ಭೂತ
**ಬೇನೆ** ರೋಗ, ನೋವು, ಯಾತನೆ
**ಬೇಯು** ಸುಡು, ದಹಿಸು; ಸಂಕಟಕ್ಕೊಳಗಾಗು
**ಬೇರ** ವ್ಯಾಪಾರ; ವಿಗ್ರಹ
**ಬೇಲಾಪುರ** ಬೇಲೂರು
**ಬೇವಿನುಡಿಗೆ** ಬೇವಿನ ಎಲೆ ಉಡುವುದು, ಇದು ಒಂದು ಹರಕೆಯ ರೀತಿ, ಇದಕ್ಕೆ ಹುಟ್ಟಿಗೆ ಯೆನ್ನುತ್ತಾರೆ
**ಬೇಸರಿಸಲೆದುರಿಲ್ಲ** ಬೇಸರಪಟ್ಟುಕೊಳ್ಳದೆ ವಿಧಿಯಿಲ್ಲ
**ಬೇಹಾರ** ವ್ಯವಹಾರ, ವ್ಯಾಪಾರ
**ಬೇಹಿನವ** ಗುಪ್ತಚಾರ
**ಬೇಹು** ಗುಪ್ತಚಾರಿಕೆ
**ಬೇಳು** ಮರುಳು, ದಡ್ಡತನ, ಕಕ್ಕಾಬಿಕ್ಕಿ; ಹವಿಪ್ರದಾನ, ಆಹುತಿಕೊಡು
**ಬೇಳುವೆ** ಮರುಳುಮಾಡುವ, ಬಣ್ಣದಮಾತು
**ಬೈಗು** ಸಂಜೆ, ಸಂಧ್ಯಾಕಾಲ, ಇಳಿಹೊತ್ತು
**ಬೈತಿಡು** ಬಚ್ಚಿಡು
**ಬೈಲಾಗು<ಬಯಲಾಗು** ಪ್ರಕಟವಾಗು; ಕಣ್ಣಿಗೆ ಕಾಣದಂತಾಗು
**ಬೊಂದಿ** ದೇಹ, ಶರೀರ
**ಬೊಂಬಾಳದೀವಿಗೆ** ಪ್ರಕಾಶಮಾನವಾದ ದೀಪ, ದೊಡ್ಡ ಪಂಜು
**ಬೊಕ್ಕಣ** ಜೇಬು, ಕಿಸೆ; ಕುದುರೆ ಬಾಯಿಗೆ ಕಟ್ಟುವ ಮೇವಿನ ಚೀಲ
**ಬೊಗರಿ** ಬುಗರಿ
**ಬೊಗಸೆಕಣ್ಣು** ಬೊಗಸೆಯಷ್ಟು ವಿಶಾಲವಾದ ಕಣ್ಣು
**ಬೊಜ್ಜು, ಬೊಜ್ಜೆ** ಹೊಟ್ಟೆ, ದಪ್ಪನೆಯ ದೇಹ
**ಬೊಟ್ಟು** ತಿಲಕ; ತೊಟ್ಟು, ಹನಿ

Rarest Archive

**ಬೊಪ್ಪ** ತಂದೆ, ತಾತ; ಒಡೆಯ, ಸ್ವಾಮಿ
**ಬೊಬ್ಬಿಡು, ಬೊಬ್ಬಿರಿ** ಚೀರಾಡು, ಕೂಗಾಡು, ಆರ್ಭಟಿಸು
**ಬೊಬ್ಬುಳಿ** ನೀರುಗುಳ್ಳೆ
**ಬೊಬ್ಬೂರು** ಒಂದು ಊರಿನ ಹೆಸರು
**ಬೊಬ್ಬೆ** ಸುಟ್ಟ ಗಾಯ, ಗುಳ್ಳೆ
**ಬೊಬ್ಬೆರೋಗ** ಪ್ಲೇಗು ಮಾರಿ ರೋಗ, ಅರ್ಬುದ ರೋಗ, ಮೈಯಲ್ಲಿ ಬೊಬ್ಬೆ ಬಿದ್ದು ನೀರು ತುಂಬುವ ರೋಗ
**ಬೊಮ್ಮ** ಬ್ರಹ್ಮ; ಶ್ರೀಹರಿ
**ಬೊಮ್ಮಜಟ್ಟಿಗ, ಬೊಮ್ಮಜೆಟ್ಟಿ** ಬ್ರಹ್ಮರಾಕ್ಷಸ
**ಬೊಮ್ಮಮೂರುತಿ** ಬ್ರಹ್ಮನಾಯಕ ಶ್ರೀಹರಿ, ಬ್ರಹ್ಮನಲ್ಲಿರುವ ಹರಿರೂಪ
**ಬೊಮ್ಮಾಂಡ** ಬ್ರಹ್ಮಾಂಡ, ಜಗತ್ತು
**ಬೊಮ್ಮಾಂಡಕಟಹ** ಕಡಾಯಿಯಂತೆ ಆಕಾರವುಳ್ಳ; ಬ್ರಹ್ಮಾಂಡ
**ಬೊಮ್ಮ್ಹತಿದೋಷ, ಬೊಮ್ಹ್ಯತಿದೆ** ಬ್ರಹ್ಮಹತ್ಯಾ ದೋಷ, ಬ್ರಹ್ಮೇತಿದೋಷ
**ಬೋದಿಗೆ** ಕಂಬದ ಮೇಲೆ ತೊಲೆಯನ್ನು ನಿಲ್ಲಿಸಲು ಮಾಡಿದ ಸಾಧನ
**ಬೋಧ** ಜ್ಞಾನ
**ಬೋಧವಿಗ್ರಹ** ಜ್ಞಾನಸ್ವರೂಪ
**ಬೋನಗಾರ್ತಿ** ಅಡಿಗೆ ಮಾಡುವ ಹೆಂಗಸು
**ಬೋರಿಗೆ** ಪರಕೆ
**ಬೋವ** ಬಂಡಿ ಹೊಡೆಯುವವ, ಸಾರಥಿ
**ಬೋವಿಗ** ಸೇವಕ
**ಬೋವಿಧ** ಬಹುವಿಧ
**ಬೋಳಿ** ತಲೆಗೂದಲನ್ನು ತೆಗೆಸಿಕೊಂಡವಳು; ವಿಧವೆ
**ಬೋಳೆ** ವ್ಯರ್ಥ; ಏನೂತಿಳಿಯದ
**ಬೋಳೈಸು** ಸಂತೈಸು, ಸಮಾಧಾನ ಮಾಡು
**ಬ್ಯಾಗ** ಬೇಗ
**ಬ್ಯಾಸರ** ಬೇಸರ
**ಬ್ರಹ್ಮಕಪಾಲ** ಬ್ರಹ್ಮನ ತಲೆ ಬುರುಡೆ
**ಬ್ರಹ್ಮಕಲ್ಪ** ಬ್ರಹ್ಮನ ಒಂದು ದಿನ
**ಬ್ರಹ್ಮಘ್ನ** ಬ್ರಾಹ್ಮಣ ಹತ್ಯೆ ಮಾಡಿದವನು
**ಬ್ರಹ್ಮಜಟ್ಟಿಗ** ಕ್ಷುದ್ರ ದೇವತೆ, ಬ್ರಹ್ಮರಾಕ್ಷಸ
**ಬ್ರಹ್ಮಜ್ಞಾನ** ದೈವಜ್ಞಾನ
**ಬ್ರಹ್ಮಪುತ್ರ** ಭೃಗುಋಷಿ, ನಾರದ
**ಬ್ರಹ್ಮಪುರ** ಬ್ರಾಹ್ಮಣರು ವಾಸಿಸುವ ಕೇರಿ, ಅಗ್ರಹಾರ; ಸತ್ಯಲೋಕ
**ಬ್ರಹ್ಮಪ್ರಳಯ** ಪ್ರಪಂಚನಾಶ, ಬ್ರಹ್ಮನ ಒಂದು ನೂರು ವರ್ಷದ ಕೊನೆಗೆ ಆಗುವ ಪ್ರಳಯ (ಬ್ರಹ್ಮನ ಒಂದು ದಿವಸ ಆಥವಾ ಕಲ್ಪವೆಂದರೆ ನಲವತ್ತಮೂರು ಕೋಟಿ, ಇಪ್ಪತ್ತು ಲಕ್ಷ ವರ್ಷ), ಮಹಾಪ್ರಳಯ
**ಬ್ರಹ್ಮಭೋಗ** ಬ್ರಹ್ಮಾನುಭವ
**ಬ್ರಹ್ಮರಂಧ್ರ** ನೆತ್ತಿಯಲ್ಲಿರುವ ರಂಧ್ರ, ಷಟ್‌ಚಕ್ರಭೇದನ
**ಬ್ರಹ್ಮರಸ** ಬ್ರಹ್ಮಾನಂದ ಎಂಬ ಅರ್ಥದಲ್ಲಿ ಬಳಸಲಾಗಿದೆ, ಪರಬೊಮ್ಮ
**ಬ್ರಹ್ಮಲಗ್ನ** ಶುಭವಿವಾಹ
**ಬ್ರಹ್ಮವಾದ** ಪರತತ್ತ್ವವಾದ
**ಬ್ರಹ್ಮಸುತ** ನಾರದ
**ಬ್ರಹ್ಮಸೂತ್ರ** ಯಜ್ಞೋಪವೀತ, ಜನಿವಾರ; ವೇದಾಂತಸೂತ್ರ
**ಬ್ರಹ್ಮಹತ್ಯೆ** ಬ್ರಾಹ್ಮಣನ ಕೊಲೆ
**ಬ್ರಹ್ಮಾಂಡ** ವಿಶ್ವ, ಸಮಷ್ಟಿ
**ಬ್ರಹ್ಮಾಂಡಕೋಟಿ** ಅಸಂಖ್ಯ
**ಬ್ರಹ್ಮಾಂಡನಾಯಕ** ವಿಶ್ವನೇತಾರ–ಶ್ರೀಹರಿ
**ಬ್ರಹ್ಮಾಣಿ** ಸರಸ್ವತಿ
**ಬ್ರಹ್ಮಾಣಿಸರ** ಸರಸ್ವತಿಕಲ್ಯಾಣಿ, ತಿರುಪತಿಯ ಸ್ವಾಮಿ ಪುಷ್ಕರಣೀ ಸರೋವರ
**ಬ್ರಹ್ಮಾಣಿಸರತಟನಿಲಯ** ಸ್ವಾಮಿ ಪುಷ್ಕರಣೀ ತೀರದಲ್ಲಿ ವಾಸವಾದವನು–ವೇಂಕಟೇಶ

Rarest Archive

**ಬ್ರಹ್ಮಾದ್ವಿರೂಪ** ತಾರಕನಾಥ, ಬ್ರಹ್ಮನ ಪ್ರತಿರೂಪ
**ಬ್ರಹ್ಮಾನಂದ** ಆನಂದದ ಪರಾಕಾಷ್ಠೆ, ಅಲೌಕಿಕ ಆನಂದ
**ಬ್ರಹ್ಮಾವರ್ತ** ಪಂಜಾಬದಿಂದ ಪ್ರಯಾಗದವರೆಗಿನ ಪ್ರದೇಶ, ಗಂಗಾ ಯಮುನಾನದಿಗಳ ನಡುವಣ ಪ್ರದೇಶ
**ಬ್ರಹ್ಮೇತಿ** ಬ್ರಹ್ಮಹತ್ಯೆ; ಬ್ರಹ್ಮ ಕಪಾಲ, ಶಿವನಕೈಗಂಟಿ ಕಾಡಿದ್ದು
**ಬ್ರಾಹ್ಮಣ** ವಿಪ್ರ, ಹಾರುವ; ವೇದಮಂತ್ರಗಳ ವ್ಯಾಖ್ಯಾನ
**ಬ್ರೂ** ತಿಳಿಸು

## ಭ

**ಭ** ಪ್ರಕಾಶ, ಬೆಳಕು, ನಕ್ಷತ್ರ
**ಭಂಗ** ಮೋಸ, ವಂಚನೆ, ಮುರಿಯುವಿಕೆ; ಸೋಲು, ಕಷ್ಟ, ಅವಮಾನ; ನಾಶ
**ಭಂಗಬಡಿಸು** ಕಷ್ಟಕೊಡು, ಹಿಂಸಿಸು
**ಭಂಗಬೀಳು** ಅಪಮಾನಕ್ಕೊಳಗಾಗು
**ಭಂಗಿ** ನಾಟ್ಯಶಾಸ್ತ್ರದ ನಿಲುವು, ನಿಂತರೀತಿ; ಗಾಂಜ
**ಭಂಗಿಮುಕ್ಕ** ಗಾಂಜಾ ಸೇವಿಸುವವನು
**ಭಂಗಿಸು** ಅಪಮಾನ ಮಾಡು, ನಾಶಮಾಡು, ಸೋಲಿಸು
**ಭಂಗುರ** ಸುಲಭವಾಗಿ ಮುರಿಯಬಹುದಾದ, ಬೇಗನೆ ನಾಶ ಹೊಂದುವ
**ಭಂಜಕ** ಮುರಿಯುವವನು, ನಾಶಮಾಡುವವನು
**ಭಂಜನ** ನಾಶಕಾರಿ, ಒಡೆಯುವುದು, ಮುರಿಯುವುದು; ಬೆಂಕಿಯಿಂದ ನಾಶವಾಗುವುದು, ದಹನ
**ಭಂಜಿಸು** ನಿವಾರಿಸು; ಸೋಲಿಸು, ಅವಮಾನ ಮಾಡು, ಕಡೆಗಣಿಸು, ಸಂಹರಿಸು
**ಭಂಟ** ಸೇವಕ; ವೀರ, ಶೂರ
**ಭಂಡ** ನಾಚಿಕೆ ಇಲ್ಲದವನು; ವಿದೂಷಕ, ಹಾಸ್ಯನಟ
**ಭಂಡಧಾವತಿ** ಅವಿವೇಕದ ಆತುರ, ವ್ಯಥಾಶ್ರಮ
**ಭಂಡನಾಗು** ಹಣ್ಣಾಗು, ಸೋತುಹೋಗು; ನಾಚಿಕೆ ಬಿಟ್ಟವನಾಗು
**ಭಂಡಾರ** ಬೊಕ್ಕಸ, ಖಜಾನೆ
**ಭಂಡಿ** ಗಾಡಿ, ಚಕ್ಕಡಿ, ರಥ
**ಭಂಡು** ಪುಂಡು, ತುಂಟತನ; ಅವಮಾನ, ನಾಚಿಕೆಗೇಡು
**ಭಂಡೆ** ಮಾನಗೇಡಿ ಹೆಂಗಸು
**ಭಕುತವಿಪೋಷಕ** ಭಕ್ತರನ್ನು ವಿಶೇಷವಾಗಿ ಕಾಪಾಡುವವನು
**ಭಕುತಿ<ಭಕ್ತಿ** ಭಗವಂತನಲ್ಲಿ ಪ್ರೀತಿ, ಅನುರಾಗ
**ಭಕ್ತಪಕ್ಷಕ** ಭಕ್ತರ ಗುಂಪಿಗೆ ಸೇರಿದವನು, ಶ್ರೀಹರಿ
**ಭಕ್ತರಬಿರುದು** ಭಕ್ತರ ಹೆಮ್ಮೆಯ ಸೊತ್ತು, ಗೌರವ
**ಭಕ್ತವಜ್ರಪಂಜರ** ಭಕ್ತಸಂರಕ್ಷಕ–ಶ್ರೀಹರಿ
**ಭಕ್ತವತ್ಸಲ** ವಿಷ್ಣು
**ಭಕ್ತಾವಳಿ** ಭಕ್ತರ ಸಮೂಹ
**ಭಕ್ತಿಛಲ** ದೃಢಭಕ್ತಿಯ ಹಟ
**ಭಕ್ತಿನವಕ** ನವವಿಧ ಭಕ್ತಿ
**ಭಗದತ್ತ** ನರಕಾಸುರನ ಮಗ
**ಭಗ್ನದಂತ** ಮುರಿದ ಹಲ್ಲುಳ್ಳವನು–ಗಣಪತಿ
**ಭಜಕ** ಭಕ್ತ
**ಭಜಿಸು, ಭಜ್ಜಿಸು** ಭಾಗಮಾಡು; ಕೊಂಡಾಡು, ಸ್ತುತಿಸು
**ಭಟ** ಸೇವಕ; ಶೂರ, ವೀರ
**ಭಟಕೋಶ** ಸೈನ್ಯವೇ ಭಂಡಾರವಾಗಿರುವುದು, ಸೈನ್ಯ ಮತ್ತು ಭಂಡಾರವನ್ನುಳ್ಳವನು
**ಭಣಿತೆ** ಮಾತು, ಹೇಳಿಕೆ; ವಕ್ರೋಕ್ತಿ

Rarest Archive

**ಭದ್ರ** ಸುಖ, ಶ್ರೇಯಸ್ಸು, ಮಂಗಳಕರವಾದ, ಶುಭಕರವಾದ

**ಭದ್ರಗಜನಿಧಿ** ಪಟ್ಟದಾನೆಯನ್ನು ಸಂಪತ್ತಾಗಿ ಉಳ್ಳವನು

**ಭದ್ರಗತಿ** ಶುಭಗತಿ, ಮೋಕ್ಷ

**ಭದ್ರೆ** ಮಂಗಳಸ್ವರೂಪಿಣಿ

**ಭಯಕೃದ್ಭಯವಿನಾಶನ** ಭಯ ಹುಟ್ಟಿಸುವವನು ಮತ್ತು ಭಯಕಳೆಯುವವನು–ವಿಷ್ಣು

**ಭಯುದ್ರವಿಣ** ಭಯುಕಾರಕ ವಿತ್ತ, ಅಂಜಿಕೆ ಯುಂಟುಮಾಡುವ ಹಣ

**ಭಯಾಂಧತಿಮಿರಮಾರ್ತಾಂಡ** ಭಯವೆಂಬ ಗಾಢಾಂಧಕಾರಕ್ಕೆ ಸೂರ್ಯನಂತಿರುವವನು (ಭಯಪರಿಹಾರಕ)–ಶ್ರೀಹರಿ

**ಭರ** ಭಾರ, ಹೊರೆ; ಹೆಚ್ಚಳ, ವೇಗ

**ಭರಟ** ಕುಂಬಾರ

**ಭರಡ, ಭರಡಿ (?)** ನುಚ್ಚು, ತರಿ (?)

**ಭರಣ** ಕಾಪಾಡುವುದು, ಪೋಷಿಸುವುದು

**ಭರಣಿ** ಒಂದು ನಕ್ಷತ್ರದ ಹೆಸರು; ಡಬ್ಬಿ, ಕರಂಡಕ

**ಭರಣೀಯುರಸ** ಭರಣಿ ನಕ್ಷತ್ರದಲ್ಲಿ ಮಳೆ ತರುವವನು–ವರುಣ

**ಭರತ** ವಾಯು; ರಾಮನ ತಮ್ಮ

**ಭರಮಪ್ಪ** ಬ್ರಹ್ಮ

**ಭರಿತ** ತುಂಬಿದ

**ಭರಿತಭಾವುಕ** ಆನಂದಭರಿತನಾದವನು

**ಭರ್ಗ** ಕಾಂತಿ, ಪ್ರಕಾಶ; ಶಿವ; ಅಂತರ್ಯಾಮಿ, ಭರಣಗಮನಕರ್ತ–ಶ್ರೀಹರಿ

**ಭರ್ಜಿಸು** ಭರ್ಜಿಯಿಂದ ತಿವಿ, ನಾಶಮಾಡು

**ಭರ್ತೃ** ಗಂಡ, ಯಜಮಾನ

**ಭರ್ಮ** ಬಂಗಾರ; ಬೆಂಬಲ, ಆಧಾರ

**ಭರ್ಮಗರ್ಭ** ಹಿರಣ್ಯಗರ್ಭ; ಬ್ರಹ್ಮ

**ಭರ್ಮಗರ್ಭಜ** ಶಿವ

**ಭಲ್ಲೂಕ** ಕರಡಿ

**ಭವ** ಹುಟ್ಟು ಸಾವಿನ ಸಂಸಾರ, ಸಂಸಾರ ಬಂಧನ, ಸಂಸಾರ ಚಕ್ರ, ಸಂಸಾರ, ಜನ್ಮ; ಶಿವ; ಹುಣ್ಣು

**ಭವಕೂಪಾರ** ಜನ್ಮವೆಂಬ ಸಮುದ್ರ, ಸಂಸಾರ ಸಮುದ್ರ

**ಭವಗಿರಿ** ಸಂಸಾರ ಪರ್ವತ; ಕೈಲಾಸ ಪರ್ವತ, ರಜತಪರ್ವತ

**ಭವಘ್ನೆ** ಭವನಾಶಿನಿ, ಲಕ್ಷ್ಮಿ

**ಭವಜ** ಗಣಪತಿ

**ಭವತಳಿ** ಜನ್ಮಾಂತರ ಸಂಬಂಧ

**ಭವತಾರಕ** ಸಂಸಾರಬಂಧನದಿಂದ ಪಾರು ಮಾಡುವವನು

**ಭವತಿ** ನೀನು ಎಂಬ ಅರ್ಥದಲ್ಲಿ ಗೌರವದ ಪದ

**ಭವತೂಲಕಾಲಾನಲ** ಸಂಸಾರವೆಂಬ ಹತ್ತಿಗೆ ಬೆಂಕಿ, ಅಗ್ನಿ

**ಭವದತಳ್ಳಿ** ಭವದ ಕಷ್ಟ, ಹುಟ್ಟು ಸಾವುಗಳ ಚಕ್ರ

**ಭವದುಷ್ಕಾ(ಲ)ಳ** ಜನ್ಮದ ಕೆಟ್ಟ ಕತ್ತಲೆ

**ಭವದೂರ** ಸಂಸಾರದಿಂದ ಹೊರತಾದವನು, ಹುಟ್ಟು ಸಾವುಗಳಿಲ್ಲ ದವನು

**ಭವನಟ್ಟು** ಸಂಸಾರವೆಂಬ ಕೆಸರು

**ಭವನಾವೆ** ಸಂಸಾರ ನೌಕೆ

**ಭವನಿದ್ರೆ** ಜನ್ಮವೆಂಬ ನಿದ್ದೆ, ಸಂಸಾರ ಜನ್ಯ ನಿದ್ರಾವಸ್ಥೆ

**ಭವಪಾಶಬದ್ಧ** ಸಂಸಾರ ಎಂಬ ಹಗ್ಗದಿಂದ ಕಟ್ಟಲ್ಪಟ್ಟಂತಹುದು

**ಭವಬಂಧ** ಜನ್ಮ ದುಃಖ; ಜನನ ಮರಣ ಚಕ್ರದಲ್ಲಿ ಬದ್ಧನಾದವ

**ಭವಬಂಧನ** ಸಂಸಾರ ಬಂಧನ

**ಭವಬೀಜ** ಹುಟ್ಟು ಸಾವಿನ ಬೀಜ

**ಭವಭಂಗ** ಜನ್ಮನಾಶ, ಜನ್ಮವನ್ನು/ಸಂಸಾರ ಬಂಧನವನ್ನು ನಿವಾರಿಸುವವ

**ಭವಭಂಜನ** ಸಂಸಾರದ ದುಃಖವನ್ನು ನಾಶ ಮಾಡುವವನು, ಜನ್ಮಗಳನ್ನು ಕಳೆಯುವವನು–ಶ್ರೀಹರಿ

Rarest Archiver

**ಭವಭಯ** ಸಂಸಾರ ಭಯ

**ಭವಭ್ರಮ** ಜನ್ಮಭ್ರಾಂತಿ

**ಭವಮೂಲ** ಜನ್ಮಾಂತರ, ಹುಟ್ಟಿನ ಮೂಲ

**ಭವರೋಗ** ಸಾಂಸಾರಿಕ ದುಃಖ (ಶರಣಾಗತಿಗೆ ಅಡ್ಡಿಯಾಗುವ ಲೌಕಿಕ ಸುಖಾಸಕ್ತಿಯೆಂಬ ರೋಗ)

**ಭವರೋಗವೈದ್ಯ** ವಿಷ್ಣು

**ಭವವಾರ್ಧಿ** ಸಂಸಾರ ಸಾಗರ

**ಭವವಿನಾಶ** ಸಂಸಾರದ ದುಃಖವನ್ನು ನಾಶ ಮಾಡುವವನು–ಶ್ರೀಹರಿ

**ಭವಶೋಷ** ಸಂಸಾರ ಸಮುದ್ರವನ್ನು ಒಣಗುವಂತೆ ಮಾಡುವವನು–ಶ್ರೀಹರಿ

**ಭವಹರ** ಹುಟ್ಟುಸಾವಿನಿಂದ ಪಾರು ಮಾಡುವವನು–ಶ್ರೀಹರಿ

**ಭವಹಾರಿ** ಸಂಸಾರ ದು:ಖವನ್ನು ನಿವಾರಿಸುವವನು–ಶ್ರೀಹರಿ

**ಭವಹಿಂಗು** ಸಂಸಾರದ ಕಷ್ಟ ತೊಲಗು, ಸಂಸಾರವೆಂಬ ಭಾರ ಇಳಿ

**ಭವಾಂಬುಧಿ** ಭವಾಬ್ಧಿಬದುಕೆಂಬ ಸಾಗರ

**ಭವಾಟವಿ** ಸಂಸಾರವೆಂಬ ಅರಣ್ಯ

**ಭವಾದಿಕ** ಬ್ರಹ್ಮ ಮೊದಲಾದ

**ಭವಾನೀ** ಪಾರ್ವತಿ, ದುರ್ಗೆ

**ಭವಾಬ್ಧಿ** ಜನ್ಮ ಜನ್ಮಾಂತರಗಳೆಂಬ ಸಮುದ್ರ, ಸಂಸಾರಸಾಗರ

**ಭವಾರ್ಣವ** ಜನ್ಮಸಮುದ್ರ, ಸಂಸಾರಸಾಗರ, ಭವ ಎಂಬ ಅಟವಿ

**ಭವಿ** ಜೀವದಿಂದ ಇರುವವನು, ಸಂಸಾರ ಬಂಧನಕ್ಕೆ ಒಳಗಾಗದವನು; ವೀರಶೈವದೀಕ್ಷೆ ಪಡೆಯದವನು

**ಭವಿಷ್ಯದಬ್ರಹ್ಮ** ಬ್ರಹ್ಮ ಪಟ್ಟಕ್ಕೆ ಬರುವ ವಾಯು ದೇವರು

**ಭಸಿತ** ಭಸ್ಮ, ವಿಭೂತಿ

**ಭಳಿರೆಭಳಿರೆ** ಭಲಾಭಲಾ, ಪ್ರಶಂಸೆ ಮಾತು

**ಭಾ** ಪ್ರಕಾಶಿಸು

**ಭಾಂ(ಡಿ)ಡೆ** ಪಾತ್ರೆ, ಸಾಮಾನು

**ಭಾಂಡ** ಬಾಣಲಿ, ಮಡಕೆ, ಅಗಲಬಾಯಿಯ ಪಾತ್ರೆ, ಗಡಿಗೆ; ದೇಹ; ಒಡವೆ, ಆಭರಣ

**ಭಾಂಡಕಾರ** ಕುಂಬಾರ

**ಭಾಂಡಜ** ಮಡಕೆಯಿಂದ ಹುಟ್ಟಿದವನು, ಕಲಶೋದ್ಭವ–ದ್ರೋಣ, ಅಗಸ್ತ್ಯ

**ಭಾಂಡಭರಿತ** ಬ್ರಹ್ಮಾಂಡಭರಿತ

**ಭಾಗಘ್ನ** ಪಾಪನಾಶಕ; ನತದೃಷ್ಟ

**ಭಾಗದೇವ** ಭಾಗದದೈವ, ಕುಲಸ್ವಾಮಿ

**ಭಾಗಧೇಯ** ಪಾಲು, ಭಾಗ, ವಿಭಾಗ; ಅದೃಷ್ಟ, ಪಾರು

**ಭಾಗವತ** ಹರಿದಾಸ, ವಿಷ್ಣುಭಕ್ತ, ಹರಿಭಕ್ತ; ಹದಿನೆಂಟು ಪುರಾಣಗಳಲ್ಲೊಂದು

**ಭಾಗವತಪುರ** ಗೋಕುಲ

**ಭಾಗಿ** ಪಾಲುದಾರ, ಹಕ್ಕುದಾರ

**ಭಾಗೀರಥಿ** ಗಂಗೆ

**ಭಾಗೀರಥಿಪಿತ** ಶ್ರೀಹರಿ (ಶ್ರೀಹರಿಯ ಉಂಗುಷ್ಟದಿಂದ ಹುಟ್ಟಿದವಳು ಭಾಗೀರಥಿ)

**ಭಾಗ್ಯದಾಸಕ್ಕರೆ** ಕಲ್ಲುಸಕ್ಕರೆ; ಶ್ರೀಮಂತಿಕೆ

**ಭಾಗ್ಯಪಲ್ಲಿ** ಭಾಗ್ಯನಗರ, ಹೈದರಾಬಾದು, ಬಾಗೇಪಲ್ಲಿ

**ಭಾಜನ** ಪಾತ್ರೆ, ಭಾಂಡ; ಯೋಗ್ಯ, ಅರ್ಹ; ವಿಭಾಗಿಸುವುದು

**ಭಾತಿ** ಕಾಂತಿ, ಪ್ರಕಾಶ, ಬೆಳಕು

**ಭಾನಿತ** ಪ್ರಕಾಶಿತ

**ಭಾನು** ಸೂರ್ಯ

**ಭಾನುಕುಲಜ** ಸೂರ್ಯವಂಶದಲ್ಲಿ ಹುಟ್ಟಿದವನು–ರಾಮ

**ಭಾನುಕೋಟಿತೇಜ** ಕೋಟಿ ಸೂರ್ಯರಿಗೆ ಸಮನಾದ ಕಾಂತಿಯುಳ್ಳವನು–ಶ್ರೀಹರಿ

Rarest Archiver

**ಭಾನುಜ** ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಭಾನುಜನಪ್ರಜೆಗಳು** ಸೂರ್ಯಪುತ್ರನಾದ ಯಮನ ದೂತರು
**ಭಾನುಜಸೂತ** ಕರ್ಣನ ಸಾರಥಿ–ಶಲ್ಯ
**ಭಾನುನಂದನ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಭಾನುಪ್ರಕಾಶ** ಸೂರ್ಯನಂತೆ ಕಾಂತಿಯುಳ್ಳವನು –ಶ್ರೀಹರಿ
**ಭಾನುಭಾ** ಸೂರ್ಯನಂತೆ ಹೊಳೆಯುವವನು
**ಭಾನುಮಂಡಲ** ಸೂರ್ಯಮಂಡಲ
**ಭಾನುಮತಿ** ಪ್ರಕಾಶಮಾನವಾದ ಜ್ಞಾನವುಳ್ಳವಳು– ಲಕ್ಷ್ಮಿ
**ಭಾನುಮಸ್ತಕ** ಆಕಾಶ
**ಭಾಪು, ಭಾಪುರೆ** ಶಹಬಾಶ್, ಮೆಚ್ಚಿಗೆ ಸೂಚಿಸುವ ಶಬ್ದ
**ಭಾಪುರಿ** ತೋಳಿಗೆ ಧರಿಸುವ ಆಭರಣ, ಬಾಹುಪೂರ
**ಭಾಮೆ** ಸತ್ಯಭಾಮೆ, ಲಕ್ಷ್ಮಿ; ಹೆಂಗಸು, ಹೆಂಡತಿ, ಕೆರಳಿದ ಹೆಣ್ಣು
**ಭಾರ** ದುಃಖ, ಜವಾಬ್ದಾರಿ; ಲಕ್ಷ್ಮಿ
**ಭಾರಕರ್ತ** ಹೊಣೆಗಾರಿಕೆ ಉಳ್ಳವನು, ಸೃಷ್ಟಿಸ್ಥಿತಿಲಯಗಳ ಭಾರ ನಿರ್ವಹಿಸುವವನು, ಲಕ್ಷ್ಮಿಯ ಒಡೆಯನಾದ ಶ್ರೀಹರಿ
**ಭಾರಣೆ** ಮಹಿಮೆ, ಗೌರವ
**ಭಾರತಿ** ವಾಯುದೇವರ ಪತ್ನಿ
**ಭಾರತೀಪತಿ, ಭಾರತೀಶ** ವಾಯುದೇವರು
**ಭಾರವಾಹತ್ವ** ಭಾರಹೊರುವುದು
**ಭಾರಿ** ಗೌರವವುಳ್ಳ, ಶ್ರೇಷ್ಠವಾದ, ವಿಶೇಷವಾದ, ದೊಡ್ಡ
**ಭಾರ್ಗವ** ಪರಶುರಾಮ; ಶುಕ್ರಗ್ರಹ
**ಭಾರ್ಗವವಾಸರ** ಶುಕ್ರವಾರ
**ಭಾರ್ಗವಿ** ಲಕ್ಷ್ಮಿ, ಪಾರ್ವತಿ
**ಭಾರ್ಯೆ** ಹೆಂಡತಿ
**ಭಾಲ** ಹಣೆ
**ಭಾವ** ಭಕ್ತಿಯ ರಹಸ್ಯ, ಅಭಿಪ್ರಾಯ, ಅಂತರ್ಗತ ಅರ್ಥ; ಮನಸ್ಸು, ಜ್ಞಾನ, ಜೀವ
**ಭಾವಕಿ** ಸದಭಿರುಚಿಯುಳ್ಳ ಸ್ತ್ರೀ, ಸುಂದರಿ
**ಭಾವಜ** ಮನ್ಮಥ, ಕಾಮ, ಮದನ
**ಭಾವಜನಯ್ಯ, ಭಾವಜಪಿತ** ಕಾಮನ ತಂದೆ– ವಿಷ್ಣು
**ಭಾವಜಾದಿಷಡ್ವರ್ಗ** ಅರಿಷಡ್ವರ್ಗಗಳು
**ಭಾವಜಾರಿ** ಶಿವ
**ಭಾವಜ್ಞ** ಜ್ಞಾನಿ
**ಭಾವಧಾರಕ** ಸೃಷ್ಟಿಸ್ಥಿತಿಲಯಗಳನ್ನು ನಿರ್ವಹಿಸುವ ಕಾರ್ಯ ಹೊತ್ತವನು–ಶ್ರೀಹರಿ
**ಭಾವನ** ಶ್ರೀಗಂಧ, ಚಂದನವೃಕ್ಷ; ಮನಸ್ಸಿನ ಭಾವನೆ
**ಭಾವನಾಮ** ಜಗತ್ತಿನ ಸೃಷ್ಟಿ ಹಾಗೂ ಸಂಹಾರ ಗಳನ್ನು ನಡೆಸುವವನು–ಶ್ರೀಹರಿ
**ಭಾವಭೋಕ್ತ** ಭಕ್ತಿ ಭಾವದಿಂದ ತೃಪ್ತಿಗೊಂಡ ವನು–ಶ್ರೀಹರಿ
**ಭಾವರಚನೆ** ಭಾವದ ಪ್ರಕಟಣೆ
**ಭಾವಸೂತ್ರ** ಜೀವನಸೂತ್ರ, ಭಕ್ತಿಸೂತ್ರ
**ಭಾವಾಧೀಶ** ಸರ್ವಾಂತರ್ಯಾಮಿ, ಜೀವರಿಗೆ ಸ್ವಾಮಿ, ಸಕಲಾಧೀಶ–ವಿಷ್ಣು
**ಭಾವಿ** ಭವಿಷ್ಯದಲ್ಲಿ ಆಗಲಿರುವ
**ಭಾವಿಬ್ರಹ್ಮ** ಮುಖ್ಯಪ್ರಾಣ ದೇವರು
**ಭಾವುಕಾಗ್ರಣಿ** ಸದಭಿರುಚಿಯುಳ್ಳವನು
**ಭಾವೆ<ಭಾಮೆ** ಹೆಂಗಸು, ಹೆಂಡತಿ
**ಭಾವ್ಯ** ಭಾವಿಸಬಹುದಾದ್ದು; ಹಿತಚಿಂತಕ
**ಭಾಷಾತ್ರಯ** ದರ್ಶನ, ಸಮಾಧಿ ಮತ್ತು ಗುಹ್ಯ ಎಂಬ ಮೂರು ಬಗೆಯ ಅರ್ಥ ವೈವಿಧ್ಯ ಅಥವಾ ಗುಹ್ಯಭಾಷೆಗಳು
**ಭಾಷಾಪತಿ** ಬ್ರಹ್ಮ

Rarest Archiver

**ಭಾಷಿಕ, ಭಾಷಿಗ** ವಿದ್ಯಾಸಿದ್ಧಿ ಹೊಂದಿದ ಭಾಷಾ ವಿಶಾರದ, ವಿದ್ಯಾಧಿಪತಿ, ಭಾಷಾ ಪರಿಣತ

**ಭಾಷ್ಯ** ವಿವರಣೆ, ವ್ಯಾಖ್ಯಾನ

**ಭಾಷ್ಯಕಾರರು** ವ್ಯಾಖ್ಯಾನಕಾರರು (ಶಂಕರರು, ರಾಮಾನುಜರು ಮತ್ತು ಮಧ್ವರು)

**ಭಾಷ್ಯದ** ಭಾಷ್ಯವನ್ನು ಕೊಡುವ, ಚಿತ್ತಾಭಿಮಾನಿಗಳು

**ಭಾಸ** ಕಾಣು, ಮೇಲ್ನೋಟಕ್ಕೆ ತೋರುವಿಕೆ; ಪ್ರಕಾಶವುಳ್ಳ

**ಭಾಸಕ** ಬೆಳಕು ಬೀರುವವ; ಸರಳನಾದವ

**ಭಾಸತಿ** ಕಾಣಿಸಿಕೊಳ್ಳುವುದು

**ಭಾಸಮಾನ** ತೋರಿಕೆ

**ಭಾಸರ, ಭಾಸುರ** ಸುಂದರವಾದ, ಅಂದವಾದ, ಹೊಳೆಯುವ

**ಭಾಸಿತ** ಕಾಣಿಸಿಕೊಳ್ಳುತ್ತಿರುವ; ಮಾತೃಭಾಷೆ ನುಡಿ

**ಭಾಸಿತಾಕ್ಷಿ** ಹೊಳೆಯುವ ಕಣ್ಣುಳ್ಳವಳು

**ಭಾಸುರ** ಸುಂದರ, ಹೊಳೆಯುವ, ಪ್ರಕಾಶಮಾನವಾದ; ಅತ್ಯಂತ ಶ್ರೇಷ್ಠ

**ಭಾಸುರಾಂಗ** ಪ್ರಕಾಶಮಾನವಾದ ದೇಹ ಉಳ್ಳವನು

**ಭಾಸೆ** ಭಾಷೆ, ವಾಗ್ದಾನ, ಪ್ರತಿಜ್ಞೆ

**ಭಾಸ್ಕರ** ಸೂರ್ಯ

**ಭಾಸ್ಕರತನಯ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ

**ಭಾಸ್ಕರವಂಶ** ಸೂರ್ಯವಂಶ

**ಭಾಸ್ವತ್** ಹೊಳೆಯುವ, ವಿರಾಜಿಸುವ

**ಭಾಸ್ವರ** ಹೊಳೆಯುವ

**ಭಾಳ** ಬಹಳ; ಹಣೆ

**ಭಾಳತಿಲಕ** ಹಣೆಯಮೇಲಿನ ತಿಲಕ

**ಭಾಳನೇತ್ರ** ಹಣೆಗಣ್ಣ-ಶಿವ

**ಭಾಳಲಿಪಿ** ಹಣೆಯಬರಹ

**ಭಾಳಲೋಚನ** ಹಣೆಗಣ್ಣ, ಫಾಲಾಕ್ಷ-ಶಿವ

**ಭಾಳಾಕ್ಷ** ಶಿವ

**ಭಿಂಡಿವಾಲ(ಳ)** ಒಂದು ಬಗೆಯ ಆಯುಧ, ಸಣ್ಣ ಭರ್ಜಿ

**ಭಿಕಾರಿ** ಭಿಕ್ಷೆ ಬೇಡುವವ

**ಭಿಕ್ಕಾರಿ** ಕಿರುಕುಳ, ಕಿರುಕುಳ ದೇವತೆಗಳು

**ಭಿಡಿಯ<ಭಿಡೆ, ಭಿಡಿಯಾ** ದಾಕ್ಷಿಣ್ಯ, ಸಂಕೋಚ, ಮುಲಾಜು

**ಭಿತ್** ಭೇದಿಸುವಂತಹ, ಚೂರುಮಾಡುವಂತಹ

**ಭಿತ್ತ** ಚೂರು, ತುಂಡು

**ಭಿತ್ತಿ** ಒಡೆಯುವುದು, ಸೀಳುವುದು; ಚೂರು, ತುಂಡು; ಗೋಡೆ, ಆಶ್ರಯ

**ಭಿದುರ** ಮಿಂಚು; ವಜ್ರ

**ಭಿನ್ನಜೀವರು** ಬೇರೆಬೇರೆ ಜೀವಿಗಳು

**ಭಿನ್ನಜ್ಞಾನ** ಭೇದ ಜ್ಞಾನ

**ಭಿನ್ನಭಾವ** ಹರಿಸರ್ವೋತ್ತಮ ಜ್ಞಾನಕ್ಕಿಂತ ಬೇರೆಯಾದ ಜ್ಞಾನ, ಹರಿಯಲ್ಲಿ ಪರಸ್ಪರ ಬೇರೆ ಬೇರೆ ಎಂಬ ಭಾವ

**ಭಿನ್ನಾಂಶ** ದೇವತೆಗಳು; ಬೇರೆ ಬೇರೆ ರೂಪಾಂಶ

**ಭಿಷಕ್ಕು, ಭಿಷ್ಕ, ಭಿಷ್ಕಾ** ವೈದ್ಯ

**ಭಿಷಜೋತ್ತಮ** ಶ್ರೇಷ್ಠ, ಪರಿಣತ ವೈದ್ಯ-ಶ್ರೀಹರಿ

**ಭೀಕರ** ಭಯಂಕರ

**ಭೀತ** ಅಂಜಿದ

**ಭೀಮ** ಭಯಂಕರ; ಪಂಚಪಾಂಡವರಲ್ಲಿ ಒಬ್ಬ

**ಭೀಮರಥಿ** ಸಹ್ಯಾದ್ರಿಯಲ್ಲಿ ಹುಟ್ಟುವ ನದಿ; ಪಂಢರಪುರದ ನೆರೆಯಲ್ಲಿ ಹರಿಯುತ್ತದೆ

**ಭೀಮಸನ್ನುತ** ಭೀಮಸೇನನಿಂದ ಸ್ತುತಿಸಲ್ಪಟ್ಟ

**ಭೀರುನೇತ್ರೆ** ಬೆದರುಗಣ್ಣಿನವಳು

**ಭೀಷಣ** ಭಯಂಕರವಾದ, ಹೆದರಿದ

**ಭೀಷ್ಮಕ** ವಿದರ್ಭದೇಶದ ಅರಸು, ರುಕ್ಮಿಣಿಯ ತಂದೆ

**ಭೀಷ್ಮಕನೃಪಜಾತೆ** ರುಕ್ಮಿಣಿ

Rarest Archiver

**ಭೀಷ್ಮನ್ನಪಂಥ** ನೈಷ್ಠಿಕ ಬ್ರಹ್ಮಚಾರಿಯಾಗಿ ಉಳಿದು ಸಿಂಹಾಸನವನ್ನೇರಲಾರೆ ಎಂಬ ಭೀಷ್ಮನ ಪ್ರತಿಜ್ಞೆ; ಕುರುಕ್ಷೇತ್ರದ ಯುದ್ಧದಲ್ಲಿ ಶ್ರೀಕೃಷ್ಣನ ಕೈಯಲ್ಲಿ ಚಕ್ರ ಹಿಡಿಯುವಂತೆ ಮಾಡುವನೆಂಬ ಪ್ರತಿಜ್ಞೆ

**ಭೀಷ್ಮಪಂಚಕ** ಕಾರ್ತೀಕ ಶುದ್ಧ ಏಕಾದಶಿಯಿಂದ ಪೌರ್ಣಿಮೆಯವರೆಗೆ ಉಪವಾಸವಿದ್ದು ಮಾಡುವ ವ್ರತ

**ಭುಂಜಿಸು** ತಿನ್ನು, ಅನುಭವಿಸು, ಊಟ ಮಾಡು, ಉಣ್ಣು

**ಭುಕ್ತ** ತಿಂದ, ಉಂಡ, ಭೋಜನ; ಅನುಭವಿಸಿದವ

**ಭುಕ್ತಿ>ಭುಕುತಿ** ಸರ್ವಸಾರಭೋಕ್ತನಾದ ಶ್ರೀಹರಿ; ಊಟ, ತಿನ್ನುವುದು; ಸುಖ; ಅನುಭವಿಸುವ ಕಾಲ

**ಭುಜ(ಜಂ)ಗಾಂಚಿತ** ಸರ್ಪದಿಂದ ಪೂಜಿಸಲ್ಪಟ್ಟ

**ಭುಜಂಗ** ಸರ್ಪ, ಶೇಷ

**ಭುಜಂಗಗಿರಿ** ಶೇಷಾಚಲ, ತಿರುಪತಿ

**ಭುಜಂಗಪತಿ** ಆದಿಶೇಷ

**ಭುಜಂಗಮ** ಹಾವು

**ಭುಜಂಗಮವರ** ಆದಿಶೇಷ, ಕಾಳಿಂಗ ಸರ್ಪ

**ಭುಜಂಗಶಯನ** ಶೇಷಶಯನ-ಶ್ರೀಹರಿ

**ಭುಜಂಗಶಾಯಿದಿನ** ಹರಿದಿನ, ಏಕಾದಶಿ

**ಭುಜಕೀರ್ತಿ** ತೋಳಿನ ಆಭರಣ

**ಭುಜಕುಜ** ಭುಜವೆಂಬ ಬಳ್ಳಿ

**ಭುಜಕೇಯೂರ** ಭುಜಕೀರ್ತಿ, ಭುಜಕಿರೀಟ

**ಭುಜಗ** ಹಾವು, ಸರ್ಪ

**ಭುಜಗಕುಂಡಲ** ನಾಗಕುಂಡಲ, ಕಿವಿಯ ಆಭರಣ

**ಭುಜಗಧರ** ಹಾವನ್ನು ಧರಿಸಿದವನು-ಶಿವ

**ಭುಜಗಪುಂಗ** ನಾಗರಾಜ

**ಭುಜಗಪುಂಗರಿಪು** ಗರುಡ

**ಭುಜಗಪುಂಗರಿಪು ಧ್ವಜ** ಗರುಡಧ್ವಜನಾದ ಶ್ರೀಹರಿ

**ಭುಜಗಭೂಷ(ಣ)** ಸರ್ಪಭೂಷಿತ-ಶಿವ

**ಭುಜಗವೇಣಿ** ಹಾವಿನಂತೆ ಜಡೆಯುಳ್ಳವಳು, ನಾಗವೇಣಿ

**ಭುಜಗಶಯ್ಯ** ಶೇಷಶಾಯಿ-ಶ್ರೀಹರಿ

**ಭುಜಗಶಯ್ಯ, ಭುಜಗತಲ್ಪ** ಹಾವನ್ನು ಹಾಸಿಗೆಯನ್ನಾಗಿ ಮಾಡಿಕೊಂಡವನು, ಶೇಷಶಾಯಿ-ಶ್ರೀಹರಿ

**ಭುಜಗಶ್ರೇಷ್ಠ** ಆದಿಶೇಷ

**ಭುಜಗಾಸ್ತ್ರ** ಸರ್ಪಾಸ್ತ್ರ

**ಭುಜಗೇಂದ್ರ** ಸರ್ಪಶ್ರೇಷ್ಠ, ಆದಿಶೇಷ

**ಭುಜಗೇಶ** ಶೇಷದೇವರು

**ಭುಜಚಕ್ರ** ವೈಷ್ಣವರು ಭುಜದ ಮೇಲೆ ಧರಿಸುವ ಚಕ್ರದ ಮುದ್ರೆ

**ಭುಜಚಕ್ರಧರ** ಭುಜಚಕ್ರ ಧರಿಸಿದವನು, ದ್ವೈತಿ, ವೈಷ್ಣವ

**ಭುಜಸ್ಥಿತ** ತೋಳಿನಲ್ಲಿ ನೆಲೆಸಿದ

**ಭುಜೋರ್ಮಿ** ಭುಜಗಳೆಂಬ ತೆರೆಗಳು

**ಭುಲ್ಲೈಸು>ಭುಲ್ಲಯಿಸು>ಬುಲ್ಲ** ಉಪಾಯದಿಂದ ಒಲಿಸು, ಪುಸಲಾಯಿಸು; ಉಬ್ಬು

**ಭುವನ** ಪ್ರಪಂಚ, ಜಗತ್ತು, ಭೂಮಿ; ಮನುಷ್ಯ; ಜಲ

**ಭುವನನದಿ** ಬ್ರಹ್ಮಾಂಡ ಖರ್ಪರ ಸೀಳಿ ಬಂದ ಗಂಗೆ

**ಭುವನಪಟ್ಟ** ರಾಜ್ಯಾಧಿಕಾರ

**ಭುವನಸ್ಥಿರಪದವಿ** ನಕ್ಷತ್ರಲೋಕದಲ್ಲಿ ಶಾಶ್ವತ ಸ್ಥಾನ

**ಭುವನಾವಳಿ** ಲೋಕಸಮೂಹ

**ಭುವನೆರಡೇಳು** ಹದಿನಾಲ್ಕು ಲೋಕಗಳು

**ಭುವಿ>ಬುವಿ** ಭೂಮಿ

**ಭುವಿಧರ** ಆದಿಶೇಷ

**ಭುವಿಸುರ, ಭೂಸುರ** ಬ್ರಾಹ್ಮಣ

**ಭೂ** ಲೋಕಮಂಡಲಾಭಿಮಾನಿ ಭೂದೇವಿ

**ಭೂಕಾಂತೆ** ರಾಣಿ, ರಾಜನ ಹೆಂಡತಿ

**ಭೂಚೋರಹರ** ವರಾಹ-ವಿಷ್ಣುವಿನ ಮೂರನೆಯ ಅವತಾರ

**ಭೂಜ** ವೃಕ್ಷ, ಮರ

Rarest Archives

**ಭೂಜರತ್ನ** ಕಲ್ಪವೃಕ್ಷ

**ಭೂಜೆ** ಸೀತೆ

**ಭೂತ** ಜೀವಾತ್ಮ, ಪರಮಾತ್ಮ, ಮೂಲವಸ್ತು; ಪ್ರಾಣಿ; ಹಿಂದಿನ, ದೆವ್ವ

**ಭೂತಕೃತು** ಸೃಷ್ಟಿಕರ್ತ

**ಭೂತದಯಾಪರ** ಪ್ರಾಣಿಗಳಲ್ಲಿ ದಯೆಯುಳ್ಳವನು

**ಭೂತಪತಿ** ಪಂಚ ಭೂತಗಳನ್ನು ಸೃಷ್ಟಿಸಿದ ರುದ್ರ ದೇವರು, ಭೂತನಾಥ

**ಭೂತಭವ್ಯಭವತ್ಪ್ರಭು** ಹಿಂದಿನ, ಇಂದಿನ ಮುಂದಿನ ಪ್ರಪಂಚಕ್ಕೆ ಸ್ವಾಮಿ ಶ್ರೀ ರುದ್ರವಂದ್ಯ ಶ್ರೀಹರಿ

**ಭೂತಭಾವನಃ** ತನ್ನ ಇಚ್ಛಾನುಸಾರ ನಿಯಂತ್ರಿಸುವವನು, ಪಂಚಭೂತಾದಿ ಸೃಷ್ಟಿ ಸ್ಥಿತಿ ಲಯಕರ್ತ-ಶ್ರೀಹರಿ

**ಭೂತಸರ್ಗ** ಈಗಿನ ಪರಿಸ್ಥಿತಿ

**ಭೂತಳ** ಭೂಮಿ

**ಭೂತಾಂಬರಾಧಿಪ** ಪಂಚಭೂತಗಳಲ್ಲಿ ಒಂದಾದ ಆಕಾಶಕ್ಕೆ ನಾಯಕ-ಗಣಪತಿ

**ಭೂತಾಕಾಶ** ಆಕಾಶ ಎರಡು ವಿಧ, ಭೂತಾಕಾಶ ಹಾಗೂ ಅವ್ಯಾಕೃತಾಕಾಶ ಎಂದು; ಪ್ರಕೃತಿಯಿಂದ ಆವಿರ್ಭವಿಸಿದ ಆಕಾಶ ಭೂತಾಕಾಶ, ಇದಕ್ಕೆ ಹುಟ್ಟು ನಾಶಗಳಿವೆ; ನಿತ್ಯವಾದ ಎಂದೆಂದೂ ಇರುವ ಆಕಾಶ ಅವ್ಯಾಕೃತಾಕಾಶ

**ಭೂತಾಕಾಶಾಭಿಮಾನಿ** ಗಣಪತಿ

**ಭೂತಾತ್ಮ** ನಿರ್ವಿಕಾರನು, ಎಂದೂ ಯಾರಿಂದಲೂ ಮರೆಮಾಡಲಾಗದ ಮಹಿಮಾಯುಕ್ತ, ಸರ್ವಾಂತರ್ಯಾಮಿ-ಶ್ರೀಹರಿ

**ಭೂತಿ** ಪಾರಲೌಕಿಕ ಸಂಪತ್ತು, ಕಾಂತಿ, ಐಶ್ವರ್ಯ, ಇರುವಿಕೆ

**ಭೂತಿದೇವತೆ** ಐಶ್ವರ್ಯದ ಅಧಿದೇವತೆ, ಲಕ್ಷ್ಮಿ

**ಭೂತಿಪಾನಿತ** ವಿಭೂತಿಯಿಂದ ಕಂಗೊಳಿಸುವವನು

**ಭೂತಿಭೂರಿದ** ಕ್ಷೇಮ, ಏಳಿಗೆ ಮತ್ತು ಹೆಚ್ಚಳಿಕೆ ಕೊಡುವವನು

**ಭೂತೇಂದ್ರಿಯಗಳು** ಜೀವೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು

**ಭೂತೇಶ** ಶಿವ

**ಭೂದಿವಿಜ** ಭೂಸುರ, ಬ್ರಾಹ್ಮಣ

**ಭೂಧರ** ಬೆಟ್ಟ, ಪರ್ವತ; ಅರಸು; ವರಾಹರೂಪಿ ಭಗವಂತ, ಭೂಮಿಯನ್ನು ಧರಿಸಿರುವವನು; ಶೇಷ, ಒಬ್ಬ ನಾಗ

**ಭೂಧರಾಗ್ರ** ಪರ್ವತದತುದಿಯ

**ಭೂನಾಗ** ಎರೆಹುಳು, ಮಣ್ಣುಹುಳು

**ಭೂನಾಥ** ರಾಜ, ವರಾಹದೇವ-ಶ್ರೀಹರಿ

**ಭೂನಿತಂಬಿನಿ** ಭೂಲೋಕದ ಅಭಿಮಾನಿ ಭೂದೇವಿ

**ಭೂನಿರ್ಜರಮಣಿ** ಭೂಸುರಶ್ರೇಷ್ಠ

**ಭೂಪ** ದೊರೆ, ರಾಜ

**ಭೂಪತಿಗಳೈವರು** ಪಂಚಪಾಂಡವರು

**ಭೂಪಾರ** ಭೂಮಂಡಲ

**ಭೂಭುಜ** ಅರಸು

**ಭೂಮ** ಜಗತ್ತು, ಪ್ರಪಂಚ; ಪೂರ್ಣ, ಆಧಿಕ್ಯ, ಪರಮಾತ್ಮ; ಮದುವೆಯಲ್ಲಿ ವಧೂವರರಿಗೆ ಒಟ್ಟಿಗೆ ಕೂಡಿಸಿ ಹಾಕುವ ವಿಶೇಷ ಊಟ

**ಭೂಮನ್** ಅನಂತಗುಣವುಳ್ಳವನು

**ಭೂಮಿಕಳ್ಳ** ಹಿರಣ್ಯಾಕ್ಷ

**ಭೂಮಿಜಾ(ಜೆ)** ಸೀತೆ

**ಭೂಮಿಜಾಪತಿ, ಭೂಪತಿ** ಸೀತಾಪತಿ-ರಾಮ

**ಭೂಮಿದಾನವನೀಡಿದವ** ಬಲಿಚಕ್ರವರ್ತಿ

**ಭೂಮಿದೇವ** ಬ್ರಾಹ್ಮಣ

**ಭೂಮಿಪತಿ, ಭೂರಮಣ** ದೊರೆ, ರಾಜ; ಭೂದೇವಿರಮಣ-ವಿಷ್ಣು

Rarest Archiver

**ಭೂಮಿಭುಜದಲ್ಲಣ** ಕ್ಷತ್ರಿಯ ರಾಜರನ್ನು ನಾಶಮಾಡಿದ ಪರಶುರಾಮ

**ಭೂಮಿಭೃತ್** ಪರ್ವತ

**ಭೂಮಿಸುರ** ಭೂಲೋಕದ ದೇವತೆ–ಬ್ರಾಹ್ಮಣ

**ಭೂಮ್ಯಮ್ಮ** ಭೂತಾಯಿ

**ಭೂರಾದಿ (?)** ಭೂಮಿಯೇ ಮೊದಲಾದ (?)

**ಭೂರಿ** ಚಿನ್ನ, ಬಂಗಾರ, ದಕ್ಷಿಣೆ; ಅಧಿಕ, ಹೆಚ್ಚು, ಬಹಳ

**ಭೂರಿಜನ** ಬ್ರಾಹ್ಮಣಜನ

**ಭೂರಿದ** ಹೆಚ್ಚಾದ, ಅಧಿಕವಾದದ್ದನ್ನು ನೀಡುವ

**ಭೂರಿದೈವರು** ಹಲವು ಕ್ಷುದ್ರ ದೇವತೆಗಳು

**ಭೂರಿಧರ್ಮ** ಹೆಚ್ಚಾದ ದಾನ, ಆಡಂಬರದಿಂದ ಮಾಡುವುದು

**ಭೂರಿಭುವನ** ವಿಶಾಲ ವಿಶ್ವ

**ಭೂರಿಲೋಚನ** ಸಹಸ್ರಾಕ್ಷ ಇಂದ್ರ

**ಭೂರಿಸಂಚಿತ** ಶ್ರೀಮಂತ; ಸಂಚಿತಪಾಪ ಪುಷ್ಕಳವಾಗಿ ಮಾಡಿದವನು

**ಭೂರುಹ** ಭೂಮಿಯಲ್ಲಿ ಬೆಳೆಯುವ ಮರ ಗಿಡ ಇತ್ಯಾದಿ

**ಭೂರ್ಭುವ** ಪೂರ್ಣನಾದವನು ಮತ್ತು ಮಹದೈಶ್ವರ್ಯ ಉಳ್ಳವನು

**ಭೂರ್ಯನ್ನ** ಬಹಳ ಅನ್ನ

**ಭೂವರ** ರಾಜ; ವರಾಹರೂಪಿ ಶ್ರೀಹರಿ

**ಭೂವಿಂದ** ದೊರೆ

**ಭೂಷ** ಆಭರಣ, ಅಲಂಕಾರ

**ಭೂಷಣ** ಶಿವ; ಅಲಂಕಾರ, ಚೆಂದ; ಧರಿಸಿದವ

**ಭೂಷಣಧನು** ಶಿವಧನುಸ್ಸು

**ಭೂಷಿತ** ಅಲಂಕಾರಗೊಂಡ

**ಭೂಷಿಸು** ಅಲಂಕರಿಸು, ಗೌರವಿಸು

**ಭೂಸತಿಯಕಾಂತ** ಶ್ರೀಹರಿ

**ಭೂಸುರ** ಬ್ರಹ್ಮಜ್ಞಾನಿ, ಬ್ರಾಹ್ಮಣ

**ಭೂಸುರವೇಷ** ಬ್ರಾಹ್ಮಣವೇಷ; ವಾಮನರೂಪೀ ಭಗವಂತ

**ಭೂಸುರಸ್ವ** ಬ್ರಾಹ್ಮಣರ ಆಸ್ತಿ

**ಭೃಂಗ** ದುಂಬಿ

**ಭೃಂಗಕುಂತಳ** ದುಂಬಿಯಂತಹ ಗುಂಗುರು ಕೂದಲು

**ಭೃಂಗಾರ** ಚಿನ್ನದ ಕಲಶ

**ಭೃಂಗಾಲ(ಳ)ಕ** ತುಂಬಿಯಂತೆ ಕಪ್ಪಾದ ಮುಂಗುರುಳು, ನೀಲಕುಂತಲ

**ಭೃಂಗಿ** ಹೆಣ್ಣು ದುಂಬಿ

**ಭೃಂಗಿಮೇಳ** ಶಿವನ ಪರಿವಾರದ ಭೃಂಗಿಯ ನೃತ್ಯಮೇಳ

**ಭೃಕುಟಿ** ಹುಬ್ಬುಗಂಟು, ಹುಬ್ಬುಗುಂಟಿಕ್ಕುವುದು; ರುದ್ರ ದೇವರು

**ಭೃಗು** ಶುಕ್ರಾಚಾರ್ಯ, ಭೃಗುಋಷಿ

**ಭೃಗುಕುಲಜ** ಭೃಗುವಂಶದಲ್ಲಿ ಹುಟ್ಟಿದ ಪರಶುರಾಮ

**ಭೃಗುಜ** ಪರಶುರಾಮ

**ಭೃಗುರಾಮಾವತಾರ** ಪರಶುರಾಮಾವತಾರ

**ಭೃತ್ಯ** ಸೇವಕ, ಆಳು, ದಾಸ

**ಭೃತ್ಯಗಣ, ಭೃತ್ಯೌಘ** ಸೇವಕರ ಸಮೂಹ

**ಭೃತ್ಯತನ** ಸೇವಕತನ

**ಭೃತ್ಯಪಾಲಿಕಾ** ಸೇವಕರನ್ನು ರಕ್ಷಿಸುವವನು

**ಭೃತ್ಯರಘ** ಸೇವಕರ ಪಾಪ

**ಭೃತ್ಯರಭೃತ್ಯ** ಸೇವಕರ ಸೇವಕ, ದಾಸರ ದಾಸ

**ಭೃತ್ಯವತ್ಸಲ** ಸೇವಕರಲ್ಲಿ ಪ್ರೇಮವುಳ್ಳವನು

**ಭೃಷ್ಟ** ಹುರಿದ; ಅಹಂಕಾರಿ

**ಭೇಕ** ಕಪ್ಪೆ

**ಭೇದಪಂಚ, ಭೇದಪಂಚಕ** ಪಂಚ ಭೇದಗಳು

**ಭೇದಮತ** ದ್ವೈತಮತ

**ಭೇದಮತಿ** ಪಂಚ ಭೇದಗಳ ಜ್ಞಾನವುಳ್ಳವನು

**ಭೇದವಾದಿ** ದ್ವೈತಸಿದ್ಧಾಂತ ವಾದಿ

**ಭೇದಿಸಿದವ** ಸೀಳಿದವ, ನಾಶಗೈದವ

Rarest Archives

**ಭೇರಿ** ದುಂದುಭಿ; ಡಂಗುರ (ಒಂದು ಬಗೆಯ ಚರ್ಮವಾದ್ಯ)

**ಭೇರುಂಡ** ಶಿವನ ಶರಭಾವತಾರವನ್ನು ನಿಗ್ರಹಿಸಲು ವಿಷ್ಣು ಧರಿಸಿದ ರೂಪ; ಒಂದು ವಿಶಿಷ್ಟ ಪಕ್ಷಿ, ಆನೆಗಳನ್ನು ಕೊಂದು ತಿನ್ನುವ ಒಂದುಪಕ್ಷಿ, ಗಂಡಭೇರುಂಡ, ಎರಡು ತಲೆ ಹಕ್ಕಿ

**ಭೇಶ** ನಕ್ಷತ್ರಗಳ ಗುಂಪಿನ ಒಡೆಯ–ಚಂದ್ರ

**ಭೇಶಪುಷ್ಕರಿಣಿ** ಚಂದ್ರ ಪುಷ್ಕರಿಣಿ

**ಭೇಷಜ** ವೈದ್ಯ, ರೋಗಪರಿಹಾರಕ, ಔಷಧಿ, ಚಿಕಿತ್ಸೆ

**ಭೈರವ** ಶಿವನ ಒಂದು ಅವತಾರ

**ಭೈರವಾಕಾರ** ಭೈರವನ ಆಕಾರ, ಭಯಂಕರ ರೂಪ

**ಭೈಷ್ಮಿ** ಭೀಷ್ಮಕರಾಜನ ಮಗಳಾದ ರುಕ್ಮಿಣಿ; ಪ್ರತಿಮೆಯನ್ನು ರಚಿಸುವವನು, ಶಿಲ್ಪಿ

**ಭೋಕಾಳೆ** ರಣಗಹಳೆ

**ಭೋಕ್ತ್ಮ** ಪತಿ, ಅರಸ; ಅನುಭವಿಸುವವನು; ಉಣ್ಣುವವನು, ಭೋಜನ ಮಾಡುವವನು

**ಭೋಗ** ಸರ್ಪ, ಹಾವಿನ ಹೆಡೆ; ಸುಖದುಃಖಗಳ ಅನುಭವ

**ಭೋಗಬಲೆ** ಸುಖದ ಬಂಧನ

**ಭೋಗರೂಪ** ಸರ್ಪರೂಪವುಳ್ಳುದು

**ಭೋಗಿ** ಹೆಡೆಯುಳ್ಳ ಹಾವು, ನಾಗರಹಾವು

**ಭೋಗಿಭೂಷಣ** ಸರ್ಪವನ್ನು ಆಭರಣವಾಗುಳ್ಳವ –ಶಿವ

**ಭೋಗಿರಾಜಶಯನ, ಭೋಗಿಶ** ಆದಿಶೇಷನ ಮೇಲೆ ಮಲಗಿದವನು–ವಿಷ್ಣು

**ಭೋಗಿಶಯನನದಿನ** ಏಕಾದಶಿ, ಹರಿದಿನ

**ಭೋಗೀಶ** ಆದಿಶೇಷ

**ಭೋಗ್ಯ** ಭೋಗಿಸಲು ಯೋಗ್ಯವಾದ, ಅನುಭವಿಸಲು ಯೋಗ್ಯವಾದ, ಸುಖಿ

**ಭೋಜಕುಲ** ಯದುಕುಲ, ಮನುಕುಲ

**ಭೋಜ್ಯ** ತಿನ್ನುವ ಪದಾರ್ಥ, ಸವಿಯೂಟ, ಭೋಗವಸ್ತು

**ಭೋರನೆ** ವೇಗವಾಗಿ; ಮೊರೆಯುತ್ತ

**ಭೋಳೆತನ** ಸರಳತೆ, ಮುಗ್ಧತೆ, ಸಂಭಾವಿತತನ

**ಭೌಮ** ಮಂಗಳ, ಕುಜ; ನರಕಾಸುರ; ಭೂಮಿಗೆ ಸಂಬಂಧಿಸಿದ

**ಭೌಮ್ಯ** ಭೂಮಿಗೆ ಸಂಬಂಧಿಸಿದ; ಬುಧ

**ಭ್ರಂಶ** ಹಾಳು, ನಾಶ; ಅಗಲಿಕೆ

**ಭ್ರಮಣತ್ವ** ಸುತ್ತುವಿಕೆ, ತೊಳಲಾಟ; ಭ್ರಾಂತಿ

**ಭ್ರಮತ್** ಸುತ್ತುತ್ತಿರುವ

**ಭ್ರಮರ** ದುಂಬಿ

**ಭ್ರಮಾಕಲುಕಕೀಳು** ಜೀವೇಶ್ವರ ಐಕ್ಯವೆಂಬ ಭ್ರಾಂತಿಯನ್ನು ಪರಿಹರಿಸು

**ಭ್ರಮಾವಮೂರು** ಅಜ್ಞಾನ, ಮಿಥ್ಯಾಜ್ಞಾನ, ವಿಪರೀತಜ್ಞಾನ

**ಭ್ರಾಂತ** ಭ್ರಾಂತಿಗೆ ಒಳಗಾದವನು, ಮರುಳ; ಸಂಶಯಪಟ್ಟವ

**ಭ್ರಾಂತಮಯ** ಮರುಳಾದಂತಹ, ತಪ್ಪಾಗಿ ತಿಳಿದಂತಹ, ಭ್ರಮಿಸಿದಂತಹ

**ಭ್ರಾಜತ್** ಹೊಳೆಯುವ

**ಭ್ರಾತೃ** ಸಹೋದರ

**ಭ್ರಾತೃ–ಭಗಿನಿ** ಸೋದರ–ಸೋದರಿ

**ಭ್ರಾತೃದ್ರೋಹಿ** ವಿಭೀಷಣ

**ಭ್ರಾಮಕ** ತಿಳಿಗೇಡಿ; ಭ್ರಮೆ ಹುಟ್ಟಿಸುವ, ಭ್ರಮಾಧೀನ

**ಭ್ರಾಮ್ಯಜನ** ಭ್ರಮೆಯಲ್ಲಿ ಬದುಕುವ ಜನ

**ಭ್ರುಕುಟಿಪಿತನೊಡೆಯ** ಭೃಕುಟಿಯಿಂದ ಹುಟ್ಟಿದವ ಶಿವ, ಅವನ ತಂದೆಯಾದ ಬ್ರಹ್ಮನ ಒಡೆಯ–ವಿಷ್ಣು

**ಭ್ರೂ** ಹುಬ್ಬು

**ಭ್ರೂಚಾಪ** ಬಿಲ್ಲಿನಾಕಾರದ ಹುಬ್ಬು

**ಭ್ರೂಭ್ರಮಣ** ಹುಬ್ಬು ಹಾರಿಸುವದು

**ಭ್ರೂಮಧ್ಯ** ಹುಬ್ಬುಗಳ ನಡುವೆ

**ಭ್ರೂಲತೆ** ಹುಬ್ಬುಬಳ್ಳಿ, ಬಳ್ಳಿಯ ಹಾಗಿದ್ದ ಹುಬ್ಬು

Rarest Archiver

# ಮ

**ಮಂಕ** ಬುದ್ಧಿಗೇಡಿ, ಹೆಡ್ಡ
**ಮಂಕುಮನುಜ** ಅಜ್ಞಾನಿ
**ಮಂಗರವಳ್ಳಿ, ಮಂಗರೋಳಿ** ಬಳ್ಳಿಜಾತಿ– ಚಟ್ನಿಗಾಗಿ ಉಪಯೋಗಿಸುತ್ತಾರೆ, ನರಳೆ
**ಮಂಗಲ** ಒಳಿತು, ಶುಭ, ಅದೃಷ್ಟ; ಶುಭಕಾರ್ಯಗಳ ಪ್ರಾರಂಭ ಮತ್ತು ಮುಕ್ತಾಯದಲ್ಲಿ ಮಾಡುವ ದೇವತಾಸ್ತುತಿ
**ಮಂಗಳಗಾತ್ರೆ** ಶುಭ ಶರೀರವುಳ್ಳಾಕೆ, ಸುಂದರಿ, ಲಕ್ಷ್ಮಿ
**ಮಂಗಳಗಿರಿ** ವಿಜಯವಾಡದ ಬಳಿಯ ಒಂದು ಚಿಕ್ಕ ಬೆಟ್ಟ, ಇಲ್ಲಿಯ ಪಾನಕ ನರಸಿಂಹ ಬಹಳ ಪ್ರಸಿದ್ಧ ದೇವರು
**ಮಂಗಳತರಂಗಿಣಿ** ನದಿ, ತುಂಗಾನದಿ
**ಮಂಗಳದೇವಿ** ಲಕ್ಷ್ಮಿ
**ಮಂಗಳವಂತ** ಶುಭವನ್ನು ಹೊಂದಿದವನು, ಸಂಸ್ಕಾರ ಪಡೆದವನು
**ಮಂಗಳಾಂಗ** ಶ್ರೀಹರಿ, ಪರಮಾತ್ಮ
**ಮಂಗಳೋಚ್ಛ್ರಾಯ** ಶುಭದ ಏಳಿಗೆ, ಅಭಿವೃದ್ಧಿ
**ಮಂಚಕಲಾಪ** ನಾಯಕರ ಗುಂಪು; ಆಡಳಿತ ನಡೆಸುವುದು
**ಮಂಚಾಲಿ(ಲೆ)** ಮಂತ್ರಾಲಯದ ಮೊದಲ ಹೆಸರು
**ಮಂಚಿಕೆ** ಅಟ್ಟಣಿ, ವೇದಿಕೆ; ಹಕ್ಕಿಗಳನ್ನು ಕಾಯಲು ಎತ್ತರದಲ್ಲಿ ಹಾಕಿದ ಗುಡಿಸಲು
**ಮಂಜರಿ** ಗೊಂಚಲು
**ಮಂಜಾಡಿ** ಗುಲಗಂಜಿ
**ಮಂಜಿನೋಲಗ** ಹಿಮಧಾಮ, ಹಿಮದ ಒಟ್ಟಿಲು
**ಮಂಜೀರ** ಸರಪಳಿ; ಕೆಂಪುಹರಳಿನ ಒಂದು ಬಗೆಯ ಆಭರಣ, ಕಾಲಿನ ಒಡವೆ, ಕಾಲಂದುಗೆ
**ಮಂಜು** ಮನೋಹರ; ಹಿಮ
**ಮಂಜುಗಾವಿ** ತಿಳಿಗೆಂಪು ಬಣ್ಣ
**ಮಂಜುಭಾಷಣ** ಇಂಪಾಗಿ ಮಾತನಾಡುವವನು
**ಮಂಜುಮೈಯ** ಸ್ಫಟಿಕ ವರ್ಣದ ಮೈಯವನು
**ಮಂಜುಳಗಾತ್ರೆ** ಮನೋಹರವಾದ ಶರೀರವುಳ್ಳವಳು, ಸುಂದರಿ
**ಮಂಜೂಷ** ಪೆಟ್ಟಿಗೆ, ಸಂದೂಕ
**ಮಂಟಿ** ಸ್ಮಶಾನ, ಮರಡಿ, ಗುಡ್ಡ
**ಮಂಡ** ಹಾಲಿನ ಕೆನೆ; ಅನ್ನಬಸಿದ ಗಂಜಿ
**ಮಂಡನ** ಆಭರಣ, ಅಲಂಕಾರ; ಪ್ರತಿಪಾದನೆ, ಪುನಃಸ್ಥಾಪಿಸು
**ಮಂಡಲ** 48 ದಿವಸಗಳ ಅವಧಿ; ಜಗತ್ತು, ನಾಡಿನ ಒಂದು ಭಾಗ; ವರ್ತುಲಾಕಾರ, ಗುಂಡಾಗಿರುವುದು; ನೈವೇದ್ಯ ಇಡಲು ನೆಲದಮೇಲೆ ಬರೆಯುವ ರೇಖಾವಿನ್ಯಾಸ
**ಮಂಡಲಪತಿ, ಮಂಡಲಿಕ** ರಾಜ, ಮಂಡಲ ಆಳುವವನು
**ಮಂಡಲಿ** ಸೂರ್ಯಮಂಡಲ, ಸಮೂಹ
**ಮಂಡಲಿಸು** ಆದರಿಸು, ಸತ್ಕರಿಸು
**ಮಂಡಿ, ಮಂಡೆ** ತಲೆ, ಶಿರ
**ಮಂಡಿತ** ಸ್ಥಾಪಿಸಿದ, ಪ್ರತಿಪಾದಿತ; ಅಲಂಕರಿಸಿದ
**ಮಂಡೂಕ** ಕಪ್ಪೆ
**ಮಂಡೂಕಿ** ಹೆಣ್ಣು ಕಪ್ಪೆ
**ಮಂಡೆಅಡ್ಡಾಗು** ತಲೆ ತಗ್ಗಿಸು, ತಲೆ ಅಲ್ಲಾಡಿಸು; ಮಲಗು
**ಮಂಡೆನೇವರಿಸು** ತಲೆಯನ್ನು ಸವರು
**ಮಂಡೆಬೋಳಕ** ಬೋಳು ತಲೆಯವನು, ಸನ್ಯಾಸಿ
**ಮಂಡೆಬೋಳಾಗು** ತಲೆ ಬೋಳಿಸಿಕೊ, ಸಂನ್ಯಾಸಿ ಆಗು
**ಮಂಡೆಹಿಕ್ಕು** ತಲೆಬಾಚು
**ಮಂತಣಿ** ಮೊಸರಿನ ಗಡಿಗೆ

Rarest Archiver

**ಮಂತಣೆ** ಕಡೆಯುವುದು, ಮಂಥನ

**ಮಂತವ್ಯ** ಅಭಿಪ್ರಾಯ, ಮನನಮಾಡಲು ಯೋಗ್ಯವಾದ; ಮನನಾದಿಗಳಿಂದ ತಿಳಿಯಲ್ಪಡುವವನು–ಶ್ರೀಹರಿ

**ಮಂತು, ಮಂಥಣಿ** ಕಡೆಗೋಲು; ದೋಷ; ಮಂತ್ರಿ

**ಮಂತ್ರಕಲಾಪ** ಮಂತ್ರೋಚ್ಚಾರಣೆ (ವೇದ ಪಠಣ–ಕಾರ್ಯ)

**ಮಂತ್ರಬೀಜ** ಬೀಜಮಂತ್ರ ಅಥವಾ ಮಂತ್ರಗಳಿಗೆ ಕಾರಣ–ಶ್ರೀಹರಿ

**ಮಂತ್ರಮಂತ್ರಮಯ** ಪ್ರತಿಮಂತ್ರಸ್ವರೂಪ–ಶ್ರೀಹರಿ

**ಮಂತ್ರಮೇಯ** ಮಂತ್ರಗಳಿಂದ ತಿಳಿಯಲ್ಪಡ ತಕ್ಕವನು –ಶ್ರೀಹರಿ

**ಮಂತ್ರವಿದ** ಮಂತ್ರ ತಿಳಿದವನು, ಮಂತ್ರಜ್ಞ

**ಮಂತ್ರಿಸು** ಮಂತ್ರಾನುಷ್ಠಾನ ಮಾಡು

**ಮಂಥನ** ಕಡೆಯುವಿಕೆ; ವಿಷಯ ಮಂಡನ ಮಾಡುವಿಕೆ

**ಮಂದ** ಮೆಲ್ಲನೆ; ನವಗ್ರಹಗಳಲ್ಲಿ ಒಂದು, ಶನಿಗ್ರಹ; ತಿಳುವಳಿಕೆ ಕಡಮೆ ಉಳ್ಳವನು; ಜಲ, ನೀರು; ಮೆಲ್ಲನೆ

**ಮಂದಗಮನೆ** ಇಂದ್ರನ ಸ್ತ್ರೀಯರು ಅಥವಾ ಸ್ವರ್ಗಲೋಕವನ್ನು ಇಚ್ಛಿಸುವ ಹೆಂಗಸು; ನಿಧಾನವಾದ ನಡಿಗೆಯುಳ್ಳವಳು

**ಮಂದಜ** ಕಮಲ

**ಮಂದಜಭವ** ಬ್ರಹ್ಮ

**ಮಂದಜಾಕ್ಷಿಮಣಿ** ಕಮಲಾಕ್ಷಿ ಮಣಿ, ತಾವರೆಯ ಬೀಜ

**ಮಂದಜಾಸನ** ಬ್ರಹ್ಮ

**ಮಂದಜಾಸನಪಿತ** ಬ್ರಹ್ಮನ ತಂದೆ ಶ್ರೀಹರಿ

**ಮಂದಬುದ್ಧಿ** ಮೂಢ, ದಡ್ಡ

**ಮಂದಮತಿ** ಅಜ್ಞಾನಿ

**ಮಂದಮಾರುತ** ತಂಬೆಲರು, ಸಾವಕಾಶವಾಗಿ ಬೀಸುವ ಗಾಳಿ

**ಮಂದರ** ಒಂದು ಬೆಟ್ಟದ/ಪರ್ವತದ ಹೆಸರು; ಮಧ್ಯಮ; ಸಂಗೀತ ಸ್ವರ

**ಮಂದರಧರ** ಮಂದರಗಿರಿಯನ್ನು ಎತ್ತಿದ ಕೃಷ್ಣ, ಕೂರ್ಮಾವತಾರಿ ವಿಷ್ಣು

**ಮಂದರಾದ್ರಿ** ಮಂದರಗಿರಿ, ಮಂದರಪರ್ವತ

**ಮಂದರಾದ್ರಿಧರ** ಮಂದರವೆಂಬ ಪರ್ವತವನ್ನು ಎತ್ತಿದವನು–ವಿಷ್ಣು(ಕೂರ್ಮ)

**ಮಂದರಾದ್ರಿಧರ ದಿನ** ಏಕಾದಶಿ

**ಮಂದರೋದ್ಧರ, ಮಂದರೋದರ** ಮಂದರಗಿರಿಯನ್ನು ಎತ್ತಿದ ಕೃಷ್ಣ, ಮಂದರ ಪರ್ವತವನ್ನು ಎತ್ತಿದ ಶ್ರೀಹರಿ (ಕೂರ್ಮಾವತಾರ)

**ಮಂದವಾರ** ಶನಿವಾರ

**ಮಂದಸೋಶನ** ಮಂದಾನಿಲ

**ಮಂದಸ್ಮಿತ** ಮುಗುಳ್ನಗೆ, ಮಂದಹಾಸ

**ಮಂದಹಾಸ** ಮುಗುಳುನಗೆ

**ಮಂದಾಕಿನಿ** ದೇವನದಿ ಗಂಗೆಯ ಒಂದುಭಾಗ

**ಮಂದಾಕಿನಿಪಿತ** ಗಂಗಾಜನಕನಾದ ಶ್ರೀಹರಿ

**ಮಂದಾಕಿನೀಧರ** ಭಾಗೀರಥಿಯನ್ನು ಧರಿಸಿದವನು, ಗಂಗಾಧರ–ಶಿವ

**ಮಂದಾನಿಲ** ಮಂದವಾಗಿ ಬೀಸುವ ಗಾಳಿ

**ಮಂದಾರ** ಪಾರಿಜಾತ, ಕಮಲ, ಒಂದು ಜಾತಿಯ ದಿವ್ಯ ಪುಷ್ಪ; ಕಲ್ಪವೃಕ್ಷ; ಮಂದರ ಪರ್ವತ

**ಮಂದಿರ** ಶರೀರ, ದೇಹ, ಮನಸ್ಸು, ನಿವಾಸ

**ಮಂದಿವಾಳ** ಅಧಿಕಪ್ರಸಂಗಿ, ಅಹಂಕಾರಿ

**ಮಕರ** ಮೊಸಳೆ; ಕುಬೇರನ ನವನಿಧಿಗಳಲ್ಲಿ ಒಂದು

**ಮಕರಂದ** ಹೂವಿನ ರಸ

**ಮಕರಕಂಠಿ** ಮೊಸಳೆಯಾಕಾರದ ಒಂದು ಬಗೆಯ ಆಭರಣ

**ಮಕರಕುಂಡಲ** ಮೊಸಳೆ ಆಕೃತಿಯ ಕರ್ಣಾಭರಣ

**ಮಕರಕುಂಡಲಧರ** ವಿಷ್ಣು

Rarest Archiver

**ಮಕರಧ್ವಜ** ಮೊಸಳೆ ಚಿಹ್ನೆಯ ಧ್ವಜ–ಮನ್ಮಥ; ಚಂದ್ರಹಾಸನ ಕಿರಿಯ ಹೆಂಡತಿಯ ಮಗ
**ಮಕರಧ್ವಜನಪಿತ** ಕಾಮನ ಪಿತ–ವಿಷ್ಣು
**ಮಕರಧ್ವಜಾರಿ** ಶಿವ
**ಮಕರವಾಹನ** ಮೊಸಳೆಯನ್ನೇ ವಾಹನವಾಗಿ ಉಳ್ಳವನು–ಕಾಮ
**ಮಕರಾಂಕ** ಮನ್ಮಥ
**ಮಕರಾರಿ** ಆನೆಯನ್ನು ಹಿಡಿದ ಮೊಸಳೆಯನ್ನು ಕೊಂದವನು–ವಿಷ್ಣು
**ಮಕರಾರಿರಕ್ಷಕ** ಮೊಸಳೆ ಹಿಡಿದ ಆನೆಯನ್ನು ರಕ್ಷಿಸಿದವನು–ವಿಷ್ಣು
**ಮಕರಾಲಯ** ಸಮುದ್ರ
**ಮಕರಿ** ಹೆಣ್ಣು ಮೊಸಳೆ
**ಮಕರಿಕಾಪತ್ರ** ಸ್ತ್ರೀಯರು ಕಪೋಲದಮೇಲೆ ಬಣ್ಣಗಳಿಂದ ಬರೆದು ಕೊಳ್ಳುವ ಚಿತ್ರ
**ಮಕರಿಕು** ಮಕರಿಕಾಪತ್ರ
**ಮಕುಟ** ಕಿರೀಟ, ತಲೆ
**ಮಕ್ಷಕ, ಮಕ್ಷಿಕ** ನೊಣ
**ಮಖ** ಯಜ್ಞ
**ಮಖಜೆ**ಯಜ್ಞವೇದಿಕೆಯಿಂದ ಪ್ರಾದುರ್ಭವಿಸಿದ ವಳು ದ್ರೌಪದಿ
**ಮಖಮಲ್ಲು** ಒಂದು ಬಗೆಯ ನಯವಾದ ಬಟ್ಟೆ, ರೇಷ್ಮೆಬಟ್ಟೆ, ತೆಳ್ಳನೆಯ ವಸ್ತ್ರ
**ಮಖಶತ** ನೂರು ಯಜ್ಞಗಳನ್ನು ಮಾಡಿದವನು–ಇಂದ್ರ
**ಮಗಧಾಧಿಪ** ಜರಾಸಂಧ
**ಮಗನಕೊಂದವನು** ನರಕಾಸುರನನ್ನು ಕೊಂದ ವನು–ಕೃಷ್ಣ
**ಮಗುಟ** ರೇಷ್ಮೆಪಂಚೆ; ಕಿರೀಟ
**ಮಗುಟವರ್ಧನ** ಕಿರೀಟಧಾರಿಯಾದ ಚಕ್ರವರ್ತಿ
**ಮಗುಪರಿಪಾಲ** ಪ್ರಹ್ಲಾದ ರಕ್ಷಕ–ನರಸಿಂಹ
**ಮಗುವಿನಮಾತು** ನಿಷ್ಪಾಪಬುದ್ಧಿಯವನ ಮಾತು, ಬಾಲಿಶ ವಾಕ್ಯ
**ಮಗುಳು** ಹಿಂತಿರುಗು, ಪುನಃ, ಮತ್ತೆ
**ಮಗ್ಗಿಸು** ಕೆಳಗೆ ಚೆಲ್ಲು, ನಾಶಮಾಡು
**ಮಗ್ಗು** ಕಳೆಗುಂದು, ನಾಶವಾಗು
**ಮಗ್ನ** ತಲ್ಲೀನ, ನಿರತನಾದ, ಮುಳುಗಿದ
**ಮಘವನ್ಮುಖ** ಇಂದ್ರನೇ ಮೊದಲಾದ ದೇವತೆಗಳಿಂದ
**ಮಚ್ಚ, ಮಚ್ಚಕ** ಮತ್ಸ್ಯ, ಮೀನು
**ಮಚ್ಚಗಂಗಳು** ಮೀನಾಕ್ಷಿ–ಲಕ್ಷ್ಮಿ
**ಮಚ್ಚರ** ಮತ್ಸರ, ಅಸೂಯೆ, ದ್ವೇಷ
**ಮಚ್ಚು** ಪ್ರೀತಿ, ಮೆಚ್ಚು; ಆಯುಧ
**ಮಚ್ಚೆ** ಮೈಮೇಲೆ ಇರುವ ಕಲೆ, ಗುರುತು
**ಮಚ್ಛಾಸನಾತೀತ, (ಮತ್‌ಶಾಸ** ನನ್ನ ಆಜ್ಞೆಯನ್ನು ಮೀರಿದವನು
**ಮಜ್ಜನ** ಸ್ನಾನ
**ಮಜ್ಜಾ, ಮಜ್ಜೆ** ಶುಕ್ರ, ಧಾತು, ವೀರ್ಯ; ಮೂಳೆಯಲ್ಲಿರುವ ಮೆದುವಾದ ಕೊಬ್ಬು
**ಮಟ್ಟಿ** ಮಣ್ಣು, ಮೃತ್ತಿಕೆ, ಹಳದಿ ಬಣ್ಣದ ಮಣ್ಣು, ಗೋಪಿಚಂದನ
**ಮಟ್ಟೆ** ತೆಂಗಿನ ಒಣಗಿದ ಗರಿ, ಸಿಪ್ಪೆ, ಸೋಗೆ
**ಮಠ** ಶಾಲೆ; ಸನ್ಯಾಸಿಯ ಆಲಯ
**ಮಠದಯ್ಯ** ಸ್ವಾಮಿ, ಗುರು
**ಮಡಗು** ಇಡು; ಮಡಿಯಿಂದಿರು(ತೆಲುಗು)
**ಮಡದಿ** ಹೆಂಡತಿ, ಪತ್ನಿ
**ಮಡಿ** ಶುಭ್ರ, ನೈರ್ಮಲ್ಯ; ಆಚಾರ, ಸಂಪ್ರದಾಯ
**ಮಡಿದೆಲೆ** ಮಡಿಚಿದ ಎಲೆ (ವೀಳ್ಯ)
**ಮಡಿವಾಳ** ಅಗಸ, ರಜಕ, ದೋಬಿ
**ಮಡಿವಾಳರಿಗೆ ಶತ್ರು** ಅಗಸನ ಶತ್ರು ಕೌಪೀನ, ಲಂಗೋಟಿ (ಇದನ್ನು ಬಳಸುವವರು ಅಗಸನ ಹಂಗನ್ನೇ ತೊರೆದವರು)
**ಮಡಿಸು, ಮಡುಹು** ಸಾಯಿಸು, ಕೊಲ್ಲು
**ಮಡಿಹುಡಿ** ಮಡಿ, ಶುಭ್ರತೆ
**ಮಡು, ಮಡುವು** ಆಳವಾದ ನೀರಿರುವ ಜಾಗ, ಕ್ಷೀರಸಾಗರ

Rarest Archive

**ಮಡುವಪೊಗು** ಸಂಸಾರ ಸಾಗರವನ್ನು ಪ್ರವೇಶಿಸು, ಪೂರ್ಣ ಸಂಸಾರಾಸಕ್ತನಾಗು
**ಮಡ್ಡ** ಅಜ್ಞಾನಿ, ದಡ್ಡ
**ಮಡ್ಡಿ** ಗಸಿ, ಗಷ್ಟು; ಕಡಲೆ ಹೂರಣ, ಹಯಗ್ರೀವ ಎಂಬ ಸಿಹಿತಿನಿಸು
**ಮಣಿ** ರತ್ನ; ನಮಸ್ಕರಿಸು
**ಮಣಿಕರ್ಣಿಕಾ** ಕಾಶಿಯಲ್ಲಿ ಒಂದು ಸ್ನಾನಘಟ್ಟ
**ಮಣಿಗಣ** ರತ್ನಗಳ ಸಮೂಹ
**ಮಣಿಗಾರತನ** ಅಕ್ಕಸಾಲಿಗ ಮಾಡುವ ಚಾಲಾಕು, ಮೋಸ; ಕುಸುರಿ ಕೆಲಸ ಮಾಡುವವನ ಕೈಚಳಕ, ಮೋಸ
**ಮಣಿದಾಮ** ರತ್ನದ ಉಡುದಾರ
**ಮಣಿಪುರ** ಲಂಕಾಪಟ್ಟಣ (ಮಣಿಗಳಿಂದ ನಿರ್ಮಿತವಾದುದರಿಂದ), ಬಭ್ರುವಾಹನನ ಊರು
**ಮಣಿಬುರುಡೆ** ಆಭರಣ, ಒಡವೆ
**ಮಣಿಮಂತ** ಒಬ್ಬ ದೈತ್ಯ; ಕುಬೇರನ ಭೃತ್ಯ
**ಮಣಿಮೌಳಿ** ತಲೆಯ ಮೇಲೆ ರತ್ನದ ಕಿರೀಟ ವಿರುವವನು, ಕಿರೀಟಿ
**ಮಣೆಗಾರ, ಮಣೆಯಗಾರ** ಮೇಲ್ವಿಚಾರಿಕ, ಗ್ರಾಮಾಧಿಕಾರಿ, ತೆರಿಗೆ ವಸೂಲಾತಿ ಅಧಿಕಾರಿ; ಜಾಣ
**ಮತ್** ನನ್ನ
**ಮತ** ತತ್ತ್ವಸಿದ್ಧಾಂತ, ಅಭಿಪ್ರಾಯ; ಪಂಗಡ, ಪಂಥ
**ಮತಂಗ** ಆನೆ; ಮತಂಗ ಋಷಿ
**ಮತಾಪು** ಸುಡುಮದ್ದಿನ ಬಣ್ಣ ಚೆಲ್ಲುವ ಕಡ್ಡಿ
**ಮತಾಬ್ಧಿ** ಮತ ಎಂಬ ಸಮುದ್ರ
**ಮತಿ** ಬುದ್ಧಿ, ತಿಳಿವಳಿಕೆ
**ಮತಿಬೇಡು** ಜ್ಞಾನವನ್ನು ಬೇಡು
**ಮತಿಯೇಕ** ಒಂದೇ ಮನಸ್ಸು
**ಮತಿವಿಕಳ** ಬುದ್ಧಿಗೆಟ್ಟವ, ದಡ್ಡ
**ಮತಿಸಿದ್ಧಿ** ಬುದ್ಧಿಯ ಪರಿಪಕ್ವತೆ
**ಮತ್ಕುಲ** ನನ್ನ ಕುಲ
**ಮತ್ಕುಲದೇವ** ನನ್ನ ಕುಲದೈವ
**ಮತ್ತ** ಮದಿಸಿದ, ಅಮಲೇರಿದ, ಸೊಕ್ಕಿದವ, ಗರ್ವದಿಂದಕೂಡಿದ
**ಮತ್ತಳಿ** ಮದಿಸಿದ/ಮತ್ತೇರಿದ ದುಂಬಿ
**ಮತ್ತಿಮರ** ಅರ್ಜುನವೃಕ್ಷ, ಸಾಲವೃಕ್ಷ
**ಮತ್ತೇಭ** ಮದಿಸಿದ ಆನೆ
**ಮತ್ತೇಭಕಂಠೀರವ** ಮದಿಸಿದ ಆನೆಗೆ ಸಿಂಹ ಸ್ವರೂಪದವನು–ಶ್ರೀಹರಿ
**ಮತ್ಸರ** ಹೊಟ್ಟೆಕಿಚ್ಚು, ಈರ್ಷ್ಯೆ
**ಮತ್ಸ್ಯ** ಮೀನು, ಮತ್ಸ್ಯಾವತಾರದ ವಿಷ್ಣು
**ಮತ್ಸ್ಯಕೇತ** ಮೀನಿನ ಬಾವುಟ ಉಳ್ಳವ–ಮನ್ಮಥ
**ಮತ್ಸ್ಯೇಶ** ವಿರಾಟರಾಜ; ಮತ್ಸ್ಯದೇಶದ ಒಡೆಯ
**ಮಥನ** ಕಡೆಯುವುದು; ಒಂದು ವಿಚಾರವನ್ನು ಕುರಿತು ವಿಚಾರ ಮಾಡುವುದು
**ಮಥನಿಸು** ಪುಡಿಮಾಡು, ಜಗಳವಾಡು
**ಮಥಿಸು** ಕಡೆ; ತಿಕ್ಕು; ಚರ್ಚಿಸು
**ಮದ** ಸೊಕ್ಕು, ಗರ್ವ, ಅಮಲು; ಆನೆಗೆ ಉಂಟಾಗುವ ಕಾಮೋದ್ರೇಕ
**ಮದಕರಿ, ಮದಗಜ** ಗಜೇಂದ್ರ, ಮದಿಸಿದ ಆನೆ
**ಮದಗಜಗಮನೆ** ಮದಿಸಿದ ಆನೆಯ ನಡಿಗೆಯವಳು, ಹೆಂಗಸು, ಹೆಂಡತಿ
**ಮದಡ** ಅಜ್ಞಾನಿ, ದಡ್ಡ, ಮೂರ್ಖ
**ಮದಡು** ತಿಳಿಗೇಡಿತನ, ಮೌಢ್ಯ
**ಮದಡೆ** ಪೆದ್ದಿ, ತಿಳಿಗೇಡಿ ಹೆಣ್ಣು
**ಮದನ** ಮನ್ಮಥ
**ಮದನಕದನ** ಕಾಮಕೇಳಿ
**ಮದನಕೋಟಿಮೋಹನಾಂಗ** ಕೋಟಿ ಮನ್ಮಥರ ಸೌಂದರ್ಯವುಳ್ಳವನು, ಅತ್ಯಂತ ಸುಂದರ
**ಮದನಗೋಪಾಲ** ಮನ್ಮಥನಂತೆ ಸುಂದರನಾದ ಕೃಷ್ಣ

Rarest Archive

**ಮದನಜನಕ** ಕೃಷ್ಣ
**ಮದನನಾಟ** ಕಾಮಸಾಟ, ಕಾಮಕೇಳಿ
**ಮದನಪಿತ** ಕಾಮನ ತಂದೆ–ವಿಷ್ಣು
**ಮದನಮೋಹನ** ಮನ್ಮಥನನ್ನೂ ಬೆರಗುಗೊಳಿಸುವ ಚೆಲುವ–ವಿಷ್ಣು
**ಮದನಸಿಂಗಾಡಿ** ಕಾಮನ ಬಿಲ್ಲು
**ಮದನಾರಿ** ಶಿವ
**ಮದಮಾನಿಸ** ಗರ್ವದಮನದವ, ಗರ್ವಿಷ್ಟ
**ಮದಮುಖ** ಮತ್ತರಾದವರಲ್ಲಿ ಮುಖ್ಯನಾದವನು; ಮೂರ್ಖ; ಅಹಂಕಾರಿ, ಗರ್ವಿ; ದೈತ್ಯ
**ಮದರೂಪು** ಅಹಂಕಾರದ ಅವತಾರ
**ಮದವಾರಣ** ಮದಕರಿ, ಮದಿಸಿದ ಆನೆ
**ಮದಿರಾಕ್ಷಿ** ಪಾನಾಸಕ್ತರಾದಂತೆ ಕಣ್ಣುಳ್ಳ ಹೆಂಗಸು
**ಮದಿಷ್ಠೆ** ಪಾನಮತ್ತಳಾದ; ಮಾಯೆ
**ಮದುರಿಂಬೆ** ಮದುಗುಣಿಕೆ, ದತ್ತೂರ
**ಮದ್ದಾನೆಗಳೆಂಟು** ಅಷ್ಟಮದಗಳು
**ಮದ್ದಿಕಾಯಿ** ಮಕ್ಕಳಿಗೆ ಹಾಕುವ ಮತ್ತಿಕಾಯಿಯ ಆಕಾರದ ಒಂದು ಆಭರಣ
**ಮದ್ದು** ಔಷಧಿ; ಉಪಾಯ; ವಿಷ; ಒಣ ಸೌದೆಯ ತುಂಡು
**ಮದ್ದುಗುಣಿಕೆ** ಒಂದು ಜಾತಿಯ ಗಿಡ, ದತ್ತೂರ, ಉಮ್ಮತ್ತ
**ಮದ್ದುಮಾಡು** ಔಷಧಿ ಮಾಡು, ಪರಿಹಾರಮಾಡು
**ಮಧು** ಜೇನುತುಪ್ಪ; ಹೆಂಡ; ಮಧು ಎಂಬ ದೈತ್ಯ
**ಮಧುಕರ** ಗುಂಗೀಹುಳ, ಭೃಂಗ, ದುಂಬಿ; ಭಿಕ್ಷೆ
**ಮಧುಕರಕುರುಳು** ದುಂಬಿಯಂತೆ ಕಪ್ಪಾದ ಗುಂಗುರು ಕೂದಲು
**ಮಧುಕರಿ(ವೃತ್ತಿ)** ಭಿಕ್ಷಾನ್ನ ಎತ್ತುವುದು, ವಿದ್ಯಾರ್ಜನೆಗಾಗಿ ಅನ್ನ ಬೇಡುವವನು, ಯಾಯಾವಾರ
**ಮಧುಕೈಟಭ** ಮಧು ಮತ್ತು ಕೈಟಭವೆನ್ನುವ ರಾಕ್ಷಸರು, ಮನ, ಬುದ್ಧಿಮಾನಿ ದೈತ್ಯರಿಬ್ಬರು
**ಮಧುಘಾತಿ** ಮಧುಸೂದನ–ವಿಷ್ಣು
**ಮಧುದ್ವಿಷ** ಕೃಷ್ಣ
**ಮಧುಪ** ಜೇನುನೊಣ, ದುಂಬಿ; ಕುಡುಕ, ಮದ್ಯಪಾನಿ; ಮ್ಲೇಚ್ಛ
**ಮಧುಪನವಿರು** ದುಂಬಿಗುರುಳು
**ಮಧುಪರ್ಕ** ಮೊಸರು, ತುಪ್ಪ, ನೀರು, ಜೇನು, ಹಣ್ಣು ಮತ್ತು ಸಕ್ಕರೆ ಸೇರಿದ ಮಿಶ್ರಣ
**ಮಧುಪುರ(ರಿ)** ಮಥುರೆ; ಮಧೂರು (ಕಾಸರಗೋಡು ಸಮೀಪ)
**ಮಧುರ** ಸಿಹಿಯಾದುದು; ಜೇನು ನೊಣ
**ಮಧುವೈರಿ, ಮಧುಸೂದನ** ಮಧು ಎಂಬ ರಾಕ್ಷಸನನ್ನು ಕೊಂದವನು–ಕೃಷ್ಣ
**ಮಧೂಕ** ಒಂದು ಜಾತಿಯ ಗಿಡ
**ಮಧ್ಯಗೇಹ** ಶ್ರೀ ಮಧ್ವಾಚಾರ್ಯರ ತಂದೆ, ಮಧ್ಯದ ಮನೆ, ಮಧ್ವರ ತಂದೆಯ ಮನೆ
**ಮಧ್ಯಮ** ತಾಮಸ ಜೀವಿ
**ಮಧ್ಯಮೆ** ಮೈನೆರೆದ ಹೆಣ್ಣು
**ಮಧ್ಯವಲಿ** ಶಿವನಸಮುದ್ರದಲ್ಲಿರುವ ಮಧ್ಯರಂಗ–ರಂಗನಾಥ
**ಮಧ್ಯಸಿಂಧೂರವದನ** ವಿಶ್ವನಾಮಕ ಪರಮಾತ್ಮ (ಇವನಿಗೆ ಹತ್ತೊಂಬತ್ತು ಮುಖಗಳು, ಮಧ್ಯದ ಮುಖ ಮಾತ್ರ ಗಜಮುಖ, ಉಳಿದ ಮುಖಗಳು ಮನುಷ್ಯನ ಮುಖಗಳು)
**ಮಧ್ಯಾಲಯಜ** ಮಧ್ಯಗೇಹಭಟ್ಟರ ಮಗ ಮಧ್ವಾಚಾರ್ಯರು
**ಮನಕೆಬರು** ಮನಸ್ಸಿಗೆ ಬರು, ಒಪ್ಪಿಗೆಯಾಗು
**ಮನಗಾಣು** ಸ್ವಾನುಭವದಿಂದ ತಿಳಿಯುವುದು
**ಮನಗುತೆ** ಶ್ರದ್ಧೆ, ಮನಸ್ಸಿನಲ್ಲಿ ತುಡಿಕೆ
**ಮನದಣಿ** ಮನಸ್ಸಿಗೆ ತೃಪ್ತಿಯಾಗು
**ಮನದೀಪ್ತಿ** ಜ್ಞಾನ, ತಿಳಿವಳಿಕೆ
**ಮನದೂಟ** ಮನಸ್ಸಿನ ಊಟ, ಮನದಲ್ಲಿ ಮಂಡಿಗೆ ತಿನ್ನುವುದು

Rarest Archiver

**ಮನದೆರೆ** ಮನಸ್ಸಿನ ಚಂಚಲತೆ
**ಮನಮೈಲ** ಮನಸ್ಸಿನ ಕೊಳೆ
**ಮನವಾರೆ** ಮನಸಾರೆ, ಮನಸ್ಸಿಟ್ಟು, ಮನಃ ಪೂರ್ವಕವಾಗಿ
**ಮನಸಿಜ** ಕಾಮ, ಮನ್ಮಥ
**ಮನಸಿಜನಯ್ಯ** ಮನ್ಮಥಜನಕ–ವಿಷ್ಣು
**ಮನಸಿಜಪಿತ** ಕೃಷ್ಣ
**ಮನಸಿಜಾತ** ಮನ್ಮಥ, ಕಾಮ
**ಮನಸ್ಕೆ** ಮನಸ್ಸುಳ್ಳವಳು
**ಮನಸ್ಸು** ಚಿತ್ತ, ಬುದ್ಧಿ; ಆಸೆ, ಆಕಾಂಕ್ಷೆ
**ಮನಾಮಯ** ಮನೋರೋಗ
**ಮನೀಷಿ** ಪಂಡಿತ
**ಮನು** ಸ್ವಾಯಂಭು ಮನು, ಯುಗಪ್ರವರ್ತಕ
**ಮನುಜಕೇಸರಿ, ಮನುಜಮೃಗ** ನರಮೃಗ ಸ್ವರೂಪಿಯಾದ ನರಸಿಂಹ
**ಮನುಜರಮಾಯೆ** ಮನುಷ್ಯರಂತೆ ಮಾಯಾವೇಷ ಧರಿಸುವುದು
**ಮನುಸತಿ** ಶತರೂಪಾ
**ಮನೆ** ಆಲಯ, ಸದನ, ಗೃಹ, ಧಾಮ; ದೇಹ
**ಮನೆನೀನೆಂಬ** ಎಲ್ಲಾ ವಿಧದಲ್ಲಿಯೂ ನಿನ್ನನ್ನೇ ಆಶ್ರಯವೆಂದು ನಂಬಿದ
**ಮನೆಯಒಳಗೆಏಳುಕುದುರೆ** ಸಪ್ತವ್ಯಸನಗಳು
**ಮನೆವಾರ್ತೆ** ಗೃಹಕೃತ್ಯ
**ಮನೋಗತತಿಮಿರಕ್ಕೆಪೂಷ** ಮನಸ್ಸಿನ ಕತ್ತಲೆಗೆ ಸೂರ್ಯ
**ಮನೋಜ** ಮನ್ಮಥ
**ಮನೋದೂರ** ಮನಸ್ಸಿಗೆ ತಿಳಿಯದಂತಹವನು (ಅಗಮ್ಯ)
**ಮನೋಧರ್ಮ** ಮನಸ್ಸಿನ ರೀತಿ, ಬಗೆ; ಹಾಡುವಾಗ ರಾಗದ ಸ್ವರೂಪವನ್ನು ಸ್ವತಂತ್ರವಾಗಿ ವಿಸ್ತಾರ ಮಾಡಿ ಪ್ರದರ್ಶಿಸುವುದು
**ಮನೋನ್ಮನ** ಉದ್ರಿಕ್ತ ಮನಸ್ಸು
**ಮನೋಭಿಮಾನಿ** ಮನಸ್ಸಿಗೆ ಅಭಿಮಾನಿ–ರುದ್ರ, ಕಾಮ, ಚಂದ್ರ, ಪರ್ಜನ್ಯ
**ಮನೋಭಿಮಾನಿನಿ** ರಮಾ, ಗೌರಿ
**ಮನೋಭೀಷ್ಟೆ** ಮನಸ್ಸಿನ ಇಚ್ಛೆ, ಬಯಕೆ
**ಮನೋರಥ** ಆಸೆ, ಬಯಕೆ
**ಮನ್ನಣೆ** ಮರ್ಯಾದೆ
**ಮನ್ನಾರು** ಮನೋಹರ, ಸುಂದರ; ಮನ್ನಾರುಕ್ಷೇತ್ರ: ಕೃಷ್ಣ
**ಮನ್ನೆಯ** ಮೆಚ್ಚಿನ
**ಮನ್ನೆವಾಕು** ಮನ್ನಣೆಯ ಮಾತು
**ಮನ್ನೆವಾರ** ದಳಪತಿ
**ಮನ್ಮಥಪಿತ** ಶ್ರೀಹರಿ
**ಮನ್ಯು** ಕೋಪ ಸಿಟ್ಟು; ದುಃಖ; ಮನ್ಯುನಾಮಕ ನರಸಿಂಹ, ಉಗ್ರನರಸಿಂಹ
**ಮಬ್ಬು** ಮೋಹ, ಮೋಡಿ; ಮಂಕು, ಅಜ್ಞಾನ
**ಮಬ್ಬುಚರ** ನಿಶಾಚರ, ರಾಕ್ಷಸ
**ಮಮ** ನನ್ನ
**ಮಮಕರಿಸು** ಒಪ್ಪಿಕೊಳ್ಳು
**ಮಮಕಾರ** ಪ್ರೀತಿ, ಒಲವು
**ಮಮಕಾರತತ್ತ್ವದಲಿ** ಅಹಂಕಾರ ತತ್ತ್ವದಲಿ (ಅಹಂಕಾರ ತತ್ವಕ್ಕೆ ಅಭಿಮಾನಿ ರುದ್ರ ದೇವರು)
**ಮಮಸ್ವಾಮಿ** ವಿಷ್ಣು
**ಮಮ್ಮಾಡಿ** ವಿಕಾರಗೊಳ್ಳು
**ಮಮ್ಮು** ಅನ್ನ, ಊಟ (ಬಾಲಭಾಷೆ)
**ಮಮ್ಮುಳಿಕೆ** ತಳಮಳ, ಸಂಕಟ; ಭಯಂಕರವಾದ ಸಾವು
**ಮಮ್ಯ (?)** ಸಿಟ್ಟು (?)
**ಮಯಜಾ** ನನ್ನ ಮಗಳು
**ಮಯೂಖ** ಕಿರಣ
**ಮಯೂರ** ನವಿಲು
**ಮಯೂರವಾಹಿನಿ** ನವಿಲನ್ನು ವಾಹನವಾಗಿ ಹೊಂದಿರುವ ಸರಸ್ವತಿ

Rarest Archives

**ಮರಂದ** ಜೇನು, ಮಕರಂದ
**ಮರಕತ** ನವರತ್ನಗಳಲ್ಲಿ ಒಂದು, ಪಚ್ಚೆ, ಹಸಿರು ಬಣ್ಣದ ರತ್ನ
**ಮರಕುಟ** ಮರಕುಟಕ ಹಕ್ಕಿ, ಕುರರ, ಮರಕಡಿ
**ಮರಗಾಲ** ಹಡಗುಗಳನ್ನಿಟ್ಟುಕೊಂಡು ವ್ಯಾಪಾರ ಮಾಡುವವನು; ಬೆಸ್ತ; ಮರದ ಕಾಲಮೇಲೆ ನಡೆವವನು
**ಮರಗಿ** ಮರಗಮ್ಮ(ಜಾನಪದ ದೇವತೆ)
**ಮರಗು** ಮೊಗ್ಗು
**ಮರಗೆ** ಮರದಲ್ಲಿ ಮಾಡಿದ ಅಗಲಬಾಯಿಯ ಪಾತ್ರೆ, ಕಲ್ಲುಮರಗೆ
**ಮರಣಕಾಲದಿಕೂಗಿದವ** ಅಜಾಮಿಳ
**ಮರವಡು** ಮರಗಟ್ಟು, ಸ್ಪರ್ಶಜ್ಞಾನವಿಲ್ಲದುದು
**ಮರವೆ, ಮರಹು** ಅಜ್ಞಾನ; ಅದೃಶ್ಯವಾಗುವುದು
**ಮರಳು** ಮುಖ ತಿರುಗಿಸು, ಹಿಂದಿರುಗು
**ಮರಾಳ** ಹಂಸ, ಒಂದು ಪಕ್ಷಿಯ ಹೆಸರು; ಕಾಡಿಗೆ, ಅಂಜನ; ಮೃದುವಾದ
**ಮರಿಚ, ಮರೀಚ** ಮೆಣಸು
**ಮರಿಯಾದೆ** ಗೌರವ
**ಮರೀಚಿ** ಕಾಂತಿ, ಕಿರಣ, ಬೆಳಕು
**ಮರುಗ** ಒಂದುಬಗೆಯ ಸುವಾಸನೆಯ ಸಸ್ಯ
**ಮರುತ್(ತ)** ವಾಯುದೇವರು; ಗಾಳಿ
**ಮರುತನನಿಜಪತ್ನಿ** ವಾಯುದೇವನ ಪತ್ನಿ-ಭಾರತೀದೇವಿ
**ಮರುತಪಾವಕ** ಗಾಳಿ, ಬೆಂಕಿ
**ಮರುತಮತ** ಮಧ್ವಮತ
**ಮರುತಸುತ, ಮರುತಾತ್ಮಜ** ವಾಯುಪುತ್ರ ಹನುಮಂತ
**ಮರುತಾಶ್ರಯ** ಶ್ರೀಹರಿ
**ಮರುದಂಶ** ವಾಯುವಿನ ಅವತಾರ, ಮಧ್ವಾಚಾರ್ಯರು
**ಮರುದ್ಗಣ** ಕಶ್ಯಪ ಮುನಿಯ ಹೆಂಡತಿ ದಿತಿಯ ಗರ್ಭವನ್ನು ಇಂದ್ರ ಏಳು ಭಾಗವಾಗಿ ಕತ್ತರಿಸಿದ. ಆಗ ಆಗರ್ಭ ಅಳತೊಡಗಿತು. ಏಳು ತುಂಡುಗಳನ್ನು ಮರಳಿ ಏಳು ಏಳು ಭಾಗಮಾಡಿ (ಮಾ+ರುದ) ಅಳಬೇಡ ಎಂದು ಹೇಳಿದ. ದಿತಿಯ ಬೇಡಿಕೆಯಮೇಲೆ ಅವರಿಗೆ ದೇವತ್ವವನ್ನು ಕೊಟ್ಟು ಮಾರುತ ಅಥವಾ ಮರುತ್ತಗಳೆಂದು ಹೆಸರಿಟ್ಟ. ಇಂತು ವಾಯು (ಮರುತ್ತ) ಗಳಲ್ಲಿ 49 ಬಗೆಯಾಯಿತು
**ಮರುನ್ಮತ** ಮಧ್ವಮತ
**ಮರುವುಡುವ** ವಸ್ತ್ರಾಂತರವಾಗಿ ಉಡುವ ವಸ್ತ್ರ
**ಮರುಹುಟ್ಟ** ಪುನರ್ಜನ್ಮವನ್ನು ಪಡೆದವ, ದ್ವಿಜ
**ಮರುಳ್** ಪಿಶಾಚಿ, ತಿಳುವಳಿಕೆಯಿಲ್ಲದವನು
**ಮರುಳ** ಭೂತ, ಹೆಡ್ಡ
**ಮರುಳಮತಿ** ವಿಪರೀತ ಬುದ್ಧಿ, ಮೋಹಕ್ಕೊಳಗಾದ ಬುದ್ಧಿಯವ
**ಮರುಳಾಟ** ಹುಚ್ಚಾಟ, ಹಾಸ್ಯ, ಗೇಲಿ
**ಮರುಳು** ಹುಚ್ಚು, ಬುದ್ಧಿಭ್ರಮೆ; ಕಕ್ಕಾಬಿಕ್ಕಿ
**ಮರುಳುಗೊಂಬವನ** ಬುದ್ಧಿಭ್ರಮಣೆಯಾದವನ, ಭೂತಗಣಗಳಿಂದ ಕೂಡಿದವ
**ಮರುಳುತನ** ಹುಚ್ಚು
**ಮರೆ** ಮೊರೆ, ಶರಣಾಗತಿ, ಶರಣು, ಆಶ್ರಯ; ಮಾಯವಾಗು, ಕಾಣದಂತಾಗು
**ಮರೆಯುಗು** ಮರೆಹೊಗು, ಶರಣಾಗು
**ಮರ್ಕಟ** ಕೋತಿ
**ಮರ್ತ<ಮರ್ತ್ಯ** ಸಾವಿಗೊಳಗಾಗುವ ಲೋಕ, ಭೂಲೋಕ
**ಮರ್ದನ** ಕೊಲ್ಲು, ನಾಶಮಾಡು, ಹಿಂಸೆ, ತೊಂದರೆ
**ಮರ್ದಾಯಜೀವಿ** ರಾಜಸ ಜೀವರು
**ಮರ್ದಿಸು** ನಾಶಮಾಡು, ಸಂಹರಿಸು, ಶಿಕ್ಷೆಗೆ ಒಳಪಡಿಸು; ಒತ್ತು
**ಮರ್ಮ** ಒಳ ಅರ್ಥ, ಗುಟ್ಟು, ಗೂಢಾರ್ಥ, ರಹಸ್ಯ

Rarest Archive

**ಮರ್ಮಕರ್ಮ** ರಹಸ್ಯಕಾರ್ಯ
**ಮರ್ಮಜ್ಞ** ಜ್ಞಾನಿ
**ಮರ್ಮಮರ್ಮ** ರಹಸ್ಯ; ಕತ್ತಲೆ
**ಮರ್ಷಣ** ತೊಳೆಯುವುದು
**ಮಲ** ಕೊಳೆ; ಪಾಪ
**ಮಲತ** ಸೊಕ್ಕಿದ
**ಮಲ(ಲೆ)ತಮರುಹು** ಪಾಪದಿಂದ ಕೂಡಿದ ಅಜ್ಞಾನ
**ಮಲ(ಲೆ)ತಮಲ್ಲರಗಂಡ** ಎದುರಿಲ್ಲದ ಬಲಿಷ್ಠರಾದ ಜಟ್ಟಿಗಳ ಗಂಡ, ಭೀಮಸೇನ
**ಮಲ(ಲೆ)ಯರಾಜ** ಪರ್ವತ ರಾಜ
**ಮಲಕು** ಜೀರ್ಗುಣಿಕೆ; ಸರಗಂಟು; ತಲೆಯಲ್ಲಿ ಧರಿಸುವ ಆಭರಣ
**ಮಲದಗರ್ತ** ಹೊಲಸಿನ ಹಳ್ಳ
**ಮಲನೀರು< ಮಲ್ನೀರು** ಓಕುಳಿ ಸ್ನಾನ
**ಮಲಭಾಂಡ** ಹೇಸಿಗೆಯ ಪಾತ್ರೆ, ದೇಹ
**ಮಲಮೂತ್ರದ ಭಾಂಡ** ಶರೀರ
**ಮಲಯ, ಮಲಯಜ** ಮಲಯ ಪರ್ವತ; ಶ್ರೀಗಂಧ
**ಮಲಯಜಾಮಿತ ಲೇಪಿತ** ಮಲಯ ಪರ್ವತದಲ್ಲಿ ಹುಟ್ಟಿದ; ಶ್ರೀಗಂಧವನ್ನು ಹಚ್ಚಿದ
**ಮಲಹರಣ** ಪಾಪನಾಶನ
**ಮಲಿನ** ಕೊಳಕು, ಹೊಲಸು; ದೋಷ
**ಮಲಿನಜನಿತ** ಪಾರ್ವತಿಯು ಮೈಮೇಲಿನ ಬೆವರಿನಿಂದ ಹುಟ್ಟಿದವ–ಗಣಪತಿ
**ಮಲೆ** ಗುಡ್ಡ, ಕಾಡು; ಸೊಕ್ಕು, ಗರ್ವ; ಎದುರಿಸು, ಉದ್ಧಟಿಸು, ಪ್ರತಿಭಟಿಸು
**ಮಲೆತ** ಕೊಳೆತ, ಕೊಳೆಯಿಂದ ಕೂಡಿದ; ಗರ್ವಿಸಿದ, ಸೊಕ್ಕಿದ; ಪ್ರತಿಭಟಿಸಿದ
**ಮಲೆಮರಿ** ಬುದ್ಧಿಗೆಡು
**ಮಲ್ಕಾನೆ** ಕಲ್ಮಷದಿಂದ ಕೂಡಿದ್ದು, ಶರೀರ
**ಮಲ್ಲ** ವೀರ, ಜೆಟ್ಟಿ, ಗಟ್ಟಿಗ
**ಮಲ್ಲಕಾಳಗ** ಕುಸ್ತಿ, ಹೋರಾಟ (ಚಾಣೂರ–ಮುಷ್ಟಿಕರ ಕೂಡ ನಡೆದ ಕುಸ್ತಿ)
**ಮಲ್ಲಮರ್ದನ** ಗಟ್ಟಿಗನನ್ನು ನಾಶಮಾಡುವವನು–ಕೃಷ್ಣ
**ಮಲ್ಲಾರಿ** ಕೃಷ್ಣ ಮತ್ತು ಬಲರಾಮರನ್ನು ಕೊಲ್ಲಲು ಕಂಸನು ಕಳುಹಿಸಿದ ಚಾಣೂರ ಮತ್ತು ಮುಷ್ಟಿಕ ಎಂಬ ಮಲ್ಲರನ್ನು ಕೊಂದ ಕೃಷ್ಣ
**ಮಲ್ಲಿಕಾರ್ಜುನ** ಮಲ್ಲಿಗೆಯಂತೆ ಬೆಳ್ಳಗಿರುವ; ಶ್ರೀಶೈಲದಲ್ಲಿರುವ ಶಿವ
**ಮಲ್ಲಿಗೆಗೋಲ** ಮನ್ಮಥ
**ಮವುರಿ<ಮೌರಿ** ಊದುವ ವಾದ್ಯ ವಿಶೇಷ
**ಮಶಕ, ಮಶ್ವ** ಸೊಳ್ಳೆ
**ಮಶ್ರುಣ** ಗಂಧ
**ಮಸಕರಿ<ಮಸ್ಕರಿ** ಬಿದಿರು ಕೋಲು ಹಿಡಿದವನು, ಸಂನ್ಯಾಸಿ, ಚಂದ್ರ
**ಮಸಗು** ಹರಡು; ಕೆರಳು; ತಿಕ್ಕು
**ಮಸಣ<ಶ್ಮಶಾನ** ಸುಡುಗಾಡು
**ಮಸಣಿ** ಒಂದು ಕ್ಷುದ್ರ ದೇವತೆ
**ಮಸಣಿಸು** ಕಳೆಗುಂದಿಸು, ಸಾಯು
**ಮಸರು** ದೂರಸರಿ
**ಮಸಲ** ಆಕಸ್ಮಾತ್ತಾಗಿ, ಒಂದುವೇಳೆ
**ಮಸಿಮಣ್ಣಮಾಡು** ಹೊಲಸುಮಾಡು, ಕೆಡಿಸು
**ಮಸುಳಿಸು** ಕುಂದು, ಕುಗ್ಗು
**ಮಸೆ** ತಿಕ್ಕು, ಒರಸು; ಹೋರಾಡು, ಕಾದು
**ಮಸ್ತಕ** ತಲೆ
**ಮಸ್ತಿ** ಅಮಲು, ಸೊಕ್ಕು, ಆನೆಯ ಮದಾವಸ್ಥೆ
**ಮಹಂತ<ಮಹಾಂತ** ಹಿರಿಯ; ಶ್ರೇಷ್ಠ; ಪೂಜಾರಿ, ಅರ್ಚಕ; ಧರ್ಮದರ್ಶಿ
**ಮಹಕಥೆ** ಉತ್ತಮ ಕಥೆ
**ಮಹತ್** ದೊಡ್ಡ
**ಮಹತಿ** ಹಿರಿಮೆ, ಮಹತ್ವ; ನಾರದನ ವೀಣೆಯ ಹೆಸರು

Rarest Archives

**ಮಹತೀಪಾಣಿಮ** ಮಹತೀವೀಣೆ ಹಿಡಿದಿರುವ ನಾರದ

**ಮಹತು** ಮಹತ್ವ, ಹಿರಿಮೆ, ಶ್ರೇಷ್ಠ; ದೊಡ್ಡ, ಹಿರಿಯ

**ಮಹತೋಮಹೀಂಯಾನ್** ದೊಡ್ಡದರಲ್ಲಿ ದೊಡ್ಡವನು

**ಮಹತ್ತತ್ತ್ವ** ದೊಡ್ಡ ತತ್ತ್ವ, ವಾಯುಬ್ರಹ್ಮರ ತತ್ತ್ವ

**ಮಹತ್ಪುಣ್ಯ** ದೊಡ್ಡ ಪುಣ್ಯ

**ಮಹದ್ವನ** ಅಶೋಕವನ

**ಮಹಧರ್ಮವಿವರ್ಧಕ** ಶ್ರೇಷ್ಠಧರ್ಮ ವೃದ್ಧಿಕರ ಶ್ರೀಹರಿ

**ಮಹಲು** ಮಾಲು; ಅರಮನೆ, ಸೌಧ, ಭವನ

**ಮಹಹವಿಷ್** ಮಹಾಹವಿಃ, ಶ್ರೇಷ್ಠನಾದವನು ಮತ್ತು ಪ್ರಳಯಕಾಲದಲ್ಲಿ ಸಮಸ್ತ ಜಗತ್ತನ್ನೂ ತನ್ನಲ್ಲಿ ಹೋಮಿಸಿಕೊಳ್ಳುವವನು

**ಮಹಾಕಾಲನಿಯಾಮಕ** ಪ್ರಲಯ–ಸೃಷ್ಟ್ಯಾದಿ ಮಹಾಕಾಲಗಳಿಗೆ ನಿಯಾಮಕ ಶ್ರೀಹರಿ

**ಮಹಾಜ್ಞಾನ** ಅಪರೋಕ್ಷಜ್ಞಾನ

**ಮಹಾದುರಿತ** ಘೋರ ಪಾಪ

**ಮಹಾಭಾಗ** ಅತಿಶಯವಾದ ಭಾಗ್ಯ ಸಮುದಾಯ ವುಳ್ಳವನು

**ಮಹಾಭೂತಿ** ವಿಶೇಷ ಸನ್ನಿಧಾನ

**ಮಹಾಮಂತ್ರ** ಅಷ್ಟಮಹಾಮಂತ್ರಗಳು

**ಮಹಾಮಂತ್ರಗಮ್ಯ** ತಂತ್ರಸಾರಸಂಗ್ರಹಲ್ಲಿ ಮತ್ತು ಪುರಾಣಗಳಲ್ಲಿರುವ ಎಪ್ಪತ್ತೊಂಬತ್ತು ಮಹಾ ಮಂತ್ರಕ್ಕೆ ದೊರಕುವವ, ಮಹಾತ್ಮರ ರಹಸ್ಯೋಪದೇಶದಿಂದ ತಿಳಿಯಲ್ಪಡತಕ್ಕವ–ಶ್ರೀಹರಿ

**ಮಹಾಮಂತ್ರರಾಜ** ಅಷ್ಟಾಕ್ಷರ ಮೊದಲಾದ ಮಂತ್ರ ಶ್ರೇಷ್ಠ ಸ್ವರೂಪ–ಶ್ರೀಹರಿ

**ಮಹಾಮಹಾಂತ** ಭಕ್ತ; ಶ್ರೇಷ್ಠ ಅರ್ಚಕ

**ಮಹಾಮಾಯೆ** ಲಕ್ಷ್ಮಿ

**ಮಹಾರೋಗನಿವಾರಣ** ವಿಷ್ಣು

**ಮಹಾಲಯ** ದೊಡ್ಡ ನಾಶ, ಪ್ರಳಯ; ಶ್ರಾದ್ಧಪಕ್ಷ, ಭಾದ್ರಪದ ಬಹುಳ ಅಮಾವಾಸ್ಯೆ ಮತ್ತು ಅಂದು ಸರ್ವಪಿತೃಗಳಿಗೆ ಮಾಡುವ ಶ್ರಾದ್ಧ

**ಮಹಾವಟು** ವಾಮನ

**ಮಹಾಸತಿ** ಭೂದೇವಿ

**ಮಹಿ** ಭೂಮಿ, ಭೂಮಂಡಲ, ಪ್ರಪಂಚ

**ಮಹಿಜ, ಮಹೀಜ** ಭೂಮಿಯಲ್ಲಿ ಹುಟ್ಟಿದುದು, ಮರ, ಗಿಡ, ಇತ್ಯಾದಿ

**ಮಹಿಜೆ** ಸೀತೆ

**ಮಹಿತ** ಪೂಜ್ಯ, ಗೌರವಾರ್ಹನಾದವನು

**ಮಹಿತನುಜೆ** ಸೀತೆ

**ಮಹಿದಾಸ** ಇತರಾದೇವಿಯಲ್ಲಿ ಶ್ರೀಹರಿಯ ಅವತಾರ

**ಮಹಿಧರನಂದನೆ** ಪಾರ್ವತಿ

**ಮಹಿಪತಿ** ಭೂಮಿಗೆ ಒಡೆಯ(ವರಾಹದೇವ)

**ಮಹಿಮ** ಮಹಾತ್ಮ; ಬೇಕೆನಿಸಿದಾಗ ತನ್ನ ಆಕಾರ ಹೆಚ್ಚಿಸಿಕೊಳ್ಳುವ ಶಕ್ತಿ

**ಮಹಿಮಾ** ಅತ್ಯಂತ ದೊಡ್ಡ(ಮಹತ್)ರೂಪ ಸ್ವೀಕರಿಸುವದು

**ಮಹಿಷ** ಕೋಣ, ಕೋಣ ರೂಪದ ಒಬ್ಬ ದೈತ್ಯ

**ಮಹಿಷಿ** ರಾಣಿ; ಎಮ್ಮೆ

**ಮಹೀತಲ(ಳ)** ಭೂಮಿ

**ಮಹೀದೇವಿ** ಧರಣೀದೇವಿ, ಭೂದೇವಿ

**ಮಹೀಧರ** ಪರ್ವತ

**ಮಹೀಧರಪಜಾಧವ** ಪರ್ವತರಾಜನ ಮಗಳಾದ ಪಾರ್ವತಿಯಪತಿ–ಶಿವ

**ಮಹೀಧ್ರ** ಪರ್ವತ

**ಮಹೀಪಾಲ** ಅರಸು, ರಾಜ

**ಮಹೀಸುರ** ತತ್ತ್ವಾಭಿಮಾನಿ; ಭೂಸುರ, ಬ್ರಾಹ್ಮಣ

**ಮಹೇಂದ್ರಸುತ** ವಾಲಿ

**ಮಹೋದಧಿ** ಮಹಾಸಮುದ್ರ, ಸಾಗರ

**ಮಹೋದರ** ದೊಡ್ಡ ಹೊಟ್ಟೆ, ದೊಡ್ಡ ಹೊಟ್ಟೆ ಯುಳ್ಳವನು

Rarest Archive

**ಮಹೋಪದ್ರ** ಮಹಾಕಷ್ಟಕಾಲ
**ಮಹೋರ** ವಿಶಾಲವಾದ ಎದೆ
**ಮಹೋರಗ** ಹೆಬ್ಬಾವು, ಆದಿಶೇಷ
**ಮಹೋರಗಗಿರಿ** ಶೇಷಾದ್ರಿ
**ಮಹೋರವ** ಮಾಹೂರ, ಮಹಾರಾಷ್ಟ್ರದ ನಾಂದೇಡ ಜಿಲ್ಲೆ ಕಿನವಟ ತಾಲ್ಲೂಕಿನಲ್ಲಿರುವ ಒಂದು ಮಹತ್ವದ ದತ್ತಾತ್ರೇಯನ ಸ್ಥಾನ
**ಮಹೌಜಸ** ಮಹತ್ತಾದ ಆತ್ಮಶಕ್ತಿವಂತ
**ಮಹ್ಯಮರ** ಬ್ರಾಹ್ಮಣ
**ಮಳಲು** ಮರಳು
**ಮಳಲುಮಿಟ್ಟೆ** ಉಸುಕಿನ ದಿನ್ನೆ, ಮರಳು ಗುಡ್ಡೆ
**ಮಳ್ಗು** ಮಂಕಾಗು, ಕಳೆಗುಂದು; ಮಾಯವಾಗು, ಕಾಣದಾಗು; ನಾಶಮಾಡು, ಹಾಳುಮಾಡು
**ಮಳ್ಳ<ಮರುಳ** ಹುಚ್ಚ
**ಮಳ್ಳಿದ** ಏನೂ ತಿಳಿಯದವನು
**ಮಾ** ತಾಯಿ; ಮಹತ್ವದ, ದೊಡ್ಡ; ಲಕ್ಷ್ಮೀ; ಸತ್ಯಸೂಚಕ; ಜ್ಞಾನ; ಉದ್ಗಾರ, ಅತಿಶಯಾರ್ಥಕ ಸೂಚಕ
**ಮಾಂಗಾಯಿ<ಮಾಗಾಯಿ** ಮಾವಿನಕಾಯಿ ಆಕಾರ ಉಳ್ಳ ಒಂದು ಆಭರಣ
**ಮಾಂಜು** ಅಡಗಿಸಿಟ್ಟುಕೊ, ಮುಚ್ಚಿಡು
**ಮಾಂದಳಿರು** ಮಾವಿನ ಚಿಗುರು
**ಮಾಂಧಾತ** ಸೂರ್ಯಕುಲದ ಯವ್ವನಾಶ್ವನ ಮಗ ಚಕ್ರವರ್ತಿ
**ಮಾಂಪಾಹಿ** ನನ್ನನ್ನು ಕಾಪಾಡು
**ಮಾಂಶಾವೇಶರು** ಲಕ್ಷ್ಮಿಯ ಅಂಶಾವೇಶವುಳ್ಳವರು
**ಮಾಕಳತ್ರ, ಮಾಕಾಂತ** ಲಕ್ಷ್ಮೀಪತಿ–ವಿಷ್ಣು
**ಮಾಗಧ** ಮಗಧ ದೇಶದ ರಾಜ ಜರಾಸಂಧ; ಹೊಗಳು ಭಟ್ಟ, ಸ್ತುತಿಪಾಠಕ
**ಮಾಗಧರಿಪು** ಜರಾಸಂಧನ ವೈರಿ–ಭೀಮ
**ಮಾಗಿ** ಚಳಿಗಾಲ, ಶಿಶಿರಋತು
**ಮಾಗಿಕೋಗಿಲೆಯಂದದಿ** ಮಾಗಿಯಲ್ಲಿ ಕೋಗಿಲೆ ಮಧುರವಾಗಿ ಹಾಡಲಾರದು; ವಸಂತಋತು ಬರುವ ತನಕ ಕಾದಿರಬೇಕು (ಅಸಹಾಯಕತೆ)
**ಮಾಗು** ಪಕ್ವವಾಗು, ಹಣ್ಣಾಗು
**ಮಾಚು** ತೊಡೆದುಹಾಕು, ಅಳುಕಿಸು, ವಂಚಿಸು, ಮುಚ್ಚಿಡು
**ಮಾಟ** ಇಂದ್ರಜಾಲ, ಕಣ್ಕಟ್ಟು; ಅಭಿಚಾರ, ಮೋಸ, ವಂಚನೆ; ಚೆಲುವು
**ಮಾಡಲಾಪೆ** ಮಾಡಬಲ್ಲೆ
**ಮಾಡಿನಗೂಡು** ಭಕ್ತಿಗಮ್ಯನಾದ ಪರಮಾತ್ಮ; ಮೋಕ್ಷವೆಂಬ ಮನೆ
**ಮಾಡು** ರಚಿಸು, ತಯಾರಿಸು; ಮಹಡಿ, ಉಪ್ಪರಿಗೆ
**ಮಾಣ್, ಮಾಣಿಸು, ಮಾಣು** ನಿಲ್ಲಿಸು; ಬಿಡು; ನಿವಾರಿಸು
**ಮಾಣವ, ಮಾಣವಕ** ಬಾಲಕ, ವಿದ್ಯಾರ್ಥಿ, ವಾಮನರೂಪ;
**ಮಾತಂಗ** ಆನೆ; ಚಂಡಾಲ
**ಮಾತಂಗವರದ** ಗಜೇಂದ್ರವರದ–ಶ್ರೀಹರಿ
**ಮಾತಂಗಿ** ಚಂಡಾಲ ಹೆಂಗಸು; ಶಬರಿ; ದುರ್ಗೆ
**ಮಾತರಿಶ್ವ** ವಾಯು, ಗಾಳಿ, ಮುಖ್ಯಪ್ರಾಣದೇವರು
**ಮಾತಲಿ** ಇಂದ್ರನ ಸಾರಥಿ
**ಮಾತಾಡುವಗುಬ್ಬಿ** ಬುದ್ಧಿ
**ಮಾತುರ<ಮಾತ್ರ** ಕೇವಲ
**ಮಾತುಲ(ಳ)** ಸೋದರಮಾವ
**ಮಾತುಲಾಂತಕ** ಸೋದರಮಾವನನ್ನು ಕೊಂದ ಕೃಷ್ಣ
**ಮಾತುವಾಸೆ<(ಮಾತು+ಭಾಷೆ)** ವಚನ, ಮಾತು, ಪ್ರಮಾಣ
**ಮಾತುಳವೈರಿ, ಮಾತುಳಾಂತಕ** ಮಾವನಾದ ಕಂಸನ ಶತ್ರು–ಕೃಷ್ಣ
**ಮಾತೃ** ತಾಯಿ, ಜನನಿ

Rarest Archives

**ಮಾತ್ರಾಕರಣಯಂತ್ರ** ಅಕ್ಷರಗಳು ಇಂದ್ರಿಯಗಳು ಇವುಗಳ ಅಭಿಮಾನಿ ದೇವತೆಗಳಿಗೆ ನಿಯಾಮಕ –ಶ್ರೀಹರಿ

**ಮಾದಲ(ಳ)** ಒಂದು ಜಾತಿಯ ಹಣ್ಣು

**ಮಾದಿತ** ಗರ್ವಿಷ್ಠ

**ಮಾದೇವಹಾರದವೇಣಿ** ಸರ್ಪದಂತೆ ಹೆರಳುಳ್ಳವಳು, ನೀಳವೇಣಿ

**ಮಾದೇವಿ** ಮಹಾದೇವಿ, ಮುತ್ತೈದೆಯರು

**ಮಾದ್ರವೇಯರು** ನಕುಲ ಸಹದೇವರು

**ಮಾದ್ರೇಯ** ಮಾದ್ರಿಯಮಗ, ನಕುಲ, ಸಹದೇವ

**ಮಾಧರ** ಲಕ್ಷ್ಮಿಯನ್ನು ವಕ್ಷಸ್ಥಳದಲ್ಲಿ ಧರಿಸಿದವನು, ಶ್ರೀನಿಕೇತನ–ವಿಷ್ಣು

**ಮಾಧವ** ವೈಶಾಖಮಾಸ, ವಸಂತಋತು; ಬಿಂದುಮಾಧವ, ಲಕ್ಷ್ಮಿಯ ಗಂಡ–ವಿಷ್ಣು

**ಮಾಧವಿ** ಗೋಪಿಕಾಸ್ತ್ರೀ; ಭೂಮಿ

**ಮಾಧೆ (?)** ಕ್ಷಮೆ; ಭೂಮಿ (?)

**ಮಾನ** ಅಳತೆ, ಸೇರು; ಅಭಿಮಾನ, ಆದರ, ಗೌರವ; ಜನನೇಂದ್ರಿಯ

**ಮಾನದಾನವ** ಅಭಿಮಾನವೆಂಬ ರಾಕ್ಷಸ, ಕಾಲನೇಮಿ

**ಮಾನವಪಂಚಮುಖ, ಮಾನವ** ನರಸಿಂಹ, ಶ್ರೀಹರಿಯ ನಾಲ್ಕನೆಯ ಅವತಾರ

**ಮಾನಸ** ಮನಸ್ಸು, ಪ್ರಜ್ಞೆ

**ಮಾನಸಪೂಜೆ** ಪರಮಾತ್ಮನನ್ನು ಮನದಲ್ಲಿಯೇ ಉಪಚಾರಮಾಡಿ ಸೇವಿಸುವುದು, ಪೂಜಿಸುವುದು

**ಮಾನಸಾಬ್ಜ** ಮನಸ್ಸೆಂಬ ಕಮಲಪುಷ್ಪ

**ಮಾನಸಿ, ಮಾನಸೆ** ಹೆಂಗಸು, ಸ್ತ್ರೀ

**ಮಾನಸೇಂದೀವರ** ಮನಸ್ಸೆಂಬ ಕನ್ನೈದಿಲೆ

**ಮಾನಿಗಳು** ಇಂದ್ರಿಯಾಭಿಮಾನಿ ದೇವತೆಗಳು, ಮಾನಿತರು

**ಮಾನಿನಿ** ಹೆಂಗಸು; ಗೌರವಸ್ಥೆ

**ಮಾನಿಸ, ಮಾನಿಸಾ** ಮನುಷ್ಯ

**ಮಾನ್ಯ** ಗೌರವಸ್ಥ, ಪೂಜ್ಯ

**ಮಾಪತಿನಿರ್ದೋಷ** ದೋಷವಿದೂರನಾದ ಲಕ್ಷ್ಮೀಪತಿ–ವಿಷ್ಣು

**ಮಾಪು** ಅಳತೆಯ ಒಂದು ಮಾನ

**ಮಾಫಿ** ತಪ್ಪನ್ನು ಮನ್ನಿಸುವುದು, ಕ್ಷಮೆ

**ಮಾಮರುಭಾಪುರೆ** ಮೆಚ್ಚುಗೆಯನ್ನು ಸೂಚಿಸುವ ಶಬ್ದಗಳ ಕೂಡುನುಡಿ

**ಮಾಮನೋಹರ** ಲಕ್ಷ್ಮಿಗೆ ಒಲಿದವ ವಿಷ್ಣು

**ಮಾಮನೋಹರದಿನ** ಹರಿದಿನ, ಏಕಾದಶಿ

**ಮಾಮವ** ನನ್ನನ್ನು ರಕ್ಷಿಸು

**ಮಾಮಳಿದಡರು** ಹುಟ್ಟಡಗಿಸು, ದಯನೀಯವಾಗಿ ಸೋಲಿಸು

**ಮಾಯ** (ಶಾಶ್ವತವೆಂಬ)ಭ್ರಾಂತಿ, ಕಾಣದಾಗುವಿಕೆ

**ಮಾಯಕಾರ** ತನ್ನ ಇಚ್ಛೆಯಂತೆ ನಾನಾ ರೂಪಗಳನ್ನು ಧರಿಸುವವನು

**ಮಾಯಮತ** ಅದ್ವೈತಮತ

**ಮಾಯಶಠವಿ** ಪೂತನಿ; ದುರ್ಗೆ

**ಮಾಯಸೆರೆ** ಹುಟ್ಟುಸಾವುಗಳ ಬಂಧನ

**ಮಾಯಾ(ಯೆ)** ಇಚ್ಛೆ; ಕೃಪೆ, ಭಗವದಿಚ್ಛೆ; ಜ್ಞಾನ, ಪ್ರಕೃತಿ; ಲಕ್ಷ್ಮೀದೇವಿ; ಭಗವಂತನ ಚಿಂತನೆಯನ್ನು ಮರೆಸುವಂತಹ ಲೋಕದ ಆಕರ್ಷಣೆ; ಅಶಾಶ್ವತ; ಅಜ್ಞಾನ; ಮೋಹ

**ಮಾಯಾದೇವಿ** ವಾಸುದೇವನ ಹೆಂಡತಿ, ಲಕ್ಷ್ಮೀದೇವಿಯ ರೂಪ

**ಮಾಯಾಧರ** ಲಕ್ಷ್ಮೀದೇವಿಯನ್ನು ವಕ್ಷ ಸ್ಥಳದಲ್ಲಿ ಧರಿಸಿದವ–ಶ್ರೀಹರಿ

**ಮಾಯಾಪತಿ** ವಾಸುದೇವ

**ಮಾಯಾಪಾಶ** ಅಜ್ಞಾನದ ಬಲೆ

**ಮಾಯಾಮರೆವು** ಸ್ವಾತಂತ್ರ್ಯ, ಕರ್ತೃತ್ವ ಮತ್ತು ಭೋಕ್ತೃತ್ವ ಎಂಬ ಭ್ರಮೆಗಳೂ, ಹರಿವಿಸ್ಮರಣೆಯೂ "ಮಾಯೆ" ಎನಿಸುವವು

Rarest Archive

**ಮಾಯಾವತಿ** ಹರಿದ್ವಾರ ಅಥವಾ ಗಂಗಾದ್ವಾರ (ಪೌರಾಣಿಕ ಸಪ್ತಪುರಿಗಳಲ್ಲಿ ಒಂದು)

**ಮಾಯಾಶಟವಿ** ಮಾಯೆಯನ್ನಾಶ್ರಯಿಸಿದ ವಂಚಕಿ, ಪೂತನಿ

**ಮಾಯಿ** ಅಂಬಾಭವಾನಿ; ಮಿಥ್ಯಾವಾದಿ, ಅದ್ವೈತಿ; ವಂಚಕ

**ಮಾಯ್ಗಳು** ಮಾಯಾವಾದಿಗಳು

**ಮಾರ** ಸುಂದರ, ಮನ್ಮಥ; ಹೊಡೆತ, ಕೊಲ್ಲುವಿಕೆ

**ಮಾರಜನಕ** ವಿಷ್ಣು

**ಮಾರಜನನಿ** ಲಕ್ಷ್ಮೀ

**ಮಾರಣಕ್ರತು** ಕೃಷ್ಣನನ್ನು ಕೊಲ್ಲಲು ಮಾಡಿದ ಬಿಲ್ಲ ಹಬ್ಬ, ವಧಾಯಜ್ಞ

**ಮಾರನಂಬು** ಕಾಮನ ಬಾಣ

**ಮಾರನತಾಪ** ಕಾಮದ ತಾಪ

**ಮಾರನಯ್ಯ, ಮಾರಪಿತ** ಮನ್ಮಥಜನಕ–ವಿಷ್ಣು

**ಮಾರಮಣ** ಲಕ್ಷ್ಮೀಕಾಂತ–ಶ್ರೀಹರಿ

**ಮಾರರತ** ಕಾಮರತ; ಎದುರಿಸಿದ

**ಮಾರವೈರಿ** ಮನ್ಮಥನ ಶತ್ರು ಶಿವ

**ಮಾರಸಾಯಕ** ಕಾಮನ ಬಾಣ; ವಸಂತಕಾಲ

**ಮಾರಾಂತಕ** ಶಿವ

**ಮಾರಾಂತಕಗೊಲಿವ** ಶಿವನಿಗೆ ಒಲಿದವನು, ಸಂಕರುಷಣ, ರಾಮ

**ಮಾರಾಟ** ಪ್ರತಿಭಟನೆ, ವ್ಯಾಪಾರ

**ಮಾರಾನು** ಎದುರಿಸು, ಮೇಲೆ ಬೀಳು

**ಮಾರಾರಿ** ಶಿವ

**ಮಾರಿ** ಅಳಿವು, ನಾಶ, ಮೃತ್ಯು; ಗ್ರಾಮದೇವತೆ; ಮೃತ್ಯುದೇವತೆ; ದುಷ್ಟ ಸ್ತ್ರೀ; ಬೆಂಕಿ; ಮುಖಿ

**ಮಾರಿಹಬ್ಬ** ಗ್ರಾಮದೇವತೆ ಹಬ್ಬ; ಮೃತ್ಯು ದೇವತೆಯ ಹಬ್ಬ

**ಮಾರಿಹಿಂಡು** ಕ್ಷುದ್ರ ದೇವತೆಗಳು– ಉಪದ್ರವ ವನ್ನು ರೋಗಗಳನ್ನು ಒದಗಿಸುವಂಥವು

**ಮಾರು** ಎದುರಿಸು, ಅಡ್ಡಿಮಾಡು; ವಿಕ್ರಯಿಸು

**ಮಾರುತ** ವಾಯು

**ಮಾರುಮಲಕು** ಹೆಚ್ಚು ಕಡಿಮೆ ಮಾಡು

**ಮಾರುಹೋಗು** ಮರುಳಾಗು

**ಮಾರ್ಗಣ(ಣೆ)** ಬಾಣ

**ಮಾರ್ಗಣಗಣ** ಬಾಣಗಳ ಸಮೂಹ, ಶತ್ರು ಸಮೂಹ

**ಮಾರ್ಜನ** ತೊಳೆಯುವುದು, ಶುದ್ಧಗೊಳಿಸುವುದು

**ಮಾರ್ಜಾಲ** ಬೆಕ್ಕು, ಬಿಡಾಲ

**ಮಾರ್ಜಿಸು** ಪವಿತ್ರ ಮಾಡು, ಶುದ್ಧಗೊಳಿಸು, ತೊಳೆ

**ಮಾರ್ತಾಂಡ** ಸೂರ್ಯ

**ಮಾರ್ಬಲ** ಶತ್ರು ಸೈನ್ಯ, ದೊಡ್ಡ ಸೈನ್ಯ

**ಮಾರ್ಮಲೆ** ವಿರೋಧಿಸು, ಎದುರಿಸು, ಪ್ರತಿಭಟಿಸು

**ಮಾಲಗಂಬ** ದೀಪಮಾಲೆಯ ಕಂಬ, ಗರುಡ ಗಂಬ

**ಮಾಲತಿ** ಮಲ್ಲಿಗೆ; ಮೈಲಾರನ ಪತ್ನಿ

**ಮಾಲತಿಸಂಗ** ಮಾಲತಿಯನ್ನು ಪತ್ನಿಯಾಗುಳ್ಳ ವನು ಮೈಲಾರ

**ಮಾಲಾಭಿಭಾವನೆ** ಭಾವನೆಯ ಮಾಲೆ

**ಮಾಲೋಲ** ಲಕ್ಷ್ಮೀಲೋಲ–ಶ್ರೀಹರಿ

**ಮಾವಾರಿ** ಮಾವನಾದ ಕಂಸನ ಶತ್ರು–ಕೃಷ್ಣ

**ಮಾಷ** ಉದ್ದು

**ಮಾಷಭಕ್ಷ್ಯ** ಉದ್ದಿನಿಂದ ತಯಾರಿಸಿದ ಭಕ್ಷ್ಯ

**ಮಾಸನೂರಲಿನಿಂದು** ಹೆರಿಗೆಯ ಕಲ್ಮಷದಲ್ಲಿದ್ದು, ಗರ್ಭದ ಚೀಲದಲ್ಲಿದ್ದು

**ಮಾಸಹ** ಲಕ್ಷ್ಮೀದೇವಿಸಹಿತ

**ಮಾಸಾಳು** ಯೋಧ, ಸಾಹಸಿ, ಶೂರ, ಮಾಸವಳ, ಮಹಾವೀರ

**ಮಾಸು** ಸೆತ್ತೆ, ಕೊಳೆ, ಹೊಲಸು; ಭ್ರೂಣವನ್ನು ಆವರಿಸಿದ ಪೊರೆ

**ಮಾಹಂತ** ಮಹಂತ, ಧರ್ಮದರ್ಶಿ; ದೊಡ್ಡವ

Rarest Archive

**ಮಾಹೇಂದ್ರಾವರಜ** ಇಂದ್ರನ ತಮ್ಮ–ಉಪೇಂದ್ರ
**ಮಿಂಚುಕೂಳು** ಕಣ್ಣುಕೋರೈಸುವ ಆಹಾರ (ತಾಮಸಾಹಾರ); ಶ್ರೇಷ್ಠ ಆಹಾರ
**ಮಿಂಡಿ, ಮಿಂಡೆ, ಮಿಂಡಿತಿ** ಹರೆಯದ ಹೆಂಗಸು, ಯುವತಿ; ಹಾದರಗಿತ್ತಿ; ಉಪಪತ್ನಿ
**ಮಿಂದು** ಸ್ನಾನಮಾಡಿ
**ಮಿಗು** ಉಳಿ, ಅಧಿಕವಾಗು, ಮತ್ತು
**ಮಿಗೆ** ಮತ್ತು, ಅಧಿಕವಾಗಿ
**ಮಿಟ್ಟೆ, ಮಿಟ್ಟೆ** ಮಣ್ಣು, ದಿಣ್ಣೆ, ಏರಿ
**ಮಿಡಿ** ಸಣ್ಣ; ತವಕಿಸು
**ಮಿಡಿಗೊಳ್ಳು** ಮುದ್ದೆಯಾಗು, ಮುದುರಿಕೊ
**ಮಿಡುಕು** ಕಷ್ಟಪಡು, ಪೇಚಾಡು, ಭಯಪಡು
**ಮಿಣಿ** ಚರ್ಮದ ಹಗ್ಗ
**ಮಿತಿ** ವಿರಕ್ತಿ; ಎಲ್ಲೆ, ಅಳತೆ, ಪ್ರಮಾಣ
**ಮಿತ್ರ** ಸೂರ್ಯ; ಗೆಳೆಯ
**ಮಿತ್ರಘ್ನ್ಯ** ಮಿತ್ರನಿಗೆ ದ್ರೋಹ ಬಗೆಯುವುದು
**ಮಿತ್ರತನುಜ** ಸೂರ್ಯನಮಗ, ಸುಗ್ರೀವ, ಕರ್ಣ, ಯಮ, ಶನೈಶ್ಚರ
**ಮಿತ್ರವಿಂದಾ** ವಸುದೇವನ ತಂಗಿಯ ಮಗಳು, ಕೃಷ್ಣನ ಪತ್ನಿ
**ಮಿಥಿಲೆ, ಮಿಥುಳಿ** ಮಿಥಿಲಾ ಪಟ್ಟಣ
**ಮಿಥ್ಯ, ಮಿಥ್ಯೆ** ಅಸತ್ಯ, ಸುಳ್ಳು
**ಮಿಥ್ಯಾಜ್ಞಾನ** ನಿಜವಲ್ಲದ ಜ್ಞಾನ, ನಿಶ್ಚಯವಲ್ಲದ ಜ್ಞಾನ, ಅಜ್ಞಾನ, ಸತ್ಯವಾದುದನ್ನು ಅಸತ್ಯವೆಂದು ತಿಳಿಯುವುದು
**ಮಿಥ್ಯಾಮತ** ಅದ್ವೈತ ದರ್ಶನ
**ಮಿಥ್ಯಾವಾದಿ** ಅದ್ವೈತಿ
**ಮಿದಿ** ಕುಟ್ಟು, ನಾದು; ಕೊಲ್ಲು
**ಮಿದು** ಮೃದು
**ಮಿನುಗು, ಮಿರುಗು** ಹೊಳೆ, ಪ್ರಕಾಶಿಸು, ಕಾಂತಿ, ಹೊಳಪು; ಜಾಗೃತವಾಗಿರು
**ಮಿರಾಶಿ(ಸು)** ಹಳ್ಳಿಯಲ್ಲಿ ರೈತರಿಂದ ಧಾನ್ಯ ಅಥವಾ ಹಣವನ್ನು ಪಡೆಯುವ ಆನುವಂಶಿಕ ಹಕ್ಕು; ಅಧಿಕಾರ, ವೈಭವ
**ಮಿರ್ತು, ಮಿಳ್ತು>ಮೃತ್ಯು** ಸಾವು
**ಮಿಷ್ಟಾನ್ನ, ಮೃಷ್ಟಾನ್ನ** ಸವಿಯಾದ ಊಟ
**ಮಿಸುಣಿ(ನಿ)** ಚಿನ್ನ
**ಮಿಸುಪು** ಹೊಳಪು, ಕಾಂತಿ; ಅಂದ, ಲಾವಣ್ಯ
**ಮಿಸುಳಿಸು** ಸೇರಿಸು, ಒಂದುಗೂಡಿಸು
**ಮಿಹಿರ** ಸೂರ್ಯ
**ಮಿಹಿರಜ** ಸೂರ್ಯನಮಗನಾದ ಸುಗ್ರೀವ, ಕರ್ಣ, ಯಮ, ಶನೈಶ್ಚರ
**ಮಿಹಿರಜಾಮಾತ್ಯ** ಸುಗ್ರೀವನ ಮಂತ್ರಿ–ಹನುಮಂತ
**ಮಿಳಿಂದ** ತುಂಬಿ, ಭ್ರಮರ
**ಮಿಳಿತಾಗು** ಕೂಡು, ಮಿಳಿತವಾಗು, ಹೊಂದು
**ಮಿಳ್ಳೆ** ಮರದ ಅಥವಾ ಲೋಹದ ಸಣ್ಣ ಸೌಟು, ಉದ್ಧರಣೆ, ಹೊರಹೊಮ್ಮಟೆ, (ನೀರು ಕುಡಿಯಲು ಬಳಸುವ ಸಣ್ಣ ಪಾತ್ರೆ, ಥಾಲಿ)
**ಮೀ** ಸ್ನಾನ ಮಾಡು
**ಮೀಟು** ಶ್ರೇಷ್ಠ
**ಮೀನಕೇತನ, ಮೀನಕೇತು** ಮೀನನ್ನು ಧ್ವಜ ಚಿಹ್ನವಾಗಿ ಉಳ್ಳವನು ಕಾಮ
**ಮೀನಕೇತುಪಿತ** ಮನ್ಮಥನ ತಂದೆ–ಶ್ರೀಹರಿ
**ಮೀನಲೋಚನೆ** ಮೀನಿನಂತೆ ಸುಂದರವಾದ ದೀರ್ಘ ಕಣ್ಣುಳ್ಳವಳು, ಮೀನಾಕ್ಷಿ
**ಮೀನಾಂಕ** ಮೀನನ್ನು ಬಾವುಟದಲ್ಲಿ ಹೊಂದಿರುವ ಮನ್ಮಥ
**ಮೀನಾಂಕಜನಕ, ಮೀನಾಂಕನ** ಮನ್ಮಥಜನಕ ವಿಷ್ಣು
**ಮೀನಾಕಾರ** ಮತ್ಸ್ಯಾವತಾರಿ
**ಮೀಸಲಳಿ** ಪಾವಿತ್ರ್ಯವನ್ನು ಕಳೆದುಕೊಳ್ಳು, ಅಪವಿತ್ರವಾಗು

Rarest Archiver

**ಮೀಸಲಳಿಯದಪದವಿ** ಪವಿತ್ರವಾದ ಪದವಿ, ಮುಕ್ತಿ

**ಮೀಸಲು** ಪ್ರತ್ಯೇಕವಾಗಿ ತೆಗೆದಿರಿಸಿದ್ದು, ಮುಡಿಪು

**ಮೀಸಲುಮನ** ಪ್ರತ್ಯೇಕವಾದ ಮನಸ್ಸು, ಹರಿಧ್ಯಾನಕ್ಕೆ ಮೀಸಲಾದ ಮನಸ್ಸು

**ಮೀಸಿ<ಮೀಸೆ** ಗಂಡಸಿನ ಮೇಲ್ತುಟಿಯ ಮೇಲಿರುವ ಕೂದಲು, ಶ್ಮಶ್ರು

**ಮುಂಕಟ್ಟು** ಮುಂಬದಿಯಲ್ಲಿರು

**ಮುಂಕೊಳ್ಳು** ಮುಂದುವರಿದು ನಿಲ್ಲು; ಆತುರ ಪಡು; ಸಮರ್ಥಿಸು

**ಮುಂಗಡೆಕರ** ಕೈಯ ಮಣಿಕಟ್ಟು, ಕೈಯ ಮುಂಭಾಗ

**ಮುಂಗಾವಳ** ಕತ್ತಲಿಗೆ ಮೊದಲು, ಮುಚ್ಚಂಜೆ

**ಮುಂಗೆಡು** ದಿಕ್ಕು ತೋಚದಂತಾಗು

**ಮುಂಗೈಮುರಿಗೆ** ಕೈಗೆ ಧರಿಸುವ ಒಂದು ಆಭರಣ

**ಮುಂಚಕಲಾಪ** ನಾಯಕರ ಗುಂಪು, ಪಂಚಾಯತಿ

**ಮುಂಚು** ಮೀರು, ಉಲ್ಲಂಘಿಸು

**ಮುಂಚೂಣಿ** ಮೊದಲು, ಸೈನ್ಯದ ಮುಂಭಾಗ

**ಮುಂಜಿ** ಉಪನಯನ; ನೊದೆ ಹುಲ್ಲಿನಿಂದ ಮಾಡಿದ ದಾರ; ಮೌಂಜಿಯನ್ನು ಕಟ್ಟುವ ಸಂಸ್ಕಾರ

**ಮುಂಜಿಕೇಶಿ** ನೊದೆಹುಲ್ಲಿನಂತೆ ತಲೆಗೂದಲುಳ್ಳವನು–ವಿಷ್ಣು

**ಮುಂಜುಮನೆ** ನೊಸೆ ಹುಲ್ಲಿನಲ್ಲಿ ಕಟ್ಟಿದ ಮನೆ

**ಮುಂಜೆರಗು** ಹೊದ್ದ ವಸ್ತ್ರದ ಅಂಚು, ಸೆರಗಿನ ತುದಿ

**ಮುಂಡಮೋಚು** ತಲೆಗೂದಲನ್ನು ಬೋಳಿಸು; ವಿಧವೆಯಾಗು; ಸರ್ವಸ್ವವನ್ನು ಕಳೆದುಕೊ

**ಮುಂಡಾಗು** ನಾಶವಾಗು; ವೈರಾಗ್ಯ ಪ್ರಾಪ್ತವಾಗು

**ಮುಂಡಾಡು** ಮುದ್ದಾಡು, ಪ್ರೀತಿಸು

**ಮುಂಡಾಸು** ರುಮಾಲು, ಪೇಟ

**ಮುಂಡಿ** ಸಂನ್ಯಾಸಿ, ಬೋಳಿಸಿದ, ಕತ್ತರಿಸಿದ, ವಿಧವೆ

**ಮುಂಡಿಗೆ** ಒಗಟು, ಸವಾಲು; ಕಂಬ, ದಿಮ್ಮಿ, ತೊಲೆ

**ಮುಂತೆ** ಮುಂದೆ, ಮುಂಚೆ, ಹಿಂದೆ, ಪೂರ್ವದಲ್ಲಿ

**ಮುಂಬಣೆ** ಹಣೆಯ ಮುಂಭಾಗ

**ಮುಂಬು** ಮುಂಭಾಗ, ಮುಂಬದಿ

**ಮುಕ(ಕು)ರ** ನತ್ತು, ಆಭರಣ, ವೃತ್ತಾಕಾರದ ಮೂಗುತಿ; ಕನ್ನಡಿ

**ಮುಕುಂದ** ವಿಷ್ಣು

**ಮುಕುಟ** ಮಕುಟ, ಕಿರೀಟ

**ಮುಕುತ** ಮುಕ್ತ

**ಮುಕುತಿ** ಮುಕ್ತಿ

**ಮುಕುತಿಯಲಲನೆ** ಮೋಕ್ಷಸ್ತ್ರೀ, ನಿತ್ಯ ಮುಕ್ತಳಾದ ರಮಾ

**ಮುಕುರ** ಮೂಗುಬಟ್ಟು, ನತ್ತು; ಕನ್ನಡಿ

**ಮುಕ್ಕಣ್ಣ** ಮೂರುಕಣ್ಣುಳ್ಳವ ಶಿವ

**ಮುಕ್ಕಮಾರಿ** ಒಂದು ಜಾತಿಯ ದೆವ್ವ, (ಮುಕ್ಕುವ ದೆವ್ವ)

**ಮುಕ್ಕಳಿಸು** ಹೊರಹೊಮ್ಮಿಸು; ಬಾಯಲ್ಲಿ ನೀರು ಹಾಕಿ ಉಗುಳು

**ಮುಕ್ಕು** ಭಂಗ, ಮುರಿದುದು, ಚೂರು; ತಿನ್ನು, ಗಬಗಬನೆ ಸೇವಿಸು, ತಿಣುಕು

**ಮುಕ್ತ** ಸಂಸಾರ ಬಂಧನದಿಂದ ಬಿಡುಗಡೆ ಹೊಂದಿದವನು, ಬಿಡಲ್ಪಟ್ಟ, ಬಿಡುಗಡೆ ಹೊಂದಿದ

**ಮುಕ್ತಕೇಳಿ** ಮೋಕ್ಷದ ಆಟ

**ಮುಕ್ತರಾಶ್ರಯಪುರ** ವೈಕುಂಠ, ಶ್ವೇತದ್ವೀಪ, ಅನಂತಾಸನ

**ಮುಕ್ತರು** ಪುನರ್ಜನ್ಮವಿಲ್ಲದವರು

**ಮುಕ್ತಾಫಲಹಾರ** ಮುತ್ತಿನಹಾರ

**ಮುಕ್ತಾಮುಕ್ತರು** ಮುಕ್ತರು ಮತ್ತು ನಿತ್ಯ ಸಂಸಾರಿಗಳು

Rarest Archiver

**ಮುಕ್ತಾಮುಕ್ತಾನಿಯಾಮಕ, ಮು** ವಿಷ್ಣು
**ಮುಕ್ತಾರ್ಥಸ್ವಹಲೋಲ** ಮುಕ್ತರ ಸ್ವಮನಕ್ಕೆ ಬಂದತೆರ ಕ್ರೀಡಿಪ (ಲೋಲುಪ) ಭಗವಂತ
**ಮುಕ್ತಾವಳಿ** ಮುತ್ತಿನಹಾರ; ಮುಕ್ತರ ಸಮೂಹ
**ಮುಕ್ತಿ** ಬಿಡುಗಡೆ
**ಮುಕ್ತಿಕಾಂತೆ** ಮುಕ್ತಿ ಎಂಬ ರಮಣಿ; ರಮಾ
**ಮುಕ್ತಿಬಟ್ಟೆ** ಮುಕ್ತಿಯ ದಾರಿ, ಮೋಕ್ಷದಹಾದಿ
**ಮುಕ್ತಿಮಂಟಪ** ವೈಕುಂಠ
**ಮುಕ್ತೇಶ** ಮುಕ್ತರ ಸ್ವಾಮಿ ನಾರಾಯಣ
**ಮುಖ** ಬಾಯಿ, ಪಕ್ಷಿಯ ಕೊಕ್ಕು, ಮೊಗ, ಮೋರೆ; ಮುಖ್ಯರಾದವರು
**ಮುಖಜ, ಮುಖಜಾ** ಬ್ರಾಹ್ಮಣ
**ಮುಖಬಾಲಾರ್ಕ** ಬಾಲಸೂರ್ಯನಂತೆ ಮುಖವುಳ್ಳ
**ಮುಖವಾಸ** ಬಾಯಿಯನ್ನು ಸುಗಂಧಗೊಳಿಸುವ ಒಂದು ಬಗೆಯ ಸುಗಂಧ ದ್ರವ್ಯ
**ಮುಖ್ಯಗತಿ** ಮುಕ್ತಿ
**ಮುಖ್ಯಪ್ರಾಣ** ಜೀವವಾಯು, ಹನುಮಂತ, ಸಮೀರ
**ಮುಗಿಲಹೊಳೆ** ಆಕಾಶಗಂಗೆ
**ಮುಗಿಲಹೊಳೆಯಲಿಹುಟ್ಟಿದವ** ಗಂಗಾದೇವಿಯ ಮಗ ಭೀಷ್ಮ
**ಮುಗುದ, ಮುಗುಧ<ಮುಗ್ಧ** ಅಮಾಯಕ, ಅರಿಯದವನು
**ಮುಗುಳಗಣೆಯ** ಕಾಮ
**ಮುಗುಳು** ಮೊಗ್ಗು, ಚಿಗುರು
**ಮುಗುಳುತೆನೆ** ಚಿಗುರು ತೆನೆ, ಎಳೆಯ ಹೂವು
**ಮುಗುಳ್ನಗೆ** ಮಂದಹಾಸ, ಮೆಲುನಗೆ
**ಮುಗ್ಗು** ಕುಗ್ಗು, ನಾಶವಾಗು; ಬೂಷ್ಟುಹಿಡಿ
**ಮುಗ್ಗುಂಡಿ** ಆಳವಾದ ಹಳ್ಳ
**ಮುಗ್ಧಾಂಗಿ** ಕಷ್ಟವನ್ನು ತಿಳಿಯದವಳು; ಮೋಹವನ್ನುಂಟು ಮಾಡುವ ಶರೀರ ಉಳ್ಳವಳು, ಚೆಲುವೆ
**ಮುಚುಕುಂದವರದ** ವಿಷ್ಣು
**ಮುಚುಕುಂದಾ** ಸೂರ್ಯವಂಶದ ಒಬ್ಬ ರಾಜ, ಕಾಲಯವನ ಎಂಬ ದೈತ್ಯನನ್ನು ಕೊಂದವನು
**ಮುಚ್ಚಾವಳ (ಮುಚ್ಚಾಳ)** ಕಳ್ಳ, ತುಡುಗ, ಮರೆಯಲ್ಲಿರುವವ
**ಮುಜ್ಜಗ** ಮೂರು ಜಗತ್ತುಗಳು; ಮೂರ್ಲೋಕ ದೊಡೆಯ-ಶ್ರೀಹರಿ
**ಮುಟ್ಟಲಮ್ಮು** ಮುಟ್ಟಲುಸಾಧ್ಯವಾಗು, ಸಮೀಪಿಸಲು ಸಾಧ್ಯವಾಗು
**ಮುಟ್ಟಿಗೆ** ಮುಷ್ಟಿಕಾ, ಹಿಡಿ; ಹಿಂಡಿ ಹಿಪ್ಪೆ ಮಾಡು; ಸುಡುವ ಸೌದೆ; ಚಿತೆ
**ಮುಟ್ಟು** ಸೋಕು, ಸ್ಪರ್ಶಿಸು; ತಲುಪು; ಸಾಧನ, ಉಪಕರಣ; ಮೈಲಿಗೆ, ರಜಸ್ಸು
**ಮುಟ್ಟುಗೌಡಿ** ಪಾತ್ರೆ ಪರಟೆ ಉಜ್ಜುವ ಆಳು, ಮುಟ್ಟಾಳು
**ಮುಟ್ಟುಚಟ್ಟು, ಮುಡಚೆಟ್ಟು** ಸೂತಕಗಳಿಂದ ಉಂಟಾಗುವ ಮೈಲಿಗೆ
**ಮುಟ್ಟೆ, ಮುಟ್ಟಿಗೆ** ಚಿತೆ, ಸೌದೆ; ತನಕ, ವರೆಗೆ
**ಮುಡಗಿ<ಮುಡಿಗೆ** ಕಿರೀಟ; ಮಾಲೆ; ಪಣ, ಪಂದ್ಯ
**ಮುಡಿ** ತಲೆ, ಶಿರಸ್ಸು, ಹೆಡೆ; ಜಡೆ, ತುರುಬು; ಮುಗಿ, ಅಂತ್ಯ
**ಮುಡಿಪು** ಮೀಸಲು
**ಮುಡಿವಾಳ** ಬಾಳದ ಬೇರು; ಹ್ರೀವೇರವೆಂಬ ಸುಗಂಧ ಗಿಡ; ಲಾವಂಚಕ್ಕೂ ಈ ಹೆಸರಿದೆ; ನೀರನ್ನು ಶುದ್ಧಗೊಳಿಸಿ ಸುವಾಸನೆ ಕೊಡುವಲ್ಲಿ ಈ ಬೇರನ್ನು ಬಳಸುತ್ತಾರೆ
**ಮುಡುದಾರ** ಅವಿವೇಕಿ; ಅಂಗವಿಕಲ, ಅಂಗಹೀನ
**ಮುಡುಪು** ಮೀಸಲು; ಹಣವನ್ನಿರಿಸಿಕೊಳ್ಳುವ ಚೀಲ, ಸಂಚಿ
**ಮುಣುಗು** ಮುಳುಗು
**ಮುತ್ತ, ಮುತ್ತಾತ** ಅಜ್ಜಿಯ ತಂದೆ, ತಾತನ ತಂದೆ
**ಮುತ್ತಯ್ಯ** ಉಗ್ರಸೇನ

Rarest Archiver

**ಮುತ್ತಾಗು** ಹಣ್ಣಾಗು
**ಮುತ್ತಿಗೆ** ಆಕ್ರಮಣ
**ಮುತ್ತಿನಚುಂಗು** ಒಂದು ಬಗೆಯ ಆಭರಣ
**ಮುತ್ತಿನೊಂಟಿ** ಒಂದೇ ಮುತ್ತಿನ ಕಿವಿಯ ಆಭರಣ
**ಮುತ್ತು** ನವರತ್ನಗಳಲ್ಲಿ ಒಂದು; ಮೌಕ್ತಿಕ
**ಮುತ್ತೈದೆತನದ ಲಕ್ಷಣಗಳು** ಸುಮಂಗಲೀ ಸ್ತ್ರೀಯು ನಿತ್ಯದಲ್ಲಿ ಹತ್ತು ಮಂಗಲದ್ರವ್ಯಗಳನ್ನು ಧರಿಸಿರಲೇಬೇಕು: ಅರಿಶಿನ, ಕುಂಕುಮ, ಸಿಂಧೂರ, ಕಾಡಿಗೆ, ಕುಪ್ಪುಸ, ಮಂಗಳಸೂತ್ರ, ಬಳೆ, ಕಿವಿಯೋಲೆ(ಬೆಂಡೋಲೆ), ತಾಂಬೂಲ (ಪತಿ ಊರಲ್ಲಿದ್ದಾಗ ಮಾತ್ರ), ಕೇಶಶೃಂಗಾರ
**ಮುತ್ಯ** ತಾತ, ಅಜ್ಜ
**ಮುದ** ಆನಂದ, ಸಂತೋಷ
**ಮುದತೀರ್ಥ** ಆನಂದತೀರ್ಥ
**ಮುದಿ** ವಯಸ್ಸಾದ, ಮುಪ್ಪಾದ
**ಮುದಿರ** ಘನ; ಮೋಡ
**ಮುದ್ಗರ** ಗದೆ
**ಮುದ್ಗಾನ್ನ** ಹೆಸರುಬೇಳೆ ಸೇರಿಸಿ ಮಾಡಿದ ಅನ್ನ, ಹುಗ್ಗಿ, ಪೊಂಗಲು
**ಮುದ್ರಿಕೆ** ಮುದ್ರೆಯುಳ್ಳ ಉಂಗುರ, ಸಂಕೇತವನ್ನು ಕೆತ್ತಿದ ಉಂಗುರ; ಅಂಕಿತ; ಸ್ವಾಮಿಗಳು ಹಾಕುವ ಶಂಖ ಚಕ್ರದ ಗುರುತು, ಮುದ್ರಾಧಾರಣೆ
**ಮುದ್ರಿಸು** ಕಟ್ಟು; ಕೆತ್ತು, ಗುರುತುಮಾಡು
**ಮುದ್ರೆ** ಚಿಹ್ನೆ
**ಮುದ್ರೆಯಿಲ್ಲದದ್ರವ್ಯ** ರಾಜಮುದ್ರೆಯಿಲ್ಲದ ನಾಣ್ಯ, ಸಲ್ಲದ ನಾಣ್ಯ; ಅಂಕಿತವಿಲ್ಲದ ಸಾಹಿತ್ಯ
**ಮುನಿ** ಸನ್ಯಾಸಿ, ತಪಸ್ವಿ; ಸಿಟ್ಟಿಗೇಳು
**ಮುನಿಕಾಣ್ವ** ಕಣ್ವ ಮುನಿಗಳು
**ಮುನಿಕುಲಗೇಯ** ಮುನಿಗಳಿಂದ ಹಾಡಲ್ಪಡುವವನು
**ಮುನಿನೀತ** ಮುನಿಸಮುದಾಯ
**ಮುನಿಭವ** ಋಷಿಪುತ್ರ, ಜಮದಗ್ನಿಯ ಮಗ ಪರಶುರಾಮ
**ಮುನಿಮಾನಸಹಂಸ** ಮುನಿಗಳ ಅಂತರಂಗದಲ್ಲಿ ವಿಹರಿಸುವ ರಾಜಹಂಸ–ವೇದವ್ಯಾಸ
**ಮುನಿವೆಣ್** ಮುನಿಸತಿ, ಋಷಿಪತ್ನಿ
**ಮುನಿಸು** ಸಿಟ್ಟು
**ಮುನ್ನ** ಮೊದಲು, ಮುಂಚೆ, ಹಿಂದೆ
**ಮುನ್ನೀರಶಯ್ಯ** ಸಾಗರಶಾಯಿ–ವಿಷ್ಣು
**ಮುನ್ನೀರು** ಸಮುದ್ರ
**ಮುನ್ನೆಲೆ** ಮುಂಚಿತವಾಗಿ, ಮೊದಲೆ
**ಮುಪ್ಪುರ** ತ್ರಿಪುರ, ಮೂರುಪುರ; ಮೂರುಲೋಕ
**ಮುಪ್ಪುರಹರ, ಮುಪ್ಪುರಾರಿ** ತ್ರಿಪುರ ಸಂಹಾರಿ–ಶಿವ
**ಮುಪ್ಪುರಾರಿಗರಿದು** ತ್ರಿಪುರಗಳನ್ನು ದಹಿಸಿದ ರುದ್ರದೇವರಿಗೂ ಅಸಾಧ್ಯ
**ಮುಪ್ಪುರಿ** ಮೂರು ಹುರಿ; ಬಲವಾದುದು, ಧೃಢವಾದುದು
**ಮುಪ್ಪೊಳಲುರಿಗ** ಶಿವ
**ಮುಮುಕ್ಷು** ಮೋಕ್ಷಾಪೇಕ್ಷಿ, ಮೋಕ್ಷಸಾಧಕ
**ಮುಮ್ಮಡಿ** ಮೂರರಷ್ಟು, ಮೂರುಪಟ್ಟು, ಮೂರನೆಯ; ಕಾಲಿನ ಹರಡಿನ ಮುಂಭಾಗ
**ಮುಮ್ಮನೆ** ಪಡಸಾಲೆ, ಮುಂದಿನ ಮನೆ, ಮನೆಯ ಮುಂದು
**ಮುಯ್ಯಿ** ಹಿಂತಿರುಗಿಸುವುದು; ಉಡುಗೊರೆ, ಕಾಣಿಕೆ
**ಮುರ** ನರಕಾಸುರನ ಪರಿವಾರದಲ್ಲಿದ್ದ ಒಬ್ಬ ರಾಕ್ಷಸ; ಒಂದು ಬಗೆಯ ಆಭರಣ
**ಮುರಜ** ಮೃದಂಗ, ಚರ್ಮವಾದ್ಯ; ಪ್ರದ್ಯುಮ್ನ
**ಮುರನರಕಮುಖ್ಯರು** ಮುರ, ನರಕಾಸುರ ಮುಂತಾದ ಮುಖ್ಯ ರಾಕ್ಷಸರು
**ಮುರಮರ್ದನ, ಮುರವೈರಿ, ಮುರಹರ, ಮುರಾರಿ** ಮುರನೆಂಬ ರಾಕ್ಷಸನನ್ನು ಕೊಂದವನು –ಕೃಷ್ಣ

Rarest Archives

**ಮುರಳಾಡು** ವಕ್ರ ನುಡಿಗಳನ್ನು ನುಡಿ
**ಮುರಳಿ** ಕೊಳಲು
**ಮುರಾರಿಪಟ್ಟಣ** ಶ್ರೀಹರಿಯ ವಾಸಸ್ಥಾನ– ವೈಕುಂಠ
**ಮುರಿಕೆ** ಹೊಸೆಯುವಿಕೆ, ತೊದಲುವಿಕೆ
**ಮುರಿಗೆ** ಹೊಸೆ, ನುಲಿಗೆ, ಸುತ್ತುಹಾಕು; ಕೈಗೆಧರಿಸುವ ಒಂದು ಆಭರಣ
**ಮುರು, ಮುರುವು, ಮುರುಹು** ಪಶುಗಳಿಗೆ ನೆನೆಸಿಕೊಡುವ ಧಾನ್ಯಗಳ (ಹುರುಳಿ, ಜೋಳ, ಸೆಜ್ಜೆ ಇತ್ಯಾದಿಗಳ) ನುಚ್ಚು; ಕಿವಿಯುಂಗುರ, ಬೆಂಡೋಲೆ, ನಾಸಿಕ ಆಭರಣ; ಚಂದ್ರ
**ಮುರುಕಿ** ಡೂಗಿ, ವಕ್ರೆ, ಗೂನಿ
**ಮುರುಕು** ತುಂಡಾದ; ವಕ್ರ ನಡವಳಿಕೆ, ಬೆಡಗು, ಒಯ್ಯಾರ
**ಮುರುಗ** ಬೆಡಗುಗಾರ, ಸೊಗಸುಗಾರ
**ಮುರುಡ** ಕುಗ್ಗಿದ ದೇಹವುಳ್ಳವನು, ಗೂನ, ಡೂಗ
**ಮುರುಡಿ** ಕೈಗೆ ಧರಿಸುವ ಒಂದು ಬಗೆಯ ಆಭರಣ
**ಮುಲ್ಲಶಾಸ್ತ್ರ** ಮುಸಲ್ಮಾನರ ಧರ್ಮಗ್ರಂಥ ಖುರಾನ
**ಮುಷ್ಟಿಕ** ಕೃಷ್ಣನು ಕೊಂದ ಕಂಸನ ಆಸ್ಥಾನದಲ್ಲಿಯ ಒಬ್ಬ ಜಟ್ಟಿ
**ಮುಷ್ಟಿಕಾರಿ** ಮುಷ್ಟಿಕನ ವೈರಿ–ಕೃಷ್ಣ
**ಮುಸಲ** ಒನಕೆ; ಗದೆ; ಮುಸಲ್ಮಾನ
**ಮುಸಲಧರ** ಗದಾಧರ–ವಿಷ್ಣು
**ಮುಸುಕಿನದಂಡು** ಮೋಹ, ಅಜ್ಞಾನ, ಭ್ರಮೆ
**ಮುಸುಕು** ಹೊದಿಕೆ; ಯೋನಿ (ಹೊಂಬಾಳೆ ಮುಸುಕು ಒಡೆದಿದೆ ಎಂಬ ಪ್ರಯೋಗ ಗಮನಿಸಿ)
**ಮುಸುಡುರೌದ್ರ** ಉಗ್ರವಾದ ಮುಖ
**ಮುಸುವದಂಡು** ಕರಿಮೋರೆಯ ಆಕಳಬಾಲದ ಕಪಿಗಳ ಸೈನ್ಯ
**ಮುಸುಳಿ<ಮುಸುಡಿ** ಮೋರೆ, ಮುಖ
**ಮುಸ್ತೈದು** ಸಲಕರಣೆ, ಸಾಮಗ್ರಿ; ಸಿದ್ಧತೆ
**ಮುಹುರ್ಮುಹು** ಮೇಲಿಂದಮೇಲೆ
**ಮುಳಿ** ಸಿಟ್ಟಾಗು
**ಮುಳುಕ(ಗ)ನಹಕ್ಕಿ** ನೀರು ಹಕ್ಕಿ
**ಮುಳ್ಳೊರೆ** ಮುಳ್ಳಿನ ಹೊರೆ; (ವಿಶೇಷ ಸಂದರ್ಭ ದಲ್ಲಿ) ಸಂಕಟಗಳ ಸಮೂಹ
**ಮೂಕೊರೆಯ** ಮೂಗಿಲ್ಲದವನು, ಅವಮಾನಿತ ನಾದವನು
**ಮೂಕೊರೆಯಮಂಡರು** ಮೂರ್ಖರು
**ಮೂಗಳ** ಮೂರು ಕೊಳಗ, ಹನ್ನೆರಡು ಸೇರು
**ಮೂಗುತಿ** ಮೂಗಿನ ಆಭರಣ
**ಮೂಗುದಾಳು** ಹೆಸರುಬೇಳೆ
**ಮೂಗುನೇಣು** ಮೂಗುದಾಣ, ಮೂಗುದಾರ
**ಮೂಗುಬೇರು** "ನಾಸಿಕಾಗ್ರ" ವೆಂಬ ಸಂಸ್ಕೃತಪದದ ಕನ್ನಡ ರೂಪ; ಮೂಗಿನ ತುದಿ/ಹೊರಳೆ
**ಮೂಗುವೇಣು** ಮೂಗುಕೊಳಲು, ಮೂಗಿನಿಂದ ಕೊಳಲನ್ನು ನುಡಿಸುವವನು
**ಮೂಜಗ, ಮೂಜ್ಜಗ** ಮೂರುಲೋಕ, ಸ್ವರ್ಗ, ಮರ್ತ್ಯ, ಪಾತಾಳ
**ಮೂಡಲಗಿರಿ** ತಿರುಪತಿ
**ಮೂಡಲದಿಕ್ಕು** ಪೂರ್ವದಿಕ್ಕು
**ಮೂಡಲಾದ್ರೀಶ** ವೆಂಕಟಾದ್ರೀಶ–ವೇಂಕಟೇಶ
**ಮೂಡುಗಡೆ** ಪೂರ್ವ ದಿಕ್ಕು
**ಮೂಡೆ** ದಿಂಬು; ಧಾನ್ಯಗಳನ್ನು ತುಂಬುವ ಬಿದಿರಿನ ಪೆಂಟೆ
**ಮೂತೆರದಭೇದಗಳು** ಸತ್ತ್ವ, ತಮ, ರಜೋಗುಣ ಗಳು
**ಮೂತ್ರಕೃಛ್ರ** ಮೂತ್ರವಿಸರ್ಜನೆಗೆ ತೊಂದರೆ ಯಾಗುವ ರೋಗ
**ಮೂತ್ರದಬಿಲ** ಯೋನಿ
**ಮೂತ್ರದಮನೆ** ಜನನೇಂದ್ರಿಯ, ಯೋನಿ, ಶಿಶ್ನ
**ಮೂದಲಿಸು** ಹಂಗಿಸು

Rarest Archive

**ಮೂರರಮಾರ್ಗ** ತ್ರಿಗುಣಗಳ ದಾರಿ, ಕಾಮಾದಿ ಮಾರ್ಗ

**ಮೂರವತಾರ** ಹನುಮ, ಭೀಮ, ಮಧ್ವ

**ಮೂರಾರುಛಿದ್ರ** 3+6=9 ನವರಂಧ್ರ

**ಮೂರಾರುಪುರಾಣ** 3X6=18 ಹದಿನೆಂಟು ಪುರಾಣಗಳು

**ಮೂರಾರುಭಕುತಿ** 3+6=9 ನವವಿಧ ಭಕ್ತಿ

**ಮೂರುಅವಸ್ಥೆ** ಜಾಗ್ರತೆ, ಸ್ವಪ್ನ, ಸುಷುಪ್ತಿ

**ಮೂರುಆಶೆ** ದಾರೇಷಣ, ಪುತ್ರೇಶಣ, ವಿತ್ತೇಷಣ

**ಮೂರುಎರಡುಭೂತಗಳು** 3+2=5 ಪಂಚಭೂತಗಳು

**ಮೂರುಐದು** 3+5=8 ಅಷ್ಟಮದಗಳು

**ಮೂರುಕಣ್ಣ** ಶಿವ

**ಮೂರುಕಣ್ಣಿನಬೂಚಿ** ಮೂರುಕಣ್ಣಿನ ದೆವ್ವ (ಮಕ್ಕಳಿಗೆ ಹೆದರಿಸಲು)

**ಮೂರುಕಾಲ** ಜಾಗೃತ, ಸ್ವಪ್ನ, ಸುಷುಪ್ತಿ; ಭೂತ, ವರ್ತಮಾನ, ಭವಿಷ್ಯ

**ಮೂರುಕೋಣೆ** ಈಡ, ಪಿಂಗಳ, ಸುಷುಮ್ನ ಈ ನಾಡಿಗಳ ಸಂಗಮ, ಭ್ರೂಮಧ್ಯ ದೃಷ್ಟಿ

**ಮೂರುಗುಣ** ಸತ್ವ, ರಜಸ್ಸು, ತಮಸ್ಸು

**ಮೂರುಗೋಪುರ** ತ್ರಿಪುರ

**ಮೂರುತಾಪ** ತಾಪತ್ರಯ

**ಮೂರುತಿ<ಮೂರ್ತಿ** ಪ್ರತೀಕ; ಪ್ರತಿಮೆ

**ಮೂರುತೊರೆ** ಮಾನ, ಮರ್ಯಾದೆ, ಘನತೆ ಬಿಡು

**ಮೂರುದಾರಿ(ಬಟ್ಟೆ)** ಶ್ರವಣ, ಮನನ, ನಿಧಿಧ್ಯಾಸನ

**ಮೂರುದಿನದಸಂಸಾರ** ಅನಿತ್ಯ ಸಂಸಾರ, ನಶ್ವರ ಸಂಸಾರ

**ಮೂರುದೇಹ** ಸ್ಥೂಲ, ಸೂಕ್ಷ್ಮ, ಕಾರಣ ದೇಹ

**ಮೂರುಧಾಮ(ಮನೆ)** ಶ್ವೇತದ್ವೀಪ, ಅನಂತಾಸನ, ವೈಕುಂಠ

**ಮೂರುನಾಲ್ಕುಪ್ರಕಾರ** 3+4=7 ಏಳು ಪ್ರಕಾರ, ತ್ವಕ್, ಚರ್ಮ, ಮಾಂಸ, ರುಧಿರ, ಮೇದಸ್ಸು, ಲಜ್ಜಾ, ಅಸ್ಥಿ,

**ಮೂರುನೂರಾರುಹತ್ತರಲಿ** (3X100) + (6X10)=360, ಮುನ್ನೂರ ಅರವತ್ತು ದಿವಸಗಳು, ಒಂದು ವರ್ಷ

**ಮೂರುಪಂಜರ** ಸ್ಥೂಲ, ಸೂಕ್ಷ್ಮ, ಕಾರಣಶರೀರಗಳೆಂಬ ಪಂಜರ

**ಮೂರುಪುರಿ** ತ್ರಿಪುರ

**ಮೂರುಬಣ್ಣಿಗೆಯಮನೆ** ಬಿಳಿ, ಕೆಂಪು, ಕಪ್ಪು ಬಣ್ಣಗಳುಳ್ಳ ಸತ್ವ, ರಜಸ್ಸು, ತಮೋಗುಣಗಳಿಂದ ಕೂಡಿದ ಶರೀರವೆಂಬ ಮನೆ

**ಮೂರುಬಲೆ** ಹೆಣ್ಣು, ಹೊನ್ನು, ಮಣ್ಣು

**ಮೂರುಮಡಿ** ಮೂರು ಪಟ್ಟು

**ಮೂರುಮಲ** ಕಾಯಿಕ ಮಲ, ವಾಚಿಕ ಮಲ, ಮಾನಸಿಕ ಮಲ; ಕಾಯಾ, ವಾಚಾ, ಮಾನಸಿಕ ದೋಷ (ಪಾಪ)

**ಮೂರುಮಾಡು** ಸೃಷ್ಟಿ, ಸ್ಥಿತಿ, ಲಯವನ್ನು ಮಾಡು

**ಮೂರುಮಾರ್ಗ** ಶ್ರವಣ, ಮನನ, ನಿದಿಧ್ಯಾಸನ ಎಂಬ ಸಾಧನೋಪಾಯಗಳು

**ಮೂರುಮೂರುಭಕ್ತಿ** 3X3=9 ನವವಿಧ ಭಕ್ತಿ

**ಮೂರುಮೂರ್ತಿ** ತ್ರಿಮೂರ್ತಿ, ಬ್ರಹ್ಮ, ವಿಷ್ಣು, ಮಹೇಶ್ವರ ಅಥವಾ ರಾಮ, ಕೃಷ್ಣ, ವೇದವ್ಯಾಸ

**ಮೂರುಯುಗ** ಕೃತ, ತ್ರೇತ, ದ್ವಾಪರಯುಗ

**ಮೂರುರಿ** ತಾಪತ್ರಯ

**ಮೂರುರೂಪ** ಬ್ರಹ್ಮ, ವಿಷ್ಣು, ಶಿವ

**ಮೂರುಲಿಂಗ** ಅಂತರಾತ್ಮಲಿಂಗ, ಜೀವಾತ್ಮಲಿಂಗ, ನಾಗಲಿಂಗ

**ಮೂರುಲೋಕ** ಸ್ವರ್ಗ, ಮರ್ತ್ಯ, ಪಾತಾಳ

**ಮೂರುವಿಧ** ಸಂಚಿತ, ಆಗಾಮಿ, ಪ್ರಾರಬ್ಧವೆಂಬ ಮೂರುವಿಧ ಕರ್ಮಗಳ ಫಲ

**ಮೂರುವಿಧಮದ** ವಿದ್ಯಾ, ಧನ, ಅಭಿಜನಮದ (ಕುಲ ಮದ)

**ಮೂರುಶರೀರ** ಲಿಂಗಶರೀರ, ಸ್ಥೂಲಶರೀರ, ಕಾರಣಶರೀರ

Rarest Archive

**ಮೂರುಸುತರು** ತಾಪತ್ರಯಗಳು
**ಮೂರುಸ್ಥಿತಿ** ಜಾಗ್ರತ, ಸ್ವಪ್ನ, ಸುಷುಪ್ತಿ
**ಮೂರುಹತ್ತರಿಗೆಮುಖ** 3X10=30, ಸದಾ ಮೂವತ್ತು ವರ್ಷಗಳ ವಯಸ್ಸುಳ್ಳ ದೇವತೆಗಳಿಗೆ ಮುಖನಾದ ಅಗ್ನಿ
**ಮೂರೂರು** ತ್ರಿಪುರ
**ಮೂರೆಂಟುತತ್ತ್ವೇಶ** 3X8=24 ತತ್ತ್ವಾಭಿಮಾನಿಗೀಶ, ತತ್ವಗಳೊಡೆಯ–ಶ್ರೀಹರಿ
**ಮೂರೆಂಟುತತ್ತ್ವೇಶರು** 3X8=24 ತತ್ತ್ವಗಳು
**ಮೂರೆರಡರಿಲೋಪ** 3X2=6 ಅರಿಷಡ್ವರ್ಗಗಳಿಲ್ಲದ
**ಮೂರೆರಡುತಲೆಹರ** 3+2=5 ಐಮೊಗದ ಶಿವ(ಈಶಾನ, ಅಘೋರ, ವಾಮದೇವ, ತತ್ಪುರುಷ, ಸದ್ಯೋಜಾತ)
**ಮೂರೆರಡುನೂರುಮಂತ್ರ** 3X200=600 ತಂತ್ರಸಾರದಲ್ಲಿಯ ಆರುನೂರು ಮಂತ್ರಗಳು
**ಮೂರೆರಡುಭೂತಗಳು** 3+2=5 ಪಂಚಮಹಾಭೂತಗಳು
**ಮೂರೆರಡುರೂಪ** 3+2=5 ಪಂಚಪ್ರಾಣಗಳು
**ಮೂರೇಳಾಯುತ** 3X7=21 ಇಪ್ಪತ್ತೊಂದು ಭಾಷ್ಯಗಳನ್ನು ತಿಳಿದವನು
**ಮೂರೇಳುದಿಕ್ಕು** 3+7=10 ದಶದಿಕ್ಕುಗಳು
**ಮೂರೇಳುಭಾಷ್ಯ** 3X7=21 ಇಪ್ಪತ್ತೊಂದು ಭಾಷ್ಯಗಳು
**ಮೂರೇಳುಮತ** 3X7=21 ಇಪ್ಪತ್ತೊಂದು ಭಾಷ್ಯಗಳು
**ಮೂರೇಳುಸಾವಿರದಾರುನೂರು** (3X7X1000)+600=21600 ಪ್ರತಿಜೀವರಲ್ಲಿ ದಿನಒಂದಕ್ಕೆ ಇಪ್ಪತ್ತೊಂದು ಸಾವಿರದ ಆರುನೂರು ಶ್ವಾಸೋಚ್ಛ್ವಾಸಗಳಾಗುತ್ತವೆ
**ಮೂರೊಂದುಪೆಸರವ** 3+1=4 ನಾಲ್ಕು ಹೆಸರುಳ್ಳ ಶ್ರೀಹರಿ (ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ)
**ಮೂರೊಂದುಮೊಗ** 3+1=4 ನಾಲ್ಕು ಮುಖಗಳುಳ್ಳ ಬ್ರಹ್ಮ, ಚತುರ್ಮುಖ ಬ್ರಹ್ಮ
**ಮೂರೊಂದುಹಾನಿರಹಿತ** ಹುಟ್ಟು, ಸಾವು, ರೋಗ, ಜರಾ ಈ ನಾಲ್ಕು ಹಾನಿಗಳಿಲ್ಲದವನು
**ಮೂರ್ಛನಾ, ಮೂರ್ಛನ** ಸ್ವರ ಸೌಂದರ್ಯದ ಸ್ಥಾಯಿತ್ತ್ವ, ಗಾಯನದ ಒಂದು ಕ್ರಿಯೆ: ಮೈಮರೆಯುವುದು
**ಮೂರ್ಜಗ** ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರುಲೋಕಗಳು
**ಮೂರ್ಜಗಾರಿ** ಮೂರುಲೋಕಗಳ ಶತ್ರು
**ಮೂರ್ತಿ** ಪ್ರತೀಕ; ಪ್ರತಿಮೆ
**ಮೂರ್ಧಜ** ತಲೆಗೂದಲು
**ಮೂರ್ಬೋಗಸೆಮಾಡು** ಕುಡಿ, ಮೂರುಬೊಗಸೆ ನೀರು
**ಮೂರ್ವಿಜಗ** ಮೂರುಜಗ
**ಮೂಲಗಡಿ** ಬೇರನ್ನು ಕತ್ತರಿಸು
**ಮೂಲಪ್ರಕೃತಿ** ಲಕ್ಷ್ಮಿ (ಸೂಕ್ಷ್ಮರೂಪ)
**ಮೂಲಮಂತ್ರ** ಓಂ ನಮೋ ನಾರಾಯಣಾಯ
**ಮೂಲಮಲ** ಪ್ರಾರಬ್ಧ (ಪಾಪ) ಕರ್ಮ
**ಮೂಲಾಂತರ** ಅನಾದಿಕಾಲ
**ಮೂಲಾಗ್ರಜ** ಎಲ್ಲಕ್ಕಿಂತ ಮೊದಲು ಹುಟ್ಟಿದವನು
**ಮೂಲಾಧಾರಚಕ್ರ** ಪ್ರಕೃತಿಯು ನೆಲೆ; ತುದಿಯಲ್ಲಿರುವ ಚಕ್ರ
**ಮೂಲಾವಿದ್ಯೆ** ಮಾಯೆ
**ಮೂಲೇಶ** ಹೃದಯಕಮಲನಾಳಸ್ಥ ನಾರಾಯಣ
**ಮೂಲೈದು** ಮೂಲಾಧಾರ ಹಾಗೂ ಉಳಿದ ಐದು ಚಕ್ರಗಳು
**ಮೂಲೋಕ** ಸ್ವರ್ಗ, ಮರ್ತ್ಯ, ಪಾತಾಳ
**ಮೂವತ್ತುಮೂರುಕೋಟಿ ದೇವತೆಗಳು** ಮೂವತ್ತಮೂರು ಮುಖ್ಯ ದೇವತೆಗಳು ಮತ್ತು ಅವರ ಪರಿವಾರ; ಭೂಲೋಕ, ಅಂತರ್ಲೋಕ, ದ್ಯುಲೋಕ ಎಂದು ವಿಶ್ವವನ್ನು ಮೂರಾಗಿಸಿ ಅನುಕ್ರಮವಾಗಿ ಅಗ್ನಿ, ಇಂದ್ರ, ಸೂರ್ಯರನ್ನು

Rarest Archives

ನಾಯಕರನ್ನಾಗಿಸಿ ಒಂದೊಂದು ಲೋಕಕ್ಕೂ ಹನ್ನೊಂದು ಮುಖ್ಯ ದೇವತೆಗಳನ್ನು ಕಲ್ಪಿಸಿ ಅವರ ಒಟ್ಟು ಸಂಖ್ಯೆ ಮೂವತ್ತಮೂರು ಎಂದಿದೆ. (ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ಎಂಟು ವಸುಗಳು, ದ್ಯು, ಪೃಥಿವೀ) ಈ ಒಬ್ಬೊಬ್ಬರಿಗೂ ಒಂದೊಂದು ಕೋಟಿ ಪರಿವಾರ ದೇವತೆಗಳ ಸಂಖ್ಯೆಯಿದೆ.

**ಮೂವರಅಣ್ಣ** ರಾಮ

**ಮೂವರು** ಬ್ರಹ್ಮ, ವಿಷ್ಣು, ಮಹೇಶ್ವರರು

**ಮೂವಿಧಿ** ಹೆಣ್ಣು, ಹೊನ್ನು, ಮಣ್ಣು

**ಮೂಷ(ಷಿ)ಕ** ಇಲಿ

**ಮೂಷಕಗಮನ, ಮೂಷಕಾಸನ** ಇಲಿಯ ಮೇಲೆ ಕುಳಿತವ–ಗಣಪತಿ

**ಮೂಳ** ಅಂಗಹೀನ; ದಡ್ಡ, ತಿಳಿಗೇಡಿ, ಬೆಪ್ಪ

**ಮೂಳಿ** ಅಂಗಹೀನೆ; ಮೂರ್ಖಳು; ಅಸಂಸ್ಕೃತೆ

**ಮೂಳಿರಕ್ಕಸಿ** ಮೂರ್ಖ ರಾಕ್ಷಸಿ, ಪೂತನಿ

**ಮೃಕಂಡಾತ್ಮಜ, ಮೃಕಂಡುಸುತ** ಮಾರ್ಕಂಡೇಯ

**ಮೃಗ** ಪ್ರಾಣಿ, ಜಿಂಕೆ, ಚಿಗರೆ, ಸಿಂಹ, ಆನೆ

**ಮೃಗಜಲ, ಮೃಗತೃಷ್ಣೆ** ದೂರದಲ್ಲಿ ಇರುವಂತೆ ಭಾಸವಾಗುವ ಜಲ, ಮರೀಚಿಕೆ, ಬಿಸಿಲ್ಗುದುರೆ

**ಮೃಗಧರ** ಚಂದ್ರ; ಶಿವ (ವೇದವು ಮೃಗರೂಪ ವಾಗಿ ಶಿವನ ಹಿಡಿಯೊಳಗಡಗಿದುದರಿಂದ)

**ಮೃಗಧರವೈರಿ** ರಾಹು

**ಮೃಗನಾಭಿ** ಒಂದು ಬಗೆಯ ಸುಗಂಧದ್ರವ್ಯ, ಕಸ್ತೂರಿ

**ಮೃಗಮದ** ಕಸ್ತೂರಿ

**ಮೃಗಮದತಿಗುರು** ಕಸ್ತೂರಿಯ ಸುಗಂಧದ ಲೇಪನ

**ಮೃಗರಾಜ** ಸಿಂಹ

**ಮೃಗಲಾಂಛನ** ಏಣಾಂಕ, ಚಂದ್ರ

**ಮೃಗಲಾಂಛನಮುಖಿ** ಚಂದ್ರಮುಖಿ

**ಮೃಗವೃಕೋದರ** ಚಂದ್ರ

**ಮೃಗವೈರಿ** ಸಿಂಹ

**ಮೃಗಶಾಬ(ವ)** ಜಿಂಕೆಯ ಮರಿ

**ಮೃಗಾಂಕ** ಚಂದ್ರ

**ಮೃಗಾಂಕಧರ, ಮೃಗಾಂಕಮೌಳಿ** ಜಿಂಕೆಯ ಗುರುತುಳ್ಳ ಚಂದ್ರನನ್ನು ಧರಿಸಿದ ರುದ್ರ, ಚಂದ್ರಮೌಳಿ

**ಮೃಗಾಳಿ** ಮೃಗ ಸಮೂಹ, ಪ್ರಾಣಿಗಳ ಗುಂಪು

**ಮೃಗೇಂದ್ರ** ಸಿಂಹ

**ಮೃಡ** ಶಿವ

**ಮೃಡಗದರು** ಶಿವನ ಗರ್ಜನೆ

**ಮೃಡನಯ್ಯ** ಶಿವನ ತಂದೆ–ಬ್ರಹ್ಮ

**ಮೃಡನೊಡೆಯ, ಮೃಡಪ್ರಿಯ** ವಿಷ್ಣು

**ಮೃಡಹರಿಹಯಮುಖರೊಡೆಯ** ಶಿವ, ಇಂದ್ರ ಮೊದಲಾದ ದೇವತೆಗಳ ಒಡೆಯಳು

**ಮೃಡಾಣಿ** ಪಾರ್ವತಿ

**ಮೃಡಾದ್ಯಮರ** ರುದ್ರನೇ ಮೊದಲಾದ ದೇವತೆಗಳು

**ಮೃಣ್ಮಯ** ಮಣ್ಣಿನಿಂದಾದ, ಮಣ್ಣಿನಿಂದ ಮಾಡಿದ

**ಮೃತಭಾವ** ಸತ್ತಂತಹ ಸ್ಥಿತಿ

**ಮೃತ್ಕಲಾಪ** ಮಣ್ಣಿನ ಒಡ್ಯಾಣ, ಮಣ್ಣಿನಿಂದ ಮಾಡಿದ ನವಿಲುಗರಿ

**ಮೃತ್ತಿಕೆ** ಮಣ್ಣು, ತುಳಸೀ ವೃಂದಾವನದ ಮಣ್ಣು, ಮೃತ್ತಿಕಾ ಶೌಚಕ್ಕೆ ಉಪಯೋಗಿಸುವ ಪವಿತ್ರ ವಾದ ಮಣ್ಣು

**ಮೃತ್ಯಾಬ್ಧಿತಾರಣ** ಸಾವಿನ ಸಾಗರ ದಾಟಿಸು ವವನು, ಜನನ ಮರಣಗಳಿಂದ ಪಾರು ಮಾಡುವವನು

**ಮೃತ್ಯು** ಮೃತ್ಯುದೇವತೆ, ಯಮ

**ಮೃತ್ಯುಂಜಯ** ಸಾವನ್ನು ಜಯಿಸಿದವನು–ಶಿವ

**ಮೃತ್ಯುಮಾರಕ** ಮರಣವನ್ನು ತಪ್ಪಿಸುವವನು

**ಮೃದಿಕಾ** ಮೃತ್ತಿಕೆ, ಪವಿತ್ರವಾದ ಮಣ್ಣು

**ಮೃದುಲ** ಕೋಮಲವಾದ, ಶಾಂತವಾದ, ಸೌಮ್ಯವಾದ

Rarest Archive

**ಮೃದ್ಭಾಂಡ** ಮಣ್ಣಿನ ಮಡಕೆ, ಗಡಿಗೆ
**ಮೃಷೆ** ಸುಳ್ಳು, ಅಸತ್ಯ
**ಮೃಷ್ಟ** ಸವಿಯಾದ, ರುಚಿಕರವಾದ, ರಸಕವಳ
**ಮೃಷ್ಟಾನ್ನ, ಮೃಷ್ಟೋದನ** ಸವಿಯಾದ ಊಟ, ರಸಕವಳ, ಪಕ್ವಾನ್ನ
**ಮೆಂಟಿಕೆ** ಕಾಲಿಗೆ ಧರಿಸುವ ಆಭರಣ
**ಮೆಚ್ಚುಗೊಡು** ಬಹುಮಾನ ನೀಡು, ಉಡುಗೊರೆ ಕೊಡು
**ಮೆಟ್ಟಿಕೆ** ಮೆಟ್ಟಿಲು, ಹಂತ
**ಮೆಟ್ಟಿದಿಳೆ** ಕಾಲಿಂದ ತುಳಿದ ಭೂಮಿ
**ಮೆಟ್ಟು** ತುಳಿ; ಸ್ಥಳ; ಪಾದರಕ್ಷೆ
**ಮೆಟ್ಯಾಡು** ತುಳಿದಾಡು
**ಮೆಟ್ರೆ** ಗಂಟಲು
**ಮೆದ್ದ** ತಿಂದ
**ಮೆಯ್** ದೇಹ
**ಮೆರೆ** ಹೊಳೆ, ಪ್ರಕಾಶಿಸು; ಖ್ಯಾತಿಹೊಂದು
**ಮೆರೆಸು** ಪ್ರಕಟಿಸು
**ಮೆಲು** ತಿನ್ನು, ಕಬಳಿಸು, ಜಗಿ
**ಮೆಲ್ಲಡಿ** ಮೃದುವಾದ ಹೆಜ್ಜೆ
**ಮೆಲ್ಲೆದೆಗಾರ್ತಿ** ಕೋಮಲವಾದವಳು, ಸೌಮ್ಯ ಸ್ವಭಾವದವಳು
**ಮೆಳೆ** ದಟ್ಟವಾಗಿ ಬೆಳೆದ ಗಿಡಗಳ ಗುಂಪು, ಬಿದಿರಿನ ಗುಂಪು, ಕಂಟಿ, ಪೊದರು
**ಮೇಖ(ಲಾ)ಲೆ** ಒಡ್ಯಾಣ, ನಡುಕಟ್ಟು, ಡಾಬು, ಉಡಿದಾರ
**ಮೇಗು** ಮೇಲೆ, ಮೇಲುಭಾಗದಲ್ಲಿ
**ಮೇಘ** ಮೋಡ, ಮುಗಿಲು
**ಮೇಘತತಿ** ಮೋಡಗಳ ಸಮೂಹ
**ಮೇಘರಂಜಿನಿ** ಕರ್ನಾಟಕ ಸಂಗೀತದ ಒಂದು ಘನರಾಗ
**ಮೇಘವರ್ಣ** ಮೋಡದ ಬಣ್ಣ, ಬೂದು ಬಣ್ಣ, ಕಡುನೀಲಿ ಬಣ್ಣ, ಕಪ್ಪು ಬಣ್ಣ
**ಮೇಘಾಳಿ** ಮೋಡಗಳ ಸಮೂಹ
**ಮೇಟಿ** ಮುಖ್ಯಾಧಿಕಾರಿ; ವ್ಯವಸಾಯ
**ಮೇಟಿಪೊಲ** ವ್ಯವಸಾಯಕ್ಕೆ ಯೋಗ್ಯವಾದ ಭೂಮಿ
**ಮೇಢ್ರ** ಪುರುಷನ ಜನನೇಂದ್ರಿಯ, ಉಪಸ್ಥ, ಗುಹ್ಯೇಂದ್ರಿಯ
**ಮೇಣ್, ಮೇಣು** ಅಥವಾ, ಮತ್ತು, ಹಾಗೂ, ಇನ್ನು, ಇಲ್ಲದೆ
**ಮೇದಿನಿ** ಭೂಮಿ, ಇಳೆ, ಪೃಥ್ವಿ
**ಮೇದಿನೀಶ, ಮೇದಿನೀಶ್ವರ** ಕ್ಷತ್ರಿಯ, ಕ್ಷತ್ರಿಯರಾಜ
**ಮೇದಿನೀಸುರ** ಬ್ರಾಹ್ಮಣ
**ಮೇಧ** ಯಾಗ, ಯಜ್ಞ
**ಮೇಧಾಗಾರ, ಮೇಧಾಭೂ** ಯಜ್ಞಶಾಲೆ
**ಮೇಧಾವಿ** ಗೋಪಿಚಂದನ, ಬುದ್ಧಿವಂತ
**ಮೇನಕಾತ್ಮಜಾ(ಜೆ)** ಪಾರ್ವತಿ
**ಮೇನಕೆ** ಒಬ್ಬ ಅಪ್ಸರೆ, ವಿಶ್ವಾಮಿತ್ರನ ತಪೋಭಂಗ ಮಾಡಿದವಳು, ಹಿಮಾಚಲನ ಪತ್ನಿ
**ಮೇಮಾತೆವಂಧ್ಯ** ನಮ್ಮ ತಾಯಿ ಬಂಜೆ, ತರ್ಕದ ಒಂದು ಪ್ರಮೇಯ
**ಮೇಯ** ಜ್ಞೇಯ, ತಿಳುವಳಿಕೆಗೆ ನಿಲುಕುವ
**ಮೇರು** ಒಂದು ಪರ್ವತ(ದೊಡ್ಡದು), ಸುಮೇರು, ಬಂಗಾರದ ಬೆಟ್ಟ, ಸಪ್ತದ್ವೀಪಗಳ ನಡುವಿರುವ ಒಂದು ಮಹಾ ಪರ್ವತ, ಗ್ರಹಗಳು ಇದನ್ನು ಸುತ್ತುತ್ತವೆ
**ಮೇರುಮಗ** ಶೇಷಾಚಲ ಪರ್ವತ, ಆನಂದಾದ್ರಿ
**ಮೇರುಸುವರ್ಣ** ಬಂಗಾರದ ನಾಣ್ಯಗಳ ಬೆಟ್ಟ
**ಮೇಲಕ್ಕೆಮಾಡು** ಮುಖ ಮೇಲಕ್ಕೆ ಮಾಡು, ಸೆಡೆದು ತಿರುಗು, ಅಹಂಕರಿಸು
**ಮೇಲನುಚಾರಿ** ತೋರಿಕೆಗಾಗಿ ಒಳ್ಳೆ ನಡತೆಯನ್ನು ಆಚರಿಸುವವ, ಡಂಭಾಚಾರಿ
**ಮೇಲಾಪುರ** ವೈಕುಂಠ
**ಮೇಲಿಪ್ಪಲೋಕ** ಸ್ವರ್ಗ

Rarest Archive

**ಮೇಲುಕಟ್ಟು** ಪಕ್ಷವಹಿಸು, ಎತ್ತಿ ಹಿಡಿ, ಬೆಂಬಲಿಸು

**ಮೇಲುಗಿರಿ** ವಿಶಿಷ್ಟಾದ್ವೈತ ಮತಾನುಯಾಯಿಗಳ ಪುಣ್ಯ ಕ್ಷೇತ್ರ; ತಿರುಪತಿ

**ಮೇಲುದು** ಮೇಲೆ ಹೊದೆವ ಬಟ್ಟೆ ಮತ್ತು ಅದರ ಸೆರಗು, ಉತ್ತರೀಯ ಮುಂತಾದವು

**ಮೇಲುಸುರು** ಆಯಾಸ

**ಮೇಲೊಬ್ಬನಿಂತುನೋಡುವ** ತುರ್ಯನಾಮಕ ಪರಮಾತ್ಮನು ಶಿರಸ್ಸಿನ ಹನ್ನೆರಡು ಅಂಗುಲದ ಮೇಲೆ ಇದ್ದು ಆನಂದವನ್ನುಂಟು ಮಾಡುತ್ತಾನೆ; ಬ್ರಹ್ಮರಂಧ್ರದಲ್ಲಿ ನಿಂತ ವಾಸುದೇವನೂ ಮೇಲೆ ನಿಂತವ

**ಮೇಲ್ಕಟ್ಟು** ಗುಬ್ಬಿ ಚಟ್ಟು; ಎತ್ತಿ ಹಿಡಿ; ಸಿಂಹಾಸನ, ಮಂಟಪ ಮೊದಲಾದವುಗಳ ಮೇಲೆ ಕಟ್ಟುವ ಬಟ್ಟೆ, ವಿತಾನ

**ಮೇಲ್ಬಂದಿ** ತೋಳು ಬಂದಿ

**ಮೇಷ** ಸೌರಮಾನದ ಒಂದು ಮಾಸ; ಟಗರು (ಅಗ್ನಿಯ ವಾಹನ), ಕುರಿ; ಮೊದಲನೆಯ ರಾಶಿ

**ಮೇಷವಾಹನ** ಅಗ್ನಿ

**ಮೇಷಾಂಡಜಸಂಹರ** ಕುರಂಗ ನಾಮಕ ಅಸುರನಿಗೆ ಕಾಗೆರೂಪದಿಂದ ಆಶ್ರಯ ಕೊಟ್ಟ ಇಂದ್ರಪುತ್ರನಾದ ಜಯಂತನಿಗೆ ಶಿಕ್ಷಕ; ಕುರಂಗಾಸುರ ಸಂಹಾರಿ ಅಥವಾ ರಾಮ

**ಮೇಹರೋಗ** ಒಂದು ಬಗೆಯ ಮೂತ್ರ ರೋಗ, ಲೈಂಗಿಕ ರೋಗ

**ಮೇಳ** ಗುಂಪು, ನೆರವಿ, ಸಭೆ; ಹಿಮ್ಮೇಳ, ಮಂಗಳವಾದ್ಯ; ವಾದ್ಯಗಾರರ, ಸಂಗೀತಗಾರರ, ನರ್ತಕರ ಗುಂಪು

**ಮೇಳದವರು** ಅಂತಃಪುರದವರು, ವಾದ್ಯದವರು

**ಮೇಳನ** ಮಿಲನ, ಒಟ್ಟುಗೂಡುವುದು, ಸೇರಿಕೆ, ಮಿಶ್ರಣ

**ಮೈ–ದುಗಿ** ಇನ್ನೊಬ್ಬರ ಉತ್ಕರ್ಷವನ್ನು ಸಹಿಸದೆ ಮತ್ಸರಿಸುವವಳು; ಸಂಕಟಪಡುವವಳು

**ಮೈಗಣ್ಣ** ಇಂದ್ರ

**ಮೈಗರೆ** ಅವಿತುಕೊ

**ಮೈಗೂಡು** ಮೈತುಂಬಿಕೊಳ್ಳು; ದೃಢವಾಗು; ದೇಹವನ್ನು ಅರ್ಪಿಸು, ಸಂಭೋಗಿಸು

**ಮೈಜೋಡು** ಚಿಲಖತ್ತು, ರಕ್ಷಾ ಕವಚ

**ಮೈಥಿಲಿ** ಮಿಥಿಲೆಯ ಜನಕರಾಜನ ಮಗಳು–ಜಾನಕಿ

**ಮೈದುನ** ತಂಗಿಯ ಗಂಡ; ಕೃಷ್ಣನ ಬಾವಮೈದುನ ಅರ್ಜುನ

**ಮೈದೆಗೆ** ಅಂಜು, ಹೆದರು

**ಮೈದೋರು** ಕಾಣಿಸು, ಪ್ರತ್ಯಕ್ಷನಾಗು; ಪರಾಕ್ರಮವನ್ನು ತೋರು

**ಮೈನಾಕಿ** ಮೈನಾಕನ ಮಗಳು–ಪಾರ್ವತಿ

**ಮೈಮನ** ದೇಹ ಮತ್ತು ಮನಸ್ಸು, ಕಾಯಿಕ, ಮಾನಸಿಕ

**ಮೈಯೆಲ್ಲಕಣ್ಣ** ಸಾಸಿರಗಣ್ಣನಾದ ಇಂದ್ರ

**ಮೈಯೊಳಿಟ್ಟವ** ಅರ್ಧನಾರೀನಟೇಶ್ವರ

**ಮೈಲ** ಪಾಪ, ಕೊಳೆ

**ಮೈಲಾರಿ** ಪರಮೇಶ್ವರ

**ಮೈಲಿಗೆ** ಹೊಲಸು, ಕೊಳೆ; ಸೂತಕ

**ಮೈಲು** ನವಿಲು

**ಮೈಹೋಳು** ದೇಹದ ಒಂದು ಭಾಗ; ವ್ಯಕ್ತಿಯು ಪರಮಾತ್ಮನ ಒಂದು ಅಂಶವೆಂಬುದನ್ನು ಹೇಳಿರುವ ರೀತಿ

**ಮೊಗೆ** ದ್ರವಪದಾರ್ಥವನ್ನು ತೋಡು; ಮಣ್ಣಿನ ಗಡಿಗೆ

**ಮೊತ್ತ** ರಾಶಿ, ಒಟ್ಟಿಲು, ಸಮೂಹ

**ಮೊನಚು** ಚೂಪು, ಹರಿತ

**ಮೊನಿ, ಮೊನೆ** ತುದಿ; ಹರಿತ, ಚೂಪು; ಧೈರ್ಯ; ಯುದ್ಧ

Rarest Archive

**ಮೊನೆಗಾರ** ಭಟ, ಸೈನಿಕ, ಯೋಧ
**ಮೊನೆದೋರು** ಧೈರ್ಯತೋರು
**ಮೊನೆಯಾಳ್** ಭಟ, ಸೈನಿಕ, ಯೋಧ
**ಮೊರಡಿ** ಕಲ್ಲು, ಗುಡ್ಡ, ದಿಬ್ಬ
**ಮೊರಡುತನ** ನಯವಿಲ್ಲದಿರುವಿಕೆ, ಒರಟುತನ
**ಮೊರಡುತುರು** ಒದೆಯುವ ಹಸು, ಒರಟುಹಸು
**ಮೊರನೂರು** ಶೂರ್ಪಾಲಿ, ಶೂರ್ಪಾಲಯ
**ಮೊರೆ** ಪ್ರಾರ್ಥನೆ; ಆಶ್ರಯ; ಗುಡುಗು ಹಾಕು
**ಮೊಲೆ** ಸ್ತನ, ಕುಚ
**ಮೊಲೆವಾಲು** ಸ್ತನ್ಯ, ಎದೆಹಾಲು
**ಮೊಲ್ಲೆ** ಮಲ್ಲಿಗೆ ಜಾತಿಗೆ ಸೇರಿದ ಒಂದು ಹೂವು
**ಮೊಳೆ** ಮೊಳಕೆ, ಕುಡಿ
**ಮೋಕ** ಬಿಡುವುದು, ಸ್ವಾತಂತ್ರ್ಯ
**ಮೋಕ್ಷ** ಬಿಡುಗಡೆ, ಮುಕ್ತಿ, ನಿರ್ವಾಣ
**ಮೋಕ್ಷದ** ಮೋಕ್ಷವನ್ನು ಕೊಡುವವನು–ಶ್ರೀಹರಿ
**ಮೋಕ್ಷಧರ** ವಿಷ್ಣು
**ಮೋಕ್ಷಹೇತು** ಮೋಕ್ಷಕ್ಕೆ ಕಾರಣವಾದುದು
**ಮೋಚ, ಮೋಚಕ** ಪರಿಹಾರ, ಬಿಡುಗಡೆ ಮಾಡುವವನು; ಬಾಳೆಯಗಿಡ
**ಮೋಚನೆ** ಬಿಡುಗಡೆ
**ಮೋಚಿಸು** ಬಂಧನದಿಂದ ಬಿಡಿಸು
**ಮೋಟಿ** ಏತದಿಂದ ಭಾವಿಯಲ್ಲಿನ ನೀರನ್ನು ಎತ್ತಿ ಹರಿಯಬಿಡುವ ಸಾಧನ, ಮುಂಗೈ ಇಲ್ಲದವಳು; ಕುಳ್ಳಿ, ಕುಬ್ಜೆ
**ಮೋಟುದೀವಿಗೆ** ಕುರುಡು ದೀವಿಗೆ, ಉರಿಯದ ಪಂಜು
**ಮೋಡಿ** ಶೈಲಿ, ಬರವಣಿಗೆಯ ಒಂದು ರೀತಿ; ಮರುಳುಮಾಡು, ಇಂದ್ರಜಾಲ, ಕೈಚಳಕ
**ಮೋಡೊಡ್ಡು** ಮೋಡಗಳ ಗುಂಪು
**ಮೋತಿ** ಮುತ್ತು
**ಮೋದ** ಆನಂದ, ಸಂತೋಷ
**ಮೋದಕ** ಕಡುಬು, ಕಾಯಿಕಡುಬು, ಒಂದು ಬಗೆಯ ಸಿಹಿತಿಂಡಿ
**ಮೋದತೀರ್ಥ** ಆನಂದತೀರ್ಥ, ಮಧ್ವಾಚಾರ್ಯ
**ಮೋದಪಡು** ಸಂತಸಪಡು
**ಮೋದಮುನಿ** ಆನಂದತೀರ್ಥರು, ಮಧ್ವಾಚಾರ್ಯರು
**ಮೋದಸೂಕರ** ಆನಂದ ಕೊಡುವ ಹಂದಿ, ವರಾಹಾವತಾರ
**ಮೋನ** ಮೌನ
**ಮೋಹ** ವಿಪರೀತಜ್ಞಾನ
**ಮೋಹಕ** ಭ್ರಾಂತಿ
**ಮೋಹಕ(ನ)ಶಾಸ್ತ್ರ** ಅದ್ವೈತಶಾಸ್ತ್ರ
**ಮೋಹದಖಣಿ** ಪ್ರೀತಿಯ ಆಗರ
**ಮೋಹದೆ** ಮನಸ್ಸು ಮೆಚ್ಚಿಸುವವಳು
**ಮೋಹನಚರಿತ** ಸುಂದರ ಚಾರಿತ್ರ್ಯವನ್ನುಳ್ಳವನು
**ಮೋಹನದಚಿನ್ನ** ಚಿನ್ನದ ಗುಂಡುಗಳನ್ನು ಗಟ್ಟಿಯಾಗಿ ಕೂಡಿಸಿರುವ ಮಾಲೆ (ಮೋಹನ ಮಾಲೆ ಸರ)
**ಮೋಹನ್ನೆ** ಸುಂದರಿ
**ಮೋಹಿನೀರೂಪ** ಉಡುಪಿ ಕೃಷ್ಣನಿಗೆ ಶುಕ್ರವಾರದ ಅಲಂಕಾರ; ಶಿವನಿಗೆ ತೋರಿದ, ಅಮೃತ ಹಂಚಿದ ವಿಷ್ಣುವಿನ ಕನ್ಯಾರೂಪ
**ಮೌ(ಲಿ)ಳಿ** ತಲೆ; ಸಿಂಗರಿಸಿದ ಮುಡಿ; ಕಿರೀಟ
**ಮೌಂಜಾಶ್ರಮಿ** ಬ್ರಹ್ಮಚಾರಿ
**ಮೌಂಜಿ** ಮುಂಜ ಹುಲ್ಲಿನಿಂದ ಮಾಡಿದ ದಾರ
**ಮೌಕ್ತಿಕ** ಮುತ್ತು
**ಮೌನ** ಮಾತನಾಡದಿರುವಿಕೆ, ನೀರವತೆ
**ಮೌನಿ** ಮುನಿ, ಯತಿ, ಮೌನವ್ರತ ಆಚರಿಸುವವನು
**ಮೌರಿ** ಒಂದು ವಾದ್ಯ ವಿಶೇಷ, ಭಜಂತ್ರಿ, ಸನಾದಿ
**ಮೌಳಿಕಂದ** ಒಡೆತನ; ಮುಖಂಡ, ಆಟದಲ್ಲಿಯ ಹಿರಿಯ ಹುದ್ದರಿ; ಶಿಖರ
**ಮ್ಲಾನ** ಬಾಡಿದ, ಕಂದಿದ
**ಮ್ಲೇಂಚ್ಛ<ಮ್ಲೇಚ್ಛ** ಅನಾಗರಿಕ, ವಿದೇಶೀಯ, ಆರ್ಯನಲ್ಲದವನು

Rarest Archiver

# ಯ

**ಯಂತ್ರವಾಹಕ** ಯಂತ್ರಚಾಲಕ, ಬದುಕೆಂಬ ಯಂತ್ರವನ್ನು ನಡೆಸುವವನು–ವಿಷ್ಣು

**ಯಂತ್ರಾರೂಢ** ವಿಷ್ಣು

**ಯಂತ್ರೋದ್ಧಾರಕ** ಪಂಪಾಕ್ಷೇತ್ರದಲ್ಲಿ ವ್ಯಾಸರಾಯರಿಂದ ಪ್ರತಿಷ್ಠಿತರಾದ ವಾಯುದೇವರು

**ಯಃಕಶ್ಚಿತ್ತು** ಕೆಲಸಕ್ಕೆ ಬಾರದ, ಸಾಮಾನ್ಯವಾದ, ಕ್ಷುಲ್ಲಕ

**ಯಕ್ಷೇಶ** ಕುಬೇರ

**ಯಕ್ಷೇಶನಾಪ್ತ** ಶಿವ

**ಯಜನ** ಯಜ್ಞ, ಯಜ್ಞಮಾಡುವಿಕೆ

**ಯಜಿಸು** ಯಜ್ಞಮಾಡು

**ಯಜ್ಞನಾಮಕ** ವಿಷ್ಣು

**ಯಜ್ಞಪತ್ನಿ** ಸೀತಾ

**ಯಜ್ಞವಾಟ** ಯಾಗ ಮಂಟಪ

**ಯಜ್ಞಸ್ಥ** ಯಜ್ಞಾಂತರ್ಯಾಮಿ–ಶ್ರೀಹರಿ, ಪರಶುರಾಮ

**ಯಜ್ಞೇಶ್ವರ** ಅಗ್ನಿ, ಬೆಂಕಿ; ವಿಷ್ಣು

**ಯತಿ** ಸಂನ್ಯಾಸಿ; ಪದ್ಯದ ನಡೆಯಲ್ಲಿ ನಿಲ್ಲಿಸಬೇಕಾದ ಸ್ಥಳ

**ಯತಿಪುಂಗವ, ಯತಿಪ** ಯತಿಶ್ರೇಷ್ಠ

**ಯದುಕುಲ–ತಿಲಕ/ಜ /ನಂದನ /ವಾರಿಧಿ/ ಚಂದ್ರಮ /ಶ್ರೇಷ್ಠ; ಯದುಕುಲೇಶ/ ಯದುಕುಲೋತ್ಪನ್ನ, ಯದುಕುಲೋದ್ಧಾರಿ, ಯದುರಾಜಾಧಿರಾಜ, ಯದುರಾಯ, ಯದುಪತಿ** ಕೃಷ್ಣ

**ಯದುಗಿರಿ** ಮೇಲುಕೋಟೆ, ಕಾಮವರ ಗ್ರಾಮ

**ಯದೃಚ್ಛಾಲಾಭ** ದೈವದ ಕರುಣೆ; ಅದೃಷ್ಟದ ಫಲ

**ಯದೃಚ್ಛೆ** ಸ್ವಚ್ಛಂದತೆ, ಪರಾಧೀನವಿಲ್ಲದಿರುವುದು; ಅನಿರೀಕ್ಷಿತ, ಅನಾಯಾಚಿತ; ದೈವ; ಅದೃಷ್ಟ

**ಯಮ** ಇಂದ್ರಿಯನಿಗ್ರಹ, ಸಂಯಮ; ಧರ್ಮದೇವತೆ; ಜೊತೆ, ಯಮಳ; ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬುದಾಗಿ ಯಮ ಐದು ವಿಧ

**ಯಮಕಭಾರತ** ಮಧ್ವಾಚಾರ್ಯರು ಬರೆದ ಮೂವತ್ತ ಏಳು ಗ್ರಂಥಗಳಲ್ಲಿ ಒಂದು

**ಯಮಗಂಡ** ಭಯಂಕರ

**ಯಮತನುಜ** ಧರ್ಮರಾಜ

**ಯಮಧರ್ಮಪುತ್ರ** ಯಮಧರ್ಮರಾಜನಿಗೆ ಮಗನಾಗಿ ಬಂದ ಹರಿ ಹಾಗೂ ಕೃಷ್ಣ ಎಂಬ ಹೆಸರಿನ ಭಗವಂತ

**ಯಮನವ** ಯಮನದೂತ

**ಯಮನಿಯಮ** ಅಷ್ಟಾಂಗಯೋಗದಲ್ಲಿ ಮೊದಲ ಎರಡು ಅಂಗಗಳು–ಯಮ ಹಾಗೂ ನಿಯಮ

**ಯಮಪಿತಸಮ** ಯಮನತಂದೆಯಾದ ಸೂರ್ಯನಿಗೆ ಸಮನಾದ ಚಂದ್ರ

**ಯಮಸುತ** ಧರ್ಮರಾಯ, ಯುಧಿಷ್ಠಿರ, ವಿದುರ

**ಯಮಸುತನರಾಣಿ** ದ್ರೌಪದಿ

**ಯಮಳ(ರು)** ಜೊತೆ, ಜೋಡಿ, ಅವಳಿ–ಜವಳಿ; ನಕುಲ ಸಹದೇವರು

**ಯಮಳಾರ್ಜುನ** ಜೋಡುಮತ್ತಿಯ ಮರ; ಕುಬೇರನ ಪುತ್ರರಾದ ನಲಕೂಬರ, ಮಣಿಗ್ರೀವರು ಋಷಿಶಾಪದಿಂದ ಅರ್ಜುನವೃಕ್ಷವಾಗಿದ್ದರು

**ಯಮಿಕುಲೋತ್ತಂಸ** ಯತಿಕುಲತಿಲಕ, ಯತಿಶ್ರೇಷ್ಠ

**ಯಮಿವರ** ಯತಿಶ್ರೇಷ್ಠ

**ಯಮುನೆಯಭ್ರಾತ** ಯಮ

**ಯವ** ಗೋಧಿ, ಧಾನ್ಯ; ಕೈಯಲ್ಲಿರುವ ಅನ್ನಸೂಚಕವಾದ ಒಂದು ರೇಖೆಯ ಹೆಸರು

Rarest Archive

**ಯವನ** ಮುಸಲ್ಮಾನ, ಪರದೇಶದವ

**ಯವನವಿದಾರ** ಕಾಲಯವನನ್ನು ಸೀಳಿದವ–ಕೃಷ್ಣ

**ಯವಲ** ಬಿದಿರ ಅಕ್ಕಿ

**ಯವ್ವ** ಅವ್ವ

**ಯಶಸ್ಸು** ಕೀರ್ತಿ, ಶ್ರೇಯಸ್ಸು

**ಯಶೋಹಾನಿ** ಕೀರ್ತಿ ನಾಶ

**ಯಷ್ಟಿ** ದಂಡ, ಕೋಲು, ಗದೆ; ಎಳೆ, ದಾರ

**ಯಾಚಕ** ಭಿಕ್ಷುಕ, ಬೇಡುವವನು

**ಯಾಜಕ, ಯಾಜಿ** ದೀಕ್ಷಿತ, ಯಜ್ಞಮಾಡುವವನು

**ಯಾಜ್ಞಸೇನಿ** ದ್ರೌಪದಿ

**ಯಾತುಧಾನ** ದೈತ್ಯ, ರಾಕ್ಷಸ, ಪಿಶಾಚಿ, ದುಷ್ಟಶಕ್ತಿ

**ಯಾದವಕುಲಜ, ಯಾದವರಾಯ** ಕೃಷ್ಣ

**ಯಾನ** ಪ್ರಯಾಣ, ಸಂಚಾರ; ವಾಹನ

**ಯಾನಾಳಿ** ವಾಹನ ಸಮೂಹ

**ಯಾಮ** ಹಿಡಿತ; ಜಾವ, ದಿನದ ಎಂಟನೆಯ ಒಂದು ಭಾಗ, ಮೂರು ತಾಸು

**ಯಾಮಿನಿ** ರಾತ್ರಿ, ಇರುಳು

**ಯಾಮಿರ** ಚಂದ್ರೋದಯ, ಕತ್ತಲೆ; ಅಜ್ಞಾನ

**ಯಾಮೀರ** ಚಂದ್ರ

**ಯಾಯುವಾರ** ಭಿಕ್ಷೆ, ತಿರುಪೆ; ಗೋಪಾಳ ಬೇಡುವುದು–ಹರಿದಾಸರು ಮಾಡುವ ಗೋಪಾಳದ ವಿಶಿಷ್ಟ ಕ್ರಮ

**ಯಾವಕ** ಅರಗಿನರಸ, ಅಲತಗೆ; ಜವೆಗೋಧಿಯಿಂದ ಮಾಡಿದ ಗಂಜಿ

**ಯಾವಜ್ಜೀವ** ಜೀವಮಾನ ಪರ್ಯಂತ

**ಯಾವನ್ನಕ** ಎಲ್ಲಿಯವರೆಗೆ

**ಯಾವಸ<ಯವಸ** ಹುಲ್ಲು

**ಯಾಳಿ** ಸೊಂಡಿಲಿರುವ ಸಿಂಹಾಕಾರದ ಒಂದು ಕಾಲ್ಪನಿಕ ಪ್ರಾಣಿ

**ಯುಕುತ(ತಿ)ಶಾಸ್ತ್ರ** ಬ್ರಹ್ಮಮೀಮಾಂಸಾ ಶಾಸ್ತ್ರ

**ಯುಕುತ<ಯುಕ್ತ** ಕೂಡಿದ, ಸೇರಿದ, ಸರಿ

**ಯುಕುತಿ** ಯುಕ್ತಿ, ತರ್ಕಬದ್ಧವಾದ ವಾದಸರಣಿ

**ಯುಗಳ, ಯುಗ್ಮ** ಜೋಡಿ(ಎರಡು), ಜೊತೆ

**ಯುಗಳಭಾವ** ಭೇದಭಾವ

**ಯುಗಾದಿಕೃತೆ** ಯುಗವೇ ಮೊದಲಾದ ಕಾಲ ವಿಶೇಷಗಳನ್ನು ಸೃಷ್ಟಿಸುವವನು–ವಿಷ್ಣು (ಸಹಸ್ರನಾಮ)

**ಯುಷ್ಠಿಧರ** ಕೊಡಲಿಹಿಡಿದ ಪರಶುರಾಮ

**ಯೂಥ** ಗುಂಪು, ಸೈನ್ಯ, ಪಡೆ

**ಯೂಥಪ** ಸೈನ್ಯಾಧಿಪತಿ; ಆನೆ, ಸಲಗ

**ಯೂಥಪವದನ** ಗಜವದನ

**ಯೂಪ** ಸ್ತಂಭ, ಯಜ್ಞಪಶುವನ್ನು ಕಟ್ಟುವ ಕಂಬ

**ಯೆಂಕಾಯೀ** ವೇಂಕಟೇಶ್ವರನ ಹೆಂಡತಿ ಲಕ್ಷ್ಮೀದೇವಿ, ಪದ್ಮಾವತಿ

**ಯೋಗ** ಏಕಾಗ್ರತೆ, ಧ್ಯಾನ, ಉಪಾಸನಾ ಭಾಗ; ಸೇರುವಿಕೆ

**ಯೋಗದಿಟ್ಟ** ಯೋಗದಲ್ಲಿ ನಿಪುಣ

**ಯೋಗನಿದ್ರೆ** ಯುಗಾಂತ್ಯದಲ್ಲಿ ವಿಷ್ಣು ಮಾಡುವ ನಿದ್ರೆ

**ಯೋಗನೃಕೇಸರಿ** ಯೋಗಾನರಸಿಂಹ

**ಯೋಗರತಿ** ಯೋಗಾವಸ್ಥೆಯಲ್ಲಿಯ ಪ್ರೀತಿ

**ಯೋಗಿ** ಯೋಗಾಭ್ಯಾಸವನ್ನು ಮಾಡುವವನು; ಯತಿ

**ಯೋಗಿಧ್ಯೇಯ** ಯೋಗಿಗಳಿಗೆ ಆದರ್ಶನಾದವನು

**ಯೋಗ್ಯತೆಪರಿ** ಯೋಗ್ಯತೆಯ ರೀತ್ಯ, ಜೀವರ ಯೋಗ್ಯತೆ (ತಾರತಮ್ಯದ ಪ್ರಕಾರ)

**ಯೋನಿ** ಸ್ತ್ರೀ ಜನನೇಂದ್ರಿಯ, ಉತ್ಪತ್ತಿ ಸ್ಥಾನ; ಜನ್ಮ

**ಯೋನಿಮುಖ** ಜನ್ಮಸ್ಥಾನ

**ಯೋಷಿತೆ** ಹೆಂಗಸು, ಮಹಿಳೆ, ಹೆಂಡತಿ

**ಯೌವನ** ತಾರುಣ್ಯ, ಹರೆಯ

Rarest Archive

# ರ

**ರಂಕ** ಬಡವ, ದರಿದ್ರ
**ರಂಕರಕ್ಷಕ** ದೀನರನ್ನು ರಕ್ಷಿಸುವವನು–ಶ್ರೀಹರಿ
**ರಂಗ** ಶ್ರೀಹರಿ
**ರಂಗನಸುತ** ಬ್ರಹ್ಮ
**ರಂಗವಲಿದದಾಸರು** ಶ್ರೀ ಜಗನ್ನಾಥದಾಸರು
**ರಂಜಕ** ಮನೋಹರ, ರಂಜಿಸುವವನು, ಆನಂದ ಪಡಿಸುವವನು
**ರಂಜಿತ** ಮೋಹಕಗೊಂಡ, ಆನಂದ ಪಟ್ಟವನು
**ರಂಬಿಸು** ಸಂತೈಸು, ತೃಪ್ತಿ ಪಡಿಸು
**ರಂಭಾ, ರಂಭೆ** ಬಾಳೆಯಗಿಡ; ಒಬ್ಬ ಅಪ್ಸರೆಯ ಹೆಸರು, ಸುರಸುಂದರಿಯರಲ್ಲಿ ಒಬ್ಬಳು
**ರಂಭಾಪಲ** ಬಾಳೆಹಣ್ಣು
**ರಂಹಸ** ವೇಗ, ತೀವ್ರತೆ
**ರಕುತಾಂಬರ** ರಕ್ತದಲ್ಲಿ ತೊಯ್ದ ವಸ್ತ್ರ; ಕೆಂಪುವಸ್ತ್ರ
**ರಕ್ಕಕಾಳಿ(<ರಕ್ತಕಾಳಿಜ)** ಮೂತ್ರಪಿಂಡದ ರೋಗ
**ರಕ್ಕಸ** ಅಸುರ, ರಾಕ್ಷಸ, ಕ್ರೂರಿ, ನಿರ್ದಯಿ; ದಪ್ಪವಾಗಿ ಬೆಳೆದ
**ರಕ್ಕಸಮರ್ದ** ಅಸುರಾರಿ, ರಾಕ್ಷಸರನ್ನು ಕೊಂದವನು ಶ್ರೀಹರಿ
**ರಕ್ಕಸಾಂತಕ** ದೈತ್ಯ ಸಂಹಾರಿ
**ರಕ್ಕಸಾರಿ** ರಾಕ್ಷಸರ ವೈರಿ
**ರಕ್ತ** ನೆತ್ತರು; ಪ್ರೀತಿ; ಕೆಂಪು
**ರಕ್ತಪ್ರಭ** ಸಂಕರ್ಷಣರೂಪಿ ಪರಮಾತ್ಮ; ಕೆಂಪು ಪ್ರಭೆಯುಳ್ಳದು
**ರಕ್ತಸಿಕ್ತ** ರಕ್ತದಿಂದತೊಯ್ದ
**ರಕ್ತಿ** ಒಲವು, ಅಪೇಕ್ಷೆ, ಆಸೆ, ಪ್ರೀತಿ, ಅಪೇಕ್ಷಾ ನಿರತ
**ರಕ್ಷೆ** ಅಂಗಾರ; ಕಾಪಾಡುವಿಕೆ, ಕಾಯುವಿಕೆ
**ರಕ್ಷೋಗಣ** ರಾಕ್ಷಸರ ಸಮೂಹ
**ರಕ್ಷೋಗಣಾಧ್ಯಕ್ಷ** ರಾಕ್ಷಸಶ್ರೇಷ್ಠ, ಹಿರಣ್ಯ ಕಶಿಪು
**ರಕ್ಷೆಯಬೊಟ್ಟು** ದೃಷ್ಟಿ ತಾಗಬಾರದೆಂದು ಹಚ್ಚುವ ಕಪ್ಪು ಬೊಟ್ಟು, ಭಸ್ಮ
**ರಕ್ಷೆಯಿಕ್ಕು** ಆಶ್ರಯ ನೀಡು, ಕಾಪಾಡು
**ರಗಡಿಸು** ರಗಳೆಮಾಡು, ಗೋಳಾಡಿಸು
**ರಗಡು** ಅತ್ಯಧಿಕ, ಯಥೇಚ್ಛ
**ರಘುಕುಲತಿಲಕ, ರಘುಕುಲವಯ** ರಾಮ
**ರಜೋಭಿಮಾನಿಒಡೆಯ** ರಜೋಗುಣಕ್ಕೆ ಅಭಿಮಾನಿಯಾದ ಲಕ್ಷ್ಮಿಯ ಪತಿ–ಶ್ರೀಹರಿ
**ರಜ್ಜು** ಹಗ್ಗ; ರಾಗ, ಐಹಿಕ ಪ್ರೇಮ, ಆಸೆ
**ರಟ್ಟು** ಬಯಲು, ಬಯಲಾದುದು, ಪ್ರಕಟ ವಾದುದು
**ರಟ್ಟುಭೂತವಮಾಡು** ಪ್ರಕಟಮಾಡು, ಪೀಕಲಾಟಕ್ಕೆ ಸಿಕ್ಕಿಸು
**ರಟ್ಟುಮಾಡು** ಹೊರಗೆ ಹಾಕು, ಪ್ರಕಟಿಸು
**ರಟ್ಟೆ** ತೋಳು, ಬಾಹು
**ರಣ** ಯುದ್ಧ
**ರಣಭೀಮ** ಯುದ್ಧದಲ್ಲಿ ಶೂರ
**ರತ** ಆಸಕ್ತ; ಸಂತೋಷ, ಆನಂದ; ರತಿಕ್ರೀಡೆ
**ರತಮುಖ** ಸಂತೋಷದ ಕಳೆ
**ರತಿ** ಸಂತೋಷ, ಆನಂದ; ಹಂಬಲ, ಪ್ರೀತಿ; ಆಸಕ್ತಿ, ವಿಷಯಾಸಕ್ತಿ, ಸುರತ
**ರತಿಕಜ್ಜ** ರತಿಕಾರ್ಯ, ಸುರತ, ಸಂಭೋಗ
**ರತಿಕೇಳಿ** ಸುರತಕ್ರೀಡೆ, ಸಂಭೋಗ
**ರತಿದೇವಿಕೃತಿ** ಪ್ರದ್ಯುಮ್ನನ ಸ್ತ್ರೀ ಕೃತಿದೇವಿ, ಪ್ರದ್ಯುಮ್ನನೇ ಮನ್ಮಥ, ಮನ್ಮಥನ ಮಡದಿ ರತಿದೇವಿಯೇ ಕೃತಿದೇವಿ
**ರತಿಪತಿ** ಕಾಮ, ಮನ್ಮಥ
**ರತಿಪತಿಜನಕ, ರತಿಪತಿಪಿತ** ಶ್ರೀಹರಿ
**ರತಿಪತಿರಿಪುಧನು** ಶಿವ ಧನಸ್ಸು

Rarest Archiver

**ರತಿಪತಿಶರದವ್ರತ** ಶರತ್ಕಾಲದಲ್ಲಿ ನಡೆಸುವ ಮದನೋತ್ಸವ, ಕೋಜಾಗರವ್ರತ
**ರತಿಪ್ರೇಮ** ಒಲವು, ಪ್ರೀತಿ; ಇಂದ್ರಿಯ ಸುಖದ ಒಲವು
**ರತಿವಿದಗ್ಧ** ಕಾಮಕಲೆಯಲ್ಲಿ ನಿಪುಣ, ಕಾಮತಪ್ತ
**ರತ್ನ** ವಜ್ರ, ಮಾಣಿಕ್ಯ ಮುಂತಾದ ಬೆಲೆಯುಳ್ಳ ಮಣಿ; ಸಂಪತ್ತು; ಶ್ರೇಷ್ಠವಾದುದು
**ರತ್ನಗರ್ಭ** ಸಮುದ್ರರಾಜ, ಭೂಮಿ
**ರತ್ನಮೂರರಪ್ರಭೆ** ತ್ರಿಪುರ
**ರತ್ನಸಾನು** ಮೇರುಪರ್ವತ
**ರತ್ನಾಕರ** ಸಮುದ್ರ, ರತ್ನಗಳ ಆಶ್ರಯಸ್ಥಾನ
**ರಥ** ತೇರು, ಸ್ಯಂದನ; ಶರೀರ
**ರಥಗಾತ್ರ** ಚಕ್ರ
**ರಥಗಾತ್ರಪಾಣಿ** ಚಕ್ರ ಹಿಡಿದವನು–ವಿಷ್ಣು
**ರಥಗಾನುಜವಾಹನ** ಅರುಣನ ತಮ್ಮ ಗರುಡನನ್ನು ವಾಹನವಾಗುಳ್ಳವನು–ಶ್ರೀಹರಿ
**ರಥಚರಣ** ಚಕ್ರ
**ರಥಚರಣಧರ** ಕೃಷ್ಣ
**ರಥವನಡರು** ರಥದ ಮೇಲೆ ಹತ್ತು
**ರಥಾಂಗ** ಚಕ್ರ, ರಥದ ಅಂಗ; ಚಕ್ರವಾಕ ಪಕ್ಷಿ
**ರಥಾಂಗಧರ** ಚಕ್ರಧಾರಿಯಾದ ಕೃಷ್ಣ
**ರಥಾಂಗಪಾಣಿ** ಚಕ್ರಪಾಣಿ–ಕೃಷ್ಣ
**ರದ** ಹಲ್ಲು
**ರದನ** ಹಲ್ಲು, ದವಡೆ, ಆನೆಯದಾಡೆ, ಕೋರೆ
**ರದನಾಮಲೇಕ** ಸ್ವಚ್ಛವಾದ ಒಂದು ದಂತವುಳ್ಳವನು ಗಣಪತಿ
**ರದನಿ** ಆನೆ; ದಂತವನ್ನು ಲೆಕ್ಕಣಿಕೆಯಾಗಿ ಉಳ್ಳವನು–ಗಣಪತಿ
**ರದನಿಕರ** ಆನೆಯ ಸೊಂಡಿಲು
**ರದ್ದಿ** ನಿರುಪಯುಕ್ತವಾದ, ಕೆಲಸಕ್ಕೆ ಬಾರದ; ಜೋರು, ಒರಟು
**ರನ್ನ** ರತ್ನ; ಶ್ರೇಷ್ಠ
**ರನ್ನೆ** ಲಕ್ಷ್ಮಿ
**ರಪಣ** ಐಶ್ವರ್ಯ, ಆಸ್ತಿ; ಜೂಜಿನಲ್ಲಿ ಒಡ್ಡುವ ಪಣ; ಸಾಮರ್ಥ್ಯ; ಒಂದು ಆಯುಧ
**ರಪವಿಸ್ತಾರ** ಸುಖಾನುಭವ ಕೊಡುವವನು
**ರಬ್ಬಳಿಗೆ** ಅಂಬಲಿ, ಗಂಜಿ, ಜೋಳದ ನುಚ್ಚಿನಿಂದ ಮಾಡಿದ ಅಂಬಲಿ, ದೊಗ್ಗ
**ರಮಣ** ನಲ್ಲ, ಪ್ರಿಯಕರ, ಗಂಡ; ಸುಂದರ
**ರಮಣವಕ್ಷಾಂಕಕ್ಷೇತ್ರೇ** ಗಂಡನ ಎದೆಯಲ್ಲಿ ನೆಲೆಸಿದವಳು, ಲಕ್ಷ್ಮಿ
**ರಮಣಿ** ಸುಂದರಿ
**ರಮಣೀಯ** ಸುಂದರವಾದ, ಚೆಲುವಾದ
**ರಮಾ, ರಮೆ** ಲಕ್ಷ್ಮಿ
**ರಮಾಧವ, ರಮಾವಿನೋದಿತ** ವಿಷ್ಣು
**ರಮಿಸು** ಸಂತೋಷಪಡು, ಸುಖಿಸು; ವಿಹರಿಸು; ಸಂತೈಸು
**ರಮೆ–ಧರೆ** ಶ್ರೀದೇವಿ ಮತ್ತು ಭೂದೇವಿ
**ರಮೆಯರಸ, ರಮೆಯಾಣ್ಮ** ಲಕ್ಷ್ಮೀದೇವಿಯ ಪತಿ–ಶ್ರೀಹರಿ
**ರಮ್ಮೆ** ರಮೆ–ಲಕ್ಷ್ಮಿ
**ರಯ** ರಭಸ, ವೇಗ
**ರಯಗ, ರಯಪತಿ** ವಾಯು, ಗಾಳಿ
**ರವ** ಧ್ವನಿ, ಶಬ್ದ
**ರವಣ** ಗೋಳು, ಮೊರೆ; ಜೂಜಿನಲ್ಲಿ ಒಡ್ಡುವ ಪಣ
**ರವಿ** ಸೂರ್ಯ
**ರವಿಕುಲಜಾತ** ಸೂರ್ಯವಂಶಜನಾದ ರಾಮ
**ರವಿಕೆ** ಕುಪ್ಪುಸ; ಬೆಟ್ಟ, ಪರ್ವತ
**ರವಿಕೋಟಿಭಾಸ, ರವಿಕೋಟಿಸ** ಕೋಟ್ಯಂತರ ಸೂರ್ಯ ಸದೃಶ ಕಾಂತಿಯುಕ್ತನಾದವನು–ಶ್ರೀಹರಿ
**ರವಿಜ, ರವಿಜಾತ** ಸೂರ್ಯಪುತ್ರರಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ

Rarest Archive

**ರವಿಧರ** ಬೆಟ್ಟವನ್ನು ಧರಿಸಿದವನು, ಮಂದರ ಪರ್ವತವನ್ನು ಹೊತ್ತವನು, ಗೋವರ್ಧನ ಪರ್ವತವನ್ನು ಹೊತ್ತವನು–ಕೃಷ್ಣ

**ರವಿಯುಂಗುರ** ಉದಯರವಿಯಂತೆ ದುಂಡಗಿರುವ ಉಂಗುರ, ದುಂಡಗಾಗಿ ರವಿಯ ಸುತ್ತಲೂ ಬಿದ್ದ ರವಿ ಛಾಯೆ

**ರವಿಸುತ** ಸೂರ್ಯಪುತ್ರರಾದ ಯಮ, ಸುಗ್ರೀವ, ಕರ್ಣ, ಶನ್ಯೈಶ್ಚರ

**ರವೀಕ್ಷಣ** ಸೂರ್ಯನನ್ನು ಕಣ್ಣಾಗಿ ಉಳ್ಳವನು–ಶ್ರೀಹರಿ

**ರಶನ, ರಶನೆ** ನಡುಗೆಜ್ಜೆ; ಉಡೆನೂಲು; ಹಗ್ಗ

**ರಶ್ಮಿ** ಕಿರಣ, ದೀಪ್ತಿ, ಬೆಳಕು

**ರಸ** ದ್ರವ; ಲಾಲಾ, ಮಧು, ಜಠರ ಮತ್ತು ಪೈತ್ಯರಸ; ಹಾಲು, ನೀರು

**ರಸಕ** ಆಡಂಬರ

**ರಸಕಸಿ(ಸೆ)** ಕಕ್ಕುಲತೆ, ತಿಕ್ಕಾಟ, ಘರ್ಷಣೆ, ನೆಮ್ಮದಿ ಕೆಡಿಸುವ ಗದ್ದಲ

**ರಸನ, ರಸನೆ** ರುಚಿ, ನಾಲಗೆ; ಒಳ್ಳೆಯದು

**ರಸನೇಂದ್ರಿಯ** ನಾಲಗೆ

**ರಸವಸ್ತು** ದ್ರವವಸ್ತು, ಸಾರವಸ್ತು (ಎಣ್ಣೆ)

**ರಸವಿಸ್ತಾರ** ಸುಖಾನುಭವದ ಬಗೆ

**ರಸಾತಳ** ಭೂಮಿಯ ಮೇಲ್ಭಾಗ; ಅಧೋಲೋಕಗಳಲ್ಲಿ ಒಂದು

**ರಸಾಧಿಪತಿ** ವರುಣ

**ರಸೆ** ಭೂಮಿ

**ರಹ** ಸೋಜಿಗ, ಆಶ್ಚರ್ಯ; ಗುಟ್ಟು, ರಹಸ್ಯ

**ರಹದೂರ** ರಜೋಗುಣದಿಂದ ದೂರವಾದ

**ರಹಿ** ರೀತಿ, ಪದ್ಧತಿ; ವೈಭವ, ಆಡಂಬರ

**ರಹಿತ** ಇಲ್ಲದ

**ರಹಿತಶಮಲ** ನಿರ್ದೋಷ, ಕುಂದಿಲ್ಲದ

**ರಹಿತಾದಿಮಧ್ಯಾಂತ** ಆದಿ–ಮಧ್ಯ–ಅಂತ್ಯವಿಲ್ಲದ

**ರಾಕಾ** ಪೂರ್ಣಚಂದ್ರ

**ರಾಕಾಚಂದ್ರ, ರಾಕಾಬ್ಜಸೋಮ** ಹುಣ್ಣಿಮೆಚಂದ್ರ

**ರಾಕಾಬ್ಜ** ಹುಣ್ಣಿಮೆ

**ರಾಕು** ಗರ್ವ

**ರಾಕೇಂದು** ಹುಣ್ಣಿಮೆ ಚಂದ್ರ, ಪೂರ್ಣಚಂದ್ರ

**ರಾಕೇಂದುಧರ** ಶಿವ

**ರಾಗ** ಕೆಂಪು; ಚೆಲುವು; ಪ್ರೀತಿ, ಮೋಹ

**ರಾಗ–ದ್ವೇಷ** ಪ್ರೀತಿ ಮತ್ತು ವೈರ, ಅನುರಕ್ತಿ ಮತ್ತು ಅಲಕ್ಷ್ಯ ಸ್ವಭಾವಗಳು

**ರಾಗಟೆ** ಜಡೆಗೆ(ಹೆರಳಿಗೆ) ಹಾಕುವ ಒಡವೆ, ಜಡೆಬಿಲ್ಲೆ

**ರಾಗಮಾಡು** ಪ್ರೀತಿಸು; ಬೊಗಳು; ಆಲಾಪಿಸು

**ರಾಗರಹಿತ** ಲೌಕಿಕ ಪ್ರೀತಿ ಆಸಕ್ತಿಗಳಿಂದ ದೂರವಾದ

**ರಾಗಿ** ಭೋಗಭಾಗ್ಯಗಳಲ್ಲಿ ಅನುರಾಗವುಳ್ಳ

**ರಾಘವ** ರಾಮ

**ರಾಘವಾನುಜ** ಲಕ್ಷ್ಮಣ

**ರಾಜ** ದೊರೆ; ಚಂದ್ರ

**ರಾಜಧರ** ಚಂದ್ರನನ್ನು ಧರಿಸಿದವನು–ಶಿವ

**ರಾಜನುರಾಶಿ** ರಾಜಸಿಂಹ; ಬೆಳಕು

**ರಾಜಮುಖಿ** ಚಂದ್ರಮುಖಿ

**ರಾಜಮುಡಿ** ಕಿರೀಟ; ಮೈಸೂರಿನ ದೊರೆ ರಾಜ ಒಡೆಯರು ಮಾಡಿಸಿ ಮೇಲುಕೋಟೆ ಚೆಲುವನಾರಾಯಣನಿಗೆ ಕೊಟ್ಟ ಕಿರೀಟ

**ರಾಜರಾಜ** ರಾಜರಿಗೆರಾಜ, ಚಕ್ರವರ್ತಿ; ಕುಬೇರ

**ರಾಜರಾಜೇಂದ್ರ** ರಾಜರ ಒಡೆಯ

**ರಾಜವದನೆ** ಚಂದ್ರಮುಖಿ

**ರಾಜವರ್ಣ** ಬೆಳುದಿಂಗಳ ಬಣ್ಣ

**ರಾಜವಿದೇಹ** ವಿದೇಹ ದೇಶದ ಜನಕ ಮಹಾರಾಜ

**ರಾಜಸಮಮುಖಿ** ಚಂದ್ರಮುಖಿ

**ರಾಜಸೂಯ** ಒಂದು ಬಗೆಯ ಯಜ್ಞ, ಚಕ್ರವರ್ತಿಯು ಮಾಡುವ ಯಾಗ; ಒಂದು ಜಾತಿಯ ಶ್ರೇಷ್ಠವಾದ ಬತ್ತ

Rarest Archiver

**ರಾಜಾನ್ನ** ಸಣ್ಣಕ್ಕಿ ಅನ್ನ
**ರಾಜಾರಾಜಾಪ್ತಪ್ರಿಯ** ಕುಬೇರನಿಗೆ ಪ್ರಿಯನಾದವನು–ಶ್ರೀಹರಿ
**ರಾಜಾವರ್ತಿ** ಒಂದು ಬಗೆಯ ಎಳೆಯ ನೀಲಿ ಬಣ್ಣದ ರತ್ನ
**ರಾಜಿ** ಹೊಂದಾಣಿಕೆ
**ರಾಜಿಪ** ವಿರಾಜಿಸುವ, ಹೊಳೆಯುವ
**ರಾಜಿಸು** ಕಂಗೊಳಿಸು, ಹೊಳೆ
**ರಾಜೀವ** ಕಮಲ
**ರಾಜೀವದಳನಯನ, ರಾಜೀವ** ಕಮಲದ ದಳದಂತಹ ಕಣ್ಣುಗಳುಳ್ಳವನು–ಶ್ರೀಹರಿ
**ರಾಜೀವಪೀಠ** ಕಮಲವನ್ನು ಪೀಠವನ್ನಾಗಿ ಮಾಡಿಕೊಂಡವನು–ಬ್ರಹ್ಮ
**ರಾಜೀವಭವ** ಬ್ರಹ್ಮ
**ರಾಜೀವಭವ ಜನಕ** ಬ್ರಹ್ಮನ ತಂದೆ–ಶ್ರೀಹರಿ
**ರಾಜೀವಂಯುಗ್ಮ** ಕಮಲಯುಗ್ಮ, ಎರಡು ಕಮಲಗಳು
**ರಾಜೌಷಧಿನಿಯಾಮಕ** ಸಸ್ಯಗಳನ್ನು ನಿಯಂತ್ರಿಸುವವ, ಚಂದ್ರ; ಮಾಯಾಮಂತ್ರದಿಂದ, ಆಭಿಚಾರಿಕಕೃತ್ಯಗಳಿಂದ
**ರಾಣಿವಾಸ** ಅಂತಃಪುರ, ಜನಾನ
**ರಾತ್ರಿ>ರಾತಿರಿ** ಇರುಳು, ನಿಶೆ; ರತಿ(ಸುಖ)ಯನ್ನು ಕೊಡುವುದರಿಂದ ವಿಷ್ಣುವೇ ಮುಖ್ಯವಾಗಿ "ರಾತ್ರಿ"ಯೆಂದು ಹೇಳಲ್ಪಡುತ್ತಾನೆ; ದುರ್ಗಾದೇವಿಯೂ ಕೂಡ ರಾತ್ರಿಯೆಂದು ಹೇಳಲ್ಪಡುತ್ತಾಳೆ
**ರಾದ್ಧಾಂತ** ಸಿದ್ಧಾಂತ; ರಂಪ, ಗಲಾಟೆ
**ರಾಧಾನಂದನ, ರಾಧೇಯ** ರಾಧೆಯಮಗ–ಕರ್ಣ
**ರಾಪು** ಗರ್ವ, ಸೊಕ್ಕು; ರಂಪ, ರಗಳೆ; ರಾಹು
**ರಾಮಕ್ರಿ** ಕರ್ನಾಟಕ ಸಂಗೀತದ ಒಂದು ಘನರಾಗ
**ರಾಮಟೆಂಕೆ** ನಾಣ್ಯದ ಹೆಸರು, ರಾಮನ ಪಟ್ಟಾಭಿಷೇಕದ ಮುದ್ರೆಯುಳ್ಳ ಒಂದು ನಾಣ್ಯ
**ರಾಮಠ** ಇಂಗು
**ರಾಮಣೀಯಕ** ಸುಂದರವಾದುದು, ಚೆಲುವಾದುದು
**ರಾಮರಮಣಿ** ಸೀತೆ, ಲಕ್ಷ್ಮಿ
**ರಾಮಾನುಜ** ರಾಮನ ತಮ್ಮ ಭರತ; ಶ್ರೀವೈಷ್ಣವ ಮತಸ್ಥಾಪಕರು
**ರಾಮೆ** ಸುಂದರಿ, ರಮಣಿ; ಲಕ್ಷ್ಮಿ
**ರಾಮೇಶ್ವರ** ರಾಮ
**ರಾಯ** ಗಂಡ; ರಾಜ; ಶ್ರೇಷ್ಠವಾದ
**ರಾಯಬಿಟ್ಟಿ** ರಾಜರ ಕಾರ್ಯ, ಪ್ರತಿಫಲವಿಲ್ಲದ ರಾಜಕಾರ್ಯ
**ರಾಯರಾವುತ** ಕುದುರೆಯ ರಾವುತರಲ್ಲಿ ರಾಯ, ಶ್ರೇಷ್ಠ ರಾಹುತ; ಒಂದು ಬಿರುದು
**ರಾಯಿ<ರಾಯ್** ರಾಜಿ, ಒಪ್ಪಂದ
**ರಾವ** ಧ್ವನಿ, ಕೂಗು
**ರಾವಣವಿದಾರ(ಣ)** ರಾಮ
**ರಾವಣಿ** ರಾವಣನ ಮಗನಾದ ಅಕ್ಷಯ ಕುಮಾರ, ಇಂದ್ರಜಿತ್
**ರಾವು** ರಾಹು; ಗಾಬರಿ, ದಿಗ್ಭ್ರಮೆ; ದೆವ್ವ ಪಿಶಾಚಿ ಮುಂತಾದವು ಹಿಡಿಯುವುದು
**ರಾವುತ** ಕುದುರೆ ಸವಾರ, ಅಶ್ವಾರೋಹಿ
**ರಾಶಿವಿದ್ಯೆ** ಬಹಳವಿದ್ಯೆ
**ರಾಸಭ** ಕತ್ತೆ
**ರಾಹಣ<ರಹನ** ಆಶ್ರಯ
**ರಾಹು>ರಾವು** ಒಂದು ಗ್ರಹ, (ಅರ್ಧಶರೀರ)
**ರಾಹುತ<ರಾವುತ** ಕುದುರೆ ಸವಾರ
**ರಿಕತ<ರಿಕ್ತ** ಬಡವ
**ರಿಕ್ತಹಸ್ತ** ಬರಿಗೈ
**ರಿಣ<ಋಣ** ಸಾಲ, ಹಂಗು; ಉಪಕಾರ
**ರಿದ್ಧಿ** ವೃದ್ಧಿ
**ರಿದ್ಧಿಸಿದ್ಧಿ** ವೃದ್ಧಿ ಮತ್ತು ಸಿದ್ಧಿ
**ರಿಪು** ವೈರಿ, ಶತ್ರು
**ರಿಪುಕಾಲ** ಶತ್ರುಗಳಿಗೆ ಯಮನಂತಿರುವವನು

Rarest Archiver

**ರಿಪುದವಾಗ್ನಿ** ಶತ್ರುಗಳಿಗೆ ಕಾಡುಗಿಚ್ಚು

**ರಿಸಿ<ಋಷಿ** ಮುನಿ, ತಪಸ್ವಿ

**ರೀತಿ** ವಿಧಾನ; ಮಾನ ಮರ್ಯಾದೆ

**ರುಂದ್ರ** ವಿಸ್ತಾರವಾದ, ವ್ಯಾಪಕವಾದ

**ರುಕ್ಮ** ಬಂಗಾರ, ಚಿನ್ನ, ಕಬ್ಬಿಣ; ಒಬ್ಬ ರಾಜನ ಹೆಸರು

**ರುಕ್ಮಗರ್ಭ** ಹಿರಣ್ಯಗರ್ಭನಾದ ಬ್ರಹ್ಮ

**ರುಕ್ಷ** ನಕ್ಷತ್ರ; ಕ್ರೂರ, ಕರಡಿ

**ರುಕ್ಷಮೌಳಿ, ರುಕ್ಷೇಶ** ಕರಡಿಗಳ ಅಧಿಪತಿ, ಜಾಂಬವಂತ

**ರುಗ್ಣ** ರೋಗಿ, ರೋಗಪೀಡಿತವಾದ; ಮುರಿದ

**ರುಗ್ಮ** ರುಗ್ಮರಾಜ

**ರುಗ್ಮವತಿ** ರುಗ್ಮನ ಕುವರಿ, ರತಿಯ ಅವತಾರ

**ರುಚಿ** ಬೆಳಕು, ಕಾಂತಿ; ಆಸ್ವಾದ, ಸವಿ

**ರುಚಿರ** ಸುಂದರವಾದ, ಮನೋಹರವಾದ; ಸವಿಯಾದ

**ರುಚಿರಾಂಗ** ಮನೋಹರಕಾಯ

**ರುಜು** ವಿಧೇಯತ, ನೇರಮಾರ್ಗ; ಸಹಿ, ಅಂಕಿತ

**ರುಜುಗಣ** ಹರಿಗೆ ವಿಧೇಯರಾದ ದೇವತೆಗಳು, ಬ್ರಹ್ಮ ಪಟ್ಟಕ್ಕೆ ಬರುವ ಜೀವಗಣ

**ರುಜುಜ್ಞಾನ** ಸ್ಥಿರವಾದ ಜ್ಞಾನ

**ರುಜೆ** ರೋಗ

**ರುಜೋತ್ತಮ** ರುಜುಗಳಲ್ಲಿ ಶ್ರೇಷ್ಠ

**ರುತ** ದುಂಬಿಗಳ ಝೇಂಕಾರ

**ರುತು** ವಸಂತ, ಗ್ರೀಷ್ಮ ಮೊದಲಾದ ಋತುಗಳಲ್ಲಿ ಒಂದು; ಒಂದು ಕಾಲಮಾನ

**ರುದ್ಧ** ರಕ್ಷಿತ, ಕಾಪಾಡಿದ

**ರುದ್ರ** ಶಿವ; ಭಯಂಕರವಾದ

**ರುದ್ರಜಮುನಿ** ಕಾರ್ತಿಕೇಯಸ್ವಾಮಿ

**ರುಧಿರ** ರಕ್ತ

**ರುಧಿರಬೀಜ** ರಕ್ತ ಬೀಜ(ಒಬ್ಬ ದೈತ್ಯ)

**ರುಮಾ** ಸುಗ್ರೀವನ ಹೆಂಡತಿ

**ರುವಿ, ರುವ್ವಿ** ಒಂದುಕಾಸು, ತಾಮ್ರದ ಸಣ್ಣ ನಾಣ್ಯ

**ರುಹ** ವೃಕ್ಷ

**ರುಳಿ** ಸರಪಣಿ, ಕಾಲಂದುಗೆ

**ರೂಜ** ನೆನಪಿನಿಂದ ರೂಪುಗೊಂಡದ್ದು

**ರೂಢತನ** ಬೆಳೆಯುವಿಕೆ, ವೃದ್ಧಿಯಾಗುವಿಕೆ

**ರೂಢಿ** ಪ್ರಪಂಚ, ಭೂಮಿ; ಅಭ್ಯಾಸ; ಸಲುಗೆ

**ರೂಢಿಪಾಲ** ರಾಜ

**ರೂಢೀಶ** ಜಗದೊಡೆಯ

**ರೂಪ** ಸ್ವಭಾವ; ಸೌಂದರ್ಯ; ಅವತಾರ ರೂಪ

**ರೂಪಛಾಯ** ಹೊರತೋರಿಕೆ, ಹೊರಮಿಂಚು, ನೆರಳು

**ರೋಮ್ಯ** ವರಾಹಾವತಾರ, ಶುಕ್ಲಕೇಶಾವೇಶಿ ಬಲರಾಮ

**ರೂಹಾರ** ಶಿಲ್ಪ, ಶಿಲ್ಪದ ಆಕೃತಿ; ಕೆತ್ತನೆ ಕೆಲಸ

**ರೂಹು** ರೂಪ

**ರೆಕ್ಕೆಯಿಲ್ಲದೆಹಾರುವಪಕ್ಷಿ** ಮನಸ್ಸು

**ರೇಕು** ತಗಡು; ಹೂವಿನ ಪಕಳೆ, ದಳ

**ರೇಗಟೆ** ಜಡೆಬಿಲ್ಲೆ; ಹರಕು ಬಟ್ಟೆ, ಚಿಂದಿ

**ರೇಚಕ** ಪ್ರಾಣಾಯಾಮದ ದೃಷ್ಟಿಯಿಂದ ಒಳಗಿನ ಉಸಿರನ್ನು ಹೊರಗೆ ಕಳುಹಿಸುವುದು

**ರೇಣು** ಪರಾಗ, ಧೂಳು

**ರೇಣುಕಾ** ಜಮದಗ್ನಿಮುನಿ ಮಡದಿ

**ರೇಣುಕಾತ್ಮಜ, ರೇಣುಕಾತ್ಮಜರಾಮ** ಪರಶುರಾಮ

**ರೇಣುಜಾಲ** ಧೂಳಿನ ಕಣ; ಹೆಣ್ಣಾನೆ ಹಿಂಡು

**ರೇಣುವೆ** ಅಂಬಲಿ, ಗಂಜಿ

**ರೇತಸ್ಸು** ವೀರ್ಯ

**ರೇವಂತ** ಸಂಜ್ಞಾಮತ್ತು ಸೂರ್ಯರ ಅಶ್ವಾವಸ್ಥೆ ಯಲ್ಲಿಯ ಮಗ

**ರೇವತಿ** ರೈವತರಾಜನ ಮಗಳು, ಬಲರಾಮನ ಮಡದಿ

**ರೇವತಿರಮಣ** ಬಲರಾಮ

Rarest Archiver

**ರೈ** ಐಶ್ವರ್ಯ, ಚಿನ್ನ
**ರೈಪತಿ** ವಿಷ್ಣು, ರೈವತರಾಜ, ಕುಬೇರ
**ರೊಕ್ಕ** ಹಣ, ನಗದು
**ರೋಕು** ಕಾಂತಿ, ಪ್ರಕಾಶ; ಕೋಪ, ರೋಷ
**ರೋಖು<ರೊಕ್ಕ** ಹಣ, ನಾಣ್ಯ; ಬಿಟ್ಟಿ ದುಡಿತ
**ರೋಗಘ್ನ** ರೋಗನಾಶಕ, ರೋಗಹರ
**ರೋಚನ** ಪ್ರಕಾಶ; ವೈಭವ; ಹಸಿವನ್ನುಂಟು ಮಾಡುವ
**ರೋಚಿ** ಕಾಂತಿ, ಬೆಳಕು, ಕಿರಣ
**ರೋತೆ, ರೋತು** ಕೊಳಕು, ಹೇಸಿಗೆ
**ರೋಮ** ಮೈಮೇಲಿನ ಕೂದಲು
**ರೋಮಮುಚ್ಚಟಾಪುಳ್ಕ** ಪುಳಕಿತವಾದ ಕೇಶ ಸಮೂಹ, ಮೈ ಪುಳಕ, ರೋಮಾಂಚಿತವಾದ ಶರೀರ, ರೋಮಾಂಚನ
**ರೋಷ** ಕೋಪ
**ರೋಹಿಣಿಕಾಂತ** ಚಂದ್ರ
**ರೋಹಿತ** ರಕ್ತ
**ರೌದ್ರ** ಭೀಕರ, ಭಯಂಕರ; ಸಿಟ್ಟು, ನವರಸಗಳಲ್ಲಿ ಒಂದು; ಅರುವತ್ತು ಸಂವತ್ಸರಗಳಲ್ಲಿ ಒಂದು
**ರೌಪ್ಯ** ಬೆಳ್ಳಿ
**ರೌಪ್ಯಪುರ** ಉಡುಪಿ
**ರೌಪ್ಯಾಚಲ** ಬೆಳ್ಳಿ ಬೆಟ್ಟ, ರಜತಗಿರಿ
**ರೌರವ** ಒಂದು ಬಗೆಯ ಭಯಂಕರ ನರಕ

## ಲ

**ಲಂಕಾಧೀಶ** ರಾವಣ, ವಿಭೀಷಣ
**ಲಂಕಿಣಿ** ಲಂಕಾ ಪಟ್ಟಣದ ದ್ವಾರಪಾಲಿಕೆಯಾದ ರಾಕ್ಷಸಿ
**ಲಂಘಿಸು** ಹಾರು, ದಾಟು
**ಲಂಡ** ದುರುಳ, ದುಷ್ಟ, ನೀಚ, ನೀತಿ ಬಾಹಿರ, ಪಾಷಂಡಿ; ಒರಟ; ಗಿಡ್ಡ
**ಲಂಡತನ** ಧರ್ಮ ವಿರುದ್ಧ ನಡತೆ; ದುಷ್ಟತನ
**ಲಂಡಮಾಯಿಗಳು** ಮಾಯಾವಾದ ತ್ಯಾಜ್ಯ ಎಂಬ ಭಾವದಿಂದ ಮಾಯಿಗಳ ನಿಂದೆ
**ಲಂಪಟ** ವಿಷಯಾಸಕ್ತ, ಕಾಮುಕ
**ಲಂಬಕರ್ಣ** ಅಗಲವಾದ ಕಿವಿಗಳುಳ್ಳವನು–ಗಣಪತಿ
**ಲಂಬೋದರ** ದೊಡ್ಡ ಹೊಟ್ಟೆಯುಳ್ಳವನು–ಗಣಪತಿ
**ಲಕುಚ** ಗಜನಿಂಬೆ, ಕಂಚಿಕಾಯಿ, ಹೆಬ್ಬಲಸು
**ಲಕುಮಿ<ಲಕ್ಷ್ಮಿ** ಶ್ರೀಹರಿಯ ಪತ್ನಿ
**ಲಕುಮೀಧವ** ಶ್ರೀಹರಿ
**ಲಕ್ತಕ<ಅಲಕ್ತಕ** ಲಾಕ್ಷ, ಅರಗು
**ಲಕ್ಷಣಾ(ಣೆ)** ಕೃಷ್ಣನ ಮಡದಿ
**ಲಕ್ಷ್ಮಣಾಗ್ರಜ** ರಾಮ
**ಲಕ್ಷ್ಮೀಪತಿ** ವಿಷ್ಣು
**ಲಕ್ಷ್ಯಾರ್ಥ** ಶಬ್ದದ ರೂಢಾರ್ಥದಿಂದ ಬೇರೆಯಾದ ಅರ್ಥ, ಮುಖ್ಯ ಅರ್ಥ
**ಲಗಡ** ಪಕ್ಷಿವಿಶೇಷ, ಗಿಡುಗ
**ಲಗಳೆ** ಎತ್ತಿನ ಮೇಲೆ ನೀರು ಸಾಗಿಸಲು ಬಳಸುವ ಚರ್ಮದ ಚೀಲ, ಪಕಾಲೆ
**ಲಗ್ಗೆ** ಚೆಂಡಾಟದಲ್ಲಿಟ್ಟ ಗುರಿ ಹಲಗೆ; ವಾದ್ಯಗಳ ಮೇಳ; ಆಕ್ರಮಣ
**ಲಘಿಮ, ಲಘಿಮಾ** ಪ್ರಕಾಶ; ಹಗುರವಾಗುವ ವಿದ್ಯೆ, ತುಂಬಾ ಹಗುರವಾಗುವುದು, ಅಷ್ಟಸಿದ್ಧಿಗಳಲ್ಲಿ ಒಂದು
**ಲಘುತ್ವ** ಸಣ್ಣತನ, ಹಗುರತನ
**ಲಚುಮೆವ್ವ** ಲಕ್ಷ್ಮಮ್ಮ
**ಲಚ್ಚಿಕೆ<ಲಚ್ಚಣ** ಗುರುತು, ಚುಕ್ಕೆ, ಕಪ್ಪು ಮಚ್ಚೆ

Rarest Archive

**ಲಟ(ಟಾ)ಪಟಿ** ಉದ್ರೇಕಗೊಳ್ಳು, ಜಗಳ; ತಟಕ್ಕನೆ
**ಲತೆ** ಬಳ್ಳಿ
**ಲತ್ತೆ** ಒದೆ, ಏಟು
**ಲಬ್ಧ** ಪ್ರಾಪ್ತವಾದ, ಹೊಂದಿದ, ಪಡೆದ
**ಲಬ್ಧಸಂಜ್ಞ** ಎಚ್ಚರ
**ಲಬ್ಧಾಲಬ್ಧಿ** ಲಾಭಾಲಾಭ, ಲಾಭನಷ್ಟ
**ಲಬ್ಧಿ** ಪ್ರಾಪ್ತಿ, ದೊರಕಿದುದು
**ಲಯ** ನಾಶ, ಹಾಳು; ಪ್ರಳಯ ಕಾಲದ ಜಲರಾಶಿ; ಸಾವು; ಒಂದರಲ್ಲಿ ಒಂದು ಸೇರುವುದು
**ಲಯಾಬ್ಧಿ** ಪ್ರಳಯ ಕಾಲದ ಸಮುದ್ರ
**ಲಲನೆ** ಸ್ತ್ರೀ, ಹೆಂಗಸು, ಹೆಂಡತಿ
**ಲಲನೆಗಕ್ಷಯವಿತ್ತವ** ದ್ರೌಪದಿಗೆ ಅಕ್ಷಯಪಾತ್ರೆ ಕೊಟ್ಟವನು, ಅಕ್ಷಯವಸ್ತ್ರ ಕೊಟ್ಟವನು–ಕೃಷ್ಣ
**ಲಲನೆಯರವ್ರತಕೆಡಿಸಿದವ** ಬೌದ್ಧಾವತಾರಿ–ವಿಷ್ಣು
**ಲಲಾಟ** ಹಣೆ
**ಲಲಾಟನೇತ್ರ, ಲಲಾಟಾಕ್ಷ** ಹಣೆಗಣ್ಣ–ಶಿವ
**ಲಲಾಮ** ತಿಲಕ; ಧ್ವಜ; ಆಭರಣ; ಶುಭಲಕ್ಷಣವಂತ
**ಲಲಿತ** ಸುಂದರವಾದ, ಪಾರ್ವತಿ
**ಲಲ್ಲೆ** ಸಲಿಗೆ, ಪ್ರೀತಿ, ಮುತ್ತು
**ಲವ** ಅತ್ಯಂತ ಸೂಕ್ಷ್ಮವಾದ ಕಾಲಮಾನ; ಅಣು, ಅತ್ಯಂತ ಸೂಕ್ಷ್ಮವಾದ ವಸ್ತು; ರಾಮನ ಮಗ
**ಲವಣ** ಉಪ್ಪು; ಒಬ್ಬ ರಾಕ್ಷಸನ ಹೆಸರು
**ಲವಣಶಾಕ** ಉಪ್ಪಿನಕಾಯಿ, ಬಾಳಕ
**ಲವಣಾರ್ಣವ** ಉಪ್ಪಿನ ಸಮುದ್ರ
**ಲವಲೇಶ** ಅತಿಸ್ವಲ್ಪ
**ಲವಿತ್ರ** ಕುಡಗೋಲು
**ಲಶುನ** ಬೆಳ್ಳುಳ್ಳಿ
**ಲಸತ್** ಹೊಳೆಯುವ, ಕಾಂತಿಯಿಂದ ಕೂಡಿದ
**ಲಸನ್ಮೌಕ್ತಿಕ** ಪ್ರಕಾಶಮಾನವಾದ ಮುತ್ತು
**ಲಹರಿ, ಲಹಣಿ** ಅಲೆ, ತರಂಗ; ಮನಸ್ಸಿನ ಒಲವು
**ಲಳಗಿ<ಲಳಿಗೆ** ಕೊಳವೆ, ನಳಿಕೆ, ನಾಳ
**ಲಾಂಗೂಲ** ಬಾಲ, ಬುಚ್ಚ
**ಲಾಂಛನ** ಚಿಹ್ನೆ, ಗುರುತು
**ಲಾಕ್ಷಾ** ಅರಗು
**ಲಾಕ್ಷಾಗಾರ, ಲಾಕ್ಷಾಗೃಹ, ಲಾಕ್ಷಾನಿವಾಸ** ಅರಗಿನಮನೆ
**ಲಾಖಚೌರ್ಯಶೀಂ<ಲಾಖಚೌರಾಸೀತಿ** ಎಂಬತ್ತ ನಾಲ್ಕು ಲಕ್ಷ
**ಲಾಗ** ತಲೆ ಕೆಳಗೆ ಮಾಡಿದ ಭಂಗಿ; ಸೋಲು, ಅನುತ್ತೀರ್ಣ
**ಲಾಗು<ಲಾಘವ** ಹಗುರ; ಪರಿಹಾರ
**ಲಾಗೊ<ಲಂಘನ** ಹಾರು, ನೆಗೆ, ಜಿಗಿತ; ಚಾಚು
**ಲಾಘವ** ಹಗುರತನ; ಸಣ್ಣತನ, ಕ್ಷುದ್ರತನ
**ಲಾಜ** ಬತ್ತದ ಅರಳು
**ಲಾಲಿ** ಜೋಗುಳ
**ಲಾಲಿಸು** ಮುದ್ದಿಸು, ಪ್ರೀತಿಸು; ಮನಸ್ಸಿಟ್ಟು ಕೇಳು, ಕಿವಿಗೊಡು
**ಲಾವಕ** ನೀಚ, ಕೆಡುಕ; ಒಂದು ಜಾತಿಯ ಪಕ್ಷಿ
**ಲಾವಳಿಗೆ** ಗುಂಪು, ಸಮೂಹ, ರಾಶಿ, ಒಟ್ಟಿಲು
**ಲಾಳಿ** ನೆಯ್ಗೆಯಲ್ಲಿ ಬಳಸುವ ಒಂದು ಉಪಕರಣ; ಇಕ್ಕಳಿಯಂತಹ ಆಯುಧ
**ಲಿಂಗ** ಶಿವನ ಒಂದು ಪ್ರತೀಕ, ಪ್ರಮಾಣ; ಗುರುತು, ಚಿನ್ಹೆ, ಊರ್ಧ್ವಪುಂಡ್ರ; ಜನನೇಂದ್ರಿಯ
**ಲಿಂಗದೇಹದಹಿಸುವುದು** ಪ್ರಾರಬ್ಧ ಕಳೆದು ವಿರಜಾ ಸ್ನಾನ ಮಾಡುವುದು
**ಲಿಂಗಾಂಗಿ** ಇಷ್ಟಲಿಂಗವನ್ನು ಮೈಮೇಲೆ ಧರಿಸಿದವ
**ಲಿಪ್ತ** ಲೇಪಿತ
**ಲಿಬ್ಬಿ** ಕೂಡಿಟ್ಟ ಹಣ, ಗುಪ್ತಧನ
**ಲೀಲೆ** ಆಟ, ಕ್ರೀಡೆ; ಆನಂದ, ವಿಲಾಸ; ದೇವರಿಗೆ ಸಂಬಂಧಿಸಿದ ಕಥೆ
**ಲುಂಠ** ಲೂಟಿ ಮಾಡುವವನು, ಕಂಟಕ
**ಲುಂಠಿಸು** ಹೊರುಳು; ಕಿತ್ತುಹಾಕು, ನಾಶಮಾಡು

Rarest Archiver

**ಲುಪ್ತಜ್ಞಾನ** ಮರೆಯಾಗಿದ್ದ ಜ್ಞಾನ
**ಲುಪ್ತಪಾವಕ** ಶಮನವಾದ ಅಗ್ನಿ, ಆರಿದ ಬೆಂಕಿ
ಲುಬ್ಧ, **ಲುಬ್ಧಕ** ಜಿಪುಣ; ಹೆಬ್ಬಯಕೆಯು; ಅತ್ಯಾಸಕ್ತಿಯಿಂದ ಕೂಡಿದ; ಬೇಡ, ಬೇಟೆಗಾರ
**ಲುಲಾಯ** ಕೋಣ, ಮಹಿಷ
**ಲುಲಾಯಿ** ಎಮ್ಮೆ
ಲುಳಿ ಸೊಗಸು, ಕಾಂತಿ, ಹೊಳಪು
**ಲೆಂಕ, ಲೆಂಕಿಗ** ಬಂಟ, ಸೇವಕ, ಗುಮಾಸ್ತ
ಲೆತ್ತ ಪಗಡೆ; ಅಹಂಕಾರಿ
ಲೇಖ ದೇವತೆ; ಬರೆಹ, ಬರವಣಿಗೆ
ಲೇಖರಾಜನಿರ್ಜಿತ, **ಲೇಖಾಗ್ರಣಿ** ಇಂದ್ರ
ಲೇಪ ಬಳಿಯುವಿಕೆ, ಹಚ್ಚುವಿಕೆ
**ಲೇಪತೀವು** ಶ್ರೀಗಂಧ ಹಚ್ಚು
**ಲೇಪು** ಕೌದಿ, ರಜಾಯಿ
**ಲೇಲಿಹಾನ** ಚಪ್ಪರಿಸು, ನೆಕ್ಕು, ನೆಕ್ಕುವ, ನಾಲಗೆ ಚಾಚುವುದು; ಹಾವು, ಸರ್ಪ
ಲೇಶ ಸ್ವಲ್ಪ, ಚೂರು, ತುಸು
**ಲೇಸು** ಒಳ್ಳೆಯದು, ಉತ್ತಮವಾದುದು, ಅಂದ, ಚೆಲುವು, ಶುಭ
ಲೇಹ ನೆಕ್ಕುವುದು; ಲೇಹ್ಯ
**ಲೊಳಲೊಟ್ಟೆ** ಒಳಗೆ ಏನೂ ಇರದ, ನಿಸ್ಸಾರ, ಸಂಪೂರ್ಣ ವ್ಯರ್ಥವಾಗಿರುವುದು, ಬರಿಯ ತೋರಿಕೆ
**ಲೋಕ** ಜಗತ್ತು, ಪ್ರಪಂಚ; ಲೋಕದ ಜನತೆ, ಮಾನವಕುಲ; ರೂಢಿ, ಸಂಪ್ರದಾಯ
**ಲೋಕ(ಗ)ರು** ಲೋಕದ ಜನರು, ಪರಕೀಯರು
**ಲೋಕತ್ರಯುಪ** ಮೂರು ಲೋಕಗಳನ್ನು ಪಾಲಿಸುವವನು–ಶ್ರೀಹರಿ
**ಲೋಕಪಂತಿ** ಲೋಕಪಂಕ್ತಿ, ಹದಿನಾಲ್ಕು ಲೋಕಗಳ ಸಾಲು
**ಲೋಕಪಾನೀಕ** ಲೋಕಪಾಲಕರ ಸಮೂಹ (ದಿಕ್ಪಾಲಕರು)
**ಲೋಕಮಹಿತ** ಲೋಕಪೂಜ್ಯ
**ಲೋಕಮಾತೆ** ಲೋಕದ ಒಡತಿ–ಲಕ್ಷ್ಮಿ
**ಲೋಕಮೋಹಕ** ಪ್ರಪಂಚವನ್ನು ಮರುಳುಗೊಳಿಸುವವನು–ಮನ್ಮಥ
**ಲೋಕಮೋಹಕನಯ್ಯ** ಮನ್ಮಥನ ತಂದೆ–ಶ್ರೀಹರಿ
**ಲೋಕವತಾಳ್ದವ** ಪ್ರಪಂಚದ ಭಾರ ಹೊತ್ತ ಆದಿಕೂರ್ಮ
**ಲೋಕಹರಟೆ** ವ್ಯರ್ಥ ಮಾತು
**ಲೋಕಾಂಬಕ** ಸೂರ್ಯ
**ಲೋಚನ** ಕಣ್ಣು, ನೇತ್ರ
**ಲೋಚು** ಕೀಳು, ತಲೆಗೂದಲನ್ನು ಕೈಯಿಂದ ಕೀಳು (ಜೈನ)
**ಲೋಭಿ** ಜಿಪುಣ, ಕೃಪಣ
**ಲೋಲ** ತಲ್ಲೀನನಾದವನು, ಆಸಕ್ತ; ಭಕ್ತಿಗೆ ಸುಲಭವಾಗಿ ಒಲಿಯುವ; ಚಂಚಲ, ಲಂಪಟ
**ಲೋಲನೇತ್ರೆ** ಚಂಚಲನೇತ್ರೆ
**ಲೋಲಾಡು** ಅತ್ತಿತ್ತ ಚಲಿಸು, ಅಲ್ಲಾಡು; ಸಲ್ಲಾಪಮಾಡು, ಸುಖಪಡು
**ಲೋಲಾಪ್ತಿ** ಸಂತೋಷ
**ಲೋಲೈಸು** ಸಂತೋಷಪಡು
**ಲೋಲ್ಯಾಡು<ಓಲಾಡು** ಮೆರೆ
**ಲೋಷ್ಟ** ಮಣ್ಣು ಹೆಂಟೆ
**ಲೋಹಿತ** ಕೆಂಪುಬಣ್ಣ, ಕೆಂಬಣ್ಣ; ತಾಮ್ರ; ರಕ್ತ
**ಲೋಹಿತಾಕ್ಷ** ಕೆಂಪಾದ ಕಣ್ಣುಳ್ಳವನು; ಹರಿಶ್ಚಂದ್ರನ ಮಗನ ಹೆಸರು
**ಲೌಕಿಕ** ನಿಷ್ಪ್ರಯೋಜಕ, ಡಾಂಭಿಕ; ಸಾಮಾನ್ಯ ಮನುಷ್ಯ
**ಲೌಕಿಕೇಷಣರಿಕ್ತ** ಐಹಿಕ ಇಚ್ಛೆಯನ್ನು ತೊರೆದವ

Rarest Archiver

# ವ

**ವಂಕಿ, ವಂಕಿಬಾಜಿ** ತೋಳುಬಂದಿ, ಕೇಯೂರ, ಕೈಗೆ ಧರಿಸುವ ಆಭರಣ

**ವಂಚಿಸು** ಮೋಸಮಾಡು

**ವಂದರಿಸು<ವಂದಿಸು** ಸ್ತುತಿಸು

**ವಂದಿ** ಹೊಗಳು ಭಟ್ಟ

**ವಂದಿಸು** ಸ್ತುತಿಸು, ಸ್ತೋತ್ರಮಾಡು

**ವಂದ್ಯ** ಪೂಜನೀಯ, ನಮಸ್ಕರಿಸಲು ತಕ್ಕ

**ವಂದ್ಯಸುತ್ರಾಮ** ಇಂದ್ರನಿಂದ ನಮಸ್ಕರಿಸಿಕೊಳ್ಳುವವನು

**ವಂಧ್ಯಾ, ವಂಧ್ಯೆ** ಬಂಜೆ, ಗೊಡ್ಡಿ

**ವಂಶ** ಪೀಳಿಗೆ, ಕುಲ; ಬಿದಿರು, ಕೊಳಲು

**ವಕ್ತ, ವಕ್ತಾರ, ವಕ್ತೃ** ಹೇಳುವವ, ವಾಗ್ಮಿ, ಚೆನ್ನಾಗಿ ಮಾತನಾಡುವವ, ಭಾಷಣಕಾರ

**ವಕ್ತ್ರ** ಬಾಯಿ, ಮುಖ

**ವಕ್ತ್ರಾಂತ** ಕಟವಾಯಿ

**ವಕ್ರ** ಡೊಂಕಾದ, ಬಾಗಿದ; ನುಣುಚಿಕೊಳ್ಳುವ

**ವಕ್ರತುಂಡ** ಸೊಟ್ಟಗಿರುವ ಸೊಂಡಿಲುಳ್ಳವನು–ಗಣಪತಿ

**ವಕ್ರಸವಾರಿ** ಡೊಂಕಾಗಿ ಹೋಗುವುದು, ವಕ್ರವಾಗಿ ಹರಿಯುವ ನದಿ; ಹಾವು

**ವಕ್ಷ** ವಕ್ಷಸ್ಥಳ, ಎದೆ, ಹೃದಯ

**ವಕ್ಷಮಾನ** ಜ್ಞಾನಿ

**ವಖ್ಖಣಿಸು** ವಿವರಿಸು, ವ್ಯಾಖ್ಯಾನಿಸು

**ವಗಲ್ವಗಲ್** ಬಿನ್ನಾಣ, ಸೋಗು, ವೈಯಾರ

**ವಚನಿ** ಮಾತುಗಾರ; ಬುದ್ಧಿವಂತ; ವಚನ ಕೊಟ್ಟವ; ಪೌರಾಣಿಕ

**ವಚ್ಛ,** ವತ್ಸ ಕರು

**ವಜ್ಜರ<ವಜ್ರ** ನವರತ್ನಗಳಲ್ಲಿ ಒಂದು; ಕೃಷ್ಣನ ಮೊಮ್ಮಗ, ಅನಿರುದ್ಧನ ಮಗ; ಇಂದ್ರನ ವಜ್ರಾಯುಧ

**ವಜ್ಜರೆದೆ** ವಜ್ರದಂತಹ ಎದೆ

**ವಜ್ರಾಂಕಿತ** ಅಚಲ, ದೃಢ; ಕೃಷ್ಣನ ಎದೆಯಲ್ಲಿಯ ಮಚ್ಚೆ

**ವಜ್ರಾಂಕುಶಧ್ವಜಾಂಕಿತಹೆಜ್ಜೆ** ವಜ್ರಾಯುಧ ಧ್ವಜ ಅಂಕುಶ ಚಿನ್ಹೆಯುಳ್ಳ ದೇವಪಾದ ರೇಖೆಯ ವಿವರ

**ವಜ್ರಿ** ವಜ್ರಧರ–ಇಂದ್ರ

**ವಟ** ಆಲದ ಮರ

**ವಟದೆಲೆ, ವಟಪತ್ರ** ಆಲದೆಲೆ

**ವಟಪತ್ರಶಯನ, ವಟಪತ್ರಶಾಯಿ, ವಟಪತ್ರಶಾಹಿ** ಆಲದೆಲೆಯಮೇಲೆ ಮಲಗಿರುವ ಕೃಷ್ಣ

**ವಟಪರ್ಣ** ಆಲದೆಲೆ

**ವಟು** ಬಾಲಬ್ರಹ್ಮಚಾರಿ; ವಾಮನಾವತಾರ ತಾಳಿರುವವನು–ವಿಷ್ಣು

**ವಟ್ಟ** ವೃತ್ತಾಕಾರವಾಗಿರುವುದು, ಗುಂಡಗಿರುವುದು; ಲೇವಾದೇವಿ ಮಾಡುವವರು ಹಿಡಿದುಕೊಳ್ಳುವ ಹಣ

**ವಡಬಾಗ್ನಿ** ಬಾಡಬಾಗ್ನಿ, ಸಮುದ್ರದೊಳಗಿನ ಬೆಂಕಿ

**ವಡಬಾನಲ, ವಡವಾನಲ(ಳ)** ಸಮುದ್ರದೊಳಗಿರುವ ಬೆಂಕಿ

**ವಡ್ಡಿ** ಓಢ್ರದೇಶ, ಒರಿಸ್ಸ

**ವಡ್ಡಿಜಗನ್ನಾಥ** ಪುರಿ ಜಗನ್ನಾಥ

**ವಡ್ಯಾಣ<ಒಡ್ಯಾಣ** ಸೊಂಟದ ಆಭರಣ, ಒಡ್ಯಾಣ, ಡಾಬು

**ವಣಿಜ** ವ್ಯಾಪಾರಿ

**ವತನ** ಜಹಗೀರು, ವಂಶ ಪಾರಂಪರ್ಯವಾಗಿ ಬಂದ ಆಸ್ತಿ

**ವತ್ತಿ<ವರ್ತಿ** ಬತ್ತಿ, ದೀಪ

**ವತ್ಸ** ಕರು, ಮರಿ, ಮಗು, ಪುತ್ರ; ಚಿಹ್ನೆ

**ವತ್ಸರ** ಸಂವತ್ಸರ; ವರ್ಷ, ಅಬ್ದ

Rarest Archiver

**ವತ್ಸರಾ** ಮಗಳು

**ವತ್ಸಲ** ಪ್ರೀತಿಸುವ, ಒಲುಮೆಯಿಂದ ಕೂಡಿದ

**ವತ್ಸಲಾ** ವಿರಾಟರಾಜನ ಮಗಳು, ಅಭಿಮನ್ಯುವಿನ ಹೆಂಡತಿ, ಉತ್ತರೆ

**ವತ್ಸಹಕ** ಕರುವಿನ ರೂಪದಿಂದ ಬಂದ ವತ್ಸಾಸುರ

**ವತ್ಸಾಸುರ** ಕೃಷ್ಣನು ಕೊಂದ ಒಬ್ಬ ರಾಕ್ಷಸ

**ವತ್ಸೀ** ಶ್ರೀವತ್ಸ ಚಿಹ್ನೆಯನ್ನು ಹೊಂದಿರುವವನು–ಶ್ರೀಹರಿ

**ವದನ** ಮುಖ

**ವದನಸದನ** ಬಾಯಿ

**ವದನೇಂದು** ಚಂದ್ರನಂತೆ ಮುಖವುಳ್ಳವ

**ವದಾನ್ಯ** ನಿರರ್ಗಳವಾಗಿ ಮಾತನಾಡುವವನು; ದಾನಶೂರ, ನನ್ನನ್ನು ಯಾಚಿಸಿರಿ ಎನ್ನುವವನು

**ವದ್ಯ** ಕೃಷ್ಣಪಕ್ಷ; ಮಾತನಾಡುವುದು

**ವಧೂಟಿ** ವಧು, ಯುವತಿ

**ವಧೂಟಿಯರಿಕ್ಕೆಲದಿ** ಶ್ರೀದೇವಿ ಭೂದೇವಿ ಸಹಿತ

**ವನ** ಪ್ರವಾಹ, ನೀರು; ಕಾಡು, ತೋಟ; ಕಷ್ಟ

**ವನಚರ** ವನದಲ್ಲಿ ಸಂಚರಿಸುವವನು, ಬೇಡ

**ವನಜ** ಕಮಲ

**ವನಜಜ** ಬ್ರಹ್ಮ

**ವನಜಜಾಂಡ** ಬ್ರಹ್ಮಾಂಡ

**ವನಜಜಾಸ್ತ್ರ** ಬ್ರಹ್ಮಾಸ್ತ್ರ

**ವನಜನಯನ, ವನಜನೇತ್ರ** ಕಮಲದಂತೆ ಕಣ್ಣುಳ್ಳವನು–ಕೃಷ್ಣ

**ವನಜನಾಭ** ವಿಷ್ಣು

**ವನಜಪೀಠ** ಕಮಲಾಸನ–ಬ್ರಹ್ಮ

**ವನಜಭವ** ಕಮಲದಲ್ಲಿ ಹುಟ್ಟಿದವನು–ಬ್ರಹ್ಮ

**ವನಜಭವಜನಕ** ಬ್ರಹ್ಮನ ತಂದೆ–ಶ್ರೀಹರಿ

**ವನಜಭವಾಂಡ** ಬ್ರಹ್ಮಾಂಡ

**ವನಜಸಂಭವ** ಬ್ರಹ್ಮ

**ವನಜಸಂಭವಜನಕ** ವಿಷ್ಣು

**ವನಜಸಂಭವನಯ್ಯ** ಬ್ರಹ್ಮನ ತಂದೆ ವಿಷ್ಣು

**ವನಜಸಂಭವನರಸಿ** ಬ್ರಹ್ಮನ ಹೆಂಡತಿ–ಸರಸ್ವತಿ

**ವನಜಸಂಭವಪಟ್ಟ** ಬ್ರಹ್ಮ ಪದವಿ

**ವನಜಸಂಭವಪಿತ** ಬ್ರಹ್ಮನ ತಂದೆ–ಶ್ರೀಹರಿ

**ವನಜಾಕ್ಷ** ವಿಷ್ಣು

**ವನಜಾಪ್ತ** ಕಮಲಸಖ, ಸೂರ್ಯ

**ವನಜೆ** ಲಕ್ಷ್ಮಿ

**ವನದವಾಹನ** ಮೋಡವನ್ನೇ ವಾಹನವಾಗಿ ಉಳ್ಳ ಇಂದ್ರ

**ವನಧಿ** ಸಮುದ್ರ, ಕಡಲು

**ವನಧಿನಿರೋಧಿ** ಸಮುದ್ರವನ್ನು ಸೇತುವಿನಿಂದ ಬಂಧಿಸಿದವನು–ರಾಮ

**ವನಧಿಯಸತಿ** ಸಮುದ್ರ ರಾಜ(ವರುಣ)ನ ಸತಿ ಗಂಗೆ

**ವನಪತಿ** ಸಮುದ್ರರಾಜ

**ವನಮಾಲ** ತುಳಸೀಮಾಲೆ, ಕಾಡುಹೂಗಳ ಮಾಲೆ ಧರಿಸಿದವನು–ವಿಷ್ಣು

**ವನರುಹ** ಕಮಲ, ತಾವರೆ

**ವನರುಹಸಂಭವ** ಬ್ರಹ್ಮ

**ವನರುಹಸಂಭವತಾತ** ಬ್ರಹ್ಮನ ತಂದೆ–ಶ್ರೀಹರಿ

**ವನರುಹಾಕ್ಷಿ** ಕಮಲಾಕ್ಷಿ, ರಮಾ

**ವನರುಹಾಸನ** ಕಮಲಾಸನ ಬ್ರಹ್ಮ

**ವನವಾಸ(ಸಿ)** ಅರಣ್ಯವಾಸ, ವನದಲ್ಲಿರುವ ತಪಸ್ವಿ, ರಾಮಾವತಾರ

**ವನಸ್ರಕ್** ವನಮಾಲೆ, ಕಾಡುಹೂವಿನ ಮಾಲೆ

**ವನಿತೆ** ಸ್ತ್ರೀ, ಹೆಂಗಸು

**ವನೌಕಸಾರ್ಯ** ತಪಸ್ವಿ; ಕಪಿಶ್ರೇಷ್ಠ–ಹನುಮಂತ

**ವನ್ಯ** ಕಾಡು ಮನುಷ್ಯ, ಒರಟ; ಕಮಲ

**ವಪು** ದೇಹ, ಶರೀರ, ರೂಪ, ಆಕಾರ

**ವಪುಷ** ರಮಣೀಯವಾದ ರೂಪವುಳ್ಳವನು; ದೇಹ

**ವಮನ** ಓಕರಿಕೆ, ವಾಂತಿ

**ವಯ** ಆಯುಸ್ಸು, ವಯಸ್ಸು

Rarest Archiver

**ವಯುನ, ವಯಿುನ**<ವ್ಯೆನ ಜ್ಞಾನ; ತಂತ್ರ, ಉಪಾಯ, ಸುಲಭೋಪಾಯ; ಅಚ್ಚುಕಟ್ಟು, ಓರಣ

**ವಯಿನಗಮ್ಯ** ಜ್ಞಾನಗಮ್ಯ

**ವಯಿರ**<ವ್ಯೆರ, ವಜ್ರ ಹಗೆ, ವೈರ, ದ್ವೇಷ; ಬೆಲೆಬಾಳುವ ಹರಳು

**ವರ** ಶ್ರೇಷ್ಠವಾದ

**ವರಕಪಿ** ಹನುಮಂತ

**ವರಕರ** ಶ್ರೇಷ್ಠವಾದ ಖಡ್ಗ

**ವರಕರಿಪುರ** ಕಂಚಿಯಲ್ಲಿ ವರದರಾಜಸ್ವಾಮಿಯ ಗುಡಿಯಿರುವ ಸ್ಥಳ ಹಸ್ತಿಗಿರಿ

**ವರಗಂಡಕಿಶಿಲೆ** ಶ್ರೇಷ್ಠವಾದ ಸಾಲಿಗ್ರಾಮ

**ವರಗಿರಿ** ತಿರುಪತಿ

**ವರಗುಣ** ಉತ್ತಮ ಗುಣ

**ವರಗುಣಜಾಲ** ಶ್ರೇಷ್ಠ ಗುಣಗಳ ಸಮೂಹ

**ವರಟೆಕೀಟ** ಕಣಜಹುಳ

**ವರಣ** ಆರಿಸುವುದು, ಆಯ್ಕೆ; ಗೋಡೆ, ಪ್ರಾಕಾರ, ಸೇತುವೆ, ಒಡ್ಡು, ಆವಾರ, ಅಂಗಳ; ಹೊದಿಕೆ

**ವರದ** ವರವನ್ನು ಕೊಡುವ, ಶ್ರೇಷ್ಠ–ವರದರಾಜ ಸ್ವಾಮಿ

**ವರದಾತ** ವರವಾಯು

**ವರದೇಶ** ವರಕೊಡುವವರಲ್ಲಿ ಶ್ರೇಷ್ಠನೆನಿಸಿದವನು –ಶ್ರೀಹರಿ

**ವರಧಾಮ** ಸೊಗಸಿನದೇಹ

**ವರಧೂಸರ** ಶ್ರೇಷ್ಠವಾದ ಕಂದುಬಣ್ಣ

**ವರಪುರ** ಬೇಲೂರು

**ವರಮಂತ್ರದೇವ** ಶ್ರೇಷ್ಠ ಮಂತ್ರಗಳಲ್ಲಿ ಪ್ರಕಾಶಿಸುತ್ತಿರುವ ಶ್ರೀಹರಿ

**ವರವಜ್ರಾಂಕುಶ** ಮಹಾ ಪುರುಷನ ಪಾದಗಳಲ್ಲಿ ತೋರುವ ಚಿಹ್ನೆಗಳಲ್ಲಿ ಒಂದು

**ವರಸುಲ್ತಾನಿ** ಶ್ರೇಷ್ಠ ಮುಸಲ್ಮಾನ ರಾಣಿ, ಬೀಬಿನಾಚ್ಚಿಯಾರ್

**ವರಸೂನು** ಸುಪುತ್ರ

**ವರಸೆ** ಪೀಳಿಗೆ, ವಂಶ, ಪಾವೆ, ಮನೆತನ, ಮದುವೆಗೆ ಅನುಕೂಲ ಸಂಬಂಧ

**ವರಹ** ಒಂದು ಚಿನ್ನದ ನಾಣ್ಯ

**ವರಹಕೇಸರ** ಹಂದಿ ಕೂದಲು, ಹಂದಿಯ ಮುಖಭಾಗದಲ್ಲಿನ ಸೂಜಿಯಂತೆ ಇರುವ ಕೂದಲು–ದೇವರ ಪ್ರತಿಮೆಗಳನ್ನು ಪೂಜೆಗಾಗಿ ಶುದ್ಧಗೊಳಿಸಲು ಉಪಯೋಗಿಸುವ ಒಂದು ಸಾಮಗ್ರಿ

**ವರಹಜತೀರ** ತುಂಗಾತೀರ

**ವರಹಜೆ** ವರಾಹದೇವರ ಕೋರೆಯಿಂದ ಜನಿಸಿದ ತುಂಗಾನದಿ

**ವರಳೆ** ಹೆಣ್ಣು ಹಂಸ

**ವರಾಂಬರ** ಶ್ರೇಷ್ಠವಾದ ಬಟ್ಟೆ, ಪೀತಾಂಬರ

**ವರಾಶಿಜಾ** ಲಕ್ಷ್ಮಿ

**ವರಾಹ** ಹಂದಿರೂಪಿ; ವರಾಹ ಮುದ್ರೆಯಿಂದ ಕೂಡಿದ ಒಂದು ಚಿನ್ನದ ನಾಣ್ಯ

**ವರುಣಯುವತಿ** ಗಂಗಾದೇವಿ

**ವರುಷ** ಹನ್ನೆರಡು ತಿಂಗಳು, ವಯಸ್ಸು; ಮಳೆ

**ವರುಷವಾರಿಕಣ** ಮಳೆ ನೀರಿನ ಹನಿ

**ವರುಷವೈದರಪೆಸರವನ** ಐದನೇ ಸಂವತ್ಸರದ ಹೆಸರಿನದೇವ; ಪ್ರಭವಾದಿ ಷಷ್ಟಿಸಂವತ್ಸರಗಳಲ್ಲಿ ಐದನೆಯದು ಪ್ರಜಾಪತಿ, ಪ್ರಜಾಪತಿಯೆಂದರೆ ಬ್ರಹ್ಮ

**ವರೂಥ** ರಥ; ರಥದಲ್ಲಿ ಕುಳಿತವರಿಗೆ ಏಟು ತಾಕದಿರಲೆಂದು ಹಾಕಿದ ಕಟಾಂಜನ, ಕಟಕಟೆ

**ವರೇಣ್ಯ** ಶ್ರೇಷ್ಠ

**ವರ್ಜಿತ** ತ್ಯಜಿಸಿದ, ಬಿಡಲ್ಪಟ್ಟ

**ವರ್ಜ್ಯ** ನಿಷಿದ್ಧವಾದ, ನಿರಾಕರಿಸಿದ, ಬಿಡಲು ಯೋಗ್ಯವಾದ

**ವರ್ಣ** ಬಣ್ಣ, ರಂಗು; ಕಾಂತಿ, ಹೊಳಪು

**ವರ್ಣಕ** ವರ್ಣನೆ, ಬಣ್ಣನೆ

**ವರ್ತನ** ತಿರುಗುವುದು; ಗತಿ; ನಡತೆ, ಚಾರಿತ್ರ್ಯ

Rarest Archiver

**ವರ್ಧನ** ಹೆಚ್ಚುವಿಕೆ, ಬೆಳವಣಿಗೆ

**ವರ್ಧಿಷ್ಣು** ಬೆಳೆಯುವ, ಹೆಚ್ಚಾಗುವ

**ವರ್ಮ** ಚಿಲಖತ್ತು, ಕವಚ; ಗುಟ್ಟು, ಮರ್ಮ, ರಹಸ್ಯ; ಕರ್ಮ, ಕಾರ್ಯ; ಮೋಸ, ಹಗೆತನ, ಅಪಕಾರಕ ಬುದ್ಧಿ

**ವರ್ಯ** ಶ್ರೇಷ್ಠ

**ವರ್ಷ** ಮಳೆ, ಮಳೆಗಾಲ, ಅಬ್ದ, ವೃಷ್ಟಿ; ಹನ್ನೆರಡು ತಿಂಗಳ ಕಾಲಾವಧಿ, ದಿನ, ದಿವಸ

**ವಲಭಿ** ಮೇಲ್ಛಾವಣಿ

**ವಲಯ** ವರ್ತುಲಾಕಾರವಾದ, ಸುಂದರ; ಬಳೆ, ಡಾಬು

**ವಲಲ** ಅಜ್ಞಾತವಾಸದಲ್ಲಿ ಬಾಣಸಿಗನಾದ ಭೀಮಸೇನ

**ವಲಿತ** ಭೂಮಿ, ರಾಜ್ಯ, ಪ್ರದೇಶ; ಅಧಿಕಾರ, ಆಳ್ವಿಕೆ

**ವಲಿಮುಖ, ವಲೀಮುಖ**<**ಬಲಿ** ಕಪಿ, ಕೋತಿ

**ವಲ್ಕಲ** ನಾರುಬಟ್ಟೆ, ನಾರುಮಡಿ

**ವಲ್ಗು** ಎಡ; ಮನೋಹರ, ಚೆಲುವಾದ

**ವಲ್ಮೀಕ** ಹುತ್ತ

**ವಲ್ಲಭ** ಪತಿ, ಗಂಡ, ಒಡೆಯ

**ವಲ್ಲಭೆ** ಪತ್ನಿ

**ವಲ್ಲಿ** ಬಳ್ಳಿ, ಹಂಬು; ವಸ್ತ್ರ, ಶಲ್ಯ, ಉತ್ತರೀಯ, ಧೋತರ, ಅಂಗವಸ್ತ್ರ

**ವವಹ** ಮರುತ

**ವಶಿ** ಹೆಣ್ಣು ಆನೆ; ಜಿತೇಂದ್ರಿಯ

**ವಶಿತ್ವ** ಅಷ್ಟಸಿದ್ಧಿಗಳಲ್ಲಿ ಒಂದು, ವಶದಲ್ಲಿಟ್ಟು ಕೊಳ್ಳುವ ವಿದ್ಯೆ; ಮನಸ್ಸು ಚಂಚಲ ವಾಗದಿರುವಿಕೆ; ಇಂದ್ರಿಯ ನಿಗ್ರಹ

**ವಶಿಪ** ಎಲ್ಲವನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವವನು

**ವಷಟ್ಕಾರ** ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸುವಾಗ ಹೇಳುವ ಮಂತ್ರ; ಐಶ್ವರ್ಯಾದಿ ಷಡ್ಗುಣಗಳನ್ನು ನಿತ್ಯದಲ್ಲಿ ಹೊಂದಿದವನು –ವಿಷ್ಣು (ಸಹಸ್ರನಾಮ)

**ವಸತಿ** ವಾಸಿಸುವ ಸ್ಥಳ, ಮನೆ, ಪರಸ್ಥಳದವರು ಇಳಿದುಕೊಳ್ಳುವ ಸ್ಥಳ

**ವಸತಿಕಾ(ಗಾ)ರ** ರಾತ್ರಿಯಲ್ಲಿ ತಂಗಲು ಎಡೆ ಯನ್ನು ಅರಸುವ ಪ್ರಯಾಣಿಕ, ತಂಗುವವನು

**ವಸನ** ದೇಹ; ವಸ್ತ್ರ, ಉಡುಗೆ

**ವಸು** ನಿಜವಾದ ಐಶ್ವರ್ಯ, ಬಂಗಾರ, ರತ್ನ; ಬೆಳಕು, ಅಗ್ನಿ; ಎಂಟು ಎಂಬ ಸಂಖ್ಯೆಗೆ ಸಂಕೇತ; ಅಷ್ಟವಸುಗಳಲ್ಲಿ ಒಬ್ಬ

**ವಸುಕುಲಾಧಿಪ** ಅಗ್ನಿ

**ವಸುದೇವಾತ್ಮಕ, ವಸುದೇವಾತ್ಮಜ** ಕೃಷ್ಣ

**ವಸುಧಾಕಾಯಸಂಭೂತೆ** ಸೀತೆ

**ವಸುಧಾತಳ** ಭೂಮಂಡಲ

**ವಸುಧಾಸುತಾರಮಣ** ಸೀತೆಯ ಗಂಡ–ರಾಮ

**ವಸುಧಾಸುತೆ** ಸೀತೆ

**ವಸುಧಿಪಾರ್ದನ** ಪರಶುರಾಮ

**ವಸುಧೀಜೆ** ಭೂಮಿಯಿಂದ ಜನಿಸಿದವಳು, ಸೀತೆ

**ವಸುಧೆಪಾಲಕ** ರಾಜ

**ವಸುಧೇಶ** ಆಗ್ನೇಯ ದಿಕ್ಕು; ರಾಜ

**ವಸುಪೂರಿತಶ್ರುತಿ** ಬೆಳಕಿನಿಂದ ಕೂಡಿದ ವೇದ

**ವಸುಮತಿ** ಭೂಮಿ

**ವಸುಮತಿಸುತೆ** ಸೀತಾದೇವಿ

**ವಸ್ತಿಯಕಾರ** ಮನೆಯ ಒಡೆಯ, ಮನೆಯಲ್ಲಿರು ವವನು

**ವಸ್ತು** ಇಂದ್ರಿಯ ಗೋಚರವಾದ ಪದಾರ್ಥ, ದ್ರವ್ಯ; ಪರಬ್ರಹ್ಮ; ತತ್ತ್ವತಃ ಸತ್ಯ; ಮೋಕ್ಷವಿಷಯಕವಾದ

**ವಸ್ತ್ರಾಮೋಲಿಕಾ** ಅಮೌಲ್ಯವಸ್ತ್ರ, ಬೆಲೆ ಕಟ್ಟಲಾಗದ ಬಟ್ಟೆ

**ವಹಿಲ** ತ್ವರೆ, ವೇಗ; ಪ್ರವಾಹ

**ವಹಿಸು** ಸ್ವೀಕರಿಸು, ಭಾರವನ್ನು ಹೊರು

**ವಹ್ನಿ** ಬೆಂಕಿ, ಪ್ರಧಾನಾಗ್ನಿ

**ವಹ್ನಿಪುರ** ವ್ಯಾಸರಾಜತೀರ್ಥರ ಹುಟ್ಟೂರು, ಮೈಸೂರು ಜಿಲ್ಲೆ ಟಿ.ನರಸೀಪುರ ತಾಲ್ಲೂಕಿನ ಬನ್ನೂರು

Rarest Archiver

ವಳಿ ತಿರುಗಿದುದು, ಬಾಗಿದುದು; ಅಲೆ, ತೆರೆ; ರೇಖೆ

**ವಳಿಪಂಕ್ತಿ** ತ್ರಿವಳಿ–ಹೊಟ್ಟೆಯ ಮೇಲಿರುವ ಮೂರು ಗೆರೆಗಳು

**ವಳ್ಳ** ಒಂದು ಸಾಮಾನ್ಯ ಸಸ್ಯ

**ವಾಂಛಲ್ಯ, ವಾಂಛ್ಯ** ಆಸೆ, ಪ್ರೀತಿ, ವಾತ್ಸಲ್ಯ

**ವಾಂಛಿತ** ಬಯಸಿದ, ಇಚ್ಛಿಸಿದ ವಸ್ತು

**ವಾಂಛಿತದ** ಇಷ್ಟಾರ್ಥವನ್ನು ಕೊಡುವ

**ವಾಂಛಿತಾರ್ಥ** ಇಷ್ಟಾರ್ಥ

**ವಾಂಛೆ** ಬಯಕೆ

**ವಾಂತಿ** ಓಕರಿಕೆ, ವಮನ

**ವಾಕ್** ಮಾತು; ಜ್ಞಾನ

**ವಾಕು** ಮಾತು; ಮುಂಗೈ ಆಭರಣ

**ವಾಕುಮೊರೆ** ಪ್ರಾರ್ಥನೆ

**ವಾಕೇಶ** ಬ್ರಹ್ಮ

**ವಾಕ್ಕು** ಮಾತು

**ವಾಕ್ಪಟುತ್ವ** ಮಾತುಗಾರಿಕೆ

**ವಾಕ್ಯಪಾಶ** ನುಡಿಯೆಂಬ ಹಗ್ಗ, ಮಾತೆನ್ನುವ ಬಂಧನ

**ವಾಕ್ಯಾರ್ಥ** ವಾಕ್ಯದ ತಾತ್ಪರ್ಯಾರ್ಥ, ವಾದ

**ವಾಗತ್ಯ** ಕಟ್ಟಳೆಗೆ ಸಮ್ಮತವಲ್ಲದ್ದು, ಅಸಹ್ಯ, ಜಿಗುಪ್ಸೆ, ಅಡ್ಡಮಾತು

**ವಾಗಭಿಮಾನಿ** ವಾಗ್ರೂಪವಾದ ಶಾಸ್ತ್ರಗಳಿಗೆ ಅಭಿಮಾನಿದೇವತೆ ಸರಸ್ವತಿ

**ವಾಗಾದಿ** ಮಾತು ಮೊದಲಾದ ಕರ್ಮೇಂದ್ರಿಯಗಳು

**ವಾಗೀಶ** ಬ್ರಹ್ಮ, ಅಭಿವ್ಯಕ್ತಿಗಳ ಪ್ರೇರಕ, ನಿಯಾಮಕ

**ವಾಗ್ಗೊರಳು** ವಾಕ್ ಕೊರಳು ಎನ್ನುವ ದ್ವಿರುಕ್ತಿ

**ವಾಗ್ದೇವಿ** ಸರಸ್ವತಿ

**ವಾಗ್ವಿಭವ** ಮಾತಿನ ವೈಭವ

**ವಾಘಿಸು** ಕಡಿವಾಣದಿಂದ ನಿಯಂತ್ರಿಸು

**ವಾಘೆ** ಲಗಾಮು

**ವಾಙ್ಮನರೋಚಕ** ಮಾತು ಮನಗಳಿಂದ ಅರಿಯಲಾರದವನು

**ವಾಚನಾಡು, ವಾಚವಾಡು** ಮಾತನ್ನು ಆಡು

**ವಾಚ್ಯಾರ್ಥ** ಶಬ್ದಗಳ ಸರಳವಾದ ಅರ್ಥ, ರೂಢಾರ್ಥ

**ವಾಜ** ವೇಗ, ರಭಸ; ಒಂದು ಜಾತಿಯ ಮರ; ಅಕ್ಕಸಾಲಿ; ಓಜ, ರೀತಿ; ಯಜ್ಞದ ಕೊನೆಯಲ್ಲಿ ಹೇಳುವ ಮಂತ್ರ

**ವಾಜಪೇಯ** ಒಂದು ಬಗೆಯ ಯಜ್ಞ

**ವಾಜಿ** ಕುದುರೆ; ಬಾಣ, ಅಂಬು

**ವಾಜಿಮೇಧ** ಅಶ್ವಮೇಧಯಾಗ; ಹಗೆ, ಶತ್ರು

**ವಾಜಿವಕ್ತ್ರ, ವಾಜಿವದನ** ಕುದುರೆಯಮುಖ, ಹಯವದನ, ವಿಷ್ಣುವಿನ ಅವತಾರಗಳಲ್ಲೊಂದು

**ವಾಟ** ಮಂಟಪ; ದಾರಿ, ಬೀದಿ, ಹಾದಿ; ತೋಟ

**ವಾಡಿ** ಗೋಡೆ; ಬಿಡಾರ, ವಾಸಸ್ಥಳ, ನಗರದ ಒಂದು ಭಾಗ

**ವಾಡಿಗ** ಬಿಡಾರ, ವಾಡೆಯಲ್ಲಿ ಇರುವವನು; ಗುಂಪು

**ವಾಡಿಸು** ಗೋಡೆ ಕಟ್ಟಿಸು

**ವಾಡೆ** ದೋಣಿ, ಹರಿಗೋಲು; ಧಾನ್ಯ ಹಾಕಲು ನೆಲದಲ್ಲಿ ಮಾಡಿದ ಗೂಡು; ಭವ್ಯವಾದ ಮನೆ

**ವಾಣಿ** ಸರಸ್ವತಿ, ಮಾತು

**ವಾಣಿನಲ್ಲ, ವಾಣಿಯರಸ** ಸರಸ್ವತಿಯ ಪತಿ–ಬ್ರಹ್ಮ

**ವಾಣಿಯರಸನಯ್ಯ** ಬ್ರಹ್ಮನ ತಂದೆ–ವಿಷ್ಣು

**ವಾಣೀಪತಿ** ಬ್ರಹ್ಮ

**ವಾತ** ಮಾರುತ, ವಾಯು; ತೃಣಾವರ್ತನೆಂಬ ರಾಕ್ಷಸ

**ವಾತಗುದ್ದಿ** ಗಾಳಿ ಗುದ್ದಿ

**ವಾತಘಾತ** ವಾತವಿಕಾರ, ಗಾಳಿಯ ಹೊಡೆತ

**ವಾತಜ, ವಾತಜಾತ, ವಾತತನ** ವಾಯುಪುತ್ರ, ಆಂಜನೇಯ, ಭೀಮ, ಮಧ್ವಾಚಾರ್ಯ

**ವಾತತ್ತಿ** ವಾಕರಿಕೆ

**ವಾತದೇವ** ವಾಯುದೇವರು

Rarest Archive

**ವಾತನೊಡೆಯ** ವಾಯುವಿನ ಯಜಮಾನ–ರಾಮ

**ವಾತಪಿತ** ಸಂಕರ್ಷಣ

**ವಾತಭಕ್ಷಕ** ಹಾವು

**ವಾತಭುಗ್ಭೂಷ** ಹಾವನ್ನು ಆಭರಣವನ್ನಾಗಿ ಉಳ್ಳವನು, ಸರ್ಪಭೂಷಣ–ಶಿವ

**ವಾತಸಖ** ಅಗ್ನಿ

**ವಾತಸುತ, ವಾತಾತ್ಮಜ** ವಾಯುಪುತ್ರ, ಹನುಮ, ಭೀಮ, ಮಧ್ವಾಚಾರ್ಯ

**ವಾತಾಪಿ** ವಾಗಿಂದ್ರಿಯಮಾನಿ ದೈತ್ಯ

**ವಾತಾಶನ** ಗಾಳಿಯನ್ನೇ ಆಹಾರವಾಗಿವುಳ್ಳವನು–ಶೇಷ

**ವಾತಾಶನಗಿರಿ** ಶೇಷಗಿರಿ

**ವಾತಿ** ಹನುಮಂತ

**ವಾದಬುದ್ಧಿ** ವಿವಾದ ಬೆಳೆಸುವ ಪ್ರವೃತ್ತಿ

**ವಾದಿ** ತರ್ಕಮಾಡುವವನು, ಮಾತನಾಡುವವನು, ವಾದಿಸುವವನು

**ವಾದಿಗಜಪಂಚಾನನ** ಪ್ರತಿವಾದಿಗಳೆಂಬ ಆನೆಗೆ ಸಿಂಹಸದೃಶನಾದವನು, ಒಂದು ಬಿರುದು

**ವಾದಿತಿಮಿರ** ವಾದಿಗಳೆಂಬ ಕತ್ತಲೆ

**ವಾದಿಮಸ್ತಕಶೂಲ** ವಾದಿಗಳ ತಲೆಯನ್ನು ತಿವಿಯುವ ಶೂಲ

**ವಾದಿಶರಭಭೇರುಂಡ** ವಾದಿಗಳೆಂಬ ಶರಭಗಳನ್ನು ಭೇದಿಸುವ ಭೇರುಂಡ ಪಕ್ಷಿ, ಒಂದು ಬಿರುದು

**ವಾನರ** ಕಪಿ, ಹನುಮ

**ವಾಪಿ** ಬಾವಿ, ಕೂಪ, ಹೊಕ್ಕುತುಂಬುವ ಬಾವಿ

**ವಾಮ** ದುರ್ಗಾರೂಪ; ಎಡಭಾಗ; ಸುಂದರವಾದುದು, ಚೆಲುವಾದುದು; ಕೇಡು, ಹಾನಿ, ವಿರೋಧವಾದ, ಪ್ರತಿಕೂಲವಾದ, ಕೊಂಕಾದ

**ವಾಮದಿಕ್ಕು** ಎಡಭಾಗ, ಎಡಗಡೆ

**ವಾಮದೃಶ** ಸುಂದರವಾದ ಕಣ್ಣುಳ್ಳವಳು

**ವಾಮದೇವ** ಸುಂದರಪುರುಷ–ಶಿವ

**ವಾಮದೃಷ್ಟಿ** ಎಡಗಣ್ಣ ನೋಟ, ಓರೆನೋಟ, ಪ್ರೇಮ ದೃಷ್ಟಿ

**ವಾಮನಯನ** ಎಡಗಣ್ಣು

**ವಾಮಭಾಗ** ಎಡಭಾಗ

**ವಾಮಲೋಚನೆ** ಸುಂದರವಾದ ಕಣ್ಣುಳ್ಳ ಸ್ತ್ರೀ

**ವಾಮಾಂಕ** ಎಡಭಾಗ, ಎಡತೊಡೆ

**ವಾಮಾಕ್ಷಿ** ಲಕ್ಷ್ಮಿ

**ವಾಯ** ಸುಳ್ಳು, ಮೋಸ

**ವಾಯಸ** ಕಾಗೆ

**ವಾಯು** ಪ್ರಾಣದೇವರು

**ವಾಯುಜ** ವಾಯುವಿನ ಮಗ, ಹನುಮಂತ, ಭೀಮ, ಮಧ್ವಾಚಾರ್ಯ

**ವಾಯುಜಾತ** ವಾಯುದೇವನ ಅಂಶ/ಅವತಾರ–ಮಾರುತಿ

**ವಾಯುನಂದನ** ವಾಯುಪುತ್ರ, ಹನುಮಂತ, ಭೀಮ, ಮಧ್ವಾಚಾರ್ಯ

**ವಾಯುಬಂಧನ** ಕುಂಭಕವೆಂಬ ಪ್ರಾಣಾಯಾಮದ ಅಂಗ

**ವಾಯುಭುಕ್** ಶೇಷ, ಹಾವು

**ವಾಯುಮತ** ಮಧ್ವಮತ

**ವಾಯುವೀಯ** ವಾಯುವ್ಯ, ವಾಯುವಿಗೆ ಸಂಬಂಧಿಸಿದ

**ವಾಯುಸಖ** ಅಗ್ನಿ

**ವಾರ** ಮೀಸಲು, ಭೂಮಿಯ ಒಡೆಯನಿಗೆ ಸಲ್ಲುವ ಧಾನ್ಯದ ಅಂಶ; ಸಮೂಹ, ಏಳು ದಿನಗಳ ಸಮೂಹ

**ವಾರಕ, ನಿವಾರಕ** ನಿವಾರಿಸುವವನು, ಹೋಗಲಾಡಿಸುವವನು

**ವಾರಕಾಂತೆ** ಅಪ್ಸರೆ; ವೇಶ್ಯೆ

**ವಾರಣ** ಆನೆ, ಗಜೇಂದ್ರ; ಪ್ರತಿಭಟನೆ; ಕ್ರಮ, ನಿವಾರಣ; ಸರೋವರದ ದಂಡೆ; ಮೋಡ

**ವಾರಣಗಳೆಂಟು** ಎಂಟು ದಿಕ್ಕಿನ ಆನೆಗಳು, ಅಷ್ಟಮದಗಳು

Rarest Archive

**ವಾರಣದಂತವಿದಾರಣ** ಕುವಲಯಾಪೀಡನೆಂಬ ಆನೆಯ ಕೋರೆಯನ್ನು ಮುರಿದವನು–ಕೃಷ್ಣ
**ವಾರಣನಿಚಯ** ಆನೆಗಳಗುಂಪು
**ವಾರಣಪುರ** ಹಸ್ತಿನಾಪುರ
**ವಾರಣಮುಖ** ಗಜಾನನ
**ವಾರಣವಂತ** ಬಲಶಾಲಿ, ಆನೆಯುಳ್ಳವನು
**ವಾರಣೇಂದ್ರ** ಗಜರಾಜ
**ವಾರನಾರಿ** ವೇಶ್ಯೆ
**ವಾರವಧೂಗಣ** ವೇಶ್ಯೆಯರ ಸಮೂಹ
**ವಾರವಾರ** ಪ್ರತಿ ಶುಕ್ರವಾರ; ಮೇಲೆಮೇಲೆ
**ವಾರಾಂಗನೆ** ಪರಿಚಾರಕಿ; ವೇಶ್ಯೆ
**ವಾರಾಶಿ(ಸಿ)** ಸಮುದ್ರ
**ವಾರಾಶಿಜಾತೆ** ಲಕ್ಷ್ಮಿ
**ವಾರಾಶಿಜಾವಲ್ಲಭ** ಸಮುದ್ರದಲ್ಲಿ ಜನಿಸಿದ ಲಕ್ಷ್ಮಿಯ ಗಂಡನಾದ ವಿಷ್ಣು
**ವಾರಾಸಿಜೆ** ಸಮುದ್ರದಿಂದ ಉತ್ಪನ್ನಳಾದ ಲಕ್ಷ್ಮಿ
**ವಾರಿ** ಸಮುದ್ರ; ನೀರು; ಮಳೆ
**ವಾರಿಕಲ್ಲು** ಆಲಿಕಲ್ಲು, ನೀರ್ಗಲ್ಲು
**ವಾರಿಚರ** ನೀರಿನಲ್ಲಿ ಚಲಿಸುವ ವಿಷ್ಣುವಿನ ಮಚ್ಚರೂಪ, ಮತ್ಸ್ಯಾವತಾರ
**ವಾರಿಜ** ಕಮಲ
**ವಾರಿಜಕಲ್ಪ** ಬ್ರಹ್ಮಕಲ್ಪ
**ವಾರಿಜಜಾಂಡ** ಬ್ರಹ್ಮಾಂಡ
**ವಾರಿಜಧರ** ವಿಷ್ಣು
**ವಾರಿಜನಾಭ** ಪದ್ಮನಾಭ–ವಿಷ್ಣು
**ವಾರಿಜನೇತ್ರ** ಪುಂಡರೀಕಾಕ್ಷ–ವಿಷ್ಣು
**ವಾರಿಜಪತಿ** ಲಕ್ಷ್ಮಿಯಪತಿ–ಶ್ರೀಹರಿ
**ವಾರಿಜಭವ** ಬ್ರಹ್ಮ
**ವಾರಿಜಭವಮುಖಿ** ಕಮಲದಂತೆ ಮುಖವುಳ್ಳವಳು–ಲಕ್ಷ್ಮಿ
**ವಾರಿಜಮಿತ್ರ** ಸೂರ್ಯ
**ವಾರಿಜಮುಖಿ** ತಾವರೆ ಮೊಗದವಳು, ಕಮಲಮುಖಿ–ಲಕ್ಷ್ಮಿ
**ವಾರಿಜವದನ** ಕಮಲಾನನ–ಶ್ರೀಹರಿ
**ವಾರಿಜಸಖ** ಸೂರ್ಯ
**ವಾರಿಜಾಂಬಕ, ವಾರಿಜಾಕ್ಷ** ಕಮಲನೇತ್ರ, ತಾವರೆಯಂತೆ ಕಣ್ಣುಳ್ಳವನು–ಶ್ರೀಹರಿ
**ವಾರಿಜಾಕ್ಷಿ** ಕಮಲದಂತೆ ಕಣ್ಣುಳ್ಳವಳು–ಲಕ್ಷ್ಮಿ
**ವಾರಿಜಾನನೆ** ಕಮಲಮುಖಿ–ಲಕ್ಷ್ಮಿ
**ವಾರಿಜಾರಿ** ಕಮಲದ ಶತ್ರು–ಚಂದ್ರ
**ವಾರಿಜಾಲಯಪತಿ** ಕಮಲ ನಿವಾಸಿನಿಯಾದ ಲಕ್ಷ್ಮೀದೇವಿಯ ಪತಿ–ಶ್ರೀಹರಿ
**ವಾರಿಜಾಸನ** ಕಮಲವನ್ನೇ ಆಸನವಾಗಿ ಉಳ್ಳ ಬ್ರಹ್ಮ
**ವಾರಿಜಾಸನಮಾತೆ** ಬ್ರಹ್ಮನತಾಯಿ–ಲಕ್ಷ್ಮಿ
**ವಾರಿಜೋದರ** ವಾರಿಜನಾಭ–ಶ್ರೀಹರಿ
**ವಾರಿಜೋದ್ಭವ** ಬ್ರಹ್ಮ
**ವಾರಿದ** ಮೋಡ
**ವಾರಿಧಾರೆ** ಮಳೆ; ಕಣ್ಣೀರು
**ವಾರಿಧಿ, ವಾರ್ಧಿ** ಸಮುದ್ರ, ಸಾಗರ
**ವಾರಿಧಿಶಯನ** ಸಮುದ್ರದಲ್ಲಿ ಮಲಗಿದವನು–ವಿಷ್ಣು
**ವಾರಿಧಿಶೋಷಕ** ರಾಮ
**ವಾರಿರುಹ** ಕಮಲ
**ವಾರಿರೂಪಿ** ಪ್ರಳಯೋದಕದಲ್ಲಿ ಶಯನಮಾಡಿದ ಶ್ರೀಹರಿಗೆ ವಾಯು–ಉದಕ–ಶಯ್ಯಾರೂಪಳಾಗಿರುವಳು–ಲಕ್ಷ್ಮಿ
**ವಾರಿವಾಹನಿಭಾಂಗ** ನೀರನ್ನು ಧರಿಸಿರುವ ಮೋಡದಂತೆ ಶರೀರವುಳ್ಳವನು, ನೀಲಮೇಘಶ್ಯಾಮ–ಕೃಷ್ಣ
**ವಾರಿಶಾಯಿ** ಸಮುದ್ರದಲ್ಲಿ ಮಲಗಿರುವವನು–ಶ್ರೀಹರಿ
**ವಾರುಣಿ** ಪಶ್ಚಿಮ; ಮದ್ಯ; ಶೇಷ ದೇವರ ಪತ್ನಿ
**ವಾರುಧಿತನುಜೆ** ಲಕ್ಷ್ಮಿ
**ವಾರ್ತೆ** ಸುದ್ದಿ, ಸಮಾಚಾರ; ಗಾಳಿಸುದ್ದಿ, ಅಪಕೀರ್ತಿ; ವೃತ್ತಿ, ಉದ್ಯೋಗ

Rarest Archive

**ವಾರ್ಧಕ್ಯಮದ** ಮುದಿಹುಚ್ಚು
**ವಾರ್ಧಿಕ್ಯ** ಮುಪ್ಪು
**ವಾರ್ಷ್ಣಿ, ವಾರ್ಷ್ಣೇಯ** ಕೃಷ್ಣ
**ವಾಲ** ಬಾಲ, ಪುಚ್ಛ; ಕೂದಲು, ರೋಮ, ಇಳಿದು ಬಿಟ್ಟ ಜಡೆ
**ವಾಲಗ<ವೇಣುಕ** ಓಲಗ, ವಾದ್ಯದವರು; ಗೌರವ, ಸೇವೆ
**ವಾಲಿಖಿಲ್ಯರು** ಹ್ರಸ್ವಸ್ವರೂಪದ ಅರವತ್ತುಸಾವಿರ ಮಹರ್ಷಿ ಗಣದವರು–ಮರದ ಕೊಂಬೆಗೆ ತಲೆಕೆಳಗಾಗಿ ಜೋತುಬಿದ್ದು ತಪಸ್ಸು ಮಾಡುತ್ತಿದ್ದವರು
**ವಾಲಿಜ** ಅಂಗದ
**ವಾಲಿಭಂಜನ** ರಾಮ
**ವಾಲು(ಳು)ಕ** ಮರಳು, ಉಸುಕು
**ವಾಲ್ಮೀಕಿ** ವಲ್ಮೀಕದಿಂದ ಹುಟ್ಟಿದವನು, ರಾಮಾಯಣ ಕರ್ತೃ
**ವಾವೆ, ವಾವೆ–ವರಸೆ** ನಂಟು, ಸಂಬಂಧ
**ವಾಸ** ವಸನ, ವಾಸ್ತವ್ಯ, ಇರುವಿಕೆ; ವಸ್ತ್ರ, ಬಟ್ಟೆ; ಕೊಳಲು
**ವಾಸನೆ** ಗಂಧ; ಇಚ್ಛೆ, ಹಿಂದಿನ ಜನ್ಮದ ಕರ್ಮ ಅಥವಾ ಆಸೆಯ ಮೂಲ; ತೃಪ್ತಿ
**ವಾಸರ** ದಿನ, ನಿತ್ಯ, ವಾರ; ಹಗಲು
**ವಾಸರೇಶ** ದಿನೇಶ, ಸೂರ್ಯ
**ವಾಸವ** ಇಂದ್ರ
**ವಾಸವಜ** ಅರ್ಜುನ
**ವಾಸವನುತ** ಇಂದ್ರನ ಕೊಂಡಾಟಕ್ಕೆ ಪಾತ್ರನಾದವನು–ಶಿವ
**ವಾಸವಮುಖ** ಇಂದ್ರನೇ ಮೊದಲಾದ
**ವಾಸವವಂದಿತ** ವಿಷ್ಣು, ರುದ್ರ
**ವಾಸವಸುತ, ವಾಸವತನುಸಂಭ** ಅರ್ಜುನ
**ವಾಸವಾದಿ** ಇಂದ್ರನೇ ಮೊದಲಾದ ದೇವತೆಗಳು
**ವಾಸವಾನುಜ** ಇಂದ್ರನ ತಮ್ಮ ಉಪೇಂದ್ರ
**ವಾಸವಾಮರಾಳಿ** ಇಂದ್ರನೇ ಮೊದಲಾದ ದೇವತೆಗಳ ಸಮೂಹ
**ವಾಸವಾರ್ಚಿತ** ಇಂದ್ರನಿಂದ ಪೂಜಿಸಿ ಕೊಂಡವನು–ಶಿವ
**ವಾಸವಾಷ್ವಂಯ** ಇಂದ್ರಾಂಶಸಂಭೂತರಾದ ಜಯತೀರ್ಥರು
**ವಾಸವೀ** ಸತ್ಯವತಿ
**ವಾಸಸೂನ್ಯ** ವಸ್ತ್ರವಿಹೀನ; ಬುದ್ಧಾವತಾರ
**ವಾಸಿ** ಕ್ಷೇಮ, ಲೇಸು; ವಚನ, ಆಣೆ, ಭಾಷೆ; ಸ್ಪರ್ಧೆ, ಮೇಲಾಟ; ಕೀರ್ತಿ, ಘನತೆ, ಹಿರಿಮೆ; ವಾಸಿಸುವವನು, ಇರುವವನು
**ವಾಸಿತಾನಂತಪದ** ನಾಶವಿರದ ಶ್ವೇತ ದ್ವೀಪ, ಅನಂತಾಸನ, ವೈಕುಂಠಗಳಲ್ಲಿ ನೆಲಸಿರುವವನು –ಶ್ರೀಹರಿ
**ವಾಸಿಪಂಥ** ಸೆಣಸಾಟ, ಸ್ಪರ್ಧೆ; ಅನುಸರಿಸಬಹುದಾದ ದಾರಿಗಳು
**ವಾಸುಕಿ** ಅನಂತ, ವಾಸುಕಿ, ತಕ್ಷಕ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖ ಹಾಗೂ ಕುಲಿಕ ಎಂಬ ಅಷ್ಟಕುಲ ನಾಗಗಳಲ್ಲಿ ಎರಡನೆಯವ ವಾಸುಕಿ, ಇವನಿಗೆ ಏಳುನೂರು ಹೆಡೆಗಳು
**ವಾಸುಕಿಶಯನ** ವಿಷ್ಣು
**ವಾಸುದೇವ** ವಸುದೇವನ ಮಗ ಕೃಷ್ಣ; ಮಧ್ವರ ಹೆಸರು
**ವಾಸೆ<ವಾಸಿ** ಉತ್ತಮ
**ವಾಹನತುರಂಗ** ಕಲ್ಕ್ಯವತಾರ
**ವಾಳಿ** ಹಸು
**ವಾಳಿಯುವ** ಗೋಪಾಲ
**ವಿಂಗಡ** ಪ್ರತ್ಯೇಕ, ವಿಭಾಗ, ವಿಭಜನೆ
**ವಿಂಗೀತ** ಸಂಗೀತಕ್ಕೆ ವಿರುದ್ಧಾರ್ಥಕ ಶಬ್ದ
**ವಿಂಶತಿ** ಇಪ್ಪತ್ತು
**ವಿಕಟ** ಪರಾಕ್ರಮದಿಂದ ಕೂಡಿದ; ಡೊಂಕು, ವಕ್ರ; ವಂಚಕತನ

Rarest Archiver

**ವಿಕಟವಧು** ಮೋಹಿನಿ

**ವಿಕಲ** ಚಂಚಲ, ದೃಢಮನಸ್ಸಿಲ್ಲದ, ಅಸ್ಥಿರವಾದ, ತಳಮಳಗೊಂಡ, ಚಂಚಲ ಮತಿಗಳು, ಅರೆಬರೆ ಜ್ಞಾನದವರು

**ವಿಕಸಿತ** ಅರಳಿದ, ವಿಕಾಸ ಹೊಂದಿದ

**ವಿಕಸಿತಾಂಬುಜವದನ** ಅರಳಿದ ತಾವರೆ ಹೂವಂತಿರುವ ಮೊಗ

**ವಿಕಸಿತಾಬ್ಜದ** ಅರಳಿದ ಕಮಲದಲ್ಲಿ ಹುಟ್ಟಿದ ಬ್ರಹ್ಮ

**ವಿಕಳ** ಚಿಂತೆ; ಚಂಚಲ; ಲೋಪ, ನ್ಯೂನತೆ, ಕೊರತೆ; ಒಣಗಿದ, ಬಾಡಿದ; ನಾಶ; ಭ್ರಷ್ಟ

**ವಿಕಳಿತ** ಕಳೆಗುಂದಿದ; ಕಳವಳಗೊಂಡ

**ವಿಕಳಿಸು** ಕಳವಳಪಡು

**ವಿಕುಂಠ** ಒಂದು ಅಂಕಿತನಾಮ; ವೈಕುಂಠ(?)

**ವಿಕ್ರಮ** ಗತಿ, ಗಮನ, ಹೆಜ್ಜೆ; ಶೂರ, ಸಾಹಸ

**ವಿಕ್ರಮತ್ರಯ** ತ್ರಿವಿಕ್ರಮಾವತಾರ

**ವಿಕ್ರಮಧಾಮ** ಪರಾಕ್ರಮಕ್ಕೆ ಆಶ್ರಯನಾದವನು

**ವಿಕ್ಷೇಪಣ** ಎಸೆಯುವಿಕೆ, ತ್ಯಜಿಸುವುದು, ಬಿಡುವುದು

**ವಿಖನಸ** ಬ್ರಹ್ಮ; ಗರುಡ; ಋಷಿ, ವಿರಕ್ತ (ವಾನಪ್ರಸ್ಥಾಶ್ರಮಿ)

**ವಿಖನಸಅಂಡ, ವಿಖನಸಾಂಡ** ಬ್ರಹ್ಮಾಂಡ

**ವಿಖನಸಪತಿ** ವೈಖಾನಸರಿಂದ (ಋಷಿಗಳಿಂದ) ಪೂಜೆಗೊಳ್ಳುವವನು–ಶ್ರೀಹರಿ

**ವಿಖನಸಾರಾಧ್ಯ** ವಾನಪ್ರಸ್ಥಾಶ್ರಮಿಗಳಿಂದ ಸೇವಿಸಲ್ಪಡುವವನು ಅಥವಾ ಬ್ರಹ್ಮಾದಿಗಳಿಂದ ಆರಾಧ್ಯನು–ಶ್ರೀಹರಿ

**ವಿಗಟ** ದೊಡ್ಡ

**ವಿಗಡ** ಶೌರ್ಯ, ಸಾಹಸ, ಪರಾಕ್ರಮ; ದುಷ್ಟ, ಕೆಟ್ಟ, ಕ್ರೂರ, ಭಯಂಕರ; ತೊಂದರೆ; ಹಿರಿಯ, ದೊಡ್ಡ

**ವಿಗಡಗಂಟಕ** ಜಗಳಗಂಟ; ಧೂರ್ತ

**ವಿಗಡಮುನಿ** ನಾರದ

**ವಿಗಡೆ** ದುಃಖಾರ್ತೆ; ಸಮರ್ಥಳಾದ ಹೆಂಗಸು; ಕಪಟಸ್ವಭಾವದವಳು, ಕುಟಿಲೆ

**ವಿಗತಕ್ಲೇಶ** ದುಃಖ ಲೇಪ ರಹಿತ, ಸಂಕಟ ದೂರವಾದವನು

**ವಿಗತವಸನ** ಬಟ್ಟೆಯಿಲ್ಲದ, ನಗ್ನ, ಬೆತ್ತಲೆ

**ವಿಗತಶೋಕ** ದುಃಖದಿಂದ ದೂರವಾದ

**ವಿಗತಾಘ** ನಿರ್ದೋಷ, ಪಾಪವಿಲ್ಲದ

**ವಿಗತಾಘಸಂಘ** ದೋಷದೂರ, ಪಾಪಸಮೂಹ ವಿಲ್ಲದ

**ವಿಗತಾಭ್ಯಧಿಕ** ಹೆಚ್ಚು ಕಡಿಮೆಯಿಲ್ಲದ

**ವಿಗಮನ** ಗರುಡಗಮನ–ಶ್ರೀಹರಿ

**ವಿಗ್ರಹ** ರೂಪ; ಯುದ್ಧ

**ವಿಘ್ನೌಘಾಂಧಕಾರ ಶರಚ್ಚಂದಿರ** ವಿಘ್ನಗಳ ಸಮೂಹವೆಂಬ ಕತ್ತಲೆಗೆ ಶರತ್ಕಾಲದ ಚಂದಿರ ನಂತೆ ಇರುವವನು–ಗಣಪತಿ

**ವಿಚಕ್ಷಣ** ಜ್ಞಾನ–ಸಾಮರ್ಥ್ಯ ಗುಣಗಣಗಳಿಂದ ಪ್ರವೀಣ

**ವಿಚ್ಛೇದನ** ನಾಶ ಮಾಡುವವನು, ಬಿಡುಗಡೆ

**ವಿಜಯ** ಅರ್ಜುನ

**ವಿಜಯಂಗೈ** ದಯಮಾಡಿಸು, ಬರು

**ವಿಜಯಭಾವ** ಅರ್ಜುನನ ಭಾವ–ಕೃಷ್ಣ

**ವಿಜಯರಥಕೇತು** ಅರ್ಜುನನ ರಥದ ಬಾವುಟ, ಕಪಿಧ್ವಜ

**ವಿಜಯರಥಕೇತುನಾಥ** ಅರ್ಜುನನ ರಥದ ಬಾವುಟದ ನಾಯಕ–ಹನುಮಂತ

**ವಿಜಯಸಖ** ಕೃಷ್ಣ

**ವಿಜಯಸತಿ** ದ್ರೌಪದಿ

**ವಿಜಯ್ಯ** ವಿಷ್ಣು

**ವಿಜಿತ** ಜಯಶಾಲಿ, ಜಯಿಸಿದ, ಗೆದ್ದ

**ವಿಜಿತಾತ್ಮ** ಜೀವರ ಮನಸ್ಸುಗಳನ್ನು ಗೆದ್ದವನು–ವಿಷ್ಣು(ಸಹಸ್ರನಾಮ)

Rarest Archiver

**ವಿಜ್ಞಾನ** ಪದಾರ್ಥವಿಷಯಕವಾದ ಜ್ಞಾನ; ವಿಷ್ಣುಜ್ಞಾನ
**ವಿಜ್ಞೇಯ** ಅವಶ್ಯವಾಗಿ ತಿಳಿಯಬೇಕಾದ
**ವಿಟ್** ಮಲ
**ವಿಟ** ಜಾರ, ಕಾಮುಕ
**ವಿಟಂಕ** ಗೂಡು, ಪಂಜರ; ಅಗ್ರಭಾಗ, ತುದಿ
**ವಿಟಪ** ವೃಕ್ಷ, ಗಿಡ, ಪೊದೆ, ರೆಂಬೆ
**ವಿಟಪಿ** ಗಿಡ–ಮರ
**ವಿಟ್ಟ** ವಿಟ, ಕಾಮುಕ
**ವಿಠ್ಠಲಗಾವಾಸವಾದಪೆಟ್ಟಿಗೆ** ಹರಿಗೆ ನೆಲೆಮನೆಯಾಗಿರುವ ಹೃದಯದಂತೆ
**ವಿಡಂಬ** ನಟನೆ, ಆಡಂಬರ
**ವಿಡಾಯು** ತೋರಿಕೆ; ಆಧಿಕ್ಯ, ಶಕ್ತಿ, ಬಲ, ವಿಜೃಂಭಣೆ
**ವಿಡ್ಡೂರ** ಕಷ್ಟ, ಅಡ್ಡಿ; ಹಗೆ, ವೈರ
**ವಿತಂಡ** ಒಣ ಹರಟೆ, ಅರ್ಥವಿಲ್ಲದ ಮಾತು; ಆನೆ
**ವಿತತ** ವಿಸ್ತಾರವಾದ, ಸರ್ವವ್ಯಾಪವಾದ; ಶ್ರೇಷ್ಠವಾದ
**ವಿತತಪ್ರಖ್ಯಾತ** ವಿಸ್ತಾರವಾದ, ಕೀರ್ತಿತನಾದವನು, ಸಕಲ ಬ್ರಹ್ಮಾಂಡಗಳಲ್ಲಿ ಪ್ರಖ್ಯಾತನಾದವನು, ವ್ಯಾಪ್ತಿಯಿಂದ ಖ್ಯಾತಿಯಾದ
**ವಿತರಣ** ದಾನ, ತ್ಯಾಗ: ಬಳಕೆ
**ವಿತುಲ** ತುಲನೆಯಿಲ್ಲದ
**ವಿತ್ತ** ಹಣ, ಐಶ್ವರ್ಯ, ಸಂಪತ್ತು
**ವಿತ್ತಪ, ವಿತ್ತಪತಿ** ಕುಬೇರ
**ವಿತ್ತಪತಿಮಿತ್ರಸುತ** ಕುಬೇರನ ಮಿತ್ರನಾದ ಶಿವನಮಗ–ಗಣಪತಿ
**ವಿದಂತ** ಹಲ್ಲಿಲ್ಲದ, ಹಲ್ಲುದುರಿದ
**ವಿದಗ್ಧ** ತಿಳಿದವ, ಪಂಡಿತ; ನೊಂದ
**ವಿದಾರಕ** ನಾಶಮಾಡುವವನು
**ವಿದಾರಣ, ವಿದಾರಿ** ಸಂಹಾರಕ, ಕತ್ತರಿಸುವವನು, ಕೊಲ್ಲುವವನು; ಸೀಳುವ, ಒಡೆಯುವ
**ವಿದಿತ** ಎಲ್ಲರಿಗೂ ತಿಳಿದದ್ದು, ಪ್ರಸಿದ್ಧವಾದದ್ದು
**ವಿದಿತವೇದ್ಯ** ಚೆನ್ನಾಗಿ ತಿಳಿಯಲ್ಪಡುವವನು
**ವಿದು** ಪಂಡಿತ
**ವಿದುಮೊಗ** ಚಂದ್ರನಂತೆ ಮುಖವುಳ್ಳ
**ವಿದುರ** ತಿಳಿದವನು, ವಿದ್ವಾಂಸ; ಧೃತರಾಷ್ಟ್ರ ಮತ್ತು ಪಾಂಡುವಿನ ತಮ್ಮ
**ವಿದುರಾಗ್ರಜ** ಪಾಂಡುರಾಜ
**ವಿದೇಹ** ದೇಹವಿಲ್ಲದವನು, ಕಾಮ, ಮನ್ಮಥ; ಒಂದು ದೇಶದ ಹೆಸರು; ದೇಹಾಭಿಮಾನವಿಲ್ಲದವನು, ಶ್ರೀಹರಿ
**ವಿದ್ಯ** ವಿದ್ಯೆ, ಜ್ಞಾನ
**ವಿದ್ಯಾಶರನಿಧೆ** ವಿದ್ಯಾ ಸಮುದ್ರ–ಗಣಪತಿ
**ವಿದ್ಯುದ್ದರ್ಶಿ** ಮಿಂಚಿನಂತೆ ಕಾಣುವ; ಕ್ಷಣಿಕ
**ವಿದ್ರಾವಿತ** ಓಡಿಸಿದ, ಬೆನ್ನಟ್ಟಿದ
**ವಿದ್ರುಮ** ಹವಳ
**ವಿದ್ವದಾರ್ಯ** ಪಂಡಿತ ಶ್ರೇಷ್ಠ
**ವಿಧ** ಕ್ರಮ, ನಿಯಮ, ರೀತಿ
**ವಿಧಾತ** ಬ್ರಹ್ಮ, ವಿಧಿ
**ವಿಧಾತಪದವಿ** ಬ್ರಹ್ಮಪದವಿ
**ವಿಧಾತೃ** ಬ್ರಹ್ಮ, ಸೃಷ್ಟಿಸುವವನು
**ವಿಧಾತೃನಾಸಾಕುಹರಜನಿತ** ಬ್ರಹ್ಮನ ಮೂಗಿನ ಹೊಳ್ಳೆಯಿಂದ ಹುಟ್ಟಿದವನು, ವರಾಹರೂಪಿ ಶ್ರೀಹರಿ
**ವಿಧಾತೃಪಿತೃ** ಶ್ರೀಹರಿ -
**ವಿಧಿ** ಬ್ರಹ್ಮ; ನಿಯಮ, ಕಟ್ಟಳೆ; ಅದೃಷ್ಟ, ಅಂತ್ಯ
**ವಿಧಿಕಂದ** ಬ್ರಹ್ಮನ ಮಗ–ಶಿವ
**ವಿಧಿಕಾಂತೆ** ಸರಸ್ವತಿ
**ವಿಧಿಜ** ಶಿವ
**ವಿಧಿಜನಕ** ಬ್ರಹ್ಮನ ತಂದೆ–ಶ್ರೀಹರಿ
**ವಿಧಿಜಾತ** ಬ್ರಹ್ಮನ ಮಗನಾದ ನಾರದ

Rarest Archiver

**ವಿಧಿಜಾತೆ** ಬ್ರಹ್ಮನಿಂದ ಸೃಷ್ಟಿಯಾದವಳು, ಸರಸ್ವತಿ
**ವಿಧಿತಾತ** ಬ್ರಹ್ಮನತಂದೆ ಶ್ರೀಹರಿ
**ವಿಧಿಧ್ಯಾಸನ** ಗುರುಮುಖದಿಂದ ಕೇಳುವುದು
**ವಿಧಿಪಿತ** ವಿಷ್ಣು
**ವಿಧಿಭವ** ನಾರದ
**ವಿಧಿಭವಾದ್ಯರು** ಬ್ರಹ್ಮ ರುದ್ರಾದಿಗಳು
**ವಿಧಿಮಾತೆ** ಲಕ್ಷ್ಮಿ
**ವಿಧಿಸುತ** ನಾರದ
**ವಿಧಿಸೃಷ್ಟಿಯೊಳಿಲ್ಲದರೂಪ** ನರಸಿಂಹನ ರೂಪ
**ವಿಧು** ಚಂದ್ರ
**ವಿಧುಕ್ಷೇತ್ರ** ಚಂದ್ರ ತಪಸ್ಸುಮಾಡಿ ಅನುಗ್ರಹೀತವಾದ ಕ್ಷೇತ್ರ–ಉಡುಪಿ
**ವಿಧುವದನ** ಚಂದ್ರನಂತೆ ಮುಖವುಳ್ಳವನು
**ವಿಧೂತಾಶುಭವ್ರಾತ** ಅಮಂಗಳಗಳ ಸಮೂಹ
**ವಿಧೃತ** ಪ್ರತ್ಯೇಕಿಸಿದ, ದೂರಮಾಡಿದ; ಹೊಂದಿದ, ಗ್ರಹಿಸಿದ
**ವಿಧೃತಕೋದಂಡ** ಕೋದಂಡಪಾಣಿ–ರಾಮ
**ವಿಧ್ಯಂಡ** ಬ್ರಹ್ಮಾಂಡ
**ವಿನತ** ನಮ್ರನಾದ, ಬಾಗಿದ, ನಿಗರ್ವಿ
**ವಿನತಾತ್ಮಜ, ವಿನತೆಯಾತ್ಮಜ** ವಿನತೆಯ ಮಗನಾದ ಗರುಡ
**ವಿನತೆ** ಕಶ್ಯಪ ಋಷಿಗಳ ಭಾರ್ಯೆ
**ವಿನಾ** ಹೊರತು
**ವಿನಾಶ** ನಾಶವಿಲ್ಲದ
**ವಿನಿಯೋಗ** ಹಂಚುವಿಕೆ; ಊಳಿಗದವರು
**ವಿನುತ** ಹೊಗಳಲ್ಪಟ್ಟ, ಸ್ತುತಿಗೊಂಡ
**ವಿನುತಸುತ** ಗರುಡ, ವೈನತೇಯ
**ವಿನೋದಿ** ಲೀಲಾಪುರುಷ
**ವಿಪ** ಪಕ್ಷಿರಾಜ–ಗರುಡ
**ವಿಪಂಚಿ** ವೀಣೆ
**ವಿಪದ** ವಿಪತ್ತು; ವಿಶೇಷವಾದ ಪದ, ಸ್ಥಾನ
**ವಿಪದಧ್ವಜ** ಸರ್ಪ ಧ್ವಜ, ದುರ್ಯೋಧನ
**ವಿಪನ್ನ** ಕಷ್ಟಕ್ಕೆ ಗುರಿಯಾದ, ಕುಗ್ಗಿದ, ಸೋತ
**ವಿಪನ್ನ** ಕಷ್ಟಕ್ಕೆ ಗುರಿಯಾದ, ಕುಗ್ಗಿದ; ತಪ್ಪು ದಾರಿಗೆ ಹೋದ
**ವಿಪರೀತ** ಅಪರಾಧ, ತಪ್ಪು; ವೈಚಿತ್ರ್ಯ; ಅತಿ ಹೆಚ್ಚು; ವಿರುದ್ಧ, ಹಿಂದು ಮುಂದಾದ
**ವಿಪರೀತಮತಿ** ಅಧಿಕಜ್ಞಾನ, ಬುದ್ಧಿಯ ಹೆಚ್ಚಳ
**ವಿಪರ್ಯಾಯ** ವಿರೋಧ, ಹಗೆತನ; ನಾಶ; ತಪ್ಪುತಿಳುವಳಿಕೆ, ಅಜ್ಞಾನ; ಬದಲಾವಣೆ
**ವಿಪವರ** ಗರುಡ
**ವಿಪಶ್ಚಿತ್** ವಿದ್ವಾಂಸ, ಜ್ಞಾನಿ
**ವಿಪಾಂಗಗಮನ** ಗರುಡನ ಹೆಗಲೇರಿ ಸಂಚರಿಸುವವನು–ವಿಷ್ಣು
**ವಿಪಾಂಸ** ಪಾಪರಹಿತ, ದೋಷರಹಿತ
**ವಿಪಾಂಸಗ** ದೋಷರಹಿತನಾದ–ಶ್ರೀಹರಿ
**ವಿಪಾಟಿಸು** ಕೀಳು, ತೆಗೆ
**ವಿಪಿನ** ಕಾಡು, ಅಡವಿ
**ವಿಪುಲ(ಳ)** ದೊಡ್ಡ, ವಿಶಾಲವಾದ, ಯಥೇಚ್ಛ, ಬಹಳ, ಹೆಚ್ಚಿನ, ಆಳವಾದ, ಘನವಾದ
**ವಿಪುಲಪ್ರಮತಿ** ಪೂರ್ಣ ಜ್ಞಾನಿಗಳಾದ ಮಧ್ವಾಚಾರ್ಯರು
**ವಿಪುಲಮತಿ** ವಿಶೇಷವಾದ ಜ್ಞಾನವುಳ್ಳವನು; ದೊಡ್ಡ ಮನಸ್ಸು
**ವಿಪೋಷಣ** ರಕ್ಷಕ, ಕಾಪಾಡುವವನು
**ವಿಪ್ರ** ವೇದಮಂತ್ರಗಳನ್ನು ಪಠಿ ಸುವವನು, ಬ್ರಾಹ್ಮಣ, ಜ್ಞಾನಿ; ಕಿರಣ, ರಶ್ಮಿ; ದರ್ಭೆ, ಕುಶ
**ವಿಪ್ರಜಾ, ವಿಪ್ರಜೆ** ವಿಪ್ರಕನ್ಯೆಯಾಗಿ ಅವತಾರವೆತ್ತಿದ ಭಾರತೀದೇವಿ
**ವಿಪ್ರವರ** ಬ್ರಾಹ್ಮಣ ಶ್ರೇಷ್ಠ; ಅಜಾಮಿಳ
**ವಿಪ್ಲವ** ಸಂಕಟ, ಗಂಡಾಂತರ; ದಂಗೆ, ದೊಂಬಿ
**ವಿಬುಧ** ಜ್ಞಾನಿ, ವಿದ್ವಾಂಸ, ದೇವತೆ
**ವಿಬುಧಕುಜ** ದೇವಲೋಕದಲ್ಲಿರುವ ಮರ, ಕಲ್ಪವೃಕ್ಷ; ಒಡೆಯನೆಂಬ ಮರ; ಬಲ್ಲವರ ನೆರಳು

Rarest Archiver

**ವಿಬುಧೇಶ** ಪಂಡಿತಶ್ರೇಷ್ಠ, ವಿದ್ವಾಂಸ
**ವಿಭವ** ವೈಭವ, ಘನತೆ, ಆಡಂಬರ, ಉತ್ಸಾಹ
**ವಿಭಾಡ** ನಾಶಮಾಡುವವನು, ಸೋಲಿಸುವವನು
**ವಿಭಾವನ** ವಿಶೇಷವಾಗಿ ಕಾಣಿಸುವುದು
**ವಿಭಾವರಿ** ರಾತ್ರಿ
**ವಿಭಾವರೀಶ** ಚಂದ್ರ
**ವಿಭಾವಸು** ವಿಶಿಷ್ಟ ತೇಜವುಳ್ಳ, ಕಾಂತಿಯುಕ್ತ
**ವಿಭಾಸ** ಕಾಂತಿ, ಪ್ರಕಾಶ
**ವಿಭೀಷಣವರದ** ರಾಮ
**ವಿಭು** ಒಡೆಯ, ಅರಸು; ದೇವರು, ಸರ್ವತ್ರವ್ಯಾಪ್ತ
**ವಿಭೂತಿ** ಮಹಿಮೆ, ಮಹಾತ್ಮೆ, ಮಹತಿ, ಪ್ರಭಾವ, ವಿಜ್ರಂಭಣೆ, ಯಶಸ್ಸು, ಕೀರ್ತಿ
**ವಿಭೂತಿಕ್ಷೇತ್ರ** ಭಗವಂತನ ವಿಶೇಷ ಸನ್ನಿಧಾನವುಳ್ಳ ಕ್ಷೇತ್ರ
**ವಿಭೂತಿದ** ಮಹಾಪುರುಷ
**ವಿಭೂತಿಪ್ರದ** ದೇವತೆಗಳಿಗೂ ಜೀವರಿಗೂ ಸ್ವರೂಪಯೋಗ್ಯವಾದ ಮಹಿಮೆಯನ್ನು ಕೊಡುವವನು
**ವಿಭೇದ** ಒಡೆಯುವಿಕೆ, ಭಾಗಮಾಡುವಿಕೆ; ಭೇದವನ್ನು ಎಣಿಸುವಿಕೆ, ವ್ಯತ್ಯಾಸ, ವಿಶಿಷ್ಟ ಭೇದ; ರೀತಿ, ಬಗೆ
**ವಿಭ್ರಾಜ** ಹೊಳೆಯುವ
**ವಿಮತ** ಬೇರೆಯ ಮತ, ವಿರೋಧ ಅಭಿಪ್ರಾಯದ
**ವಿಮನ್ಯು** ಶೋಕದಿಂದ ದೂರಾದವನು
**ವಿಮಲ** ಕಲ್ಮಶವಿಲ್ಲದ, ಸ್ವಚ್ಛ, ಪರಿಶುದ್ಧ, ಪವಿತ್ರವಾದ
**ವಿಮಲತಾದಿ** ಸುಂದರವಾದ
**ವಿಮಲತೀರ್ಥ** ಪವಿತ್ರ ತೀರ್ಥ
**ವಿಮಲಾ** ಲಕ್ಷ್ಮಿ
**ವಿಮಲಾತುಮ<ವಿಮಲಾತ್ಮ** ಶುದ್ಧಮನಸ್ಸು
**ವಿಮಲೇಶ** ಲಕ್ಷ್ಮಿಯ ಒಡೆಯ ಶ್ರೀಹರಿ
**ವಿಮಾನ** ದೇವಾಲಯದ ಗೋಪುರ, ಆಕಾಶ ಯಾನಮಾಡುವ ಒಂದು ವಾಹನ
**ವಿಯದ್ಭೂಮಿಪತಿಜಾಮಾತ** ಆಕಾಶನಾಮಕ ಭೂಪತಿಗೆ ಅಳಿಯನಾದವನು–ವೇಂಕಟೇಶ
**ವಿಯನ್ಮಂಡಲ** ಆಕಾಶಮಂಡಲ
**ವಿಯೋಗ** ಅಗಲುವಿಕೆ, ವಿರಹ
**ವಿಯೋಗಕಧಿಪತಿ** ಅಗಲಿಕೆಗೆ ಒಡೆಯ, ಕಾಮ
**ವಿಯೋನಿ** ಜಡ ಪದಾರ್ಥ
**ವಿರಂಚ, ವಿರಂಚಿ, ವಿರಿಂಚ** ಬ್ರಹ್ಮ
**ವಿರಕುತಿ<ವಿರಕ್ತಿ** ವೈರಾಗ್ಯ, ಆಸಕ್ತಿಯಿಲ್ಲದಿರುವಿಕೆ
**ವಿರಕ್ತ** ತ್ಯಜಿಸಿರುವವ
**ವಿರಜ** ಕಾಮಕ್ರೋಧಗಳ ವಿಕಾರವಿಲ್ಲದ, ಸದಾಕಾಲದಲ್ಲಿ ದೋಷಗಳಿಂದ ದೂರಾಗಿರುವವನು, ನಿರ್ವಿಕಾರವಾದ; ವೈಕುಂಠದ ನದಿ (ರಮಾತ್ಮಕ)
**ವಿರಜಾನದಿ** ವೈಕುಂಠಮಾರ್ಗದಲ್ಲಿರುವ ನದಿ; ಮೋಕ್ಷಕ್ಕೆ ಹೋಗುವವನು ವಿರಜಾ ನದಿಯಲ್ಲಿ ಸ್ನಾನ ಮಾಡಿ ಲಿಂಗ ಶರೀರದಿಂದ ಕಳಚಿಕೊಳ್ಳುತ್ತಾನೆ
**ವಿರಜೆ** ಪರಿಶುದ್ಧತೆ, ದೋಷರಹಿತತೆ; ವಿರಜಾನದಿ (ರಮಾತ್ಮಕ); ಗಂಗಾನದಿ
**ವಿರತಿ** ವಿಶೇಷವಾದ ಸಂತೋಷ; ವೈರಾಗ್ಯ, ನಿಲುಗಡೆ
**ವಿರಸ** ವಿರೋಧ, ಸತ್ವವಿಲ್ಲದ
**ವಿರಹಕಾತುರ** ವಿರಹವ್ಯಥೆ; ಉದ್ವಿಗ್ನತೆ
**ವಿರಹದುರಿ** ವಿರಹದ ತಾಪ
**ವಿರಾಜಿ** ಹೊಳಪುಳ್ಳದ್ದು, ಪ್ರಕಾಶದಿಂದ ಕೂಡಿದುದು
**ವಿರಾಟ** ಮತ್ಸ್ಯದೇಶದ ಅರಸ
**ವಿರಾಟಮೂರ್ತಿ** ಸರ್ವಾಂತರ್ಯಾಮಿ, ಪರಮಾತ್ಮ –ವಿಷ್ಣು
**ವಿರಿಂಚಿವಾಹನ** ಬ್ರಹ್ಮನ ವಾಹನ–ಹಂಸಪಕ್ಷಿ
**ವಿರೂಪ** ಅಸಹ್ಯವಾದ ರೂಪ

Rarest Archive

**ವಿರೂಪಾಕ್ಷ** ವಿಷಮಾಕ್ಷ; ಮೂರು ಕಣ್ಣುಳ್ಳವನು–ಶಿವ
**ವಿರೋಚನ** ಒಬ್ಬ ದೈತ್ಯ
**ವಿಲಯ** ನಾಶ, ಹಾಳು; ಪ್ರಳಯ
**ವಿಲಸಿತ** ಅರಳಿದ, ಶುದ್ಧ, ಪ್ರಫುಲ್ಲಿತ
**ವಿಲಾಸ** ಕ್ರೀಡೆ; ಚೆಲುವು
**ವಿಲಿಂಗರು** ಶ್ವೇತ ದ್ವೀಪ ವಾಸಿಗಳಾದವರು, ರೂಪಾಂತರಗಳಿಂದ ಮುಕ್ತರು
**ವಿಲುಂಠನ** ಅಪಹರಣ
**ವಿವರ** ವಿಸ್ತಾರ, ಹರಹು; ಶೂನ್ಯಪ್ರದೇಶ; ತೂತು, ಕಂಡಿ
**ವಿವರ್ಜಿಸು** ದೂರಮಾಡು
**ವಿವಸ್ವಂತ, ವಿವಸ್ವಾನ್** ಸೂರ್ಯ
**ವಿವಿಕ್ತ** ಶುದ್ಧ; ಜೀವ ಜಡಾತ್ಮಕ ಪ್ರಪಂಚಕ್ಕಿಂತ ಪ್ರತ್ಯೇಕವಾಗಿ ಇರುವವನು–ಶ್ರೀಹರಿ
**ವಿವೃತಿ** ವಿಶೇಷ ವ್ಯಾಖ್ಯಾನ
**ವಿವೇಕಬಂಡ** ವಿವೇಕವೆಂಬ ಪದಾರ್ಥ, ಸಾಮಗ್ರಿ
**ವಿಶಾಪ** ಶಾಪವಿಮೋಚನೆ
**ವಿಶಿಖ** ಶರ, ಬಾಣ; ತುದಿಯಿಲ್ಲದ
**ವಿಶಿಖಶಯನ** ಬಾಣಗಳಮೇಲೆ ಮಲಗಿದವನು–ಭೀಷ್ಮ
**ವಿಶುದ್ಧ** ಪವಿತ್ರ, ದೋಷವಿಲ್ಲದ
**ವಿಶುದ್ಧಾತ್ಮ** ನಿರ್ದೋಷ, ನಿಷ್ಕಳಂಕನಾದ ಶ್ರೀಹರಿ
**ವಿಶೃಂಖಲ** ಅನಿರ್ಬಂಧಿತವಾದ, ಅಡೆತಡೆಯಿಲ್ಲದ
**ವಿಶೋಕ** ಶೋಕರಹಿತ
**ವಿಶ್ರಂಭ, ವಿಸ್ರಂಭ** ವಿಶ್ವಾಸ, ನಂಬಿಕೆ
**ವಿಶ್ರುತ** ಪ್ರಖ್ಯಾತಿಹೊಂದಿದ, ಪ್ರಸಿದ್ಧವಾದ
**ವಿಶ್ವ** ಜಗತ್ತು, ಜಗತ್‌ವ್ಯಾಪಕನಾದ ವಿಷ್ಣು; ಜೀವರ ಬಲಗಣ್ಣಿನಲ್ಲಿದ್ದು ಜಾಗ್ರದವಸ್ಥೆಗೆ ಕಾರಣನಾಗುವ ಶ್ರೀಹರಿ
**ವಿಶ್ವಂಭರ** ಜಗತ್ತನ್ನು ಕಾಪಾಡುವವನು, ಜಗತ್ತನ್ನು ದೇಹದಲ್ಲಿ ಧರಿಸಿರುವವನು, 19 ಮುಖಉಳ್ಳವ –ಎಡಭಾಗದಲ್ಲಿ 9 ಸ್ತ್ರೀ ಮುಖ, ಬಲ ಬಾಗದಲ್ಲಿ 9 ಪುರುಷ ಮುಖ ಮತ್ತು ಮಧ್ಯದಲ್ಲಿ ಗಜ ಮುಖ ಉಳ್ಳ, ಜೀವರ ಬಲಗಣ್ಣಲ್ಲಿರುವ ಭಗವದ್ರೂಪ
**ವಿಶ್ವಂಭರಣ** ವಿಶ್ವವ್ಯಾಪಿ
**ವಿಶ್ವಂಭರೆ** ಭೂದೇವಿ, ಲಕ್ಷ್ಮಿ
**ವಿಶ್ವಕುಟುಂಬಿ** ವಿಷ್ಣು
**ವಿಶ್ವಜಾಗರ** ವಿಶ್ವದಲ್ಲಿರುವ ಜೀವಗಳನ್ನು ಪ್ರೇರಿಸುವವನು; ಎಚ್ಚರಿಸುವವನು
**ವಿಶ್ವಮಯಸದನ** ವಿಶ್ವವೆಲ್ಲ ಮನೆಯಾಗಿ ಉಳ್ಳವನು ಸರ್ವವ್ಯಾಪಿ–ವಿಷ್ಣು
**ವಿಶ್ವಮೋಹನ್ನ** ವಿಶ್ವವನ್ನು ಪರವಶಗೊಳಿಸುವವನು, ಜಗತ್ತನ್ನೇ ಬೆರಗುಗೊಳಿಸಬಲ್ಲವನು
**ವಿಶ್ವಾತ್ಮಕ** ವಿಶ್ವವೆಂಬ ಹೆಸರುಳ್ಳವನು–ವಿಷ್ಣು
**ವಿಶ್ವಾದಿರೂಪ** ವಿಷ್ಣು
**ವಿಶ್ವಾವಸು** ಒಬ್ಬ ಗಂಧರ್ವ
**ವಿಷ** ನಂಜು, ಗರಳ; ನೀರು; ದೋಷ; ಕ್ರೂರ
**ವಿಷತನುಜೆ** ಸಮುದ್ರದಲ್ಲಿ ಹುಟ್ಟಿದವಳು–ಲಕ್ಷ್ಮಿ
**ವಿಷಧರ** ಸರ್ಪ, ನಂಜುಂಡ
**ವಿಷಧಿ** ಸಮುದ್ರ, ಜಲಧಿ
**ವಿಷಭುಂಜ** ವಿಷ ಭುಂಜಿಸಿದವನು–ಶಿವ
**ವಿಷಮ** ಸಮವಲ್ಲದ್ದು, ಡೊಂಕು
**ವಿಷಮಗತಿ** ಕಷ್ಟಪರಿಸ್ಥಿತಿ, ದುರ್ಗತಿ
**ವಿಷಮದೂತ** ಯಮದೂತ
**ವಿಷಯ** ಇಂದ್ರಿಯಗೋಚರವಾಗುವ ಶಬ್ದ, ಜ್ಞಾನೇಂದ್ರಿಯಗಳು; ಭೋಗಾಭಿಲಾಷೆ, ಕಾಮ
**ವಿಷಯಕೆರಗು** ಇಂದ್ರಿಯ ಚಾಪಲ್ಯದತ್ತ ತೆರಳು
**ವಿಷಯಕೇಳಿ** ರತಿಕ್ರೀಡೆ
**ವಿಷಯನಿಗ್ರಹ** ಇಂದ್ರಿಯ ಲೋಲುಪತೆಯನ್ನು ತಡೆಯುವಿಕೆ
**ವಿಷಯಪಂಚಕಗಳು** ರೂಪ, ರಸ, ಗಂಧ, ಸ್ಪರ್ಶ, ಶಬ್ದ

Rarest Archiver

**ವಿಷಯಲಂಪಟ** ದೈಹಿಕ ಸುಖಕ್ಕೆ ಮನಸೋತವನು, ಕಾಮುಕ

**ವಿಷಯವಾಸನೆ** ಇಂದ್ರಿಯಗಳ ಸುಖದ ಸೆಳೆತ

**ವಿಷಯಸುಖ** ಇಂದ್ರಿಯ ಸುಖ

**ವಿಷಯಾಂಧ** ಕಾಮದಿಂದ ಕುರುಡಾದವನು

**ವಿಷಯಿ** ವಿಷಯಾಸಕ್ತನಾದವನ ಲಕ್ಷಣಗಳು

**ವಿಷಯೆ** ದುಷ್ಟಬುದ್ಧಿಯ ಮಗಳು

**ವಿಷವ** ದುರ್ಜನ

**ವಿಷಾಣ** ಕೋಡು, ಕೊಂಬು, ಹಂದಿಯ ಕೋರೆ

**ವಿಷಾದಮರೆ** ದುಃಖವನ್ನು ಮರೆ

**ವಿಷ್ಕಂಭ** ಪ್ರತಿಬಂಧ, ಅಡ್ಡಿ, ವಿಘ್ನ; ಲಾಳವಿಂಡಿಗೆ, ಅಗುಳಿ

**ವಿಷ್ಟರಶ್ರವ** ಸರ್ವವ್ಯಾಪಿ ಶ್ರೀಹರಿ

**ವಿಷ್ಟಿಸು** ಹೊಲಸು ಮಾಡು

**ವಿಷ್ಟೆ** ಅಮೇಧ್ಯ, ಮಲ

**ವಿಷ್ಣುಪಂಚಕ** ಒಂದು ವೈಷ್ಣವ ವ್ರತ

**ವಿಷ್ಣುಪದ, ವಿಷ್ಣುಪಾದ** ಆಕಾಶ, ವೈಕುಂಠ, ಮೋಕ್ಷ, ಸಾಯುಜ್ಯ

**ವಿಷ್ಣುಮಾಯೆ** ದುರ್ಗೆ

**ವಿಷ್ಣುರಹಸ್ಯ** ಶೌನಕ ಸೂತರ ಸಂವಾದಾತ್ಮಕ ಪುರಾಣ

**ವಿಷ್ಣುರಾತ<ವಿಷ್ಣುರತ** ವಿಷ್ಣುಭಕ್ತ

**ವಿಷ್ಣುವಲ್ಲಭ** ವಿಷ್ಣುವಿಗೆ ಪ್ರಿಯನಾದ ಶಿವ, ಪ್ರಾಣ

**ವಿಷ್ಣುವಿಜ್ಞಾನಿ** ವಿಷ್ಣುವನ್ನು ಎಲ್ಲಾ ಜೀವರಿಗಿಂತ ಹೆಚ್ಚಾಗಿ ತಿಳಿದವನು–ಮುಖ್ಯಪ್ರಾಣ

**ವಿಸರ** ಸಮೂಹ, ಹಬ್ಬು

**ವಿಸರ್ಗ** ಬಿಡುವಿಕೆ, ತ್ಯಜಿಸುವಿಕೆ; ನಾಶ; ಎರಡು ಸೊನ್ನೆಗಳಿಂದ ಸಹಿತವಾದ ವರ್ಣೋಚ್ಚಾರ

**ವಿಸರ್ಜನ(ನೆ)** ಬಿಡುವದು

**ವಿಸ್ತರವಾಗು** ವಿಸ್ತಾರ, ವ್ಯಾಪ್ತಿ; ವಿವರಣೆ, ವ್ಯಾಖ್ಯಾನ; ಬೆಳೆ, ವೃದ್ಧಿಹೊಂದು; ನಿಧಾನವಾಗು

**ವಿಸ್ತರಿಸು** ವಿವರವಾಗಿ ಹೇಳು

**ವಿಸ್ಫುರಿತ** ವಿಶೇಷವಾಗಿ ಹೊಳೆಯುವ

**ವಿಸ್ಮರಣೆ** ಮರೆವು

**ವಿಸ್ಮಿತ** ಆಶ್ಚರ್ಯ

**ವಿಸ್ಮೃತಿ** ವಿಸ್ಮರಣೆ, ಮರೆವು, ಮರವೆ

**ವಿಹ(ಂ)ಗಮ** ಮೋಡ; ಪಕ್ಷಿ, ಗರುಡ, ಜಟಾಯು

**ವಿಹಂಗ** ಪಕ್ಷಿ

**ವಿಹಂಗ(ಮ)ಗಮನ** ಗರುಡಗಮನನಾದ ಶ್ರೀಹರಿ

**ವಿಹಂಗತುರಂಗ** ಗರುಡನನ್ನು ಕುದುರೆಯಾಗುಳ್ಳವನು, ಗರುಡವಾಹನ–ಶ್ರೀಹರಿ

**ವಿಹಂಗಪ, ವಿಹಂಗಪತಿ** ಗರುಡ

**ವಿಹಂಗವಾಹನ** ವಿಷ್ಣು

**ವಿಹಗೇಂದ್ರ** ಗರುಡ

**ವಿಹತಿ** ಹೊಡೆತ; ಕೊಲ್ಲುವುದು; ನಿಂದಿಸುವುದು

**ವಿಹಾಯಸ** ಆಕಾಶ; ಗಾಳಿ; ಹಕ್ಕಿ

**ವಿಹಿತ** ಯೋಗ್ಯ, ಇಟ್ಟ, ಹೊಂದಿಸಿದ, ವಿಜಿತವಾದ

**ವಿಹಿತಗಳು** ವಿಹಿತ ಕರ್ಮಗಳು

**ವಿಹಿತವಿಹಿತ** ವಿಧಿ ನಿಷೇಧ ಕರ್ಮ

**ವಿಹ್ವಲ** ಹತಾಶ

**ವೀಂದ್ರ** ಗರುಡ

**ವೀಂದ್ರಗ** ಗರುಡನ ಮೇಲೆ ಸಂಚರಿಸುವವನು–ವಿಷ್ಣು

**ವೀಕ್ಷೆ** ನೋಡುವಿಕೆ, ನೋಟ

**ವೀಚಿ** ಅಲೆ

**ವೀಚು** ಮರೆಯಾಗು, ಅದೃಶ್ಯವಾಗು

**ವೀಜಿಸು** ಬೀಸು

**ವೀತ** ಕಳೆದ, ಬಿಟ್ಟ, ಇಲ್ಲದ

**ವೀತಕರ್ಣ** ಶೇಷ

**ವೀತಕಲುಷ, ವೀತದೋಷ** ನಿರ್ದೋಷ

**ವೀತಭಯ** ನಿರ್ಭಯ, ನಿರ್ಭೀತ, ಭಯವಿಲ್ಲದ; ಸೌಜನ್ಯ ಸಹಿತ ಭಯ

**ವೀತಮೋಹರಾಗ** ಅಪೇಕ್ಷೆಗಳನ್ನು ಬಿಡುವುದು, ವಿರಾಗಿ

Rarest Archiver

**ವೀತಿಹೋತ್ರ** ಅಗ್ನಿ

**ವೀತಿಹೋತ್ರಸಖ** ವಾಯು

**ವೀಥಿ, ವೀಧಿ** ಬೀದಿ, ಮಾರ್ಗ, ರಸ್ತೆ; ಸಾಲು, ಪಂಕ್ತಿ; ಗುಂಪು, ಸಮೂಹ, ಓಳಿ

**ವೀಪ, ವೀರಾಜ, ವೀಶ** ಸೂರ್ಯ, ಗರುಡ

**ವೀರಣ** ಲಾವಂಚ

**ವೀರಮುದ್ರಿಕೆ** ಶೌರ್ಯದ ಚಿಹ್ನೆಯಾದ ಪೆಂಡೆಯ, ತ್ರಿಪುಂಡ್ರ

**ವೀರವ್ರತ** ಏಕಾದಶಿ, ವಿಷ್ಣು ಪಂಚಕಾದಿ ವ್ರತಗಳು

**ವೀರಸ** ದುಃಖಿತ

**ವೀರುಧ** ಬಳ್ಳಿ, ಪೊದೆ

**ವೀರೆ<ವೀರಣ** ಲಾವಂಚ

**ವೀಶಗಮನ** ಗರುಡಗಮನ ವಿಷ್ಣು

**ವೀಶೋಮಾಧವ** ಗರುಡ ಮತ್ತು ಶಿವ

**ವೀಸ** ಸ್ವಲ್ಪ, ಕೊಂಚ; ಒಂದು ಅಳತೆ, ಐದು ಸೇರು; ಒಂದು ನಾಣ್ಯ, ಚಿಕ್ಕನಾಣ್ಯ, ಪಣ(ಹಣ), ಹದಿನಾರನೆಯ ಒಂದು ಭಾಗ; ಗರುಡ

**ವೀಳೆಪ್ರಸ್ತ** ಸಮ್ಮತಿ ನೀಡುವಾಗ ವೀಳೆಯವನ್ನು ಬದಲಾಯಿಸಿಕೊಳ್ಳುವ ಸಮಾರಂಭ, ನಿಶ್ಚಯ ಕಾರಣ

**ವೀಳೆಯಕೊಡು** ತಾಂಬೂಲ ಕೊಡು; ಸಮ್ಮತಿಸು, ಒಪ್ಪಿಗೆ ಕೊಡು, ಮಾತುಕೊಡುವುದು; ಸಾಂಪ್ರದಾಯಿಕವಾಗಿ ಬರಮಾಡಿಕೊಳ್ಳುವುದು, ನೇಮಿಸಿಕೊಳ್ಳುವುದು

**ವೀಳ್ಯವಪಿಡಿ** ಕೆಲಸವನ್ನು ಒಪ್ಪಿಕೊ

**ವೃಂತಾಕ** ಬದನೆಕಾಯಿ

**ವೃಂದ** ಗುಂಪು

**ವೃಂದಾ** ತುಳಸಿ

**ವೃಂದಾರಕ** ದೇವತೆ; ಶ್ರೇಷ್ಠ; ಬ್ರಾಹ್ಮಣ; ಆನೆ; ಸುಂದರ, ಮನೋಹರ

**ವೃಂದಾರಕಪತಿ** ದೇವೇಂದ್ರ

**ವೃಂದಾರಕಪಾಲ** ವಿಷ್ಣು

**ವೃಂದಾರಕಮುನಿ** ದೇವರ್ಷಿ ನಾರದ

**ವೃಂದಾರಕರಿಪುಹರ್ತ** ರಾಕ್ಷಸ ಸಂಹಾರಕ–ಶ್ರೀಹರಿ

**ವೃಂದಾರಕವೃಂದ** ದೇವತೆಗಳ ಸಮೂಹ

**ವೃಂದಾರಕಾಧೀಶ, ವೃಂದಾರಕೇಂದ್ರ** ದೇವತೆಗಳ ಒಡೆಯ–ದೇವೇಂದ್ರ

**ವೃಂದಾವನಪ್ರಿಯ, ವೃಂದಾವನ** ಕೃಷ್ಣ

**ವೃಕ** ತೋಳ

**ವೃಕದನುಜಾರಿ** ವೃಕಾಸುರ(ಭಸ್ಮಾಸುರ)ನನ್ನು ಕೊಂದ ಶ್ರೀಹರಿ

**ವೃಕೋದರ** ತೋಳದ ಹೊಟ್ಟೆಯವನು, ಹೊಟ್ಟೆಬಾಕ, ತಿನಾಳಿ; ಹೆಬ್ಬೆರಳ ತುದಿಯ ಗಾತ್ರದ ಜಠರಾಗ್ನಿ ಉಳ್ಳವನು–ಭೀಮ

**ವೃಕೋದರವಂದ್ಯ** ಭೀಮನಿಂದ ವಂದಿಸಲ್ಪಟ್ಟವನು –ಕೃಷ್ಣ

**ವೃಜಿನ** ದುಃಖ, ತಾಪ, ಪಾಪ, ರೋಗ; ಗೋಕುಲ

**ವೃಜಿನಪಂಕ** ಪಾಪವೆಂಬ ಕೆಸರು

**ವೃಜಿನವಾರಿಧಿ** ದುಃಖಸಾಗರ, ಪಾಪವೆಂಬ ಸಮುದ್ರ

**ವೃಜಿನಾರ್ದನ** ಪಾಪ ಪರಿಹಾರಕ(ವಾದ ಜನಾರ್ದನರೂಪ)

**ವೃತಿ** ಆವರಣ, ಬೇಲಿ

**ವೃತ್ತಪಯೋಧರಿ** ದುಂಡು ಮೊಲೆಯವಳು

**ವೃತ್ತಾಂತ** ಘಟನೆ; ಸಮಾಚಾರ, ಸುದ್ದಿ

**ವೃತ್ತಿ** ತಿರುಗುವಿಕೆ; ಸ್ಥಿತಿ, ನಡತೆ, ಸ್ವಭಾವ; ವ್ಯಾಪಾರ, ಉದ್ಯೋಗ

**ವೃತ್ರವೈರಿ, ವೃತ್ರಾರಿ** ವೃತ್ರನೆಂಬ ಅಸುರನ ವೈರಿ–ಇಂದ್ರ

**ವೃತ್ರಾಹನನುಜ** ಇಂದ್ರನ ಅನುಜನಾಗಿದ್ದನೆಂಬ ಉಪೇಂದ್ರ, ತ್ರಿವಿಕ್ರಮ

**ವೃಥಾ, ವೃಥಾಯ** ನಿಷ್ಕಾರಣವಾಗಿ, ಸುಮ್ಮನೆ, ವ್ಯರ್ಥವಾಗಿ, ಪ್ರಯೋಜನವಿಲ್ಲದೆ

Rarest Archive

**ವೃದ್ಧಿ** ಏಳಿಗೆ, ಬೆಳವಣಿಗೆ, ಹೆಚ್ಚಳ; ಬಡ್ಡಿ, ಲಾಭ, ಐಶ್ವರ್ಯ; ಪುರುಡು
**ವೃದ್ಧ್ಯಬ್ಜ** ಸದಾ ವರ್ಧಿಸುವ ಕಮಲ
**ವೃಶ್ಚಿಕ** ಚೇಳು; ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು
**ವೃಷ** ಗೂಳಿ, ಎತ್ತು
**ವೃಷಕೇತು** ಎತ್ತಿನ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು–ಶಿವ
**ವೃಷಕೇತುಪಿತ** ಬ್ರಹ್ಮ
**ವೃಷಣ** ಅಂಡಕೋಶ, ತರುಡು
**ವೃಷಪ** ಒಬ್ಬ ವಾನರ
**ವೃಷಭ** ಬಸವ, ಎತ್ತು, ಶಿವನ ವಾಹನ, ನಂದಿ; ಜ್ಯೋತಿಶ್ಚಕ್ರದ ಹನ್ನೆರಡು ರಾಶಿಗಳಲ್ಲಿ ಒಂದು
**ವೃಷಭಾಚಲವಿಹಾರಿ** ವೇಂಕಟೇಶ
**ವೃಷಭಾದ್ರಿ** ವೃಷಭಾಚಲ, ತಿರುಪತಿ
**ವೃಷಭಾದ್ರಿಪ** ಶ್ರೀನಿವಾಸ, ವೇಂಕಟೇಶ
**ವೃಷರಾಜವರೂಥ** ನಂದಿಯನ್ನು ವಾಹನವಾಗಿ ಉಳ್ಳವನು–ಶಿವ
**ವೃಷಾಚಲ** ತಿರುಪತಿ, ವೃಷಭಾಚಲ
**ವೃಷೋತ್ಸರ್ಜನ** ಗೂಳಿ ಬಿಡುವುದು
**ವೃಷ್ಟಿ** ಯಾದವವಂಶ; ಮಳೆ
**ವೃಷ್ಟಿಕುಲೋದ್ಭವ** ಯಾದವರ ವಂಶದಲ್ಲಿ ಹುಟ್ಟಿದವನು–ಕೃಷ್ಣ
**ವೃಷ್ಟಿದ** ಮಳೆ ಕೊಡುವವನು–ಇಂದ್ರ
**ವೃಷ್ಣಿ** ಯದುವಂಶದ ಮೂಲ ಪುರುಷ, ಯಾದವರು; ಮೇಘ; ವೇದಾಧ್ಯಯನ ಮಾಡುವ ವಿದ್ಯಾರ್ಥಿಯ ಆಸನ; ದರ್ಭಾಸನ
**ವೃಷ್ಣಿಜೆ** ಯಾದವ ಕುಲದಲ್ಲಿ ಹುಟ್ಟಿದವಳು
**ವೃಷ್ಣಿನಾಯಕ** ಕೃಷ್ಣ
**ವೃಷ್ಣಿವರ್ಣ** ಮೇಘವರ್ಣನಾದ ಶ್ರೀಹರಿ
**ವೃಷ್ಣಿವರ್ಯ** ಯಾದವ ಶ್ರೇಷ್ಠ ಕೃಷ್ಣ
**ವೃಷ್ಣಿಸಖ** ಕೃಷ್ಣ
**ವೃಷ್ಣಿಸಖಪ್ರಿಯ** ಕೃಷ್ಣನಿಗೆ ಪ್ರಿಯನಾದವನು
**ವೃಷ್ಣೀಶ** ಯಾದವರೊಡೆಯನಾದ ಕೃಷ್ಣ
**ವೆಂಕಟನಗ, ವೆಂಕಟಶೈಲ** ವೆಂಕಟಗಿರಿ, ತಿರುಪತಿ ಬೆಟ್ಟ
**ವೆಂಕಟಶೈಲವಲ್ಲಭಾ, ವೆಂಗಳಪ್ಪ** ವೆಂಕಟಾಚಲಪತಿ, ವೇಂಕಟೇಶ
**ವೆಕ್ಕಸ** ಒರಟ, ದೊರಗು, ಬಿರುಸು; ಕ್ರೌರ್ಯ, ನಿರ್ದಯತೆ, ಕಠೋರವಾದ, ಕ್ರೂರವಾದ; ಬೆಕ್ಕಸ, ಆಶ್ಚರ್ಯ; ಅಧಿಕವಾದ, ಬಹಳ
**ವೆಗ್ಗಳ** ಹೆಚ್ಚು, ಆಧಿಕ್ಯ; ಶ್ರೇಷ್ಠ, ಶ್ರೇಷ್ಠವ್ಯಕ್ತಿ; ಗಣ್ಯ
**ವೆಗ್ಗಳಿಸು** ಹೆಚ್ಚಾಗು, ಅಧಿಕವಾಗು
**ವೆಜ್ಜ** ತೂತು, ರಂಧ್ರ, ಕಂಡಿ
**ವೆಡ್ಡಯ್ಸು<ವೆಡ್ಡೈಸು** ಮುತ್ತು, ಸುತ್ತುವರಿ
**ವೆತ್ತಣಿಸು** ವ್ಯತ್ಯಾಸಮಾಡು
**ವೇಂಕಟಧರಾಧರ** ವೇಂಕಟಪರ್ವತ, ತಿರುಪತಿ
**ವೇಣಿ** ಹೆರಳು, ಜಡೆ; ನದಿ; ಪ್ರವಾಹ
**ವೇಣುಶೂರ್ಪ** ಬಿದಿರಿನ ಮೊರ, ಬಿದಿರಿನ ಬುಟ್ಟಿ; ಕೊಳಲಿನತುದಿ
**ವೇತಂಡ** ಆನೆ, ಗಜ
**ವೇತ್ತೃ** ಬಲ್ಲವ, ತಿಳಿದವ, ಜ್ಞಾನಿ
**ವೇತ್ರ** ಬೆತ್ತ, ಕೋಲು
**ವೇತ್ರಧರ** ದ್ವಾರಪಾಲಕ; ಕಟ್ಟಿಗೆಕಾರ
**ವೇದ** ತಿಳಿವಳಿಕೆ, ಜ್ಞಾನ; ನಾಲ್ಕು ಆಗಮಗಳಲ್ಲಿ ಒಂದು, ಷಡ್ದರ್ಶನಗಳಲ್ಲಿ ಒಂದು; ಬ್ರಹ್ಮ, ಸೂರ್ಯ
**ವೇದಗರ್ಭ** ಬ್ರಹ್ಮ
**ವೇದಗೋಚರ** ದೇವರು, ವೇದವಿದಿತ; ವೇದಗಳನ್ನು ತೋರಿಸಿಕೊಟ್ಟವನು ಮತ್ಸ್ಯಾವತಾರ, ವೇದಗಳನ್ನು ಕಂಡು ಹಿಡಿದವನು ಮಚ್ಛ
**ವೇದಪೀಠ** ವೇದವ್ಯಾಸ, ಭಗವಂತ
**ವೇದಪೂಜಿತರಾಮ** ಬ್ರಹ್ಮದೇವರಿಂದ ಪೂಜಿತನಾದ ಮೂಲರಾಮ

Rarest Archiver

**ವೇದಮುಖ** ಬ್ರಹ್ಮ

**ವೇದವತಿ** ಅಗ್ನಿ ಪುತ್ರಿ, ಪದ್ಮಾವತಿಯಾಗಿ ಶ್ರೀನಿವಾಸನನ್ನು ವರಿಸಿದವಳು

**ವೇದವಾದ** ನಾಲ್ಕು ವೇದಗಳು, ಋಗ್ವೇದ, ಯಜುರ್, ಸಾಮ, ಅಥರ್ವಣ ವೇದಗಳು

**ವೇದವಿಂಶತಿ** 4+20=24 ಚತುರ್ವಿಂಶತಿ

**ವೇದವಿತ್(ದ್)** ವೇದಗಳನ್ನು ಬಲ್ಲವನು

**ವೇದವಿಧಾಯಕ** ವೇದಗಳನ್ನು ರಚಿಸಿದವನು

**ವೇದವೇದ್ಯ** ವೇದಗಳಿಂದ ತಿಳಿಯಲ್ಪಡುವವನು

**ವೇದವ್ಯಾಸಶಿಷ್ಯ** ಮಧ್ವಾಚಾರ್ಯರು, ಸುಮಂತು, ಜೈಮಿನಿ, ಬಾದರಿ, ವೈಶಂಪಾಯನರು

**ವೇದಸ್ತೇಯ** ವೇದವನ್ನು ಕದ್ದವನು, ತಮನೆಂಬ ರಾಕ್ಷಸ

**ವೇದಸ್ತೇಯಾರಿ** ವೇದಗಳನ್ನು ಅಪಹರಿಸಿದ ತಮನೆಂಬ ರಾಕ್ಷಸನನ್ನು ಕೊಂದ ಶ್ರೀಹರಿಯ ಮತ್ಸ್ಯರೂಪ

**ವೇದಾಂಗಗಳು** ಷಟ್‌ಶಾಸ್ತ್ರಗಳು

**ವೇದಾಂತ** ಉಪನಿಷತ್ತುಗಳು

**ವೇದಾಂತನುತ** ಉಪನಿಷತ್ತಿನಿಂದ ಸ್ತುತಿತ (ಭಗವಂತ)–ಶ್ರೀಹರಿ

**ವೇದಾಂತವೇದ್ಯ** ಉಪನಿಷದಾದಿಗಳಿಂದ ತಿಳಿಯ ತಕ್ಕವ, ವೇದಾಂಗಗಳಿಗೆ ಮಾತ್ರ ತಿಳಿದವನು–ಶ್ರೀಹರಿ

**ವೇದಾತ್ಮಿಕಾ** ಅಂಭೃಣೀದೇವಿ, ಅನಂತ ಸಕಲ ವೇದಾಭಿಮಾನಿ–ಲಕ್ಷ್ಮಿ

**ವೇದಾಭಿಮಾನಿ** ಲಕ್ಷ್ಮಿ

**ವೇದಾವಳಿ** ವೇದಗಳ ಸಮೂಹ

**ವೇದೋಕ್ತ** ವೇದದಲ್ಲಿ ಹೇಳಿದಂತೆ

**ವೇದೋದ್ಭವೆ** ಯಜ್ಞವೇದಿಯಿಂದ ಉದಿಸಿದ ದ್ರೌಪದಿ

**ವೇದ್ಯ** ಜ್ಞಾನಿ, ಪಂಡಿತ; ತಿಳಿಯಲು ಸಾಧ್ಯವಾದುದು

**ವೇಧ, ವೇಧಾ** ಸೃಷ್ಟಿಕರ್ತ ಬ್ರಹ್ಮ; ತೂತು, ರಂಧ್ರ, ಕೊರೆಯುವಿಕೆ, ಸೂರ್ಯ–ಚಂದ್ರ ಮುಂತಾದ ಗ್ರಹಗಳ ಸ್ಥಾನವನ್ನು ಗುರುತಿಸುವಿಕೆ

**ವೇಧೆ** ಕಷ್ಟ, ಬಾಧೆ, ನೋವು, ವೇದನೆ

**ವೇನ** ಅಂಗರಾಜನ ಮಗ(ಈತ ನಾಸ್ತಿಕ); ರೂಪ ತತ್ವಾಭಿಮಾನಿ ದೈತ್ಯ

**ವೇಲಾಪುರ** ಬೇಲೂರು

**ವೇಶಿ** ಸೂಳೆ

**ವೇಷ್ಟಿ** ಧೋತ್ರ, ಪಂಚೆ

**ವೇಷ್ಟಿತ** ಸುತ್ತಲ್ಪಟ್ಟ, ಸುತ್ತುವರಿದ

**ವೇಸಿ** ವೇಶ್ಯೆ, ಗಣಿಕೆ

**ವೈಕಲ್ಯಾಸ್ಪದ** ದೋಷಕ್ಕೆ ಆಸ್ಪದನಾದವನು

**ವೈಕಲ್ಯ** ಕಳವಳ; ಕುಂದು, ವಿಕಲತೆ

**ವೈಕಾರಿಕ** ವಿಕಾರ

**ವೈಕೃತಗಾತ್ರ** ವಿಕೃತವಾದ ಶರೀರ ಉಳ್ಳವನು, ಸ್ಥೂಲದೇಹಿ, ಗಣಪತಿ

**ವೈಖಾನಸವಂದ್ಯ** ಬ್ರಹ್ಮಾದಿದೇವತೆಗಳಿಂದ ವಂದ್ಯ–ಶ್ರೀಹರಿ

**ವೈಜಯಂತಿ** ವಿಷ್ಣುವಿನ ಕೊರಳಲ್ಲಿ ಶೋಭಿಸುವ ಹಾರ; ಕತ್ತಿನಿಂದ ನಾಭಿಯವರೆಗಿನ ಅಲೌಕಿಕ ಬಣ್ಣ ಹಾಗೂ ಸುವಾಸನೆ ಉಳ್ಳ ಎಂದೂ ಬಾಡದ ಹೂವಿನ ಹಾರ, ಮಣಿ

**ವೈಢಾಳ** ವಿಶೇಷ ಕಾಂತಿಯಿಂದ ಕೂಡಿದ ಆಭರಣ, ಮಣಿಮಾಲೆ

**ವೈತರಣಿ** ಮೂತ್ರ, ಅಮೇಧ್ಯ, ರಕ್ತ, ಕೀವು ಮುಂತಾದ ಅಸಹ್ಯ ಪದಾರ್ಥಗಳನ್ನು ಒಳಗೊಂಡಿರುವ ಯಮಲೋಕಕ್ಕೆ ಹೋಗುವ ದಾರಿಯಲ್ಲಿಯ ಒಂದು ನದಿ

**ವೈದರ್ಭಿ, ವೈದರ್ಭೆ** ವಿದರ್ಭ ದೇಶದ ವೈದರ್ಭ ರಾಜನ ಮಗಳು, ರುಕ್ಮಿಣಿ, ದಮಯಂತಿ

**ವೈದರ್ಭಿರಮಣ** ರುಕ್ಮಿಣೀರಮಣ–ಕೃಷ್ಣ

**ವೈದ್ಯುತಾಗ್ನಿ** ಮಿಂಚು, ಸಿಡಿಲು

Rarest Archiver

**ವೈದ್ಯುತಿ** ಅಸುಷುಮ್ನಾ ನಾಡಿಯ ದಕ್ಷಿಣಕ್ಕೆ ಇರುವ ಶಾಖಾನಾಡಿ

**ವೈಧಾತ್ರ, ವೈಧಾತ್ರ** ಬ್ರಹ್ಮ

**ವೈಧೃತಿ** ಸೂರ್ಯ ಚಂದ್ರರ ಒಂದು ಬಗೆಯ ಯೋಗ

**ವೈನತೇಯ** ಗರುಡ

**ವೈನತೇಯಕಾದ್ಯ** ಗರುಡಾದಿಗಳು

**ವೈಯಾರ, ವಯ್ಯಾರ<ಒಯ್ಯಾರ** ಬೆಡಗು, ವಿಲಾಸ

**ವೈಯಾಳಿ** ವೈಹಾಳಿ, ಕುದುರೆಯ ಏರಾಟ/ಸವಾರಿ/ಸಾಲು

**ವೈರಾಜ್ಯ** ಬ್ರಹ್ಮಾಂಡ

**ವೈರಾಟ** ವಿರಾಟರಾಜನ ಮಗಳಾದ ಉತ್ತರೆ; ಹಗೆತನ

**ವೈರಿ** ಶತ್ರು

**ವೈರಿದಲ್ಲಣ** ಶತ್ರುವಿಗೆ ಭಯವನ್ನುಂಟು ಮಾಡುವವನು, ಶ್ರೀಹರಿ

**ವೈರಿಷಡ್ವರ್ಗ** ಅರಿಷಡ್ವರ್ಗ

**ವೈರೋಚನ** ಇಂದ್ರ

**ವೈರೋಚನಿ** ವಿರೋಚನನ ಮಗ, ಬಲಿಚಕ್ರವರ್ತಿ

**ವೈವಸ್ವತ** ಸೂರ್ಯಪುತ್ರ, ಶ್ರಾದ್ಧ ದೇವ; ಮನು, ಮನು ಚಕ್ರವರ್ತಿ; ಉಪಸ್ಥ ತತ್ವಮಾನಿ

**ವೈಶಿಕ** ಮೋಸ, ಕಪಟ, ಠಕ್ಕು, ವಂಚನೆ

**ವೈಶೇಷಿಕ** ಕಣಾದನಿಂದ ಪ್ರತಿಪಾದಿಸಲ್ಪಟ್ಟ ತತ್ತ್ವ, ಷಡ್ದರ್ಶನಗಳಲ್ಲಿ ಒಂದು, ಅದನ್ನು ಅನುಸರಿಸುವವನು

**ವೈಶ್ರವಣ** ಕುಬೇರ

**ವೈಶ್ವಾನರ** ಅಗ್ನಿ, ಬೆಂಕಿ

**ವೈಷಮ್ಯ** ವಿಷಮತೆ; ಪಕ್ಷಪಾತ, ಅಸಮತೋಲನ

**ವೈಷಿಕ** ವಿಷಯಕ್ಕೆ ಸಂಬಂಧಿಸಿದ

**ವೈಷ್ಣವ** ವಿಷ್ಣುಭಕ್ತ, ಸರ್ವತ್ರ ವಿಷ್ಣು ಚಿಂತಕ

**ವೈಷ್ಣವಾಗ್ರಗಣ್ಯ** ಮಧ್ವಾಚಾರ್ಯರು

**ವೈಹಾಳಿ** ಕುದುರೆಯ ಏರಾಟ/ ಪಂದ್ಯ/ಸವಾರಿ/ ಸಾಲು

**ವ್ಯಂಜನ** ಬೇಯಿಸದೇ ತಿನ್ನುವ ಕೋಸಂಬರಿ ಮುಂತಾದ್ದು; ನಂಜಿಕೊಳ್ಳುವ ಪದಾರ್ಥ

**ವ್ಯಕುತ<ವ್ಯಕ್ತ** ಪ್ರಕಟ, ಮೈದೋರಿದ

**ವ್ಯಕ್ತಾವ್ಯಕ್ತ** ಕಂಡೂ ಕಾಣದ

**ವ್ಯಕ್ತಿಗೈಸು** ಕಾಣಿಸು, ಪ್ರಕಟಿಸು; ಪ್ರಕಾಶಿಸು

**ವ್ಯಗ್ರ** ಭಯ

**ವ್ಯಜನ** ಬೀಸಣಿಗೆ

**ವ್ಯತಿಕರ** ಸೇರುವೆ, ಜೋಡಣೆ

**ವ್ಯತೀಪಾತ** ಜ್ಯೋತಿಶ್ಶಾಸ್ತ್ರದ 18 ಯೋಗಗಳಲ್ಲೊಂದು

**ವ್ಯಭಿಚಾರ** ಹಾದರ, ಸೂಳೆಗಾರಿಕೆ

**ವ್ಯಭಿಚಾರಭಕ್ತಿ** ಅನಿಶ್ಚಿತ ಭಕ್ತಿ

**ವ್ಯಯ** ವೆಚ್ಚ, ಖರ್ಚು; ನಷ್ಟ, ಪೋಲು; ಅರವತ್ತು ಸಂವತ್ಸರಗಳಲ್ಲಿ ಒಂದು

**ವ್ಯರ್ಥ** ನಿರುಪಯುಕ್ತತೆ, ನಿಷ್ಪ್ರಯೋಜತತೆ

**ವ್ಯವಹಾರಿ** ವ್ಯಾಪಾರಿ

**ವ್ಯವಹಿತ** ಬೇರೆಯಾದ, ಮಧ್ಯದಲ್ಲಿಟ್ಟ, ದೂರವಾದ, ತೆರೆ

**ವ್ಯಷ್ಟಿ** ಪ್ರತ್ಯೇಕ, ಬೇರೆ, ಸಮಷ್ಟಿಯಿಂದ ಬೇರೆಯಾಗಿರುವುದು

**ವ್ಯಸನಿ** ದುಶ್ಚಟಗಳಿಗೆ ಬಲಿಯಾದವನು, ಚಿಂತಾಕ್ರಾಂತ

**ವ್ಯಸ್ತ** ಬೇರ್ಪಡಿಸಿದ; ಹೊರಹೊಮ್ಮಿದ, ಚೆಲ್ಲಿದ

**ವ್ಯಾಕುಲ** ದುಃಖ, ಚಿಂತೆ; ಲಾಭನಷ್ಟಗಳ ಎಣಿಕೆ

**ವ್ಯಾಘಾತ** ಹೊಡೆತ, ಪೆಟ್ಟು; ವಿರೋಧವಾದ ಹೇಳಿಕೆ

**ವ್ಯಾಘ್ರ** ಹುಲಿ

**ವ್ಯಾಘ್ರವಸನ** ಹುಲಿಯ ಚರ್ಮವನ್ನು ಧರಿಸಿದವನು –ಶಿವ

**ವ್ಯಾಜ** ಕಪಟ, ಮೋಸ; ನೆಪ, ಕಾರಣ

Rarest Archiver

**ವ್ಯಾಧ** ಬೇಟೆಗಾರ; ಉಡುಪಿ ಕೃಷ್ಣನ ಮಂಗಳ ವಾರದ ಕಿರಾತಾಲಂಕಾರ

**ವ್ಯಾಧಿ** ಜಡ್ಡು, ಕಾಯಿಲೆ, ರೋಗ

**ವ್ಯಾನ** ಪಂಚ ಪ್ರಾಣವಾಯುಗಳಲ್ಲಿ ಒಂದು ರೂಪ; ತತ್ವಾಭಿಮಾನಿ ವಾಯು; ಸಂಧಿ ಅವಯವಗಳ ರಕ್ಷಕ

**ವ್ಯಾಪಕ** ಹರಡುವ, ಆವರಿಸುವ; ಎಲ್ಲಕಾಲಕ್ಕೂ ಸತ್ಯವಾಗಿರುವ, ನಿತ್ಯವಾದ

**ವ್ಯಾಪಿಣೀ** ವ್ಯಾಪಿಸಿದವಳು

**ವ್ಯಾಪುತ<ವ್ಯಾಪ್ತ** ವ್ಯಾಪಿಸಿರುವ, ಸರ್ವವ್ಯಾಪ್ತ, ಹರಡಿಕೊಂಡ, ಆವಾಸಿತ

**ವ್ಯಾಮೋದ** ಮೋಹಕ, ಮೋದದಿಂದ ಕೂಡಿರುವ, ಸಂತೋಷದಿಂದ ಕೂಡಿರುವ

**ವ್ಯಾಲ(ಳ)** ಸರ್ಪ, ಹಾವು; ವಂಚಕ; ಸೊಕ್ಕಿದ ಆನೆ

**ವ್ಯಾಲಶಯನ** ವಿಷ್ಣು

**ವ್ಯಾವೃತ್** ಆವರಿಸಿದ; ಹಿಂದಕ್ಕೆ ಬಂದ

**ವ್ಯಾಸಕಾಶಿ** ಕಾಶೀ ಕ್ಷೇತ್ರದ ಆಚೆಯ ದಂಡೆಯಲ್ಲಿರುವ ಕ್ಷೇತ್ರ

**ವ್ಯಾಸಜ** ಶುಕಾಚಾರ್ಯ

**ವ್ಯಾಸಜನನಿ** ಸತ್ಯವತಿ

**ವ್ಯಾಸಸೂತ್ರಗಳು** ಬ್ರಹ್ಮಸೂತ್ರಗಳು

**ವ್ಯಾಸಸೂನು** ಶುಕಮುನಿ

**ವ್ಯಾಸಾಬ್ಧಿ** ವ್ಯಾಸರಾಯರು ಕಟ್ಟಿಸಿದ ಕೆರೆ, ವ್ಯಾಸ ಸಮುದ್ರ

**ವ್ಯಾಳ** ಸರ್ಪ; ಮೋಸಗಾರ; ಮದಿಸಿದ ಆನೆ; ಒಂದು ಬಗೆಯ ಸಸ್ಯ

**ವ್ಯಾಳಗರುತ್ಮ** ಹಾವಿಗೆ ಗರುಡನಾದವನು

**ವ್ಯಾಳದೇವ** ಶೇಷದೇವರು

**ವ್ಯಾಳರಾಕ್ಷ** ಗರುಡ (ವ್ಯಾಳಾರಿ)ನಂತೆ ಸೂಕ್ಷ್ಮವಾದ ಕಣ್ಣುಳ್ಳ

**ವ್ಯಾಳಶಾಯಿ** ಸರ್ಪಶಯನನಾದ ಶ್ರೀಹರಿ

**ವ್ಯಾಳಾಗಾರ** ಹಾವಿನ ಹುತ್ತ, ಹಾವಿನ ವಾಸಸ್ಥಾನ; ಪಶುಗಳ ವಾಸಸ್ಥಾನ

**ವ್ಯಾಳೇಶ** ಆದಿಶೇಷ

**ವ್ಯಾಳ್ಯ<ವೇಳೆ** ಸಮಯ

**ವ್ಯುತ್ಕ್ರಮ** ವಿರುದ್ಧಕ್ರಮ, ಅವ್ಯವಸ್ಥೆ, ಗೊಂದಲ

**ವ್ಯೂಥ** ಸಮೂಹ, ಗುಂಪು

**ವ್ಯೋಮ** ಆಕಾಶ, ಗಗನ, ವಾಯುಮಂಡಲ

**ವ್ಯೋಮಕಚ, ವ್ಯೋಮಕೇಶ** ಶಿವ

**ವ್ಯೋಮಕೇಶನೊಡೆಯ** ನಾರಾಯಣ

**ವ್ಯೋಮಾಂಗಣ** ಗಗನ, ಆಕಾಶ

**ವ್ಯೋಮಾಂತರ** ಆಕಾಶಾಂತರ, ಆಕಾಶದ ಮಧ್ಯಭಾಗ

**ವ್ಯೋಮಾಲ(ಳ)ಕ** ವ್ಯೋಮಕೇಶ–ಶಿವ

**ವ್ರಜ** ಸಮೂಹ, ಗುಂಪು; ದನದ ಕೊಟ್ಟಿಗೆ, ಕರುಹಟ್ಟಿ, ಗೋಕುಲ

**ವ್ರಜಜ** ವ್ರಜದಲ್ಲಿ ಹುಟ್ಟಿದವನು ಕೃಷ್ಣ

**ವ್ರಜತಾಧಿಪ** ಕೃಷ್ಣ

**ವ್ರಣ** ಹುಣ್ಣು

**ವ್ರತ** ಶಾಸ್ತ್ರೋಕ್ತವಾಗಿ ಮಾಡುವ ಪೂಜೆ, ಉಪವಾಸ ಮುಂತಾದ ಆಚರಣೆ, ನೋಂಪಿ

**ವ್ರತತಿ** ಹರವು, ವಿಸ್ತಾರ; ಸಮೂಹ, ಗುಂಪು; ಬಳ್ಳಿ

**ವ್ರತತಿಜ** ಹೂವು, ಕಮಲ

**ವ್ರತತಿಜಜಾಂಡ** ವಿಸ್ತಾರವಾದ ಭೂಮಿ, ಬ್ರಹ್ಮಾಂಡ

**ವ್ರತತಿಜನಾಭ** ಕಮಲನಾಭ–ಶ್ರೀಹರಿ

**ವ್ರಯ, ವ್ಯಯ** ಖರ್ಚು, ವೆಚ್ಚ

**ವ್ರಾತ** ಸಮೂಹ, ಗುಂಪು; ಕೂಲಿಕಾರ

**ವ್ರಾತ್ಯ** ಜಾತಿ ಬಾಹಿರ; ನೀಚ, ಹೀನ

**ವ್ರೀಡೆ** ಲಜ್ಜೆ, ನಾಚಿಕೆ

**ವ್ರೀಹಿ** ಬತ್ತ, ನೆಲ್ಲು

Rarest Archive

## ಶ

**ಶಂಕರ** ಸುಖಕರ, ಮಂಗಳಕರ, ಶಿವ

**ಶಂಕರದಾರೆ** ಶಂಕರನ ಪತ್ನಿ–ಪಾರ್ವತಿ

**ಶಂಕರಾಭರಣ** ಸರ್ಪ, ಹಾವು; ಒಂದು ರಾಗದ ಹೆಸರು

**ಶಂಕರಾಭರಣಶಾಯಿ** ಶೇಷಶಾಯಿ–ವಿಷ್ಣು

**ಶಂಕಾವರಣ** ಸಂದೇಹಗ್ರಸ್ತ

**ಶಂಕು** ಶಂಖ; ಗೂಟ, ಬೆಣೆ, ಕಂಬ, ಸ್ತಂಬ, ಕೊರಡು; ಈಟಿ, ಸಬಳ

**ಶಂಕುದಾಸ** ಲಯವಾಗುವ ದಾಸ

**ಶಂಖ** ಸಮುದ್ರದಲ್ಲಿ ಸಿಗುವ ಒಂದು ಬಗೆಯ ಚಿಪ್ಪು; ಒಂದು ಬಗೆಯ ಸುಗಂಧ ದ್ರವ್ಯ; ಬಿಳುಪು, ಶ್ವೇತವರ್ಣ, ಕಂಬು; ಒಂದು ಸಂಖ್ಯೆ, ನೂರು ದಶಲಕ್ಷ; ಕುಬೇರನ ನವ ನಿಧಿಗಳಲ್ಲಿ ಒಂದು (ನವನಿಧಿ ನೋಡಿ)

**ಶಂಖಗಿರಿ** ಬಿಳಿಗಿರಿ

**ಶಂಖದೈತ್ಯವಿಶಿಕ್ಷಕ** ಪಾಂಚಜನನೆಂಬ ದೈತ್ಯನನ್ನು ಸಂಹರಿಸಿದ ಕೃಷ್ಣ

**ಶಂಖನೃಪ** ಶಂಖನಾಮಕ ಓರ್ವ ಸೂರ್ಯ ವಂಶದ ರಾಜ

**ಶಂಖಪಾಣಿ** ಶ್ರೀಹರಿ

**ಶಂಖರಿ** ಶಂಖಾಸುರವೈರಿ, ಶಂಖಚಕ್ರಧಾರಿ ಶ್ರೀಹರಿ

**ಶಂಖಾರಿಸಂಧೃತ** ಶಂಖಚಕ್ರಧರ–ಶ್ರೀಹರಿ

**ಶಂತನುತನಯ** ಭೀಷ್ಮ

**ಶಂಪ, ಶಂಪೆ** ಮಿಂಚು

**ಶಂಬರ** ಮನೋಭಿಮಾನಿ ದೈತ್ಯ; ನೀರು; ಒಂದು ಜಾತಿಯ ಮೀನು

**ಶಂಬರವೈರಿ** ಪ್ರದ್ಯುಮ್ನ

**ಶಂಬರಶಾಯಿ** ಕ್ಷೀರಸಮುದ್ರದಲ್ಲಿ ಮಲಗಿರುವವ, ಅಂಡೋದಕದಲ್ಲಿ ಮಲಗಿದ ನಾರಾಯಣ

**ಶಂಬರಹರ** ಪ್ರದ್ಯುಮ್ನ

**ಶಂಬರಹರ ಪಿತ** ವಿಷ್ಣು

**ಶಂಬರಾಂತಕ** ಪ್ರದ್ಯುಮ್ನ

**ಶಂಬರಾಂತಕವೈರಿ** ಶಂಬರಾಸುರನ ಅಂತಕ ಅನಿರುದ್ಧ, ಆತನಿಗೆ ವೈರಿ ಶಿವ

**ಶಂಬರಾರಿ** ಪ್ರದ್ಯುಮ್ನ, ಮನ್ಮಥ

**ಶಂಬರಾರಿಪಿತ** ಮನ್ಮಥನ ತಂದೆ–ವಿಷ್ಣು

**ಶಂಭು, ಶಂಭುದೇವ** ಶಿವ

**ಶಂಭುಪ** ಬುದ್ಧ

**ಶಂಶನ<ಆಶಂಶನ** ಶುಭಾಶಯ, ಆಶೀರ್ವಾದ

**ಶಂಸನ<ಪ್ರಶಂಸನ** ಹೊಗಳುವಿಕೆ, ಆಶೀರ್ವಾದ

**ಶಕಟ** ಬಂಡಿ, ಗಾಡಿ; ಕೃಷ್ಣನಿಂದ ಹತನಾದ ಒಬ್ಬ ರಾಕ್ಷಸ; ರೋಹಿಣಿ ನಕ್ಷತ್ರ

**ಶಕಟಭಂಜನ, ಶಕಟಮರ್ದನ, ಶಕಟಾಸುರ ಮರ್ದನ** ಕೃಷ್ಣ

**ಶಕಲ** ತುಂಡು; ತಲೆಬುರುಡೆ, ಕಪಾಲ

**ಶಕುಂತ** ಹಾಲಕ್ಕಿ

**ಶಕುನ** ಹಕ್ಕಿ; ನಿಮಿತ್ತ; ಭವಿಷ್ಯ

**ಶಕ್ತೆ** ದುರ್ಗೆ, ಪಾರ್ವತಿ, ಶಕ್ತಿ ದೇವತೆಗಳು

**ಶಕ್ಯ** ಸಾಧ್ಯ

**ಶಕ್ರ** ಇಂದ್ರ

**ಶಕ್ರಜಿತು** ರಾವಣನ ಮಗ ಇಂದ್ರಜಿತು

**ಶಕ್ರಪುರಿ** ಅಮರಾವತಿ, ಇಂದ್ರನ ಊರು

**ಶಕ್ರಲೋಕ** ಇಂದ್ರಲೋಕ, ಸ್ವರ್ಗ

**ಶಕ್ರವರಜ** ಇಂದ್ರನ ತಮ್ಮನಾಗಿ ಅವತರಿಸಿದ ವಾಮನ

**ಶಕ್ರಾದ್ಯಮರರು** ಇಂದ್ರನೇ ಮೊದಲಾದ ದೇವತೆಗಳು

**ಶಕ್ರಾರಿ** ಇಂದ್ರನ ಶತ್ರು, ದೈತ್ಯ, ಇಂದ್ರಜಿತ್

**ಶಕ್ವರಿ** ವೇದಾಂತ; ಹಸು, ಗೋವು

Rarest Archiver

**ಶಚಿ** ಇಂದ್ರನ ಹೆಂಡತಿ

**ಶಠ** ನೀಚ, ಉದ್ಧಟ, ಧೂರ್ತ, ಕಪಟಿ

**ಶಠಣೆ** ಅಹಂಕಾರ, ಉದ್ಧಟತನ

**ಶಠವಿ** ಒಂದು ಕ್ಷುದ್ರ ದೇವತೆ; ಮೋಸಗಾತಿ, ದುಷ್ಟೆ, ದುರಹಂಕಾರಿ

**ಶತ** ನೂರು

**ಶತಕಲ್ಪ** ನೂರುವರ್ಷ, ಬ್ರಹ್ಮನ ಒಂದು ದಿವಸ

**ಶತಕ್ರತು** ನೂರು ಯಜ್ಞ, ನೂರು ಯಜ್ಞಗಳನ್ನು ಮಾಡಿದವನು–ಇಂದ್ರ

**ಶತಧೃತಿ** ಬ್ರಹ್ಮ

**ಶತಧೃತಿನಂದನ** ನಾರದ

**ಶತಪತ್ರ** ತಾವರೆ

**ಶತಪತ್ರದಳಗೇಹ** ಬ್ರಹ್ಮ

**ಶತಪತ್ರನಯನ** ವಿಷ್ಣು

**ಶತಮುಖ, ಶತಮನ್ಯು** ಇಂದ್ರ

**ಶತಮೂಲಿ** ಶತಾವರೀ ಗಡ್ಡೆ, ಆಸಡೀ ಗಡ್ಡೆ

**ಶತಮೇಧನಾಮಾರ್ಯ** ನೂರು ಅಶ್ವಮೇಧ ಯಾಗಗಳನ್ನು ಮಾಡಿದ ಹೆಸರುಳ್ಳ ಇಂದ್ರ

**ಶತಮೋದ** ಬ್ರಹ್ಮ

**ಶತಯಾಗ** ನೂರು ಯಾಗ ಮಾಡಿದವನು–ಇಂದ್ರ

**ಶತರಂಗಿ** ನೂರು ಬಣ್ಣ, ವಿವಿಧ ಬಣ್ಣಗಳಿಂದ ಕೂಡಿದ

**ಶತರವಿತೇಜ** ನೂರು ಸೂರ್ಯರ ಕಾಂತಿಯುಳ್ಳವನು

**ಶತರೂಪಾ** ಸ್ವಾಯಂಭು ಮನುವಿನ ಮಡದಿ

**ಶತಶೃಂಗ** ಒಂದು ಪರ್ವತದ ಹೆಸರು

**ಶತಸುಖಪಿತ** ಬ್ರಹ್ಮನ ತಂದೆ–ಶ್ರೀಹರಿ

**ಶತಸೂನು** ನೂರು ಮಕ್ಕಳುಳ್ಳವರು, ಧೃತರಾಷ್ಟ್ರ–ಗಾಂಧಾರಿ

**ಶತಸ್ಥ** ನೂರರೊಳಗಿನ

**ಶತಾನಂದ** ಜನಕರಾಜನ ಪುರೋಹಿತ; ಬ್ರಹ್ಮ

**ಶತಾನೀಕ** ದ್ರೌಪದಿಯಲ್ಲಿ ನಕುಲನಿಂದ ಹುಟ್ಟಿದವನು

**ಶತಾಮೋದ** ಬ್ರಹ್ಮ

**ಶತೃಘ್ನ** ಶತ್ರುನಾಶಕ; ರಾಮನ ತಮ್ಮ

**ಶಫರ** ಮೀನು

**ಶಫರಕೇತನ** ಮೀನಧ್ವಜ–ಕಾಮ

**ಶಫರಾಕ್ಷಿ** ಮೀನಾಕ್ಷಿ

**ಶಫರಿ** ಹೆಣ್ಣು ಮೀನು, ಮತ್ಸ್ಯ

**ಶಬರ** ಬೇಡ; ಪ್ರಚೇತಸಋುಷಿಯ ಮಗನಾಗಿದ್ದರೂ, ಬೇಡರ ಸಂಗದಲ್ಲಿ ಬೆಳೆದು ಸಪ್ತರ್ಷಿಗಳಿಂದ ಜ್ಞಾನ ಪಡೆದು ಬ್ರಹ್ಮರ್ಷಿಯಾಗಿ ರಾಮಾಯಣವನ್ನು ಬರೆದ ವಾಲ್ಮೀಕಿ

**ಶಬರಿ** ಕಿರಾತ ಹೆಂಗಸು; ಒಬ್ಬ ಅಪ್ಸರೆ; ರಾಮಾವತಾರದಲ್ಲಿ ಅವತರಿಸಿದ ಭಕ್ತೆ

**ಶಬಲ(ಳ)** ನಾನಾ ಬಣ್ಣಗಳಿಂದ ಕೂಡಿದ

**ಶಬಲವರ್ಣ** ನಾನಾ ಬಣ್ಣಗಳಿಂದ ಕೂಡಿದ ಬಣ್ಣ

**ಶಬ್ದಗುಣಗೃಹಕ** ಶಬ್ದವನ್ನೇ ಗುಣವಾಗಿವುಳ್ಳ ಭೂತಾಕಾಶವನ್ನು ಕ್ಷೇತ್ರವಾಗಿವುಳ್ಳ ಗಣಪತಿ

**ಶಬ್ದಶಾಸ್ತ್ರ** ವ್ಯಾಕರಣ

**ಶಬ್ದಾದಿ** ಪಂಚತನ್ಮಾತ್ರಗಳು

**ಶಬ್ಬರಿ (?)** ಶಬ್ದದ, ಮುಗಿಲು, ಗುಡುಗು, ಸಿಡಿಲು(?)

**ಶಮ** ಮನೋನಿಗ್ರಹ, ಸಹನೆ; ಸುಖ, ಸಂತೋಷ, ಶಾಂತಿ; ಮೋಕ್ಷ; ಯಮ

**ಶಮದಮ** ಇಂದ್ರಿಯಾದಿಗಳ ನಿಗ್ರಹ; ಶಾಂತಿ; ದಯೆ

**ಶಮನ** ಯಮ, ಕಮ್ಮಿ, ಶಾಂತಿ, ನಾಚಿಕೆ, ಪೌರುಷ

**ಶಮಲ** ಪಾಪ, ದೋಷ, ಮಲ

**ಶಮಲವಿವರ್ಜಿತ** ದೋಷವಿಲ್ಲದ

**ಶಮಲಶಮನ** ಅಪವಿತ್ರತೆಯನ್ನು ಪರಿಹರಿಸ ತಕ್ಕಂತಹ

**ಶಮಿ** ಶಾಂತ ಗುಣವುಳ್ಳವನು, ಯೋಗಿ; ಬನ್ನಿಮರ

Rarest Archiver

**ಶಮಿತ** ನೆಮ್ಮದಿ, ಸಮಾಧಾನ

**ಶಮಿಮಿತ್ರ** ಬನ್ನಿಯ ಎಲೆ

**ಶಮೆ** ಮನೋನಿಗ್ರಹ

**ಶಯನ, ಶಯ್ಯೆ** ಹಾಸುಗೆ, ಗಾದಿ

**ಶರ** ಬಾಣ; ನೀರು, ಸರೋವರ

**ಶರಚರ** ಮತ್ಸ್ಯಾವತಾರಿಯಾದ ಶ್ರೀಹರಿ

**ಶರಜ** ಕಮಲ; ಹುಲ್ಲಿನ ಪೊದೆಯಲ್ಲಿ ಜನಿಸಿದವನು, ಸ್ಕಂದ, ಷಣ್ಮುಖ

**ಶರಜನ್ಮ** ಷಣ್ಮುಖ

**ಶರಜನ್ಮನಯ್ಯನೊಡೆಯ** ವಿಷ್ಣು

**ಶರಣ** ಕಾಪಾಡುವವನು, ಪಾಲಕ, ಕಾಮು, ರಕ್ಷಣೆ; ಆಶ್ರಯವನ್ನು ಬಯಸಿದವನು, ಮರೆಹೊಕ್ಕವನು, ಭಕ್ತ

**ಶರಣ್ಯ** ಆಶ್ರಯ ಕೊಡುವವನು, ರಕ್ಷಿಸಲು ತಕ್ಕವನು, ರಕ್ಷಣೆ; ಮನೆ, ಆವಾಸ

**ಶರತಲ್ಪ** ಬಾಣಗಳ ಹಾಸಿಗೆ (ಮಂಚ)

**ಶರದಟ್ಟುಳಿ** ಬಾಣದ ಹಾವಳಿ

**ಶರದಲ್ಲಿಟ್ಟದಾಸ** ಬಾಣಗಳ ಹಾಸಿಗೆಯಲ್ಲಿದ್ದವನು–ಭೀಷ್ಮ

**ಶರದಿಂದು, ಶರದೇಂದು** ಶರತ್ಕಾಲದ ಚಂದ್ರ, ಬೆಳದಿಂಗಳು

**ಶರಧರ** ಮೋಡ

**ಶರಧರವರ್ಣ** ನೀರನ್ನು ಧರಿಸಿದ ಮೇಘದಂತೆ ಬಣ್ಣವುಳ್ಳವನು, ನೀಲಮೇಘಶ್ಯಾಮ–ಕೃಷ್ಣ

**ಶರಧಿ** ಸಮುದ್ರ, ನದಿ

**ಶರಧಿಕುಮಾರಿ** ಲಕ್ಷ್ಮಿ

**ಶರಧಿಗಂಭೀರ** ಸಮುದ್ರದಂತೆ ಗಾಂಭೀರ್ಯವುಳ್ಳವನು

**ಶರಧಿಜಾತ** ಚಂದ್ರ

**ಶರಧಿಜೆ, ಶರಧಿಮಗಳು** ಸಮುದ್ರದ ಮಗಳಾದ ಲಕ್ಷ್ಮಿ

**ಶರಧಿಸುತೆ** ಲಕ್ಷ್ಮಿ

**ಶರನಿಧಿ** ಬಾಣಗಳನ್ನು ಸಂಗ್ರಹಿಸುವ ಬತ್ತಳಿಕೆ; ಸಮುದ್ರ

**ಶರಭ** ನರಸಿಂಹನನ್ನು ಶಾಂತಗೊಳಿಸಲು ಶಿವನು ಧರಿಸಿದ ರೂಪ; ಎಂಟು ಕಾಲುಗಳುಳ್ಳ ಒಂದು ವಿಲಕ್ಷಣ ಪ್ರಾಣಿ; ಒಬ್ಬ ವಾನರ

**ಶರಭಂಗ** ಗೌತಮ ವಂಶದ ಒಬ್ಬ ಋಷಿ

**ಶರವಣ** ಶ್ರಾವಣ; ಜೊಂಡಿನಿಂದ ಕೂಡಿದ ಸರಸ್ಸು ಕೊಳ; ಷಣ್ಮುಖ

**ಶರಾಸನ** ಬಿಲ್ಲು

**ಶರೀರವನುಈಡಾಡು** ದಂಡಪ್ರಣಾಮ ಮಾಡು

**ಶರ್ಕರ** ಸಕ್ಕರೆ; ಸಣ್ಣ ಕಲ್ಲು, ನೊರಜುಗಲ್ಲು

**ಶರ್ಕರಸೂಕ್ತ** ಸಿಹಿಮಾತಿನವ, ಮಧುರಭಾಷಿ

**ಶರ್ಕರಾಕ್ಷ** ಸೂಕ್ಷ್ಮಜ್ಞಾನಿ

**ಶರ್ಮ** ಸಂತೋಷವನ್ನು ಕೊಡುವ, ಆನಂದ; ಆಶ್ರಯ; ಬ್ರಾಹ್ಮಣನ ಹೆಸರಿನ ಕೊನೆಯಲ್ಲಿ ಬರುವ ಶಬ್ದ

**ಶರ್ವ** ಇಂದ್ರ, ಶಿವ, ದೇವತೆ

**ಶರ್ವದೇವನಮ್ಮ** ಸರಸ್ವತಿ

**ಶರ್ವವಂದ್ಯ** ಶಿವನಿಂದ, ಎಲ್ಲಾ ದೇವತೆಗಳಿಂದ ವಂದಿತನಾದ ವಿಷ್ಣು; ರುದ್ರಾಂತರ್ಗತ ನರಸಿಂಹ

**ಶರ್ವಾಣಿ** ಪಾರ್ವತಿ

**ಶರ್ಷಪ** ಸಾಸಿವೆ

**ಶಲಭ** ಮಿಡತೆ, ದೀಪದ ಹುಳು, ಪತಂಗ

**ಶಲಲಿ** ಎಳೆಯ ಮುಳ್ಳು ಹಂದಿ

**ಶಲ್ಯ** ಮದ್ರದೇಶದ ರಾಜ, ಮಾದ್ರಿಯ ಅಣ್ಣ, ಕರ್ಣನ ಸಾರಥಿ

**ಶಶವಿಷಾಣ** ಮೊಲದ ಕೊಂಬು

**ಶಶಾಂಕ** ಚಂದ್ರ

**ಶಶಾಂಕಧರ** ಚಂದ್ರಧರ, ಶಿವ

**ಶಶಾಂಕಸೋದರಿ** ಚಂದ್ರನ ಸಹೋದರಿಯಾದ ಲಕ್ಷ್ಮಿ

**ಶಶಿ** ವಿಧು, ಚಂದ್ರ

Rarest Archiver

**ಶಶಿಕುಲೋದ್ಭವ** ಚಂದ್ರವಂಶದಲ್ಲಿ ಹುಟ್ಟಿದವನು
**ಶಶಿಜೂಟ** ಶಿವ
**ಶಶಿಧರ** ಚಂದ್ರನನ್ನು ಧರಿಸಿದವನು–ಶಿವ
**ಶಶಿನೊಸಲು** ಚಂದ್ರನಂತೆ ಮನೋಹರವಾದ ಹಣೆ
**ಶಶಿಮಂಡಲ** ಚಂದ್ರಮಂಡಲ
**ಶಶಿಮುಖಿ** ಚಂದ್ರಮುಖಿ
**ಶಶಿಮೌಳಿ** ಶಿವ
**ಶಶಿರಶ್ಮಿಮಂಡಲ** ಚಂದ್ರಮಂಡಲ
**ಶಶಿವದನೆ** ಇಂದುವದನೆ, ಚಂದ್ರಮುಖಿ
**ಶಶಿಸೂರ್ಯರಆಭರಣ** ತಲೆಯ ಆಭರಣ
**ಶಶಿಹಾಸ** ಚಂದ್ರಹಾಸ
**ಶಶ್ವತ್** ಶಾಶ್ವತ
**ಶಶ್ವದೇಕ** ಶಾಶ್ವತವಾಗಿ ಒಂದುಗೂಡಿರುವ
**ಶಸ್ತ** ಒಳ್ಳೆಯವನು
**ಶಸ್ತ್ರಕಟಿ** ಕತ್ತಿಯಂತೆ ತೆಳುವಾದ ನಡುವುಳ್ಳವಳು, ಸುಂದರಿ
**ಶಸ್ತ್ರಪಂಡಿತ** ಬಿಲ್ವಿದ್ಯೆ ನಿಪುಣ, ದ್ರೋಣಾಚಾರ್ಯ
**ಶಸ್ಯ** ಸ್ತೋತ್ರಾರ್ಹ
**ಶಳೆ<ಸೆಳೆ** ಸಣ್ಣ ಕೋಲು
**ಶಾಂತಿ** ಮೌನ, ನೀರವತೆ; ನೆಮ್ಮದಿ, ಸಮಾಧಾನ; ಅನಿಷ್ಟ ಪರಿಹಾರಕ್ಕಾಗಿ ಮಾಡುವ ಜಪ; ಸೃಷ್ಟಿಕರ್ತ ಅನಿರುದ್ಧರೂಪಿ ಶ್ರೀಹರಿಯ ಪತ್ನಿ
**ಶಾಕ** ಪಲ್ಲೆ, ತರಕಾರಿ
**ಶಾಕವ್ರತ** ಕೆಲವೊಂದು ತಿಂಗಳಲ್ಲಿ ವಿಶಿಷ್ಟ ತರಕಾರಿ ತಿನ್ನದಿರುವ ವ್ರತ
**ಶಾಕಿಣಿ(ನಿ)** ಹೆಣವನ್ನು ತಿನ್ನಲು ಬರುವ ರಕ್ಕಸಿ
**ಶಾಕೂತಿ** ಶಾಲು, ನಕ್ಕಿಕೆಲಸ ಮಾಡಿದ ರೇಶ್ಮೆ ಬಟ್ಟೆ
**ಶಾಕ್ತ** ಒಂದು ಮತ; ಶಕ್ತಿದೇವತೆಯ ಉಪಾಸಕ
**ಶಾಖಾ** ಕೊಂಬೆ
**ಶಾಖಾಮೃಗ** ಕೊಂಬೆಯಿಂದ ಕೊಂಬೆಗೆ ಹಾರುವ ಪ್ರಾಣಿ, ಕೋತಿ
**ಶಾಡ್ವಲ** ಹಸಿರು ಹುಲ್ಲುಗಾವಲು
**ಶಾತ** ಹರಿತ, ಸುಂದರ
**ಶಾತಕುಂಭ** ಚಿನ್ನ, ಹಿರಣ್ಯ
**ಶಾತಕುಂಭಶಯ** ಹಿರಣ್ಯಕಶಿಪು
**ಶಾತಕುಂಭೋದರ** ಹಿರಣ್ಯಗರ್ಭ, ಬ್ರಹ್ಮ
**ಶಾತ್ರವ** ದ್ವೇಷ, ಹಗೆತನ, ವೈರಿ, ಹಗೆ; ಶತ್ರುವಿನ ಸಮೂಹ
**ಶಾತ್ರವ್ರಾತ** ಶತ್ರುವಿನ ಸಮೂಹ
**ಶಾನೆ** ತುಂಬಾ, ಅತಿ, ಬಹಳ
**ಶಾಮಶಬಳ** ನೀಲವರ್ಣ, ಮಿಶ್ರವರ್ಣ; ಅಂತರಾತ್ಮ, ವಿಶ್ವವ್ಯಾಪ್ತ
**ಶಾಮೆದಂಟು** ಕೆಸವಿನ ದಂಟು
**ಶಾರಂಗಧರ<ಶಾರ್ಙ್ಗ** ಶಾರ್ಙ್ಗವೆಂಬ ಬಿಲ್ಲನ್ನು ಹಿಡಿದ ವಿಷ್ಣು; ಶಾರ್ಙ್ಗಪಾಣಿ
**ಶಾರದ** ಶರದ್ ಋತುವಿನ; ಸರಸ್ವತಿ
**ಶಾರದೇಶ** ಬ್ರಹ್ಮ
**ಶಾರೀರ** ಶರೀರ; ಧ್ವನಿ, ನಾದಮಾಧುರ್ಯ
**ಶಾರ್ದೂಲ** ಹುಲಿ, ವ್ಯಾಘ್ರ, ಒಂದು ಕಾಲ್ಪನಿಕ ಪ್ರಾಣಿ
**ಶಾರ್ವರಿ** ರಾತ್ರಿ
**ಶಾರ್ವರಿಧವಧರ** ಚಂದ್ರಮೌಳಿ–ಶಿವ
**ಶಾರ್ವರೀಕರ** ಚಂದ್ರ
**ಶಾರ್ವರೀಕರಧರ** ಶಿವ
**ಶಾಲಿ** ಬತ್ತ; ಸೀರೆ; ಆಲಯ
**ಶಾಲೆ** ಸೀರೆ; ಆಲಯ
**ಶಾಲ್ಯನ್ನ, ಶಾಲ್ಯಾನ್ನ, ಶಾಲ್ಯೋದನ** ಸಣ್ಣಕ್ಕಿಯ ಅನ್ನ, ಗಂಧಶಾಲಿ ಅಕ್ಕಿಯ ಅನ್ನ, ನೈವೇದ್ಯಕ್ಕೆ ಮಾಡುವ ಸಿಹಿ ಅನ್ನ, ಹಾಲಿನಲ್ಲಿ ಬೇಯಿಸಿದ ಅನ್ನ
**ಶಾಸ್ತ** ಆಳುವವನು; ಆಜ್ಞೆ
**ಶಾಸ್ತ್ಯ** ದಂಡಿಸುವವನು
**ಶಾಸ್ತ್ರ** ಷಟ್‌ಶಾಸ್ತ್ರಗಳು
**ಶಾಸ್ತ್ರಾಧಿಕ** ಶಾಸ್ತ್ರಗಳಿಗಿಂತಲೂ ದೊಡ್ಡದು

Rarest Archiver

**ಶಾಸ್ತ್ರೋದ್ಭಾವ** ಶಾಸ್ತ್ರ ಗ್ರಂಥಗಳಿಂದ ಶ್ರೇಷ್ಠನಾದವನು–ಗಣಪತಿ
**ಶಿಂಶುಮಾನ** ಚೇಳಿನಾಕಾರದ ಭಗವದ್ರೂಪದಿಂದ ಕಾಲಗಣನೆ
**ಶಿಂಶುಮಾರ** ಚೇಳು, ಚೇಳಿನಾಕಾರದ ದೇವರು; ವಿಷ್ಣುವಿನ ಒಂದು ಅವತಾರ; ಮೊಸಳೆ
**ಶಿಖನೇತ್ರ** ತಲೆಯಲ್ಲಿ ಕಣ್ಣುಳ್ಳವನು–ಶಿವ
**ಶಿಖಾಮಣಿ** ಶ್ರೇಷ್ಠ; ಮುಡಿಯಲ್ಲಿ ಧರಿಸುವ ರತ್ನ, ಶಿರೋಭೂಷಣ, ಜಡೆಬಿಲ್ಲೆ
**ಶಿಖಿ** ನವಿಲು; ಅಗ್ನಿ
**ಶಿಖಿಪಿಂಛ** ನವಿಲುಗರಿ
**ಶಿಖಿಸಖ** ಅಗ್ನಿಯ ಸ್ನೇಹಿತ, ವಾಯು, ಗಾಳಿ
**ಶಿಖಿಸ್ಯಂದನ** ಮಯೂರವಾಹನ ಷಣ್ಮುಖ
**ಶಿಖೆ** ಚಂಡಿಕೆ, ಜುಟ್ಟು
**ಶಿಖೆಯಶಿರೋಮಣಿ** ಚೂಡಾಮಣಿ
**ಶಿತಿ** ಬಿಳುಪು, ಧವಳತೆ; ಕಪ್ಪು, ಕರಿಯ ಬಣ್ಣ
**ಶಿತಿಕಂಠ** ಕರಿಗೊರಳ–ಶಿವ
**ಶಿತಿಕರ** ಬಿಳುಪಾದ
**ಶಿತಿಗ್ರೀವ** ನೀಲಕಂಠ–ಶಿವ
**ಶಿತಿವ(ರ್ಣ)ರ್ನ** ಕರಿವರ್ಣ; ಬಿಳಿಯ ಬಣ್ಣ
**ಶಿಪಿ** ಗರುತ್ಮಂತ, ಗರುಡ
**ಶಿರ** ತಲೆ
**ಶಿರಬಲಿತು** ಬುದ್ಧಿಯ ಅಹಂಕಾರ ಉಂಟಾಗಿ
**ಶಿರಸಾಷ್ಟಾಂಗ** ಉರಸ್ಸು, ಶಿರಸ್ಸು, ಪಾದ, ಕರಗಳನ್ನು ನೆಲಕ್ಕೆ ತಾಗಿಸಿ ದೃಷ್ಟಿಯನ್ನು ದೇವನಲ್ಲಿ ನೆಲೆಗೊಳಿಸಿ, ದೇವನಲ್ಲೇ ಮನವಿಟ್ಟು, ಮಾತಿನಿಂದ ಸ್ತುತಿಸುತ್ತಾ ಕೈಮುಗಿಯುವ ವಿಧಿ ಸಾಷ್ಟಾಂಗ ನಮಸ್ಕಾರ
**ಶಿರೀಶ** ಶ್ರೀಶ; ಒಂದು ಜಾತಿಯ ಹೂವು, ಬಾಗೆಹೂವು
**ಶಿರೋಧೃತ್** ಗಂಗಾಧರ–ಶಿವ
**ಶಿರೋನಿಧಾನ** ಶ್ರೇಷ್ಠನಿಧಿ
**ಶಿರೋರತ್ನ, ಶಿರೋರನ್ನ** ತಲೆಯ ರತ್ನ, ಶಿರೋಮಣಿ, ಚೂಡಾರತ್ನ
**ಶಿರೋರುಹ** ಕೂದಲು
**ಶಿಲ** ಹೊಲದಲ್ಲಿ ಬಿದ್ದಿರುವ ಧಾನ್ಯದ ತೆನೆ, ಹಕ್ಕಲು, ಆರಿಸಿದ ಕಾಳು
**ಶಿಲೀಮುಖ** ಬಾಣ, ಸರಳು; ತುಂಬಿ, ದುಂಬಿ, ಭ್ರಮರ
**ಶಿವ** ಈಶ್ವರ, ಮಂಗಲ, ವಿಷ್ಣು, ಭದ್ರ, ಸಂತೋಷ, ಸರ್ಪ, ನೆಲ್ಲಿಗಿಡ, ಆಲ, ನೀರು, ಬಿಳುಪು, ಶ್ರೇಯಸ್ಸು, ಕಲ್ಯಾಣ, ಶುಭ, ನರಿ, ವೃಕ್ಷ
**ಶಿವಕುಲ್ಯ** ಶಿವಳ್ಳಿ, ಉಡುಪಿ
**ಶಿವನಪ್ಪ** ವಿಷ್ಣು, ಚತುರ್ಮುಖ; "ಶಿವನೇ, ಅಪ್ಪಾ" ಎಂಬ ಸಂಬೋಧನೆಯಲ್ಲಿ ಶಿವ ಎಂಬ ಅರ್ಥ ದಲ್ಲೂ ದಾಸರು ಶಿವನಪ್ಪ ಎಂದು ಬಳಸುತ್ತಾರೆ
**ಶಿವನಿಕರ** ಮಂಗಳಗಳ ಸಮೂಹ, ಶುಭ ಸಂದೋಹ
**ಶಿಶುನಡೆ** ಅಲ್ಪತನ, ಸಣ್ಣತನ; ಬಾಲಿಶ
**ಶಿಶುಪಾಲಕಾಲ** ಶಿಶುಪಾಲನಿಗೆ ಮೃತ್ಯುರೂಪನಾದ ಕೃಷ್ಣ
**ಶಿಶುಪಾಲಕ್ಷಯ** ಕೃಷ್ಣ
**ಶಿಷ್ಟ** ಒಳ್ಳೆಯ, ಸದಾಚಾರ, ಪ್ರತಿಷ್ಠೆಯುಳ್ಳವನು
**ಶಿಷ್ಟಜನಪರಿಪಾಲ** ವಿಷ್ಣು
**ಶಿಷ್ಟೇಷ್ಟ** ಸಜ್ಜನ ಪ್ರಿಯ
**ಶಿಷ್ಯವತ್ಸ** ಶಿಷ್ಯನೆಂಬ ಕರು
**ಶಿಷ್ಯವತ್ಸಲ** ಶಿಷ್ಯರನ್ನು ವಾತ್ಸಲ್ಯದಿಂದ ನೋಡುವವನು, ಗುರು
**ಶೀತಕರ** ಚಂದ್ರ, ಶೈತ್ಯಕಾರಕ
**ಶೀತಗಿರಿಸುತೆ** ಪಾರ್ವತಿ
**ಶೀತಲಕರ** ಚಂದ್ರ
**ಶೀತಲಕರಕುಲಜಾತ** ಚಂದ್ರವಂಶಿ; ಚಂದ್ರವಂಶ ದಲ್ಲಿ ಜನಿಸಿದ ಪಾಂಡವರು
**ಶೀತಲಕಿರಣ** ಚಂದ್ರ

Rarest Archive

**ಶೀತಲಕಿರಣಭೂಷಣ** ಶಿವ
**ಶೀತಾಂಶು** ಚಂದ್ರ
**ಶೀರಕಟಿ** ನೇಗಿಲಿನಂತೆ ತೆಳ್ಳನೆಯ ನಡುವುಳ್ಳವಳು
**ಶೀರ್ಷ** ತಲೆ
**ಶೀಲ** ಸಾಮರ್ಥ್ಯ; ನಡತೆ, ರೀತಿ, ಚಾರಿತ್ರ್ಯ; ಚೆಲುವು, ಸೌಂದರ್ಯ
**ಶೀಲಚಕ್ಕರವಟ್ಟಿಕಾಯ್ದವ** ಅಂಬರೀಶನ ಶೀಲವನ್ನು ಚಕ್ರವನ್ನು ಅಟ್ಟುವುದರ ಮೂಲಕ ಕಾಯ್ದವ ಶ್ರೀಹರಿ
**ಶೀಲಮೂರುತಿ** ಬಿಂಬರೂಪ
**ಶೀಲರಮ್ಯ** ಸ್ವಭಾವದಿಂದ ಮನೋಹರ
**ಶುಂಠ** ಹೆಡ್ಡ, ಮೂರ್ಖ, ತಿಳಿಗೇಡಿ
**ಶುಂಡ** ಸೊಂಡಿಲು, ಆನೆ
**ಶುಂಡಲ** ಆನೆ
**ಶುಂಡಲಾಪುರ** ಹಸ್ತಿನಾಪುರ
**ಶುಂಡಾಲ** ಸೊಂಡಿಲುಳ್ಳದ್ದು, ಆನೆ
**ಶುಂಡಾಲರಿಪುವದನ** ನರಸಿಂಹ
**ಶುಂಭ** ಒಬ್ಬ ರಾಕ್ಷಸ, ನಿಶುಂಭ ಇವನ ತಮ್ಮ; ಮಂಕ, ಹೆಡ್ಡ
**ಶುಂಭನ** ಪ್ರಕಾಶಿಸುವ
**ಶುಕ** ಬಿಳಿಯ ಬಣ್ಣ; ಒಬ್ಬ ಋಷಿ; ಗಿಳಿ; ಶಿವ
**ಶುಕಚಾಟು** ಗಿಳಿಗಳ ನುಡಿ, ಗಿಳಿಮಾತು
**ಶುಕತಾತ** ವ್ಯಾಸ
**ಶುಕನಓದು** ಗಿಳಿಪಾಠ
**ಶುಕನಯ್ಯ** ವೇದವ್ಯಾಸ ಮುನಿ
**ಶುಕಪಿಕರವ** ಗಿಳಿ ಕೋಗಿಲೆಗಳ ಧ್ವನಿ
**ಶುಕಬಿಂಬ** ಶುಕಮುನಿಗೆ ಪ್ರತ್ಯಕ್ಷನಾದವನು; ವೇದವ್ಯಾಸರು
**ಶುಕಭಾಷಣ** ಗಿಳಿಮಾತು
**ಶುಕಭಾಷಿಣಿ** ಗಿಳಿಯಂತೆ ಇಂಪಾಗಿ ಮಾತನಾಡುವವಳು
**ಶುಕಮುನಿ** ವೇದವ್ಯಾಸರ ಮಗ, ಭಾಗವತವನ್ನು ತಿಳಿದವನು
**ಶುಕವಾಹನ** ಗಿಳಿದೇರ, ಕಾಮ
**ಶುಕ್ತಿ** ಕಪ್ಪೆಯ ಚಿಪ್ಪು
**ಶುಕ್ರ** ರಾಕ್ಷಸಗುರುಗಳಾದ ಶುಕ್ರಾಚಾರ್ಯರು; ಒಂದು ಗ್ರಹ
**ಶುಕ್ರಶಿಷ್ಯ** ಬಲಿಚಕ್ರವರ್ತಿ, ರಾಕ್ಷಸ
**ಶುಕ್ಲ** ಬಿಳಿಯ ಬಣ್ಣ; ವೀರ್ಯ, ರೇತಸ್ಸು
**ಶುಕ್ಲಕೇಶ** ಬಲರಾಮನಲ್ಲಿ ಶುಕ್ಲಕೇಶರೂಪದ ಆವೇಶಗೊಂಡ ನಾರಾಯಣ
**ಶುಕ್ಲವೃತ್ತಿ** ಭಿಕ್ಷಾಟನೆ
**ಶುಕ್ಲಾಂಬರ** ಬಿಳಿಯವಸ್ತ್ರ
**ಶುಚಿಸದ್ಮ** ವಾಯುದೇವರ ಅಂತರ್ಯಾಮಿ ವಿಷ್ಣು
**ಶುದ್ಧಬುದ್ಧರು** ಪವಿತ್ರವಾಗಿ ತಿಳಿದವರು, ದೋಷರಹಿತವಾಗಿ ತಿಳಿದವರು
**ಶುನಕ** ನಾಯಿ
**ಶುನಿ** ಹೆಣ್ಣುನಾಯಿ, ನಾಯಿ
**ಶುಭ** ಚೆಲುವಾದುದು, ಸುಂದರವಾದುದು; ಒಳ್ಳಿತು, ಕ್ಷೇಮ; ಪರಾಕ್ರಮ, ಶೌರ್ಯ; ಮಂಗಳಕರವಾದ, ಸಂತೋಷಕರವಾದ
**ಶುಭವಿಗ್ರಹ** ಸಚ್ಚಿದಾನಂದ ದೇಹಿಯಾದ ನಿರ್ದೋಷಿಯಾದ ಮುಖ್ಯಪ್ರಾಣ
**ಶುಭಸಾರ** ಸತ್ಕರ್ಮಗಳ ಫಲ
**ಶುಭ್ರ** ಬಿಳುಪು, ಧವಳತೆ, ಹೊಳೆಯುವ, ಪ್ರಜ್ವಲಿಸುವ, ಚಂದ್ರ; ರೂಪಾಯಿ, ಬೆಳ್ಳಿ
**ಶುಷ್ಕ** ನಿರರ್ಥಕ, ವ್ಯರ್ಥ, ನೀರಸ, ಒಣಗಿದ
**ಶೂನ್ಯ** ಸೊನ್ನೆ
**ಶೂನ್ಯವಾದ** ಎಲ್ಲವೂ ಶೂನ್ಯವೆಂಬ ತರ್ಕ, ನಿರೀಶ್ವರವಾದ
**ಶೂನ್ಯಾದಿ** ಮಾಟಮಂತ್ರ ಇತ್ಯಾದಿ, ಅಭಿಚಾರ
**ಶೂರಸುತ** ಶೂರಸೇನನ ಮಗ ವಸುದೇವ
**ಶೂರ್ಪ** ಧಾನ್ಯ ಕೇರುವ ಮೊರ

Rarest Archive

**ಶೂರ್ಪಕರ್ಣ** ಮೊರದಂತೆ ಕಿವಿಯುಳ್ಳವ, ಗಣಪತಿ, ಆನೆ
**ಶೂರ್ಪಕಾರಿ** ಶೂರ್ಪಕಾಸುರನ ಶತ್ರು–ಮನ್ಮಥ
**ಶೂಲ** ಆಯುಧ ವಿಶೇಷ, ಈಟಿ, ಶಿವನ ತ್ರಿಶೂಲ
**ಶೂಲಪಾಣಿ** ಶಿವ
**ಶೂಲಿ** ಶಿವ
**ಶೂಲೆ** ನೋವು
**ಶೃಂಖಲೆ** ಬಂಧನ; ಸಂಕೋಲೆ
**ಶೃಂಗ** ಕೋಡು, ಶಿಖರ, ಋಷ್ಯಶೃಂಗ
**ಶೃಂಗಾರಪುರ** ಶೃಂಗೇರಿ
**ಶೃಂಗಾರಪುರುಷ** ಸುಂದರ ಪುರುಷ, ಚೆಲುವ
**ಶೃಂಗಾರವನ** ಅಶೋಕವನ, ವಿಹರಿಸುವ ಉದ್ಯಾನವನ
**ಶೃಂಗಾರವಲ್ಲಿ** ಅಲಂಕೃತವಾದ ಬಳ್ಳಿ
**ಶೃಣ್ವತಾ** ಕೇಳುವವನಿಂದ
**ಶೇಖರ** ಶಿರಸ್ಸಿನಲ್ಲಿ ಉಳ್ಳವ
**ಶೇಷ** ಸರ್ಪ, ಆದಿಶೇಷ; ಉಳಿದುದು; ಸಾಧಾರಣ ಕಾರಣ; ಅನುಗ್ರಹ
**ಶೇಷಗರಳ** ಮಿಕ್ಕವಿಷ, ಉಳಿದವಿಷ
**ಶೇಷಗಿರಿ** ತಿರುಪತಿ ಬೆಟ್ಟ
**ಶೇಷಗಿರೀಶ** ವೇಂಕಟೇಶ
**ಶೇಷತಲ್ಪ** ಶೇಷಶಾಯಿ ವಿಷ್ಣು
**ಶೇಷಪ್ರಸಾದ** ಉಂಡುಉಳಿದ ಅನ್ನ
**ಶೇಷಭೂಷಣ** ನಾಗಾಭರಣ, ಶಿವ
**ಶೇಷಮೂರುತಿ** ಆದಿಶೇಷ; ಸಂಕರುಷಣಮೂರ್ತಿ
**ಶೇಷವಿಶೇಷ** ಭಗವಂತನಿಗೆ ಮಾತ್ರ ಮೀಸಲಾದ ಎರಡು ಶಕ್ತಿಗಳು
**ಶೇಷಶತಸ್ಥರು** ನೂರುಜನ ದೇವತಾಕಕ್ಷದಲ್ಲಿ ಹದಿನೆಂಟನೇ ಕಕ್ಷೆಯತನಕ ಹೇಳಿ ಉಳಿದಿರುವವರು
**ಶೇಷಶಯನ, ಶೇಷಶಾಯಿ** ಹಾವನ್ನು ಹಾಸಿಗೆಯಾಗುಳ್ಳವನು–ವಿಷ್ಣು
**ಶೇಷಾಚಲ** ಶೇಷಾದ್ರಿ, ತಿರುಪತಿ ಬೆಟ್ಟ
**ಶೇಷಾಚಲಘನ್ನ** ಶೇಷಾಚಲದ ಒಡೆಯು, ವೇಂಕಟೇಶ
**ಶೇಷಾಭರಣ** ಸರ್ಪವನ್ನು ಆಭರಣವಾಗಿ ಉಳ್ಳವನು–ಶಿವ
**ಶೇಷಾರಿ** ಗರುಡ
**ಶೈಲ** ಬೆಟ್ಟ
**ಶೈಲಕುಮಾರಿ** ಪಾರ್ವತಿ
**ಶೈಲಜ** ಪರ್ವತದಲ್ಲಿ ಹುಟ್ಟುವ ಕಲ್ಲು, ಮಣ್ಣು, ಗಿಡ, ಇತ್ಯಾದಿ; ಪಾರ್ವತಿ
**ಶೈಲಜಾ** ಪಾರ್ವತಿ
**ಶೈಲಜಾಶರೀರಮಲಜ** ಗಣನಾಥ, ವಿಘ್ನೇಶ್ವರ, ಗಣಪತಿ
**ಶೈವಲ** ಪಾಚಿ, ಹಾವಸೆ
**ಶೋಕ** ದು:ಖ, ಅಳಲು
**ಶೋಣ** ಕೆಂಪು ಬಣ್ಣ
**ಶೋಣಿತ** ರಕ್ತ
**ಶೋಣಿತಪುರ** ಬಾಣಾಸುರನ ರಾಜಧಾನಿ, ಹಿರಣ್ಯಕಶಿಪುವಿನ ಪಟ್ಟಣ
**ಶೋಣಿತವಸ್ತ್ರ** ನಾರದ; ಕಾವಿವಸ್ತ್ರ, ಕಾವಿಧರಿಸಿದವನು
**ಶೋಭನ** ಮಂಗಳಕರವಾದುದು; ಹೊಳಪು, ಕಾಂತಿ; ಚೆಲುವು, ಸೌಂದರ್ಯ
**ಶೋಭನಗಾತ್ರಿ** ಮಂಗಳಕರವಾದ ಶರೀರವುಳ್ಳವಳು
**ಶೋಷ** ಒಣಗುವಿಕೆ, ಶುಷ್ಕವಾಗುವಿಕೆ
**ಶೋಷಿಸು** ಒಣಗಿಸು, ಬಾಡಿಸು; ದಂಡಿಸು
**ಶೌಂಡ** ಶ್ರೇಷ್ಠ, ಸಮರ್ಥ; ಪರಾಕ್ರಮಿ; ಕುಡಿದ, ಮತ್ತೇರಿದ
**ಶೌನಕ** ನೈಮಿಷಾರಣ್ಯದಲ್ಲಿ ವಾಸವಾಗಿದ್ದ ಒಬ್ಬ ಕುಲಪತಿ
**ಶೌರಿ** ಯದುವಂಶದ ಶೂರರಾಜನ ಮಗನಾದ ವಸುದೇವ, ಕೃಷ್ಣ

Rarest Archiver

**ಶೌರಿದಿನ** ಹರಿದಿನ, ಏಕಾದಶಿ

**ಶ್ಯಾಮ** ನೀಲವರ್ಣ

**ಶ್ಯಾಮಗಾತ್ರ** ಕಪ್ಪುದೇಹವುಳ್ಳವನು ಕೃಷ್ಣ

**ಶ್ಯಾಮಲ** ನೀಲಛ್ಛಾಯೆ, ಕಪ್ಪು

**ಶ್ಯಾಲಕ** ಹೆಂಡತಿಯ ತಮ್ಮ, ಭಾವಮೈದುನ; ರುಕ್ಮಿಣಿಯ ಸಹೋದರ ರುಕ್ಮಿ

**ಶ್ಯಾಲಕವೈರಿ** ರುಕ್ಮಿಯ ವೈರಿ ಕೃಷ್ಣ

**ಶ್ರದ್ಧ(ದ್ಧಾ)** ವಿಶ್ವಾಸ, ಸನ್ಮಾನ, ಭಕ್ತಿ

**ಶ್ರದ್ಧಾದೇವಿ** ಭಾರತೀದೇವಿ

**ಶ್ರದ್ಧಾರಮಣ** ಭಾರತೀರಮಣ–ಮುಖ್ಯಪ್ರಾಣ

**ಶ್ರದ್ಧೆ** ನಂಬಿಕೆ

**ಶ್ರದ್ಧೇಶ** ಮುಖ್ಯಪ್ರಾಣದೇವರು

**ಶ್ರಯಧೇನು** ಆಶ್ರಯವೀಯುವ ಆಕಳು

**ಶ್ರವಣ** ಕಿವಿ, ಕೇಳುವಿಕೆ

**ಶ್ರವಣಮಂಗಳ** ವಿಷ್ಣು

**ಶ್ರಾದ್ಧ** ಪಿತೃಗಳಿಗೆ ಶಾಸ್ತ್ರೋಕ್ತವಾಗಿ ಮಾಡುವ ಕರ್ಮ, ತಿಥಿ; ಶ್ರದ್ಧೆಯಿಂದ ಮಾಡಲ್ಪಡುವ

**ಶ್ರಾವಣ** ಕೇಳುವುದು; ಮಾಸಗಳಲ್ಲಿ ಐದನೆಯದು

**ಶ್ರಾವೆ** ಮಣ್ಣಿನ ಮುಚ್ಚಳ

**ಶ್ರಿತ** ಆಶ್ರಯಿಸಿದ, ರಕ್ಷಣೆಯಲ್ಲಿರುವ

**ಶ್ರಿತಜನ** ಆಶ್ರಿತಜನ

**ಶ್ರೀ** ಐಶ್ವರ್ಯ, ಸಿರಿ, ಲಕ್ಷ್ಮಿ, ಏಳಿಗೆ, ಅಭ್ಯುದಯ, ಹಿರಿಮೆ, ಔನ್ನತ್ಯ, ಕೀರ್ತಿ, ಪ್ರಸಿದ್ಧಿ; ಚೆಲುವು, ಕಾಂತಿ, ಸೊಗಸು, ಅಲಂಕಾರ, ಶೃಂಗಾರ; ಒಳ್ಳಿತು, ಜ್ಞಾನಾದಿ ಸಂಪತ್ತು; ವಿಷ, ನಂಜು

**ಶ್ರೀಕಂಠಚಾಪ** ಶಿವಧನುಸ್ಸು

**ಶ್ರೀಕರ** ಮಂಗಳಕರ

**ಶ್ರೀಕರಾಂಬುಜ** ಮಂಗಳಕರವಾದ ಹಸ್ತಕಮಲ

**ಶ್ರೀಕಳತ್ರ, ಶ್ರೀಕಾಂತ** ಲಕ್ಷ್ಮಿಯನ್ನು ಸತಿಯಾಗಿ ಉಳ್ಳವನು–ಶ್ರೀಹರಿ

**ಶ್ರೀಕಾಂತನಮುಖಸೂನು** ಸೂರ್ಯ

**ಶ್ರೀಕಾಂತನಾತ್ಮಜ** ಬ್ರಹ್ಮ, ಮನ್ಮಥ

**ಶ್ರೀಕಾರದಕರ್ಣಗಳು** ಶ್ರೀ ಅಕ್ಷರದಂತೆ ಇರುವ ಕಿವಿಗಳು

**ಶ್ರೀಕೃಷ್ಣಾನುಜೆ** ಪಾರ್ವತಿ

**ಶ್ರೀಚಕ್ರಪುರ** ಮೈಸೂರಿಗಿರುವ ಮತ್ತೊಂದು ಹೆಸರು, ಚಾಮುಂಡೇಶ್ವರಿ ನೆಲೆಸಿರುವ ಸ್ಥಳ

**ಶ್ರೀಚೂರ್ಣ** ಎರಡು ಬಿಳಿ ನಾಮಗಳ ಮಧ್ಯೆ ಹಾಕುವ ಕೆಂಪುನಾಮದ ಚೂರ್ಣ

**ಶ್ರೀತರುಣಿ** ಲಕ್ಷ್ಮಿ

**ಶ್ರೀದ** ಸಿರಿ ಸಂಪತ್ ಸುಖಪ್ರದ, ವಿಷ್ಣು, ಕುಬೇರ

**ಶ್ರೀದಯಿತೆ** ಲಕ್ಷ್ಮಿ

**ಶ್ರೀಧರಣಿ** ಶ್ರೀದೇವಿ, ಭೂದೇವಿ

**ಶ್ರೀಧರಾದುರ್ಗಾ** ಶ್ರೀ–ಭೂ–ದುರ್ಗಾ ರೂಪಳಾದ ಲಕ್ಷ್ಮಿ

**ಶ್ರೀಧವ** ಲಕ್ಷ್ಮೀಪತಿ ವಿಷ್ಣು

**ಶ್ರೀಧಾಮಾ, ತ್ರಿಧಾಮನ್** ವಿಷ್ಣು

**ಶ್ರೀನಯ** ಲಕ್ಷ್ಮಿಯನ್ನು ಪ್ರೇರಿಸುವವನು–ವಿಷ್ಣು

**ಶ್ರೀನಾರಿಯೊಡೆದಕುಸುಮ** ಲಕ್ಷ್ಮೀದೇವಿಯು ಹುಟ್ಟಿದ ಹೂವು, ಕಮಲ

**ಶ್ರೀನಿಕೇತನ** ಲಕ್ಷ್ಮಿಯಲ್ಲಿ ನೆಲೆಸಿರುವವ–ವಿಷ್ಣು

**ಶ್ರೀನಿಧೇ<ಶ್ರೀನಿಧಿ** ಸಂಪತ್ತಿನ ಸಮೂಹ; ಲಕ್ಷ್ಮಿಗೆ ತನ್ನೆದೆಯಲ್ಲಿ ಜಾಗನೀಡಿದವನು ವಿಷ್ಣು

**ಶ್ರೀಪ, ಶ್ರೀಪತಿ** ವಿಷ್ಣು

**ಶ್ರೀಪವನಸುತಪಾಲ** ಹನುಮಂತನನ್ನು ಪಾಲಿಸಿದವನು–ರಾಮ

**ಶ್ರೀಪುರ** ಬೇಲೂರು

**ಶ್ರೀಭೂಕಳತ್ರ** ಶ್ರೀದೇವಿ ಭೂದೇವಿಯರ ಪತಿ–ಶ್ರೀಹರಿ

**ಶ್ರೀಮನೋಹರ** ವಿಷ್ಣು

**ಶ್ರೀಮರುತ್ಪತಿ** 49 ಮರುತ್ತಗಳಿಗೆ ಪತಿಯಾದ ವಾಯುದೇವರು

**ಶ್ರೀಮೂರುತಿ** ಐಶ್ವರ್ಯದಿಂದ ಕೂಡಿದ ಮೂರುತಿ, ಮಂಗಳಕರವಾದ ಮೂರುತಿ

Rarest Archiver

**ಶ್ರೀಮೆರೆ** ಮನೋಹರವಾಗಿ ಶೋಭಿಸು; ಸಂಪತ್ತನ್ನು ತೋರು

**ಶ್ರೀಯಮ್ಮಹತಿ** ವೀಣಾಧಾರಿ ನಾರದರ ಅವತಾರ–ಪುರಂದರದಾಸರು

**ಶ್ರೀಯರಸ** ಲಕ್ಷ್ಮಿಯ ಪತಿ–ವಿಷ್ಣು

**ಶ್ರೀರಂಗಶಾಯಿ** ರಂಗನಾಥ

**ಶ್ರೀರಮಣ** ವಿಷ್ಣು

**ಶ್ರೀರಮಣನದಿನ** ಏಕಾದಶಿ

**ಶ್ರೀಲಕ್ಷುಮಿಣಿ** ಲಕ್ಷ್ಮಿ

**ಶ್ರೀಲೋಲ** ಲಕ್ಷ್ಮೀಲೋಲ ವಿಷ್ಣು

**ಶ್ರೀವಕ್ಷ** ಶ್ರೀಹರಿ

**ಶ್ರೀವಕ್ಷಸುತ** ಬ್ರಹ್ಮ, ಮನ್ಮಥ

**ಶ್ರೀವತ್ಸ, ಶ್ರೀವತ್ಸಲಾಂಛನ** ವಿಷ್ಣುವಿನ ಎದೆಯಲ್ಲಿರುವ ಮಚ್ಚೆ/ಚಿಹ್ನೆ. ಭೃಗುಮುನಿ ಒದೆದ ಗುರುತು

**ಶ್ರೀವನಿತೆ** ಶ್ರೀದೇವಿ–ಲಕ್ಷ್ಮಿ

**ಶ್ರೀವಲ್ಲಭ** ಲಕ್ಷ್ಮಿಯ ಪತಿ–ಶ್ರೀಹರಿ

**ಶ್ರೀವಾಯುಮತ** ಮಧ್ವಮತ

**ಶ್ರೀವಿಭು, ಶ್ರೀಶ** ವಿಷ್ಣು

**ಶ್ರೀಶಯನ** ಶೇಷದೇವರು

**ಶ್ರೀಶರಥಿಕ** ಪರಮಾತ್ಮನ ಸಾರಥಿ–ಗರುಡ

**ಶ್ರೀಶೈಲ** ತಿರುಪತಿ; ದಕ್ಷಿಣ ಭಾರತದಲ್ಲಿರುವ ಜ್ಯೋತಿರ್ಲಿಂಗವುಳ್ಳ ಪ್ರಸಿದ್ಧ ಶೈವಕ್ಷೇತ್ರ

**ಶ್ರೀಶೈಲದಕಾಗೆ** ಆ ದೇಗುಲದಲ್ಲಿ ಕಾಗೆ ನಿಂತೇ ಇರುತ್ತದೆ; ಭಕ್ತಿಯಿಂದಲ್ಲ, ತಿನ್ನಲು ಏನಾದರೂ ದೊರೆತೀತೋ ಎಂದು

**ಶ್ರೀಸತೀಸ್ತಬಕವಿನ್ಯಸ್ತಕರ** ಲಕ್ಷ್ಮೀದೇವಿಯ ತುರುಬಿನ ಮೇಲೆ ಕೈಯುಳ್ಳವ–ಶ್ರೀಹರಿ

**ಶ್ರೀಸರ್ವಜ್ಞರು** ಮಧ್ವಾಚಾರ್ಯರು

**ಶ್ರೀಸಹೋದರ** ಲಕ್ಷ್ಮೀದೇವಿಯ ಸಹೋದರನಾದ ಚಂದ್ರ

**ಶ್ರೀಹರಿಪುರ** ವೈಕುಂಠ

**ಶ್ರೀಹಾಟ** ಬಂಗಾರದಿಂದ ಕೂಡಿದ ಭೂಮಿ

**ಶ್ರುತ** ಪ್ರಸಿದ್ಧವಾದ, ಕೇಳಿದ

**ಶ್ರುತಕರ್ಮ** ದ್ರೌಪದಿ ಸಹದೇವರಲ್ಲಿ ಜನಿಸಿದ ಉಪಪಾಂಡವ

**ಶ್ರುತಕೀರ್ತಿ** ಯದುವಂಶದ ಶೂರರಾಜನ ಮಗಳು, ವಸುದೇವನ ತಂಗಿ

**ಶ್ರುತಾಯುಧ** ಅರ್ಜುನನನ್ನು ಸಂಹರಿಸಲು ಪ್ರಯತ್ನಿಸಿ, ಪಾಂಡವರಮೇಲೆ ಭಗದತ್ತ ಪ್ರಯೋಗಮಾಡಿದ ವೈಷ್ಣವಾಸ್ತ್ರ

**ಶ್ರುತಿ** ವೇದ (ಹಯಗ್ರೀವಾವತಾರ); ಕಿವಿ, ಕೇಳುವಿಕೆ

**ಶ್ರುತಿಗರೆ** ಧ್ವನಿಗೂಡಿಸು

**ಶ್ರುತಿಗೀತೆ** ಭಾಗವತ

**ಶ್ರುತಿಚೋರ** ವೇದಗಳನ್ನು ಕದ್ದವನು, ಸೋಮಕ ಅಥವಾ ತಮಸಾಸುರ

**ಶ್ರುತಿತತಿ** ವೇದಗಳ ಸಮೂಹ

**ಶ್ರುತಿಧರ್ಮ** ವೇದಧರ್ಮ

**ಶ್ರುತಿನಾಥ** ವೇದಗಳಿಗೆ ಒಡೆಯನಾದ ಶ್ರೀಹರಿ

**ಶ್ರುತಿಪಂಕಜ** ವೇದಗಳೆಂಬ ಕಮಲ

**ಶ್ರುತಿಪರಿಪಾಲ** ವೇದಗಳ ಸಂರಕ್ಷಕ, ಮತ್ಸ್ಯಾವತಾರಿ–ವಿಷ್ಣು

**ಶ್ರುತಿಪಾಠವಿಬುಧ** ವೇದ ಪಾರಂಗತ

**ಶ್ರುತಿಯರಸಿ** ವೇದಾಭಿಮಾನಿಯಾದ ಲಕ್ಷ್ಮಿ

**ಶ್ರುತಿವಚನ** ವೇದವಾಕ್ಯ

**ಶ್ರುತಿವಿದಿತ** ವೇದಗಳು ತಿಳಿಸಿರುವ ಸಂಪ್ರದಾಯ

**ಶ್ರುತಿವಿನುತ** ಶ್ರುತಿಗಳಿಂದ ಹೊಗಳಲ್ಪಟ್ಟವನು–ವಿಷ್ಣು

**ಶ್ರುತಿವೇದ್ಯ** ವೇದಗಳಿಂದ ಪ್ರತಿಪಾದ್ಯನಾದ ಶ್ರೀಹರಿ

**ಶ್ರುತಿಸಿದ್ಧ** ಶ್ರುತಿ ವಾಕ್ಯಗಳಿಂದ ಸಿದ್ಧವಾದ ಅಸ್ತಿತ್ವವುಳ್ಳವನು–ವಿಷ್ಣು

**ಶ್ರುತಿಹೀನ** ವೇದಬಾಹಿರ

**ಶ್ರುತ್ಯರ್ಥ** ವೇದಾರ್ಥ

**ಶ್ರುತ್ಯಾದಿ** ಪಂಚಜ್ಞಾನೇಂದ್ರಿಯಗಳು

Rarest Archiver

**ಶ್ರೇಣಿ** ಸಾಲು, ಪಂಕ್ತಿ; ಗುಂಪು, ಸಮೂಹ
**ಶ್ರೇಯ** ಕೀರ್ತಿ, ಶ್ರೇಯಸ್ಸು
**ಶ್ರೇಯಧೇನು** ಶ್ರೇಯಸ್ಸೆಂಬ ಹಸು
**ಶ್ರೇಷ್ಠಸುಗಂಧಿ** ವಾಯುದೇವರು
**ಶ್ರೋಣಪ್ರವಾಳ** ಕೆಂಪುಹವಳ
**ಶ್ರೋಣಿ** ಜಘನ, ನಿತಂಬ
**ಶ್ರೋತ್ರ** ಕಿವಿ
**ಶ್ರೋತ್ರಿಯ** ವೇದಜ್ಞ, ಬ್ರಾಹ್ಮಣ
**ಶ್ರೋತ್ರೇಂದ್ರಿಯ** ಕಿವಿ
**ಶ್ಲಾಘನ** ವರ್ಣನ, ಹೊಗಳಿಕೆ
**ಶ್ಲಾಘ್ಯ** ಹೊಗಳಲು ಯೋಗ್ಯ
**ಶ್ವಪಚ** ಕೀಳು ಜಾತಿಯವನು; ಕೊಳಕ; ಚಂಡಾಲ; ನಾಯಿ ಮಾಂಸ ಭಕ್ಷಕ
**ಶ್ವಶುರ** ಹೆಂಡತಿಯ ಅಥವಾ ಗಂಡನ ತಂದೆ, ಮಾವ
**ಶ್ವಸನ** ವಾಯುದೇವರು, ಗಾಳಿ, ಉಸಿರಾಟ
**ಶ್ವಸನದೇವಿ** ವಾಯುದೇವರ ಪತ್ನಿ ಭಾರತಿ
**ಶ್ವಾನ** ಸೊಣಗ, ನಾಯಿ
**ಶ್ವಾನನಕುಳಿ** ತಿಪ್ಪೆಗುಂಡಿ
**ಶ್ವಾನನಬ್ಬರ** ನಾಯಿಯ ಕೂಗು, ಬೊಗಳುವಿಕೆ
**ಶ್ವಾಸ** ಉಸಿರು, ವಾಯುದೇವ
**ಶ್ವಾಸಪತಿ** ಪಂಚಪ್ರಾಣಗಳಿಗೆ ಮುಖ್ಯನಾದವನು
**ಶ್ವೇತಗಜ** ಬಿಳಿ ಆನೆ, ಐರಾವತ(ಇಂದ್ರನ ವಾಹನ)
**ಶ್ವೇತನಗ** ರಜತಾದ್ರಿ, ಬಿಳಿಗಿರಿ
**ಶ್ವೇತಬಿಂದು** ವೀರ್ಯ
**ಶ್ವೇತವಾಹನ** ಅರ್ಜುನ, ಫಲ್ಗುನ, ಜಿಷ್ಣು, ಕಿರೀಟಿ, ಶ್ವೇತವಾಹನ, ಬೀಭತ್ಸ, ವಿಜಯ, ಪಾರ್ಥ, ಸವ್ಯಸಾಚಿ, ಧನಂಜಯ, ಇವು ಅರ್ಜುನನ ಹತ್ತು ಹೆಸರುಗಳು
**ಶ್ವೇತಾಶ್ವ** ಬಿಳಿ ಕುದುರೆ ಕಟ್ಟಿದ ರಥವನ್ನುಳ್ಳವನು– ಅರ್ಜುನ
**ಶ್ವೇತಾಶ್ವಸೂತ** ಬಿಳಿ ಕುದುರೆಗಳಿಗೆ ಸಾರಥಿ–ಕೃಷ್ಣ
**ಶ್ವೇನಪಕ್ಷಿ** ಗಿಡುಗ

## ಷ

**ಷಂಡ** ಶಿಖಂಡಿ, ನಪುಂಸಕ; ಗುಂಪು, ನೆರವಿ, ಸಮೂಹ; ಅಡವಿ, ಕಾಡು; ಗೂಳಿ
**ಷಟ್ಕರ್ಮ** ಆರು ಕರ್ಮಗಳು (ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ)
**ಷಟ್ಚಕ್ರ, ಷಟ್‌ಚಕ್ರ** ಮೂಲಾಧಾರ, ಮಣಿಪೂರ, ಸ್ವಾದಿಷ್ಠಾನ, ಅನಾಹತ, ವಿಶುದ್ಧ, ಆಜ್ಞಾ
**ಷಟ್‌ಚಕ್ರಭೇದನ** ಷಟ್‌ಚಕ್ರದ ಮೂಲಕ ಜೀವ ಶರೀರವನ್ನು ಬಿಡುವುದು
**ಷಟ್ಪದ** ದುಂಬಿ, ಅಳಿ, ಭೃಂಗ
**ಷಡುರಥ, ಷಡ್ರಥ** ದ್ರೋಣ, ಕರ್ಣ, ಜಯದ್ರಥ, ಅಶ್ವತ್ಥಾಮ, ದುರ್ಯೋಧನ, ಅಥವಾ ದುಃಶಾಸನ
**ಷಡುರಸ, ಷಡ್ರಸ** ಸಿಹಿ, ಕಹಿ, ಒಗರು, ಉಪ್ಪು, ಖಾರ, ಹುಳಿ ಎಂಬ ಆರು ರುಚಿಗಳು
**ಷಡೂರ್ಮಿ** ಆರುತೆರೆಗಳು–ಹಸಿವು, ನೀರಡಿಕೆ, ಶೋಕ, ಮೋಹ, ವಾರ್ಧಕ್ಯ, ಮರಣ
**ಷಡ್ಗುಣ** ಸಮಗ್ರ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ, ವೈರಾಗ್ಯ
**ಷಡ್ದರ್ಶನ** ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತ
**ಷಡ್ದ್ವಾರಭೇಧ** ಷಟ್‌ಚಕ್ರಗಳ ಭೇಧ
**ಷಡ್ರಿಪು** ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ
**ಷಡ್ವರ್ಗ** ಷಡ್ರಿಪುಗಳು

Rarest Archives

**ಷಡ್ವಿಧ** ಆರುರೀತಿ
**ಷಡ್‌ವೈರಿಗಳು** ಷಡ್ರಿಪುಗಳು
**ಷಡ್ವೈಷ್ಣವರು** ಬಲಿ, ವಿಭೀಷಣ, ಭೀಷ್ಮ, ಪ್ರಹ್ಲಾದ, ನಾರದ, ಧ್ರುವ
**ಷಣ್ಣವತಿ** ತೊಂಬತ್ತಾರು: ಅಮಾವಾಸ್ಯೆ-12, ವೈಧೃತಿ-13, ವ್ಯತೀಪಾತ-13, ಮನ್ವಾದಿ-14, ಯುಗಾದಿ-4, ಮಹಾಲಯ-16, ಅಷ್ಟಕೆ-12, ಸಂಕ್ರಾಂತಿ-12, ಇವು 96 ಪಿತೃಸಂಬಂಧಿ ದಿನಗಳು
**ಷಣ್ಣವತ್ಯಬ್ದ** ತೊಂಬತ್ತಾರು ವರ್ಷ
**ಷಣ್ಮತ** ಶೈವ, ವೈಷ್ಣವ, ಸೌರ, ಗಾಣಪತ್ಯ, ಕಾಪಾಲಿಕ, ಶಾಕ್ತೇಯ
**ಷಣ್ಮಹಿಷಿಯರು** ಜಾಂಬವತಿ, ಕಾಲಿಂದೀ, ನೀಲಾ, ಭದ್ರಾ, ಮಿತ್ರವಿಂದಾ, ಲಕ್ಷಣಾ ಈ ಆರು ಜನ 6ನೇ ಕಕ್ಷೆಯಲ್ಲಿ ಬರುವವರು: ರುಕ್ಮಿಣಿ ಸತ್ಯಭಾಮೆಯರು ಸಾಕ್ಷಾತ್ ಲಕ್ಷ್ಮಿಸ್ವರೂಪಿಣಿಯರು
**ಷಷ್ಟಿ** ಅರವತ್ತು
**ಷಷ್ಠಿ** ಆರು; ಚಾಂದ್ರಮಾನ ಪಕ್ಷದ ಆರನೆಯ ದಿನ
**ಷಾಡ್ಗುಣ್ಯ** ಷಡ್ಗುಣಗಳನ್ನು ಹೊಂದಿರುವುದು
**ಷಾಷ್ಟಿಕಮನೆತನ** ಅರವತ್ತೊಕ್ಕಲು
**ಷೋಡಶ** ಹದಿನಾರು
**ಷೋಡಶ ಉಪಚಾರ** ದೇವರು ಇಲ್ಲವೆ ಅತಿಥಿಗೆ ಅರ್ಪಿಸುವ ಹದಿನಾರು ಬಗೆಯ ಉಪಚಾರಗಳು (ಆಸನ, ಆವಾಹನ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ)
**ಷೋಡಶ ಮಹಾದಾನ** 16 ದಾನಗಳು-ಗೋ, ತಿಲ, ಭೂ, ಸ್ವರ್ಣ, ಘೃತ, ವಸ್ತ್ರ, ಧಾನ್ಯ, ಬೆಳ್ಳಿ, ಬೆಲ್ಲ, ಧನ, ಅನ್ನ, ಜಲ(ಬಾವಿ ತೋಡಿಸುವುದು), ಗ್ರಂಥ, ಕಲಶ, ಬೀಸಣಿಗೆ, ತಾಂಬೂಲ / ಹಸು, ಭೂಮಿ, ಚಿನ್ನ, ವಸ್ತ್ರ, ಆಭರಣ, ಛತ್ರ, ಚಾಮರ, ಶಯ್ಯೆ, ಬೀಸಣಿಗೆ, ಸಾಲಿಗ್ರಾಮ, ಧನ, ಧಾನ್ಯ, ದೀಪ, ಪಾದುಕೆ, ತುಪ್ಪ, ಕನ್ಯೆ
**ಷೋಡಷ ತತ್ತ್ವಗಳು** ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ, ವಿಷಯಪಂಚಕ ಮತ್ತು ಮನಸ್ಸು

## ಸ

**ಸಂಕರ** ಬೆರಕೆ, ಮಿಶ್ರಣ; ಶಂಕರ, ಶಿವ
**ಸಂಕರುಷಣ** ಸಂಕರ್ಷಣ-ವಿಷ್ಣು
**ಸಂಕಲ್ಪವೇದ** ವೇದವಿಹಿತವಾದ ಸಂಕಲ್ಪ
**ಸಂಕಾಶ** ಕಾಂತಿ, ಪ್ರಕಾಶ, ದೀಪ್ತಿ, ತೇಜ; ಸಮಾನ
**ಸಂಕೀರ್ತನೆ** ಸ್ತುತಿ
**ಸಂಕುಚಿತಕರ್ಮ** ಅಪ್ರಶಸ್ತ ಕರ್ಮ
**ಸಂಕುಲ** ಗುಂಪು
**ಸಂಕುಲೀಭೂತ** ಒಟ್ಟುಗೂಡಿರುವುದು
**ಸಂಕೋಲೆ** ಬೇಡಿ, ಕೋಳ, ಬಂಧನ
**ಸಂಕ್ರಂದನ** ಇಂದ್ರ
**ಸಂಕ್ರಮಣ** ಸಂಧಿ ಕಾಲ; ಒಟ್ಟಿಗೆ ಹೋಗುವಿಕೆ, ಚಲಿಸುವಿಕೆ
**ಸಂಕ್ಲೇಶ** ಕಷ್ಟ, ಕ್ಲೇಶ
**ಸಂಗಡಿ** ಜೊತೆಗಾರ
**ಸಂಗಡಿ(ಳಿ)ಸು** ಒಂದಾಗಿ ಬೆರೆ, ಸೇರು; ಸಂಗ್ರಹಿಸು
**ಸಂಗರ** ಯುದ್ಧ, ಯುದ್ಧರಂಗ
**ಸಂಗರಶ್ರಾಂತಿ** ಯುದ್ಧ ವಿರಾಮ
**ಸಂಗ್ರಾಮ** ಯುದ್ಧ
**ಸಂಘಟಿತ** ಗುಂಪುಕೂಡಿದ, ಜೊತೆಗೂಡಿದ
**ಸಂಘಟ್ಟಿಸು** ಸಂಘಟಿಸು, ಕೂಡಿಸು

Rarest Archiver

**ಸಂಘದುರಿತ** ಪಾಪಸಮೂಹ
**ಸಂಘಾತ** ಸಮೂಹ
**ಸಂಚನ್ನಿನಾದ** ಶಬ್ದಸಮೇತವಾದ, ಶಬ್ದದಿಂದ ಕೂಡಿದ
**ಸಂಚಿ** ಚಂಚಿ, ಚೌರಿ; ಬೇರೆ ಬೇರೆ ಖಾನೆಗಳಿರುವ ಚೀಲ, ಎಲೆ ಅಡಿಕೆಯ ಚೀಲ
**ಸಂಚಿಂತೆ** ಒಳ್ಳೆಯಚಿಂತೆ, ಸಮೀಚೀನ ಚಿಂತನ
**ಸಂಚಿತ, ಸಂಚಿತಕರ್ಮ** ಸಂಗ್ರಹಿತ, ಜನ್ಮಾಂತರಗಳಿಂದ ಕೂಡಿಟ್ಟ ಕರ್ಮ, ಹಿಂದೆ ಮಾಡಿದ ಕರ್ಮ
**ಸಂಚಿತಾರಬ್ಧಾಗಮ** ಹಿಂದಿನದು, ಇಂದಿನದು ಮತ್ತು ಮುಂದಿನದು
**ಸಂಚಿತಾರ್ಥ** ಕೂಡಿಟ್ಟ ಹಣ
**ಸಂಜನಿಸು** ಉಂಟಾಗು, ಹುಟ್ಟು; ತೋರು, ಪ್ರಕಟವಾಗು
**ಸಂಜೀವ** ಮರಳಿ ಜೀವವನ್ನು ತುಂಬಿಸುವವನು, ಪ್ರಾಣದಾತ
**ಸಂಜೀವನ** ಸತ್ತವರನ್ನು ಬದುಕಿಸುವ ಮೂಲಿಕೆ
**ಸಂಜೀವರಾಯ** ಆಂಜನೇಯ
**ಸಂಜೀವಿನಿ** ಔಷಧಿ, ಸತ್ತವರನ್ನು ಬದುಕಿಸಬಲ್ಲ ಮೂಲಿಕೆ
**ಸಂಜೆಚರ** ರಾಕ್ಷಸ, ಇರುಳು ಸಂಚರಿಸುವವ
**ಸಂಜೆಚರರಾರಿ** ರಾಕ್ಷಸರ ವೈರಿ, ನಿಶಾಚರರ ವೈರಿ; ಮಾರುತಿ
**ಸಂಜ್ಞಾ** ಸೂರ್ಯಪತ್ನಿ
**ಸಂತತ** ಅವಿಶ್ರಾಂತ, ಎಡೆಬಿಡದೆ, ಯಾವಾಗಲೂ
**ಸಂತಪ್ಯ** ನಿತ್ಯ ಸಂಸಾರದಿಂದ ಬಳಲುವ; ಸಂತೃಪ್ತಿ
**ಸಂತರಿಸು** ದಾಟಿಸು
**ಸಂತರ್ಪಣೆ** ಬಹಳ ಜನರಿಗೆ ತೃಪ್ತಿಯಾಗುವಂತೆ ಊಟಮಾಡಿಸುವುದು
**ಸಂತವಿಡು** ಸಮಾಧಾನಪಡಿಸು; ಸರಿಯಾಗಿರಿಸು, ಸಾವರಿಸು
**ಸಂತಾಪ** ಅತಿಯಾದ ತಾಪ, ಸಿಟ್ಟು; ಬೇಗುದಿ, ದುಃಖ, ಪಶ್ಚಾತ್ತಾಪ
**ಸಂತಾಮಸಜ್ಞಾನದಿನಪ** ವಿಶೇಷವಾದ ತಾಮಸ ಜ್ಞಾನವೆಂಬ ಗಾಢಾಂಧಕಾರಕ್ಕೆ ಸೂರ್ಯ
**ಸಂತಾರಕ** ಸಂಕಟಗಳಿಂದ ಪಾರುಮಾಡುವವನು
**ಸಂತಿ<ಸಂತೆ** ಮಾರುಕಟ್ಟೆ, ಗುಂಪುಗೂಡುವ ಜಾಗ; ಸಂತಳು, ಸಾಧ್ವಿ
**ಸಂತುಷ್ಟಗರ್ಭಿ** ನೆಮ್ಮದಿಯಿಂದ ಕೂಡಿದವನು
**ಸಂತೆನೆರಹು** ಗುಂಪುಗೂಡು
**ಸಂತೈಸು** ಸಮಾಧಾನಗೊಳಿಸು, ಸಾಂತ್ವನಗೊಳಿಸು
**ಸಂತ್ರಧಾರಿ** ಸತತ ಧಾರೆ
**ಸಂತ್ರಸ್ತಚೇತೋಭಯಧ್ವಸ್ತ** ಉಡುಗಿದ ಮನುಷ್ಯನ ಭಯವಿನಾಶಕ
**ಸಂದ** ಕಳೆದ, ಹಿಂದಿನ
**ಸಂದಣಿ** ಗುಂಪು, ಸಮೂಹ, ಸಂದೋಹ
**ಸಂದಣಿಸು** ದಟ್ಟವಾಗು, ಗುಂಪುಗೂಡು
**ಸಂದಹರಿ, ಸಂದಹರೆ** ಗಂಟನ್ನು ಬಿಡಿಸು
**ಸಂದಳಿ** ವ್ಯತ್ಯಾಸವಿಲ್ಲದಾಗು, ಭೇದವಿಲ್ಲದಾಗು; ಸಂದಣಿ
**ಸಂದಾತೆ** ಒಡತಿ, ದಾನಮಾಡುವವಳು
**ಸಂದಿತು** ತೀರಿತು, ಹೋಯಿತು, ಮುಟ್ಟಿತು, ತಲುಪಿತು
**ಸಂದು(ದೂ)ಕ** ಪೆಟ್ಟಿಗೆ, ಪೆಠಾರಿ
**ಸಂದುಗಡಿ** ಕೀಲು, ಮರಡು
**ಸಂದುಹೋಗು** ಕಳೆದುಹೋಗು
**ಸಂದೇಹ** ಸಂಶಯ, ಅನುಮಾನ, ಗುಮಾನಿ
**ಸಂದೋಹ** ಗುಂಪು, ಸಮೂಹ
**ಸಂದ್ರ** ಸಮುದ್ರ
**ಸಂಧಡಿ** (?) ಸಂಚು, ಮೋಸ (?)
**ಸಂಧಿ** ಸೇರಿಕೆ, ಸಂಯೋಗ; ಸಂದು, ಕೀಲು
**ಸಂಧಿಸೊದಗು** ಸಮಯದಲ್ಲಿ ಬರು, ಆಪದ್ಬಾಂಧವ

Rarest Archive

**ಸಂಧ್ಯಾನ** ಸಂಧ್ಯೋಪಾಸನ, ಸಂಧ್ಯಾವಂದನ, ಆಹ್ನಿಕ; ಚೆನ್ನಾಗಿ ಧ್ಯಾನ ಮಾಡುವುದು

**ಸಂಧ್ಯಾಸಂಧ್ಯಾ** ತ್ರಿಸಂಧ್ಯಾ ಕಾಲಗಳು

**ಸಂಧ್ಯಾಸುಮಂತ್ರಋಷಿ** ವಿಶ್ವಾಮಿತ್ರ ಋಷಿ

**ಸಂಧ್ಯೋಪಾಸ್ತಿ** ಸಂಜೆಯ ಪೂಜೆ, ಸಂಧ್ಯೋಪಾಸನೆ

**ಸಂಪದ** ಐಶ್ವರ್ಯ, ಸಿರಿ

**ಸಂಪಾತಿ** ಒಬ್ಬ ವಾನರ

**ಸಂಪು** ಸೊಂಪು, ಸೊಗಸು

**ಸಂಪುಟ** ಭರಣಿ, ಸಣ್ಣ ಕೈಪೆಟ್ಟಿಗೆ

**ಸಂಪೋತ** ಹಡಗು

**ಸಂಪ್ರಿಯತಮ** ಸಕಲ ಚರಾಚರ ಚೇತನಾಚೇತನಗಳಿಗೂ ಬೇಕಾದವನು–ಶ್ರೀಹರಿ

**ಸಂಬಾಳಿಸು** ಸಮಾಧಾನ ಪಡಿಸು; ರಕ್ಷಿಸು, ಜತನಮಾಡು; ನಿರ್ವಹಿಸು

**ಸಂಭರಿತ** ಪೂರ್ತಿ ತುಂಬಿದ

**ಸಂಭೂತಿ** ಆವಿರ್ಭಾವ; ಸಂಭವಿಸುವುದು, ಹುಟ್ಟುವುದು

**ಸಂಭ್ರಮ** ಆನಂದ

**ಸಂಮೊಗ** ಸಮ್ಮುಖ, ಸಾನ್ನಿಧ್ಯ

**ಸಂಯಮ** ಹತೋಟಿ, ಹಿಡಿತ, ಇಂದ್ರಿಯ ನಿಗ್ರಹ

**ಸಂಯಮೀಂದ್ರ** ಯತಿಶ್ರೇಷ್ಠ

**ಸಂರಂಭ** ಸಡಗರ, ಸಂಭ್ರಮ

**ಸಂವರ** ನೀರು

**ಸಂವಹ** ಮರುತ

**ಸಂವಿತ್ತು** ಜ್ಞಾನ

**ಸಂವಿದ್ರೂಪ** ಪರಮಜ್ಞಾನಿ, ಸರ್ವಜ್ಞ

**ಸಂಸರ್ಗ** ಸಹವಾಸ, ಸಂಪರ್ಕ

**ಸಂಸಾರವಾರಾಶಿ** ಸಂಸಾರ ಸಮುದ್ರ

**ಸಂಸಾರವಿಮೋಚಕ** ಜೀವನದಿಂದ ಮುಕ್ತ ಮಾಡುವವನು ಶ್ರೀಹರಿ

**ಸಂಸು (?)** ವ್ಯಾಪಿಸು (?)

**ಸಂಸೃತಿ** ಸಂಸಾರ, ಜನನ, ಮರಣಗಳ ಚಕ್ರ; ಸಮೀಚೀನ ಸಂಪ್ರದಾಯ

**ಸಂಸೃತಿಯಗರ್ತ** ಸಂಸಾರದ/ಸಂಪ್ರದಾಯದ ಸುಳಿ

**ಸಂಸೇವ್ಯ** ಸಮರ್ಥ, ಗೌರವಾರ್ಹ, ಸುಯೋಗ್ಯ

**ಸಂಸ್ತುತಿ** ಭಕ್ತಿಯಿಂದಾಚರಿಸಿದ ಸ್ತವನ, ಸ್ತೋತ್ರ

**ಸಂಸ್ನುತ** ಸುವಿದ್ಯೆ

**ಸಂಸ್ಮರಣೆ** ಸುಚಿಂತನೆ

**ಸಂಸ್ಮೃತಿ** ಜ್ಞಾಪಿಸಿಕೊಳ್ಳುವುದು, ಪ್ರಾರ್ಥನೆ, ಸಮೀಚೀನ, ಸ್ಮರಣೆ

**ಸಂಹನನ** ದೇಹ

**ಸಂಹೃತಿ** ಆಹಾರ

**ಸಕಲ** ಎಲ್ಲ, ಸಮಗ್ರ

**ಸಕಲಾತಿ** ದುಪ್ಪಟಿ, ಕಸೂತಿ ಹಾಕಿದ ಬಟ್ಟೆ, ವಸ್ತ್ರ ವಿಶೇಷ, ಶ್ರೇಷ್ಠವಾದ ಉಣ್ಣೆ ಬಟ್ಟೆ

**ಸಕಾಶ** ಸಮೀಪ

**ಸಕ್ತ** ಆಸಕ್ತ, ಶ್ರದ್ಧೆಯುಳ್ಳ

**ಸಕ್ತಿ** ಆಸಕ್ತಿ, ಶ್ರದ್ಧೆ, ಹೊಂದಿಕೆ

**ಸಖ** ಗೆಳೆಯ

**ಸಖಗಳೆರಡು** ಜ್ಞಾನ ಭಕ್ತಿಗಳೆರಡು ಸ್ನೇಹಿತರಂತೆ ಹಿತಕಾರಿಗಳು

**ಸಖ್ಯ** ಸ್ನೇಹ, ಗೆಳೆತನ

**ಸಗಟು** ಸೌಟು; ಒಟ್ಟುಮೊತ್ತ, ರಾಶಿ

**ಸಗರತನಯಾ** ಸಾಗರದ ಪುತ್ರಿ–ಲಕ್ಷ್ಮಿ

**ಸಗ್ಗಲೆ(ಳೆ)** ನೀರು ತುಂಬುವ ಚರ್ಮದ ಚೀಲ

**ಸಗ್ಗು** ಬಾಗು, ಮಣಿ; ಹಿಮ್ಮೆಟ್ಟು, ಹಿಂಜರಿ

**ಸಚರಾಚರ** ಸ್ಥಾವರ ಜಂಗಮವಾದ ಪ್ರಪಂಚ

**ಸಚೇಲ** ವಸ್ತ್ರಸಹಿತ

**ಸಚ್ಚಾರಿತ್ರ** ಒಳ್ಳೆಯ ನಡೆ ನುಡಿ

**ಸಚ್ಚಿದಾನಂದ** ಆನಂದ ಸ್ವರೂಪನಾದ ಪರಮಾತ್ಮ, ಸತ್ ಚಿತ್ ಆನಂದ ಆತ್ಮ

Rarest Archive

**ಸಚ್ಚಿದಾನಂದೈಕ್ಯ** ಸತ್–ಇರುವಿಕೆ, ಚಿತ್–ಜ್ಞಾನ, ಆನಂದ–ಸಂತಸ–ಈ ಮೂರೂ ಹೊಂದಿದ ಶ್ರೀಹರಿ

**ಸಚ್ಚಿದ್ರೂಪ** ಸತ್ಯ ಮತ್ತು ಚೈತನ್ಯಗಳುಳ್ಳ ರೂಪ

**ಸಚ್ಛಿಷ್ಯ** ಒಳ್ಳೆಯ ಶಿಷ್ಯ, ನಿಜವಾದ ಶಿಷ್ಯ

**ಸಜ** ಶಿಕ್ಷೆ, ದಂಡನೆ, ಕಾರಾಗೃಹವಾಸ

**ಸಜ್ಜಿಸು** ಸಜ್ಜುಗೊಳಿಸು

**ಸಜ್ಜೆಗೃಹ** ಶಯ್ಯಾಗೃಹ, ಮಲಗುವಮನೆ

**ಸಟ** ಕೇಸರ, ಅಯಲು; ಛಾಯೆ

**ಸಟಾಂಕ** ಕುದುರೆ

**ಸಟಾಕೇಸರ** ಸಿಂಹದ ಮುಖದ ಸುತ್ತಲೂ ಇರುವ ಕೇಶರಾಶಿ

**ಸಟಿ, ಸಟೆ** ಸುಳ್ಳು

**ಸಟ್ಟುಗ** ಹುಟ್ಟು; ಸೌಟು

**ಸಡಕು** ಗೊಂಡೆ, ಅಲಂಕಾರದ ಕುಚ್ಚು

**ಸಡಿ** ದೂಷಣೆ

**ಸಡ್ಡಿ(ಡ್ಡೆ)** ಬಿತ್ತುವ ಸಾಧನ

**ಸಡ್ಡೆ** ಶ್ರದ್ಧೆ; ಸವಾಲು

**ಸಣ್ಣಿಶಾಲ್ಯೋದನ** ಸಣ್ಣಕ್ಕಿಯ ಅನ್ನ

**ಸತ್** ಒಳ್ಳೆಯ, ಸುಂದರ

**ಸತಿಗೆಕೊಟ್ಟವರ** ರಾಮಾವತಾರದಲ್ಲಿ ಸೀತಾದೇವಿಗೆ ಕೊಟ್ಟ ವರ

**ಸತಿಯುಪಡೆದವಳಸುತ** ಸೀತಾದೇವಿಯನ್ನು ಪಡೆದ ಭೂದೇವಿಯ ಮಗ ನರಕಾಸುರ

**ಸತಿಯಳಪಡೆದೊಯ್ದಾತ** ಭೂಮಿಯನ್ನು ಒಯ್ದ ಹಿರಣ್ಯಾಕ್ಷ

**ಸತುವ<ಸತ್ವ** ಸಾರ, ತಿರುಳು; ಸಾತ್ವಿಕಗುಣ

**ಸತುಶಾಸ್ತ್ರ** ಸತ್ಯವನ್ನು ಒಪ್ಪುವ ಶಾಸ್ತ್ರ; ದ್ವೈತಶಾಸ್ತ್ರ

**ಸತ್ಕುಲ** ಒಳ್ಳೆಯ ವಂಶ

**ಸತ್ಕೃತಿ** ಒಳ್ಳೆಯ ಕೆಲಸ

**ಸತ್ತ, ಸತ್ತಾ** ಇರುವಿಕೆ, ಅಸ್ತಿತ್ವ

**ಸತ್ತಿ, ಸತ್ತಿಗೆ** ಛತ್ರ; ಬೆಳ್ಗೊಡೆ, ಕೊಡೆ, ಛತ್ರಿ

**ಸತ್ತ್ರಾದಿದಾತ** ಅನ್ನ ಆಹಾರಾದಿಗಳನ್ನು ಕೊಡುವವನು, ಸುಖಾನಂದ ಕೊಡುವವನು

**ಸತ್ತ್ವ** ಇರುವಿಕೆ, ಅಸ್ತಿತ್ವ; ಸಾಮರ್ಥ್ಯ

**ಸತ್ಪಾತ್ರ** ದಾನ ಸ್ವೀಕಾರಕ್ಕೆ ಯೋಗ್ಯನಾದವನು

**ಸತ್ಪುರುಟ** ಚೊಕ್ಕ ಬಂಗಾರ

**ಸತ್ಯಕಾಮ** ನಿಜವಾಗಿ ಮಾಡಿಯೇ ತೀರುವ

**ಸತ್ಯಜಿತು** ದ್ರುಪದನ ಕೊನೆಯ ಮಗ

**ಸತ್ಯಮಿತೆ** ಸತ್ಯಜ್ಞಾನ ಉಳ್ಳ

**ಸತ್ಯಲೋಕ** ಬ್ರಹ್ಮಲೋಕ, ಬ್ರಹ್ಮವಾಸ

**ಸತ್ಯವತಿಜ, ಸತ್ಯವತಿಸುತ, ಸತ್ಯವತಿಸೂನು, ಸತ್ಯವತಿವರಸೂನು** ಸತ್ಯವತಿಯ ಮಗ ವೇದವ್ಯಾಸ

**ಸತ್ಯಶಾಸನ** ವೇದಗಳ ಮೂಲಕ ತಿಳಿಯಬಹುದಾದ ಶ್ರೀಹರಿ

**ಸತ್ಯಸಂಕಲ್ಪ** ತನ್ನ ಇಚ್ಛೆಯಂತೆ ಕೊಡುವ ಶಕ್ತಿಯುಳ್ಳವನು, ನಿಜವನ್ನು ಹುಟ್ಟಿಸುವವ, ನಿಜವಾಗಿ ಹುಟ್ಟಿಸುವವ–ವಿಷ್ಣು

**ಸತ್ಯಾಪ್ರಿಯ** ಸತ್ಯಭಾಮೆಯ ಪ್ರಿಯನಾದ ಕೃಷ್ಣ

**ಸತ್ಯೇಶ** ಬ್ರಹ್ಮ

**ಸತ್ರ** ಯಾಗ; ಛತ್ರ; ಕೂಟ

**ಸತ್ರಬುದ್ಧಿ** ಧರ್ಮಬುದ್ಧಿ

**ಸತ್ರಾಣ** ಸಶಕ್ತ, ಬಲಶಾಲಿ

**ಸತ್ಪ್ರಾಪ್ರತೀತಿ** ಉತ್ತಮ ಅನುಭವ ಕೊಡುವ

**ಸತ್ವತಾಮಸರು** ಗರುಡ, ಸೌಪರ್ಣಿ, ಶೇಷ, ವಾರುಣಿ, ಮಹೇಶರು

**ಸತ್ವಪ್ರಚುರ** ಬಹಳ ಪರಿಶುದ್ಧಾತ್ಮಕ

**ಸತ್ವರ** ಬೇಗನೆ

**ಸತ್ವರಾಜಸರು** ಬ್ರಹ್ಮ–ವಾಯು

**ಸತ್ಶ್ರವಣ** ಒಳ್ಳೆಯದನ್ನು ಕೇಳುವುದು

**ಸಥಿ, ಸಥೆ** ಆತ್ಮೀಯತೆ, ಸಲುಗೆ; ಮೇಲುಗಡೆ

**ಸದನ** ಮನೆ, ವಸತಿ

**ಸದನಿ** ಮನೆಯಲ್ಲಿರುವವಳು

Rarest Archiver

**ಸದನೆ** ಆಗರವಾದಂಥವಳು
**ಸದಮಲ** ಪವಿತ್ರವಾದ, ಶುದ್ಧ, ನಿರ್ಮಲ
**ಸದಮಲಾಂಬರ** ನಿರ್ಮಲವಾದ ವಸ್ತ್ರ
**ಸದಮಲಾನಂದ** ಭಗವಂತನ ಸೇವೆಯಲ್ಲಿ ದೊರಕುವ ಸುಖ
**ಸದಯ** ದಯವುಳ್ಳವನು, ದಯಾಶೀಲನಾದವನು, ಸಹೃದಯಿ
**ಸದರ** ಸಲಿಗೆ, ಸುಲಭ
**ಸದಾಚಾರಸ್ಮೃತಿ** ಮಧ್ವಾಚಾರ್ಯರಿಂದ ರಚಿತವಾದ ಒಂದು ಗ್ರಂಥ
**ಸದೃಶ** ಸಮಾನ
**ಸದೆ** ಹೊಡಿ, ಬಡಿ; ಕೊಲ್ಲು
**ಸದೆದೊರಗಿಸು** ಕುಟ್ಟಿ ಕೆಡಹು
**ಸದೋದಿತ** ಸದಾ ಉದಯಿಸಿದ
**ಸದೋಷಿ** ದೋಷವುಳ್ಳವನು
**ಸದ್ಗುಣ** ಒಳ್ಳೆಯ ಗುಣ
**ಸದ್ಗೈಸು** ಒಳಿತನ್ನು ಮಾಡು
**ಸದ್ದೋಷಿ** ಪೂರ್ಣದೋಷಿ
**ಸದ್ಧಾಮ** ಒಳ್ಳೆಯ ನೆಲೆ
**ಸದ್ಭಾಷಿಣೀ** ಒಳ್ಳೆಯ ಮಾತುಗಳನ್ನಾಡುವವಳು
**ಸದ್ಮ** ಸದನ, ಮನೆ
**ಸದ್ಮಸ್ಥ** ಪೀಠಸ್ಥ
**ಸದ್ಯೋಘೃತ** ಅದೇ ಬೆಣ್ಣೆ ಕಾಸಿದ ತುಪ್ಪ, ಹೊಚ್ಚಹೊಸ ತುಪ್ಪ
**ಸದ್ಯೋಜಾತ** ಶಿವ (ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ–ಶಿವನ ಪಂಚ ಮುಖಗಳು)
**ಸದ್ರತಿ** ಒಳ್ಳೆ ಆಸಕ್ತಿ
**ಸದ್ವೃತ್ತ** ಸದಾಚಾರ, ಸದಾಚಾರಿ
**ಸದ್ವೈಕಲಭ್ಯ** ಸದ್ಭಕ್ತರಿಗೆ ಮಾತ್ರ ಲಭ್ಯ–ಶ್ರೀಹರಿ
**ಸಧನೇ** ಸಂಪದಧಿದೇವತೆ–ಲಕ್ಷ್ಮಿ
**ಸಧಿ** ಪ್ರಭಾವ, ವರ್ಚಸ್ಸು
**ಸನಕಸನಂದ(ನ)** ಬ್ರಹ್ಮನ ಮಾನಸ ಪುತ್ರರು
**ಸನಕಾದಿ** ಬ್ರಹ್ಮನ ಮಾನಸ ಪುತ್ರರು–ಸನಕ, ಸನಂದನ, ಸನತ್ಸುಜಾತ, ಸನತ್ಕುಮಾರ
**ಸನಾತನ** ವಿಷ್ಣು, ಬ್ರಹ್ಮ, ಶಿವ; ಹಳಬ, ಪುರಾತನ ವ್ಯಕ್ತಿ, ಪುರಾತನ; ಶಾಶ್ವತ
**ಸನಾಥ** ಅಸ್ವತಂತ್ರ, ಒಡೆಯನುಳ್ಳವನು
**ಸನ್ನ(ನ್ನಾ)ಹ** ಸಿದ್ಧತೆ, ಸಜ್ಜು; ಉಪಕರಣ; ಸಂದಣಿಸು; ಕವಚ; ಸೇನೆ
**ಸನ್ನಗದ್ಗದ** ಮೆಲುದನಿಯಲ್ಲಿ ಗದ್ಗದಿಸುವುದು
**ಸನ್ನದ್ಧ** ಸಿದ್ಧ
**ಸನ್ನಿ, ಸನ್ನಿಪಾತ** ಕಲ್ಮಷ, ಕೊಳೆ; ಅಧಿಕ ಜ್ವರದಿಂದಾಗುವ ಪರಿಣಾಮ; ಬುದ್ಧಿಭ್ರಮಣೆ
**ಸನ್ನಿಕರ್ಷ** ಹತ್ತಿರ ಬರುವುದು; ಮೋಹಿತ
**ಸನ್ನಿಕರ್ಷಣ** ಸಾಮೀಪ್ಯ
**ಸನ್ನಿಭ** ಸದೃಶ, ಸಮಾನವಾದ; ಪ್ರಕಾಶಿತ
**ಸನ್ನುತ** ಚೆನ್ನಾಗಿ ಹೊಗಳಲ್ಪಟ್ಟವನು, ಸ್ತುತಿಸಲ್ಪಟ್ಟವನು
**ಸನ್ನುಮಾನ<ಸನ್ಮಾನ** ಗೌರವ
**ಸನ್ನೆ** ಸಂಜ್ಞೆ, ಸುಳಿವು
**ಸನ್ನೆಸಂಜ್ಞೆ ಕುಂದು** ಕೊನೆಯ ಗಳಿಗೆಯಲ್ಲಿ ಅರಿವು ಮರೆಯಾಗು
**ಸನ್ನೇಸಿ** ಸಂನ್ಯಾಸಿ
**ಸನ್ಮತ** ಒಪ್ಪಿಗೆ
**ಸನ್ಮತಿ** ಸದ್ಬುದ್ಧಿ
**ಸನ್ಮಹಿತ** ಸಜ್ಜನವಂದ್ಯ
**ಸನ್ಮುಡಿವಾಳ** ಸಮೀಚೀನವಾದ ವಾಸನೆಯಿಂದ ಕೂಡಿದ ಒಂದು ಸಸ್ಯದ ಬೇರು, ಲಾವಂಚ
**ಸನ್ಮುದರೂಪ** ಸಂತೋಷದ ಮೂರ್ತಿ, ಆನಂದ ರೂಪ
**ಸನ್ಯಾಯುವಂತ** ಸುಜನರಿಗೆ ಬಾಧೆಯಾಗದಂತೆ ನ್ಯಾಯವಂತನಾಗಿರುವವ

Rarest Archiver

**ಸಪಾದ** ಕಾಲು ಭಾಗ, ನಾಲ್ಕನೆಯ ಒಂದು ಭಾಗ
**ಸಪುತ**<ಸಪ್ತ ಏಳು
**ಸಪುತಧಾತು** ಸಪ್ತಧಾತು
**ಸಪುತಸಾರಿ** ಏಳುಬಾರಿ
**ಸಪುತಾಂಬುಧಿ** ಸಪ್ತಸಾಗರಗಳು
**ಸಪುತಾರ್ಚಿ** ಏಳು ಮುಖಗಳುಳ್ಳ, ಏಳು ನಾಲಿಗೆಯುಳ್ಳ–ಅಗ್ನಿ
**ಸಪ್ತ(ಸಪುತ)ದ್ವೀಪ** ಜಂಬು, ಪ್ಲಕ್ಷ, ಕುಶ, ಕ್ರೌಂಚ, ಶಾಕ, ಶಾಲ್ಮಲೀ, ಪುಷ್ಕರ
**ಸಪ್ತಋಷಿಗಳು** ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ವಸಿಷ್ಠ ಹಾಗೂ ಕಶ್ಯಪ
**ಸಪ್ತಚಿರಂಜೀವಿಗಳು** ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪ, ಪರಶುರಾಮ
**ಸಪ್ತಜಿಂಹ್ವೆ, ಸಪ್ತಜಿಹ್ವಾ** ಏಳು ನಾಲಿಗೆಯುಳ್ಳ ಅಗ್ನಿ
**ಸಪ್ತಜ್ಞಾನ** ಚಾಕ್ಷುಷ, ಶ್ರೋತ್ರಜ, ತ್ವಾಚ, ರಾಸನ, ಘ್ರಾಣನ, ಮಾನಸ ಹಾಗೂ ಸಾಕ್ಷಿ ಎಂಬ ಏಳು ಬಗೆಯ ಪ್ರತ್ಯಕ್ಷ ಜ್ಞಾನಗಳು
**ಸಪ್ತತ್ರಯ** ಇಪ್ಪತ್ತೊಂದು
**ಸಪ್ತತ್ರಿಂಶತ್** ಮೂವತ್ತೇಳು
**ಸಪ್ತದ್ವಯಲೋಕ** ಹದಿನಾಲ್ಕು ಲೋಕಗಳು
**ಸಪ್ತಧಾತು** ದೇಹದಲ್ಲಿರುವ ರಸ, ರಕ್ತ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜೆ, ಶುಕ್ರ
**ಸಪ್ತಪರ್ಣ(ರ್ನ)** ಏಳೆಲೆ ಬಾಳೆಗಿಡ
**ಸಪ್ತಪೆಡೆ** ಏಳು ಹೆಡೆ
**ಸಪ್ತಮುದ್ವಾರಗಳು** ಪಂಚೇಂದ್ರಿಯಗಳು + ಮನಸ್ಸು, ಬುದ್ಧಿ
**ಸಪ್ತಮರೂಪ** ಶುಕ್ಲ, ನೀಲ, ಪೀತ, ರಕ್ತ, ಹರಿತ, ಕಪಿಶ, ಚಿತ್ರ
**ಸಪ್ತಮರ್ಷಿ** ಸಪ್ತರ್ಷಿಗಳಲ್ಲಿ ಒಬ್ಬ
**ಸಪ್ತಲೋಕ** ಭೂ, ಭುವಃ, ಸ್ವಃ, ಮಹಃ, ಜನೋಲೋಕ, ತಪೋಲೋಕ, ಸತ್ಯಲೋಕ
**ಸಪ್ತಸಪ್ತಭುವನ** ಹದಿನಾಲ್ಕು ಲೋಕ
**ಸಪ್ತಸಮುದ್ರ, ಸಪ್ತಸಾಗರ** ಲವಣ(ಉಪ್ಪು), ಇಕ್ಷು (ಕಬ್ಬಿನ ಹಾಲು),ಸುರಾ(ಮದ್ಯ), ಸರ್ಪಿಸ್ (ತುಪ್ಪ), ದಧಿ(ಮೊಸರು), ಕ್ಷೀರ(ಹಾಲು) ಹಾಗೂ ಜಲ
**ಸಪ್ತಸುಸ್ಥಾನದಿ** ಏಳುಲೋಕಗಳು
**ಸಪ್ತಾನ್ನಕಲ್ಪಕ** ಸಪ್ತಾನ್ನಗಳನ್ನು ನಿರ್ಮಾಣ ಮಾಡಿದವನು–ಶ್ರೀಹರಿ
**ಸಪ್ತಾರ್ಚಿ** ಅಗ್ನಿ
**ಸಪ್ತಾವರಣ** ಅಪ್, ತೇಜಸ್, ವಾಯು, ಆಕಾಶ, ಅಹಂಕಾರ, ಮಹತ್ ಹಾಗೂ ತ್ರಿಗುಣಗಳೆಂಬ ಬ್ರಹ್ಮಾಂಡದ ಸಪ್ತಾವರಣಗಳು
**ಸಪ್ತಾಶ್ವ** ಏಳು ಅಶ್ವಗಳು
**ಸಪ್ತೆರಡುಭಕ್ತಿ** 7+2=9 ನವವಿಧಭಕ್ತಿ
**ಸಪ್ತೆರಡುಭುವನ** 7X2=14 ಹದಿನಾಲ್ಕು ಲೋಕ
**ಸಪ್ಪುಳ** ಶಬ್ದ, ಸದ್ದು
**ಸಬಕಾರ** ಸಾಬೂನು, ಸೋಪು
**ಸಬಳ** ಈಟಿ
**ಸಬ್ಬಲ** ಸರ್ವಬಲ
**ಸಭಾಪೂಜೆಗರ್ಹ** ಸಭಾ ಮರ್ಯಾದೆಗೆ ಯೋಗ್ಯ ವಾದವನು–ಕೃಷ್ಣ(ಭಾರತದಲ್ಲಿ ರಾಜಸೂಯ ಯಾಗ ಸಂದರ್ಭ)
**ಸಭಾರ್ಯ** ಪತ್ನೀಸಮೇತನಾದ
**ಸಮಕಟಿ** ಮಟ್ಟಸವಾದ ನಡು, ಸಿಂಹದ ನಡುವಿನಂತಹ ಚಿಕ್ಕದಾದ ಸೊಂಟ
**ಸಮಜಾನು** ಸಮನಾದ ಮೊಣಕಾಲು
**ಸಮದರ್ಶಿ** ಸಮಾನವಾಗಿ ನೋಡುವವನು
**ಸಮನಿಸು** ದೊರಕು
**ಸಮಪಾದವಿಟ್ಠಲ** ಎರಡೂ ಪಾದಗಳನ್ನು ಜೋಡಿಸಿ ನಿಂತಿರುವ ಪಂಡ(ಢ)ರಪುರದ ವಿಟ್ಠಲ, ಅಭಂಗವಿಠಲ
**ಸಮಭ್ಯಧಿಕ** ಸರಿ ಮತ್ತು ಉತ್ತಮ

Rarest Archiver

**ಸಮಯ** ಸಿದ್ಧಾಂತ, ಮತ, ಧರ್ಮ; ಕಾಲ, ಹೊತ್ತು
**ಸಮರ್ಹಣ** ಪೂಜೆ, ಸಮರ್ಪಣೆ, ಅರ್ಪಿಸುವಿಕೆ
**ಸಮವಿರಹಿತ** ತನಗೆ ಸಮರಾದವರು ಇಲ್ಲದವನು
**ಸಮಷ್ಟಿ** ಸಮಗ್ರತೆ, ಸಂಪೂರ್ಣವಾದುದು
**ಸಮಾಧಿ** ಅಷ್ಟಾಂಗ ಯೋಗದಲ್ಲಿ ಕೊನೆಯ ಮೆಟ್ಟಿಲು, ತನ್ಮಯತೆ, ಕಾವ್ಯಗುಣ, ಲೋಕವನ್ನು ಸಂಪೂರ್ಣವಾಗಿ ಮರೆತು ಧ್ಯಾನಸ್ಥನಾಗಿರುವುದು
**ಸಮಾಧಿಕಶೂನ್ಯ** ತನಗೆ ಸಮಾನರೂ ಅಧಿಕರೂ ಇಲ್ಲದ ಶ್ರೀಹರಿ
**ಸಮಾಸಮೆ** ಲಕ್ಷ್ಮಿ
**ಸಮಾಸೀನ** ಸಮಾನ ಆಸನದಲ್ಲಿ ಕುಳಿತಿರುವವನು
**ಸಮಿತಿ, ಸಮಿತೆ** ಸಮಿತ್ತು, ಹೋಮಕ್ಕೆ ಬೇಕಾಗುವ ಅತ್ತಿ, ಅರಳಿ ಮುಂತಾದ ಮರಳೆ
**ಸಮಿತೆಸಮ** ಕಾಲಕಾಲಕ್ಕೆ ಬೇಕಾಗುವಷ್ಟು ಬಲವುಳ್ಳ
**ಸಮಿಧೆ** ಸಮಿತೆ, ಯಜ್ಞಕ್ಕಾಗಿ ಬಳಸುವ ಉರುವಲು ಕಡ್ಡಿ
**ಸಮೀಚೀನ** ಯೋಗ್ಯವಾದ, ಸರಿಯಾದ; ಸಮೃದ್ಧವಾದ, ಯಥೇಚ್ಛವಾದ
**ಸಮೀರ** ಗಾಳಿ, ವಾಯು, ವಾಯುದೇವರ ಮೂಲರೂಪ; ಸ್ವತಂತ್ರ
**ಸಮೀರಗಿರಿ** ವೆಂಕಟಾಚಲ, ಅಂಜನಾಗಿರಿ
**ಸಮೀರಜ** ವಾಯುವಿನ ಮಗ, ಹನುಮಂತ, ಭೀಮ, ಮಧ್ವಾಚಾರ್ಯ
**ಸಮೀರಣ** ವಾಯುದೇವರು
**ಸಮೀರಾಶನ** ಶೇಷ, ಹಾವು
**ಸಮೀಹ** ಸರ್ವಾಭೀಷ್ಟದಾಯಕ ಶ್ರೀಹರಿ
**ಸಮುಖ** ಸಮ್ಮುಖ, ಸನ್ನಿಧಿ, ಸನ್ನಿಧಾನ; ಅನುಕೂಲ ಸಿದ್ಧಿ
**ಸಮುದ್ಧೃತ್** ಮೇಲೆದ್ದ
**ಸಮುದ್ರಜಾಪತಿ** ಲಕ್ಷ್ಮೀಪತಿ–ವಿಷ್ಣು
**ಸಮೆದಅಸ್ತ್ರ** ದಿವ್ಯಾಸ್ತ್ರ, ಕಂಡರಿಸಿದ ಆಯುಧ
**ಸಮೇಲ(ಳ)** ಒಂದು ವಾದ್ಯ; ಜೊತೆಯಾಗಿ ಬರುವುದು, ಮೇಳಸಹಿತ ವಾಗಿ ಬರುವುದು
**ಸಮ್ಮಾರ್ಜಿಸು** ತೊಳೆ, ಕಸಹೊಡೆ, ಶುದ್ಧಿಮಾಡು
**ಸಮ್ಮುದ, ಸಮ್ಮೋದ** ಉತ್ತಮ ಆನಂದ, ಅಪಾರ ಸಂತೋಷ
**ಸಮ್ಮೋದಸಮ್ಮೋಹಕ** ಆನಂದಸ್ವರೂಪಿಯಾದ ತಾನು (ವಿಷ್ಣು) ಜಗತ್ತನ್ನು ಮೋಹಗೊಳಿಸುವವನು
**ಸಮ್ಯ(ಗ್)ಜ್ಞಾನ** ನಿಜವಾದ ಜ್ಞಾನ
**ಸಮ್ಯಕ್** ಒಳ್ಳೆಯ, ಸರಿಯಾದ, ಪೂರ್ಣ
**ಸಮ್ಯಕ್‌ಜ್ಞಾನ** ತತ್ತ್ವಜ್ಞಾನ, ಪೂರ್ಣಜ್ಞಾನ
**ಸಮ್ಯೋಚನೆ** ಚೆನ್ನಾಗಿ ಚಿಂತನೆ
**ಸಯವಾಗು** ಸರಿಯಾಗು, ಸಹಾಯವಾಗು; ತನಗೆ ತಾನೇ, ಮೆಚ್ಚಿಗೆಯ ಮಾತು
**ಸರ** ಉಲಿ, ಧ್ವನಿ, ಸ್ವರ; ಸರಳು, ಅಂಬು, ಶರ; ಕೊಳ; ಹಾರ, ಹಗ್ಗ
**ಸರಕನೆ** ಕೂಡಲೆ, ಗಕ್ಕನೆ, ತಕ್ಷಣ
**ಸರಕು** ಆಹಾರ ಪದಾರ್ಥ; ಶಬ್ದ; ದೂರ ಸರಿಸು; ಲಕ್ಷ್ಯ(ವಿಟ್ಟು); ಮಾರಲಿಟ್ಟ ಸಾಮಾನು
**ಸರಕುಮಾಡು** ಗೌರವಿಸು, ಮನ್ನಿಸು, ಲಕ್ಷ್ಯಮಾಡು
**ಸರಮೆಯರಸ** ಸರಮೆಯ ಪತಿಯಾದ ವಿಭೀಷಣ
**ಸರವಳಿಗೆ** ಸೇವಿಗೆ, ಒಂದು ಜಾತಿಯ ಹೋಳಿಗೆ (ಹುರಕ್ಕಿ ಹೋಳಿಗೆ)
**ಸರಸ** ಚೆಲ್ಲಾಟ, ವಿನೋದ
**ಸರಸಸದ್ಗತಿ** ಯೋಗ್ಯತಾನುಸಾರವಾಗಿ ಆನಂದಾನುಭವವುಳ್ಳ ಮುಕ್ತಿ
**ಸರಸಿ** ಸರೋವರ
**ಸರಸಿ(ಸೀ)ರುಹ** ತಾವರೆ, ಕಮಲ
**ಸರಸಿಜ** ತಾವರೆ
**ಸರಸಿಜಕಂಗೆಡುವಕಾಲ** ತಾವರೆ ಮುಚ್ಚುವ ಕಾಲ, ಸಾಯಂಕಾಲ
**ಸರಸಿಜಗಾಪ್ತ** ಸೂರ್ಯ

Rarest Archives

**ಸರಸಿಜಗಾಪ್ತಜ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ

**ಸರಸಿಜಜಾತ** ಬ್ರಹ್ಮ

**ಸರಸಿಜನಯ್ಯ** ಬ್ರಹ್ಮನ ತಂದೆ–ವಿಷ್ಣು

**ಸರಸಿಜನಾಭ** ಕಮಲನಾಭ–ವಿಷ್ಣು

**ಸರಸಿಜಭವ** ಬ್ರಹ್ಮ

**ಸರಸಿಜಭವಕಪಾಲ** ಬ್ರಹ್ಮಕಪಾಲ

**ಸರಸಿಜಭವಪಿತ** ವಿಷ್ಣು

**ಸರಸಿಜಭವಾಂಡ** ಬ್ರಹ್ಮಾಂಡ

**ಸರಸಿಜಮಿತ್ರ, ಸರಸಿಜಸಖ** ಸೂರ್ಯ

**ಸರಸಿಜಮುಖಿ** ತಾವರೆ ಮೊಗದವಳು–ಲಕ್ಷ್ಮಿ

**ಸರಸಿಜಾಕ್ಷ** ಕಮಲದಂತೆ ಕಣ್ಣುಳ್ಳವನು–ವಿಷ್ಣು

**ಸರಸಿಜಾಕ್ಷಿ** ಕಮಲದಂತೆ ಕಣ್ಣುಳ್ಳವಳು–ಲಕ್ಷ್ಮಿ

**ಸರಸಿಜಾದ್ಯಮರೇಶ** ಬ್ರಹ್ಮನೇ ಮೊದಲಾದ ದೇವತೆಗಳ ಒಡೆಯ–ಶ್ರೀಹರಿ

**ಸರಸಿಜಾಯತನೇತ್ರೆ** ಕಮಲದಂತೆ ವಿಶಾಲವಾದ ಕಣ್ಣುಳ್ಳವಳು–ಲಕ್ಷ್ಮಿ

**ಸರಸಿಜಾಸನ, ಸರಸಿಜೋದ್ಭವ** ಬ್ರಹ್ಮ

**ಸರಸಿಜೋದ್ಭವ ಸತಿ** ಸರಸ್ವತಿ

**ಸರಸಿಜೋದ್ಭವ ಸೂತ್ರ** ಬ್ರಹ್ಮಸೂತ್ರ, ಜನಿವಾರ

**ಸರಸಿಜೋದ್ಭವನಯ್ಯ** ವಿಷ್ಣು

**ಸರಸೀರುಹಭೃಂಗ** ತಾವರೆಯಲ್ಲಿ ಸುಳಿದಾಡುವ ದುಂಬಿ

**ಸರಸೀರುಹಾಸನ** ಬ್ರಹ್ಮ

**ಸರಳ** ಸುಲಭ

**ಸರಳಮಂಚ, ಸರಳತಲ್ಪ** ಬಾಣಗಳಿಂದ ಮಾಡಿದ ಹಾಸಿಗೆ

**ಸರಳು** ಬಾಣ, ಅಂಬು

**ಸರಿ** ಮಳೆ, ವೃಷ್ಟಿ, ಸುರಿಯುವಿಕೆ, ಪ್ರವಾಹ

**ಸರಿಗೆ, ಸಲಿಗ, ಸಲಿಗೆ** ಒಂದು ಬಗೆಯ ಕಂಠಾಭರಣ

**ಸರಿಚ್ಛ್ರೇಷ್ಠತೀರಸ್ಥ** ಪವಿತ್ರ ನದಿತೀರದಲ್ಲಿರುವ (ರಾಜಮಹೇಂದ್ರಿ)

**ಸರಿತ, ಸರಿತು, ಸರಿತ್ತು, ಸರಿತೆ** ನೀರು, ನದಿ, ಹೊಳೆ

**ಸರಿಪರರಿಲ್ಲದ** ಸಮ, ಉತ್ತಮ ಇಲ್ಲದ

**ಸರಿಯವ** ಓರಗೆಯವ

**ಸರಿಸ** ನೇರ, ಸರಳ; ಯೋಗ್ಯವಾದುದು; ರೀತಿ, ಕ್ರಮ; ಸಾಟಿ

**ಸರಿಸೃಪಾಧಿಪ** ಆದಿಶೇಷ

**ಸರಿಹೊತ್ತು** ಸರಿರಾತ್ರಿ, ಮಧ್ಯರಾತ್ರಿ

**ಸರೀಸೃಪ** ಉರಗ, ಹಾವು

**ಸರುಪ<ಸರ್ಪ** ಹಾವು

**ಸರುವ<ಸರ್ವ** ಎಲ್ಲ

**ಸರೋಜ** ಕಮಲ

**ಸರೋಜಾಂಬಕ** ತಾವರೆಯಂಥ ಕಣ್ಣುಳ್ಳವನು–ಶ್ರೀಹರಿ

**ಸರೋರುಹ** ಕಮಲ

**ಸರ್ಕನೆ** ಸರಕ್ಕನೆ, ಬೇಗನೆ

**ಸರ್ಗ** ಗ್ರಂಥದ ಒಂದು ಭಾಗ, ಅಧ್ಯಾಯ

**ಸರ್ಪತಲ್ಪ** ಹಾವನ್ನು ಹಾಸಿಗೆಯಾಗಿ ಉಳ್ಳವನು–ಶ್ರೀಹರಿ

**ಸರ್ಪಭೂಷಣತತ್ತ್ವ** ಮನಸ್ತತ್ವ, ಶೈವಸಿದ್ಧಾಂತ

**ಸರ್ಪಶಯ್ಯ** ಶೇಷಶಯನ–ವಿಷ್ಣು

**ಸರ್ಪಸುತಪುರ** ಹಾವನೂರು

**ಸರ್ಬ** ಸರ್ವ, ಎಲ್ಲ, ಸಮಸ್ತ

**ಸರ್ವಗ** ಎಲ್ಲ ಕಡೆಯಲ್ಲೂ ಇರುವ

**ಸರ್ವಜೀವಿನೇತಾರ** ಸಕಲ ಜೀವಿಗಳಿಗೆ ನಾಯಕನಾದ ಮುಖ್ಯಪ್ರಾಣ

**ಸರ್ವಜ್ಞಮುನಿ,ಸರ್ವಜ್ಞರಾಯ** ಮಧ್ವಾಚಾರ್ಯರು

**ಸರ್ವತ್ಯ, ಸರ್ವತ್ರ** ಎಲ್ಲ ಕಡೆಗಳಲ್ಲಿಯೂ, ಎಂದಿಗೂ, ಯಾವಾಗಲೂ, ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ

Rarest Archiver

**ಸರ್ವಧೀ** ಎಲ್ಲ; ಗುಣ; ಬುದ್ಧಿಶಕ್ತಿ
**ಸರ್ವಭೂತಸ್ಥ** ಎಲ್ಲ ಜೀವ ಜಡಗಳಲ್ಲಿರುವವನು–ವಿಷ್ಣು
**ಸರ್ವಯೋಗವಿನಿಃಸೃತಃ** ಸಕಲ ಪುಣ್ಯ ಪಾಪಾತ್ಮಕ ಕರ್ಮಗಳ ಫಲಸಂಬಂಧವಿಲ್ಲದವನು
**ಸರ್ವರೋಗಹರ** ಎಲ್ಲ ರೋಗಗಳನ್ನು ನಿವಾರಿಸುವವನು
**ಸರ್ವವರ್ಣಾಭಿಮಾನಿನಿ** ನಿತ್ಯಗಳಾದ ಅಕಾರಾದಿ ಕ್ಷಕಾರಾಂತ ಐವತ್ತೊಂದು ವರ್ಣಗಳಿಗೆ ಮುಖ್ಯಾಭಿಮಾನಿನಿಯಾದವಳು–ದುರ್ಗೆ, ಲಕ್ಷ್ಮಿ
**ಸರ್ವವಸ್ತುಮೆಲ್ಲುವವ** ಅಗ್ನಿ
**ಸರ್ವಶುಭಭೋಕ್ತ** ಎಲ್ಲ ಶುಭಗಳ ಸಾರವನ್ನೂ ಸವಿಯುವವನು–ಶ್ರೀಹರಿ
**ಸರ್ವಸಾರಭೋಕ್ತ, ಸರ್ವಸ್ವಾಮಿ** ವಿಷ್ಣು
**ಸರ್ವಾಂಗಪರಿಶ್ವೇತ** ತೊನ್ನು ರೋಗ, ದೇಹದ ತುಂಬ ಇರುವ ಬಿಳುಪು
**ಸರ್ವಾಂತರ** ಎಲ್ಲಕಡೆ, ಎಲ್ಲರೊಳಗೆ ನೆಲೆಸಿರುವವನು
**ಸರ್ವಾನುಗ** ಎಲ್ಲರಿಗೂ ಬೆಂಬಲವಾಗಿರುವವನು
**ಸರ್ವಾಭರಣ** ಎಲ್ಲ ಒಡವೆ
**ಸರ್ವಾರಾಧ್ಯ** ಎಲ್ಲರಿಂದಲೂ ಪೂಜಿಸಲ್ಪಡುವವನು–ವಿಷ್ಣು
**ಸರ್ವಾಸುನಿಲಯ** ಸರ್ವರ ಆತ್ಮಗಳಲ್ಲೂ ನೆಲೆಸಿರುವ ಭಗವಂತ; ಬಿಂಬರೂಪಿ–ಶ್ರೀಹರಿ
**ಸರ್ವೋತ್ತಮ, ಸರ್ವೋತ್ತುಂಗ** ಎಲ್ಲರಿಗಿಂತಲೂ ಉತ್ತಮ–ಶ್ರೀಹರಿ
**ಸರ್ವೋದ್ವೃತ್ತ** ಎಲ್ಲರಿಗಿಂತ ಉಡಾಫಿಯವನು
**ಸರ್ಷಪ** ಸಾಸುವೆ ಕಾಳು
**ಸಲ್** ಹಣಕಾಸಿನ ವ್ಯವಹಾರ ಸಂದಾಯವಾಗುವುದು; ಕಳೆ, ತೀರು, ಮುಕ್ತಾಯವಾಗು
**ಸಲ** ಬಾರಿ, ಸರದಿ
**ಸಲಾಮು** ನಮಸ್ಕಾರ
**ಸಲಿಗೆ** ಅತಿಪರಿಚಯ, ನಿಕಟ ಸಂಪರ್ಕ, ಸ್ನೇಹ, ಸದರ
**ಸಲಿಲ** ನೀರು
**ಸಲಿಲಕಾಂಚನಪುರ** ಬಾಳೆಹೊನ್ನೂರು
**ಸಲಿಲಗ** ಮೀನು
**ಸಲಿಲಜ** ಗಂಗೆಯ ಮಗ, ಗಂಗೆಯಲ್ಲಿ ಜನಿಸಿದ ಭೀಷ್ಮ
**ಸಲಿಲಜೋದ್ಭವ** ಬ್ರಹ್ಮ
**ಸಲಿಸು** ದೊರಕಿಸಿ ಕೊಡು, ಪೂರೈಸು; ಒಪ್ಪಿಸು
**ಸಲು** ಸೇರು, ಕೂಡು, ಮುಟ್ಟು; ಯೋಗ್ಯವಾಗು, ಉಚಿತವಾಗು; ಸಲ್ಲುವುದು, ಹೊಂದುವುದು
**ಸಲೆ** ಒಂದೇ ಸಮನೆ; ಚೆನ್ನಾಗಿ, ಲೇಸಾಗಿ, ಪೂರ್ಣ
**ಸಲ್ಲತೆ** ಚೆಲುವಾದ ಬಳ್ಳಿ
**ಸಲ್ಲೀಲ** ಸುಜನರೊಡನಾಡುವವನು
**ಸಲ್ಲೀಲೆ** ವಿನೋದ, ಸರಸ
**ಸಲ್ಹಾದ** ಹಿರಣ್ಯಕಶಿಪುವಿನ ಇನ್ನೊಬ್ಬ ಮಗ, ಪ್ರಹ್ಲಾದನ ತಮ್ಮ
**ಸವಡಿಸು** ಕೂಡಿಸು
**ಸವನ** ಮಂಗಳಸ್ನಾನ, ಅಭಿಷೇಕ; ಯಜ್ಞ, ಕಾಲಪರಿಮಿತಿ
**ಸವನಂಗಭೂರುಹ** ದೇವರ ಪೂಜಾಸಾಧನವಾದ ಅತ್ತಿಮರ
**ಸವನತ್ರಯಾಹ್ವಯ** ಮೂರುಕಾಲಗಳಲ್ಲಿ ಮಾಡುವ ಹೋಮದಲ್ಲಿ ಆಹ್ವಾನಿತ–ಶ್ರೀಹರಿ
**ಸವನಿಸು** ಈಡೇರಿಸು; ಪಡೆ, ಹೊಂದು
**ಸವರು** ಕತ್ತರಿಸು, ನಾಶಮಾಡು; ಲೇಪಿಸು
**ಸವಿತ, ಸವಿತಾರ, ಸವಿತೃ, ಸವಿತೃ** ನೇಸರ, ಸೂರ್ಯ
**ಸವಿಧಾವಿ** ತುರುಕೆ ಸೊಪ್ಪು
**ಸವುಳು, ಸೌಳು** ಚಪ್ಪೆ, ಸಪ್ಪೆ; ಉಪ್ಪು
**ಸವ್ಯ** ಎಡಗಡೆ, ವಾಮಭಾಗ, ಎಡಗೈ; ಪ್ರದಕ್ಷಿಣೆಯ ಕ್ರಮ (ಬಲ)

Rarest Archiver

**ಸವ್ಯಸಾಚಿ** ಎರಡು ಕೈಗಳಿಂದಲೂ, ಎಡಗೈಯಿಂದಲೂ ಬಾಣ ಬಿಡುವವ-ಅರ್ಜುನ; ಎಲ್ಲದರಲ್ಲೂ ನಿಪುಣನಾದವನು

**ಸವ್ಯಸಾಚಿಪ್ರಿಯ** ಅರ್ಜುನನಿಗೆ ಹಿತವಾದವನು–ಕೃಷ್ಣ

**ಸವ್ಯಹಸ್ತ** ಬಲಗೈ

**ಸವ್ಯಾಪಸವ್ಯಾ** (ರೂಢಾರ್ಥದಲ್ಲಿ) ನಿರರ್ಥಕ ಕ್ರಿಯೆಗಳು; ಎಡಬಲ

**ಸಸಿನೆ** ನೇರವಾಗಿ, ಸರಳವಾಗಿ; ಕ್ಷೇಮವಾಗಿ

**ಸಸಿನೆಬಿಡು** ಸುಮ್ಮನೆ, ಮೌನವಾಗು, ನೇರವಾಗು

**ಸಹ** ಜೊತೆ, ಸಂಗಡ, ಕೂಡ; ಮಾರ್ಗಶಿರಮಾಸ

**ಸಹಜ** ನಿಜ, ದಿಟ; ಸ್ವಾಭಾವಿಕ

**ಸಹಜಾತ** ತಮ್ಮ

**ಸಹಭವ** ಒಡಹುಟ್ಟಿದವನು, ಸೋದರ

**ಸಹಸ್ರನೇಮಿ** ಸೂರ್ಯ

**ಸಹಸ್ರಪಾತ್** ಸಾವಿರಪಾದವುಳ್ಳವನು, ಅನಂತ ಪಾದಗಳುಳ್ಳವನು–ವಿಷ್ಣು (ಸಹಸ್ರನಾಮ)

**ಸಹಸ್ರವದನ** ಆದಿಶೇಷ, ವಿಷ್ಣು

**ಸಹಸ್ರಶೀರ್ಷ** ಸಾವಿರ ತಲೆಗಳನ್ನು ಹೊಂದಿರುವವನು–ವಿಷ್ಣು

**ಸಹಸ್ರಾಕ್ಷ** ಇಂದ್ರ; ಅನಂತ ಕಣ್ಣುಗಳುಳ್ಳವನು–ವಿಷ್ಣು (ಸಹಸ್ರನಾಮ)

**ಸಹಸ್ರಾರ** ತಲೆಯ ಮೇಲ್ಭಾಗದಲ್ಲಿಯ ಸಹಸ್ರದಳದ ಕಮಲ(ಕಾಲ್ಪನಿಕ)

**ಸಹಸ್ರಾರಚಕ್ರ** ಯೋಗಶಾಸ್ತ್ರದಲ್ಲಿ ಹೇಳಿದ ತಲೆಯ ಭಾಗದಲ್ಲಿರುವ ಚಕ್ರ

**ಸಹ್ಲಾದ** ಹಿರಣ್ಯಕಶಿಪುವಿನ ಇನ್ನೊಬ್ಬ ಮಗ, ಪ್ರಹ್ಲಾದನ ತಮ್ಮ

**ಸಾಂದೀಪ** ಒಬ್ಬ ಬ್ರಾಹ್ಮಣ, ಅವಂತೀಪುರದಲ್ಲಿ ವಾಸವಾಗಿದ್ದ

**ಸಾಂದೀಪನ** ಕೃಷ್ಣನ ಬಾಲ್ಯದ ಗುರುವಾದ ಸಾಂದೀಪಿನಿ ಮುನಿಯ ಮಗ

**ಸಾಂದ್ರ** ದಟ್ಟವಾದ, ಅಧಿಕವಾದ

**ಸಾಂಬ** ಜಾಂಬವತಿಯಿಂದ ಹುಟ್ಟಿದ ಕೃಷ್ಣನ ಮಗ; ಶಿವ

**ಸಾಂಬಜನಕ** ಸಾಂಬನ ತಂದೆ ಕೃಷ್ಣ

**ಸಾಂಬರಾಲಂಕಾರ** ವಸ್ತ್ರಭೂಷಣಗಳಿಂದ ಅಲಂಕೃತನಾದವನು

**ಸಾಂಬವಿನುತ** ರುದ್ರನಿಂದ ಸ್ತುತಿಸಲ್ಪಡುವವನು–ಶ್ರೀಹರಿ

**ಸಾಂಬ್ರಾಣಿ** ಧೂಪ

**ಸಾಂಶ** ಅಂಶದಿಂದ ಕೂಡಿದ, ಏಕಕಾಲದಲ್ಲಿ ಅನೇಕ ಸ್ಥಳಗಳಲ್ಲಿರುವವನು

**ಸಾಕಲ್ಯ** ಪರಿಪೂರ್ಣತೆ, ಸಂಪೂರ್ಣ

**ಸಾಕಾರ** ಆಕಾರಸ್ಥವಾಗಿರುವುದು, ಆಕಾರದಿಂದ ಕೂಡಿರುವುದು, ಸುಂದರವಾದ

**ಸಾಕಾರಿ** ಆಕಾರದಿಂದ ಕೂಡಿದ, ಆಕಾರವುಳ್ಳವನು, ನಿರಾಕಾರನಲ್ಲ

**ಸಾಕೇತಪುರ** ಅಯೋಧ್ಯೆ

**ಸಾಕ್ಷಾತ್ಮನ್ಮಥಮನ್ಮಥ** ವಿಷ್ಣು

**ಸಾಕ್ಷಿ** ಸಾಕ್ಷಾದ್‌ದ್ರಷ್ಟೃ ನಾರಾಯಣ

**ಸಾಕ್ಷೀಭೂತ** ಅನುಭವದಿಂದ ಕಂಡುಕೊಂಡ; ತತ್ತ್ವಾಭಿಮಾನಿಗಳ ದೇವತೆಗಳ ಸಮಕ್ಷಮವಾದ

**ಸಾಗರತಲ್ಪ** ವಿಷ್ಣು

**ಸಾಗರದನಿಜರಾಣಿ** ನದಿಗಳೆಲ್ಲ ಸಾಗರನ ರಾಣಿಯರೆಂದು ಕರೆಯುವ ಸಂಪ್ರದಾಯ ಪ್ರಾಚೀನವಾಗಿದೆ

**ಸಾಗರಸುತೆ** ಲಕ್ಷ್ಮಿ

**ಸಾಜ** ಸಹಜ; ನಿಜ, ನೇರ, ಸಾಚ, ಒಳ್ಳೆಯ; ಬ್ರಹ್ಮದೇವರಿಂದ ಜೊತೆಗೂಡಿ

**ಸಾಟಿ** ಸಮಾನ, ಎಣೆ; ಸಂನ್ಯಾಸಿಯು ಉಡುವ ಬಟ್ಟೆ

**ಸಾತ್ತ್ವತ, ಸಾತ್ತ್ವದ** ಕೃಷ್ಣ (ಸತ್ತ್ವತನ ವಂಶದವ)

**ಸಾತ್ಯವತೇಯ** ವೇದವ್ಯಾಸ

Rarest Archiver

**ಸಾತ್ವತಾಂಪತಿ** ಸಾತ್ವತರೆಂಬ ಉಪಾಸಕರ ಒಡೆಯ, ಸ್ವಾಮಿ, ದೇವಶ್ರೇಷ್ಠ–ಶ್ರೀಹರಿ

**ಸಾದರ** ಆದರಪೂರ್ವಕ, ಮನ್ನಣೆ

**ಸಾದರಣೆ** ಪ್ರೀತಿ, ಆದರ

**ಸಾದಿ** ಕುದುರೆ ಸವಾರ, ಮಾವುತ, ಮಾವಟಿಗ, ರಥ ನಡೆಸುವವನು

**ಸಾದಿತ** ಕುಳಿತ

**ಸಾದಿನ** ಕುದುರೆ ಸವಾರ, ಸಾರಥಿ, ಮಾವುತ, ರಾವುತ

**ಸಾದೃಷ್ಟದೈವ** ಅದೃಷ್ಟ(ಪರಮಾತ್ಮ)ನಿಂದ ಕೂಡಿದ ದೇವತೆ

**ಸಾಧನದ್ವಾದಶಿ** ನಿಯಮಿತ ವೇಳೆಯೊಳಗಾಗಿ ಪಾರಣೆ ಮಾಡಬೇಕಾದ ದ್ವಾದಶಿ ತಿಥಿ

**ಸಾಧನೆಗಳುನಾಲ್ಕು** ಶ್ರವಣ, ಮನನ, ಧ್ಯಾನ, ಸ್ನೇಹ

**ಸಾಧು** ಯತಿ, ಯೋಗಿ

**ಸಾಧುಚರಿತ** ಕಳಂಕರಹಿತವಾದ ನಡೆನುಡಿಗಳುಳ್ಳವನು

**ಸಾಧುಲಿಂಗಪ್ರದರ್ಶಕ** ಸಾಧುಗಳಂತೆ ವೇಷ ಹಾಕಿದ/ತೋರುವ

**ಸಾಧುಹೃದ್ಭಾಸ** ಸಾಧುಜನರ ಹೃದಯದಲ್ಲಿ ಭಾಸವಾಗುವವನು–ಶ್ರೀಹರಿ

**ಸಾನು** ಬೆಟ್ಟದ ತುದಿ, ಬೆಟ್ಟದ ಕೋಡು, ತಪ್ಪಲು, ಕಿಬ್ಬಿ

**ಸಾನುಜ** ತಮ್ಮನಿಂದ ಕೂಡಿದ

**ಸಾನುರಾಗ** ಭಕ್ತಿ ಪೂರ್ವಕ

**ಸಾಪತ್ನಿ** ಸವತಿ

**ಸಾಪಾಟಿ** ಸಹಪಾಠಿ

**ಸಾಭ್ಯಸ್ಥ** ಸುಸಂಸ್ಕೃತನಾದ ವ್ಯಕ್ತಿ, ಸಭಿಕ, ಸಭಾಸನ, ಶಿಷ್ಟ

**ಸಾಮ** ಸಾಮವೇದ

**ಸಾಮಗ** ವಿಷ್ಣು

**ಸಾಮಗಾನಪ್ರಿಯ** ಸಂಗೀತಲೋಲ–ಕೃಷ್ಣ

**ಸಾಮಜ** ಆನೆ

**ಸಾಮಜನಾಥ, ಸಾಮಜಪತಿ** ಗಜರಾಜ

**ಸಾಮಜಪೋಷಕ** ಗಜೇಂದ್ರನಿಗೆ ಸಹಾಯ ಮಾಡಿದವನು–ಶ್ರೀಹರಿ

**ಸಾಮಜರಿಪು** ಸಿಂಹ

**ಸಾಮಜವದನ** ಗಜಮುಖ–ಗಣಪತಿ

**ಸಾಮಜವರದ** ಗಜೇಂದ್ರನಿಗೆ ವರವನ್ನು ದಯಪಾಲಿಸಿದವನು–ವಿಷ್ಣು

**ಸಾಮಜವಾಹನ** ಆನೆಯನ್ನು ವಾಹನವಾಗಿ ಉಳ್ಳವನು–ಇಂದ್ರ

**ಸಾಮಜಾರಿ** ಸಿಂಹ

**ಸಾಮಜಾರಿಯವದನ** ನರಸಿಂಹ, ಶ್ರೀಹರಿಯ ನಾಲ್ಕನೆಯ ಅವತಾರ

**ಸಾಮನಿಗಮ** ಸಾಮವೇದ

**ಸಾಮವಿಲೋಲ** ಸಾಮವೇದದಿಂದ ಹೊಗಳಿ ಹಾಡಲ್ಪಟ್ಟವನು–ಶ್ರೀಹರಿ

**ಸಾಮಾತೆ** ಸಹಮಾತೆ, ಮಲತಾಯಿ

**ಸಾಮೀಪ್ಯ** ಮುಕ್ತಿಯಲ್ಲಿ ಒಂದು ವಿಧ, ಋಷಿಗಳಿಗೆ ಅವರವರ ಯೋಗ್ಯತೆಯಂತೆ ಈ ಮುಕ್ತಿ ದೊರಕುತ್ತದೆ

**ಸಾಮ್ಯ** ಹೋಲಿಕೆ, ಎಣೆ, ಸಾಟಿ; ಒಡೆತನ, ಹೊಂದಿಕೆ

**ಸಾಯ್** ಗತಿಸು, ಮರಣಹೊಂದು

**ಸಾಯಂತಿನಿ<ಸಾಯಂತನ** ಸಂಜೆ, ಇಳಿಹೊತ್ತು

**ಸಾಯಕ** ಬಾಣ, ಅಂಬು, ಕತ್ತಿ, ಖಡ್ಗ

**ಸಾಯಮ** ಸಂಜೆ, ಇಳಿವಯಸ್ಸು

**ಸಾಯಸ, ಸಾಯಾಸ** ಆಯಾಸ, ತೊಂದರೆ, ಬಳಲಿಕೆ

**ಸಾಯಾಹ್ನ** ಸಂಜೆಯ ಹೊತ್ತು

**ಸಾರ** ತಿರುಳು, ಗುಣ, ಸತ್ಯ, ಅತ್ಯುತ್ತಮ; ಬಳಿ; ಪರಾಕ್ರಮ

Rarest Archiver

**ಸಾರಂಗ** ಚುಕ್ಕೆಗಳನುಳ್ಳ ಗಂಡು ಚಿಗರೆ, ಜಿಂಕೆ; ವಿಷ್ಣುವಿನ ಬಿಲ್ಲು (ಶಾರ್ಙ್ಗ); ಸಾರಂಗಿ, ಒಂದು ತಂತೀ ವಾದ್ಯ; ಒಂದು ರಾಗದ ಹೆಸರು

**ಸಾರಂಗದಾಮ** ವಿಷ್ಣುವಿನ ಶಾರ್ಙ್ಗಧನುಸ್ಸಿನ ಹೆದೆ (ಹಗ್ಗ)

**ಸಾರಂಗಧರ** ವಿಷ್ಣು

**ಸಾರಂಗಾಕ್ಷಿ** ಹರಿಣಾಕ್ಷಿ

**ಸಾರಗ** ಒಂದು ಆಯುಧ

**ಸಾರಣಿ, ಸಾರಣೆ** ಲೇಪಿಸುವುದು, ಬಳಿಯುವುದು; ನೆಲವನ್ನು ಗೋಮಯದಿಂದ ಸಾರಿಸುವುದು

**ಸಾರಪ್ಪ<ಸರ್ಪ** ಹಾವು

**ಸಾರಭೋಕ್ತ** ಸರ್ವ ವಿಷಯಗಳಲ್ಲೂ ಶ್ರೇಷ್ಠವಾದದ್ದನ್ನು ಮಾತ್ರ ಸ್ವೀಕರಿಸುವ ಶ್ರೀಹರಿ, ಸ್ವಾಖ್ಯರಸ ಸ್ವೀಕರಿಸುವವ

**ಸಾರಮೇಯ** ಸಾರದಿಂದ ತಿಳಿಯಲ್ಪಡುವವ; ಕಶ್ಯಪ ಮತ್ತು ಸರಮೆಯರ ಮಗ

**ಸಾರಶರೀರ** ತುಂಬಿದ ಮೈ

**ಸಾರಸ** ಕೊಕ್ಕರೆ, ಕಮಲ, ನೀರುಹಕ್ಕಿ

**ಸಾರಸಚ್ಛಾಸ್ತ್ರ** ವೇದಶಾಸ್ತ್ರ, ಷಟ್‌ಶಾಸ್ತ್ರ

**ಸಾರಸದಳ** ಕಮಲದೆಸಳು, ಕಮಲದ ಪಕಳೆ

**ಸಾರಸನಾಭ** ಕಮಲನಾಭ–ವಿಷ್ಣು

**ಸಾರಸಭವ** ಬ್ರಹ್ಮ

**ಸಾರಸವೈರಿ** ಚಂದ್ರ

**ಸಾರಸವೈರಿಸಹೋದರಿ** ಲಕ್ಷ್ಮಿ

**ಸಾರಸಾ** ಒಳಿತು ಕೆಡಕು

**ಸಾರಸಾಪ್ತಕುಲ** ಸೂರ್ಯವಂಶ

**ಸಾರಸ್ವತ** ವಿದ್ಯೆಗೆ ಸಂಬಂಧಪಟ್ಟ

**ಸಾರಹೃದಯ** ಸದ್ಭಕ್ತ

**ಸಾರಾತ್ಮ** ಶ್ರೀಹರಿ

**ಸಾರಾಮೃತ** ಕಥಾಶ್ರವಣ

**ಸಾರಾಯ** ಸಾರಾಂಶ, ಮುಖ್ಯಾಂಶ, ತಾತ್ಪರ್ಯ; ಸಾರವತ್ತಾದ, ರಸವತ್ತಾದ

**ಸಾರಿಸಾರಿಗೆ** ಬಾರಿಬಾರಿಗೆ, ಮತ್ತೆಮತ್ತೆ

**ಸಾರು** ಬಳಿ ಸೇರು, ಹತ್ತಿರಕ್ಕೆ ಬರು, ಸಮೀಪಿಸು; ಕೂಗು, ಘೋಷಿಸು

**ಸಾರುನೀರು** ಪಾದತೀರ್ಥ

**ಸಾರೂಪ್ಯ>ಸಾರೋಪ್ಯ** ಮೋಕ್ಷದ ನಾಲ್ಕು ಪ್ರಕಾರಗಳಲ್ಲಿ ಒಂದು, ಭಗವತ್ಸಾರೂಪ್ಯವುಳ್ಳ ಮುಕ್ತಿ

**ಸಾರೆ** ಹತ್ತಿರ, ಸಮೀಪ

**ಸಾರೆಕೃತ್ಯವಾರೆಮಾಡು** ಎಲ್ಲ ಕೆಲಸಗಳನ್ನು ಬದಿಗಿಡು

**ಸಾರೆಗರೆ** ಸಮೀಪಕ್ಕೆ ಕರೆ

**ಸಾರ್ಥ** ಸಫಲ; ಅರ್ಥಸಹಿತ; ಧನಿಕ; ವರ್ತಕರ ಸಮೂಹ

**ಸಾಲಮಂಚ** ಶಾಲಮರದ ಮಂಚ, ಶಾಲಮಂಚ

**ಸಾಲುಮರ** ದಾರಿಯಲ್ಲಿ ನೆರಳಿಗಾಗಿ ಸಾಲಾಗಿ ನೆಟ್ಟ ಮರ

**ಸಾಲೆ** ಶಾಲೆ; ಮಠ

**ಸಾಲೆವಲ್ಲಿ** ಬಟ್ಟೆ, ಸೀರೆ, ಧೋತರ

**ಸಾವಯವ** ಅವಯವಗಳಿಂದ ಕೂಡಿದುದು, ಸಾಕಾರ

**ಸಾವರಿಸು** ಮನ್ನಿಸು; ಸ್ವೀಕರಿಸು

**ಸಾವಿರತೋಳವ** ಕಾರ್ತವೀರ್ಯಾರ್ಜುನ ಮತ್ತು ಬಾಣಾಸುರ–ಇಬ್ಬರೂ ಸಾವಿರ ತೋಳಿನವರು

**ಸಾವಿರಮುಖಿ** ಆದಿಶೇಷ

**ಸಾವಿರಾಕ್ಷ** ಸಾವಿರ ಕಣ್ಣುಳ್ಳವನು–ಇಂದ್ರ

**ಸಾಶನ** ಭೋಜನ ಉಳ್ಳ

**ಸಾಷ್ಟಾಂಗ** ಉರಸ್ಸು, ಶಿರಸ್ಸು, ದೃಷ್ಟಿ, ಮನಸ್ಸು, ಶ್ರದ್ಧೆ, ಪಾದಗಳು, ಕೈಗಳು, ಕರಣಗಳು

**ಸಾಸಮುಖ** ಸಾಹಸದಿಂದ

**ಸಾಸಾರ್ಜುನ** ಸಹಸ್ರಾರ್ಜುನ; ಸಹಸ್ರಬಾಹುಗಳುಳ್ಳ ಕಾರ್ತವೀರ್ಯಾರ್ಜುನ

**ಸಾಸಿರ** ಸಾವಿರ, ಅನೇಕ

Rarest Archiver

**ಸಾಸಿರಜಿಹ್ವೆ** ಸಾವಿರ ನಾಲಿಗೆ(ಆದಿಶೇಷ)
**ಸಾಸಿರದಳ** ಸಹಸ್ರಾರ ಚಕ್ರ
**ಸಾಸಿರನಯನ** ಇಂದ್ರ
**ಸಾಸಿರನಯನಾನುಜ** ಉಪೇಂದ್ರ
**ಸಾಸಿರಫಣ** ಆದಿಶೇಷ
**ಸಾಸಿರವತ್ಸರ** ಸಾವಿರ ವರ್ಷ, ಸಾವಿರ ಸಂವತ್ಸರ
**ಸಾಸಿರಾಕ್ಷ** ಇಂದ್ರ
**ಸಾಸಿರಾಕ್ಷನಸುತ** ಅರ್ಜುನ
**ಸಾಸಿರಾನನ** ಆದಿಶೇಷ
**ಸಾಹಯ್ಯ** ತಾಳಿಕೋ; ಸಹಾಯ, ನೆರವು
**ಸಾಹ್ಯ** ಸಹಾಯ
**ಸಿಂಗ** ಸಿಂಹ; ಮಗು
**ಸಿಂಗನಪೆಗಲೇರಿದವ** ಸಿಂಹವನ್ನೇರಿ ಕುಳಿತವನು–ವಿಷ್ಣು, ಭೀಮಸೇನ, ದುರ್ಗೆ(ಸಿಂಹವಾಹಿನಿ)
**ಸಿಂಗರ** ಶೃಂಗಾರ
**ಸಿಂಗಲೀಕ** ಕಪ್ಪು ಮುಸುಕಿನ ಕಪಿ, ಮುಸುವ
**ಸಿಂಗಾಡಿ** ಬಿಲ್ಲು, ಧನುಸ್ಸು
**ಸಿಂಗಾಣಿ** ಬಿಲ್ಲು; ಕೊಂಬಿನಿಂದ ಮಾಡಿದ ಆಯುಧ ವಿಶೇಷ
**ಸಿಂಗಾರ** ಶೃಂಗಾರ; ಅಡಿಕೆ ಹೂವು, ಅಡಿಕೆ ಹೊಂಬಾಳೆ
**ಸಿಂಜಿತ** ಬಿಲ್ಲಿನ ಹೆದೆ ಏರಿಸಿದ; ಒಡವೆ, ಅಂದುಗೆ, ಕಡಗ
**ಸಿಂಧ** ಒಂದು ಬಗೆ ಪತಾಕೆ, ಬಾವುಟ
**ಸಿಂಧು** ಸಮುದ್ರ; ಒಂದು ನದಿಯ ಹೆಸರು, ಒಂದು ದೇಶದ ಹೆಸರು; ಶಾಸ್ತ್ರಬದ್ಧವಾದುದು, ನಿಯಮಾನುಸಾರವಾದುದು
**ಸಿಂಧು(ಧೂ)ರ** ಆನೆ
**ಸಿಂಧುಗಂಭೀರ** ಸಮುದ್ರದಂತೆ ಗಂಭೀರನಾದವ
**ಸಿಂಧುಜ** ಹಾಲಾಹಲ, ಸಮುದ್ರದಲ್ಲಿ ಹುಟ್ಟಿದ ವಿಷ; ಚಂದ್ರ
**ಸಿಂಧುಜಾತ** ಚಂದ್ರ
**ಸಿಂಧುಜಾದ್ಯ** ಲಕ್ಷ್ಮ್ಯಾದಿಗಳು, ಲಕ್ಷ್ಮಿ ಮೊದಲಾದ
**ಸಿಂಧುಜಾಪತಿ** ಲಕ್ಷ್ಮೀಪತಿ
**ಸಿಂಧುತನಯೆ** ಲಕ್ಷ್ಮಿ
**ಸಿಂಧುಪತಿ** ವರುಣ, ಸಮುದ್ರರಾಜ
**ಸಿಂಧುಬಂಧನ** ಸಮುದ್ರಕ್ಕೆ ಸೇತುವೆ ನಿರ್ಮಾಣ; ರಾಮ
**ಸಿಂಧುರವದನ** ಆನೆಯ ಮುಖದವ–ಗಣಪತಿ
**ಸಿಂಧುವರದ, ಸಿಂಧುಶಯನ** ವಿಷ್ಣು
**ಸಿಂಧುಶಯನಪ್ರಿಯೆ** ಲಕ್ಷ್ಮಿ
**ಸಿಂಧುಶಾಯಿ** ವಿಷ್ಣು
**ಸಿಂಧುಸುತೆ** ಲಕ್ಷ್ಮಿ
**ಸಿಂಧೂರದ್ವಯವರದ** ಎರಡು ಆನೆಗಳನ್ನು ರಕ್ಷಿಸಿದವನು (1. ಮೊಸಳೆಯಿಂದ ರಕ್ಷಿಸಿದ ಗಜೇಂದ್ರ, 2. ಶ್ರೀನಿವಾಸನು ಬೇಟೆಗೆ ಹೋದಾಗ ರಕ್ಷಿಸಿದ ಗಜೇಂದ್ರ)
**ಸಿಂಧೂರರಾಜ** ಗಜೇಂದ್ರ
**ಸಿಂಪು** ಚಿಪ್ಪು, ಕಪ್ಪೆಚಿಪ್ಪು
**ಸಿಂಬಿ** ಪಾತ್ರೆಗಳ ತಳಕ್ಕೆ ಇಡುವ ಆಧಾರ (ಸುರುಳಿ)
**ಸಿಂಹಗಿರಿ** ಅಹೋಬಲ
**ಸಿಂಹಮಧ್ಯ(ಧ್ಯೆ)** ಸಿಂಹದ ಸೊಂಟದಂತೆ ತೆಳ್ಳಗಿರುವ ಸೊಂಟ, ಕಟಿ
**ಸಿಕತ** ಮರಳು, ಉಸುಕು
**ಸಿಕ್ಕಲು** ಮನಸ್ತಾಪ
**ಸಿಕ್ಕು** ತೊಡಕು; ಒದಗು; ಬಂಧನ
**ಸಿಕ್ತೋದಕ** ತೀರ್ಥ, ಪಾದ ತೊಳೆದ ನೀರು
**ಸಿಖರಿಣಿ** ಸೀಕರಣೆ, ಸೀಕರಣೆ
**ಸಿಡಿ** ನೆಗೆ, ಚಿಮ್ಮು; ಕಬ್ಬಿಣದ ಕೊಕ್ಕೆಯನ್ನು ಬೆನ್ನುಹುರಿಗೆ ಸಿಕ್ಕಿಸಿಕೊಂಡು ಅಂತರಾಳದಲ್ಲಿ ಸುತ್ತುವುದು
**ಸಿಡಿಯಮುಳ್ಳು** ಮೈಲಾರಲಿಂಗನ ಹೆಸರಿನಲ್ಲಿ ಮಾಡುವ ಒಂದುಬಗೆಯ ಕ್ರೂರವಾದ ವ್ರತ

Rarest Archiver

**ಸಿಡಿಯೇರು** ಸಿಡಿ ಆಡುವುದು, ಶಕ್ತಿ ದೇವತೆಗಳಿಗೆ ಹರಕೆ ಹೊತ್ತವರ ಭೀಕರ ಪವಾಡ
**ಸಿತ** ಶ್ವೇತ, ಬಿಳಿ, ಶುದ್ಧ
**ಸಿತಗಿರಿ** ಬಿಳಿಗಿರಿ
**ಸಿತಗ್ರಾತ** ಮುಕ್ತರಿಗೆ ಸಾಧನೆ ಮಾಡಿಸುವವನು
**ಸಿತಪಕ್ಷ** ಶುಕ್ಲಪಕ್ಷ
**ಸಿತಾಂಗಪ್ರಭ** ಬಿಳಿಯ ಮೈಯಕಾಂತಿಯುಳ್ಳವನು–ಶಿವ
**ಸಿತಾಸಿತಪಕ್ಷ** ಶುಕ್ಲ–ಕೃಷ್ಣ ಪಕ್ಷಗಳು
**ಸಿದ್ದಾಯ**>ಸೀದಾ ಕಂದಾಯ, ತೆರಿಗೆ; ಪಡಿ ಪದಾರ್ಥ
**ಸಿದ್ಧಾಂತ** ತತ್ವ
**ಸಿರಿ** ವೀರತನ; ಸೌಂದರ್ಯ, ಲಕ್ಷ್ಮಿ
**ಸಿರಿಕಂಠ** ಶ್ರೀಕಂಠ
**ಸಿರಿಗರ** ಐಶ್ವರ್ಯಮದ
**ಸಿರಿದ** ಸಂಪತ್ತನ್ನು ಕೊಡುವವ
**ಸಿರಿದೇವಿ** ಲಕ್ಷ್ಮಿ
**ಸಿರಿಧರ** ಶ್ರೀಧರ–ಶ್ರೀಹರಿ
**ಸಿರಿಧವ** ಲಕ್ಷ್ಮಿಯ ಗಂಡ ವಿಷ್ಣು
**ಸಿರಿಧಾರ** ಶ್ರೀದೇವಿಯನ್ನು ವಕ್ಷದಲ್ಲಿ ಧರಿಸಿದ ಶ್ರೀಧರ–ಶ್ರೀಹರಿ
**ಸಿರಿನಲ್ಲ** ವಿಷ್ಣು
**ಸಿರಿಮದ** ಧನಮದ
**ಸಿರಿಮಹಿಳೆ** ಶ್ರೀದೇವಿ, ಲಕ್ಷ್ಮಿ
**ಸಿರಿಮುಡಿಯವಿಷ್ಣು** ಜಟಾಧಾರಿ–ರಾಮ
**ಸಿರಿಮುದ್ರೆ** ವೈಷ್ಣವರು ದೇಹಕ್ಕೆ ಹಚ್ಚಿಕೊಳ್ಳುವ ಐದು ಮುದ್ರೆಗಳ ಸಮೂಹ (ಶಂಖ, ಚಕ್ರ, ಗದಾ, ಪದ್ಮ, ನಾರಾಯಣ)
**ಸಿರಿರಂಗ** ಲಕ್ಷ್ಮೀನಾರಾಯಣ
**ಸಿರಿವರ** ವಿಷ್ಣು
**ಸಿರಿಸಂಗಲಸಿತ** ಲಕ್ಷ್ಮೀದೇವಿಯ ಸ್ನೇಹದಿಂದ ಶೋಭಿಸುತ್ತಿರುವ ಶ್ರೀಹರಿ
**ಸಿಲೀ(ಳೀ)ಮುಖ**< ಶಿಲೀಮು ಬಾಣ
**ಸಿಲುಕು** ತೊಡರಿಕೊಳ್ಳು, ಗೋಜು, ಸಿಕ್ಕು
**ಸೀಕರ** ತುಂತುರು, ಹನಿ
**ಸೀಗುರಿ** ಚಾಮರ, ಚವರಿ
**ಸೀತಾಂಶು** ಚಂದ್ರ
**ಸೀಮಂತ** ಬೈತಲೆ; ಚೊಚ್ಚಲು ಬಸುರಿಗೆ ಮಾಡುವ ಸಂಸ್ಕಾರಗಳಲ್ಲಿ ಒಂದು
**ಸೀಮಂತಿನಿ** ಹೆಂಗಸು, ಸ್ತ್ರೀ
**ಸೀಯಾಳ(ಳು)** ಎಳನೀರು, ಬೊಂಡ
**ಸೀರ** ನೇಗಿಲು
**ಸೀರೆ** ಬಟ್ಟೆ, ಹೆಂಗಸರು ಉಡುವ ಬಟ್ಟೆ, ಸಾಲೆ
**ಸೀವರಿಸು** ಛೀಳಿಡು, ಚೀರು, ಫೂತ್ಕರಿಸು; ಜಿಗುಪ್ಸೆಹೊಂದು, ಬೇಸರಿಸು
**ಸೀಸ** ಒಂದು ಬಗೆಯ ಲೋಹ
**ಸೀಳು** ಸಿಗಿ, ಬಿಗಿ, ಹೋಳುಮಾಡು
**ಸುಂಕ** ಕರ, ತೆರಿಗೆ
**ಸುಂಕಿಗ** ಸುಂಕದವನು
**ಸುಆಗರ** ಒಳ್ಳೆಯ ಮನೆ
**ಸುಕಂಠ** ಸುಂದರವಾದ ಕುತ್ತಿಗೆ; ಮಧುರವಾದ ಕಂಠ, ಇನಿದನಿ
**ಸುಕಂಧರ** ಅಂದವಾದ ಕೊರಳು
**ಸುಕರ** ದಯಾಪರ; ಸುಂದರವಾದ; ಸುಲಭವಾದ
**ಸುಕಲಾನಿಧಿ** ಚಂದ್ರ
**ಸುಕಲಾಪ** ಒಳ್ಳೆ ಆಭರಣ
**ಸುಕಾಮ** ಸೌಂದರ್ಯ
**ಸುಕಾರ** ಪ್ರತ್ಯಕ್ಷ ಮೂರ್ತಿಗಳು
**ಸುಕೃತ** ಪುಣ್ಯ
**ಸುಕೃತಕಾಳ** ಅಲ್ಪಪುಣ್ಯ, ಅಮಂಗಳ, ಪಾಪ
**ಸುಕೃತಿ** ಪುಣ್ಯವಂತ
**ಸುಕೃತ್ಯ** ಪುಣ್ಯಕಾರ್ಯ
**ಸುಕ್ಕಿನುಂಡೆ, ಸುಖಿನುಂಡಿ** ಒಂದು ವಿಧದ ಸಿಹಿ ಭಕ್ಷ್ಯ

Rarest Archiver

**ಸುಕ್ಷೀಣ** ದುರ್ಬಲ

**ಸುಖಕಲ್ಲೋಳ** ಸುಖದ ಅಲೆಗಳ ಹೊಡೆತ

**ಸುಖಕ್ಕಿಂಬು** ಆನಂದಕ್ಕೆ ಆಶ್ರಯ

**ಸುಖಗರೆ** ಸುಖಕೊಡು

**ಸುಖಚಿತ್** ಮೋಕ್ಷಪ್ರದ

**ಸುಖತೀರಥ, ಸುಖತೀರ್ಥ** ಆನಂದತೀರ್ಥರು, ಮಧ್ವ ಮುನಿ, ಮೋದತೀರ್ಥರು

**ಸುಖತೀರ್ಥ ಶಾಸ್ತ್ರ** ಆನಂದತೀರ್ಥರ ಸರ್ವ ಮೂಲವೆಂಬ ಗ್ರಂಥಗಳು

**ಸುಖಾಂಬುಧಿ** ಸುಖವೆಂಬ ಸಮುದ್ರ

**ಸುಗಂಧ** ಸುವಾಸನೆ, ಪರಿಮಳ, ಸುವಾಸನೆಯಿಂದ ಕೂಡಿದ

**ಸುಗಡಿ, ಸುಗುಡಿ** ಮೈನೆರೆಯದ ಹೆಂಗಸು; ಹೆಣ್ತನವಿಲ್ಲದ ಸ್ತ್ರೀ, ಗಂಡುಬೀರಿ

**ಸುಗತಿ** ಮೋಕ್ಷ

**ಸುಗಮ** ಸುಲಭವಾಗಿ ತಿಳಿಯುವ

**ಸುಗುಣಾಂತರಂಗ** ಒಳ್ಳೆಯ ಸತ್ವಗುಣದಿಂದ ಕೂಡಿದವನು

**ಸುಗುಣಾತ್ಮಕ** ಕಲ್ಯಾಣಗುಣಪರಿಪೂರ್ಣ

**ಸುಗುಣಾರ್ಣವ** ಸದ್ಗುಣಭರಿತ

**ಸುಗ್ರೀವಪೋಷಣ** ರಾಮ

**ಸುಘೋಷಣ** ಮಾದ್ರಿಪುತ್ರನಾದ ನಕುಲನ ಶಂಖದ ಹೆಸರು

**ಸುಚಂದನ** ಒಳ್ಳೆಯ ಶ್ರೀಗಂಧ

**ಸುಚಿನ್ಹಬೋಧ** ಒಳ್ಳೆಯ ಗುರುತಿನ ತಿಳಿವು

**ಸುಜನ** ಕುಲೀನ, ಸಭ್ಯ, ಸಜ್ಜನ

**ಸುಜನಗಂಧಿ** ಕುಲೀನೆ

**ಸುಜನಾಬ್ಜ** ಸುಜನಯೆನ್ನುವ ಕಮಲ

**ಸುಜ್ಞಾನ** ಉತ್ತಮವಾದ ತಿಳಿವಳಿಕೆ, ಒಳ್ಳೆಯ ಜ್ಞಾನ, ವಿಶೇಷವಾದ ಜ್ಞಾನ

**ಸುಜ್ಯೋತಿ** ನದಿಯ ಹೆಸರು

**ಸುಟಂಕ** ಭಕ್ತಿ

**ಸುಟಿವೆರು** ಕೌಶಲ್ಯದಿಂದ ಕೂಡಿರು

**ಸುಟ್ಟದಾಸ** ಲಂಕೆಯನ್ನು ಸುಟ್ಟ ಹನುಮಂತ

**ಸುಡು** ಬಿಸಿ, ಸುಟ್ಟು ಹಾಕು

**ಸುಡುಗಾಡು** ಸ್ಮಶಾನ

**ಸುಡುಗಾಡುದಾಸ** ಸ್ಮಶಾನವಾಸಿ ರುದ್ರ

**ಸುಣ್ಣಕಿಕ್ಕಿದನೀರಿನಂತೆ** ಬಹಳ ಕಳವಳದಿಂದ

**ಸುತ** ಮಗ

**ಸುತಪ** ಬ್ರಹ್ಮಾದಿ ಜೀವರನ್ನು ಪಾಲನೆ ಮಾಡುವ ಪರಮಾತ್ಮ–ಶ್ರೀಹರಿ

**ಸುತಲ** ಭೂಮಿಯ ಕೆಳಗಿನ ಮೂರನೇ ಲೋಕ

**ಸುತ್ತೆಣೆಗಂಟು** ಜಡೆಯ ಒಂದು ಬಗೆ

**ಸುತ್ರಾಣ** ಶ್ರೇಷ್ಠಬಲವನ್ನು ಹೊಂದಿರುವವನು

**ಸುತ್ರಾಮ** ಇಂದ್ರ, ದೇವೇಂದ್ರ; ಒಳ್ಳೆಯ ಬಲ ಹಾಗು ವೀರ್ಯ ಉಳ್ಳವನು

**ಸುದತಿ** ಹೆಂಡತಿ, ಪತಿವ್ರತೆ; ಹೆಣ್ಣು, ಸುಂದರಿ, ಸುಂದರವಾದ ಹಲ್ಲುಳ್ಳವಳು, ಲಕ್ಷ್ಮಿ

**ಸುದರುಶನ** ಚಕ್ರಾಕಾರವನ್ನು ಮೂಡಿಸಿ ಕೊಂಡಿರುವ ಶಾಲಗ್ರಾಮ ಶಿಲೆ ಸುದರ್ಶನ

**ಸುದರುಶನದರಧಾರ** ಸುದರ್ಶನ ಚಕ್ರವನ್ನು ಧರಿಸಿದ ವಿಷ್ಣು

**ಸುದರ್ಶನ** ವಿಷ್ಣುವಿನ ಕೈಯಲ್ಲಿರುವ ಚಕ್ರದ ಹೆಸರು

**ಸುದರ್ಶನಪಾಣಿ** ವಿಷ್ಣು

**ಸುದಾಮಸಖ** ವಿಷ್ಣು

**ಸುದಾರೆ** ಸುಂದರಸ್ತ್ರೀ, ಒಳ್ಳೆಯ ಹೆಂಡತಿ

**ಸುಧಾಗಡಲತಲ್ಪ** ಹಾಲಿನ ಸಮುದ್ರವನ್ನು ಹಾಸಿಗೆಯನ್ನಾಗಿ ಮಾಡಿಕೊಂಡವನು–ವಿಷ್ಣು

**ಸುಧಾದಿ** ದೇವತೆಗಳ ಸಮೂಹ; ಸುಧಾ ಗ್ರಂಥವೇ ಮೊದಲಾದ

**ಸುಧಾಪಾನ** ಅಮೃತಪಾನ, ಕ್ಷೀರಪಾನ

**ಸುಧಾಹ್ರದ** ಅಮೃತದ ಮಡು

**ಸುಧೆ** ಅಮೃತ

**ಸುಧೆಗುಡಿ** ಅಮೃತವನ್ನು ಕುಡಿ

Rarest Archiver

**ಸುಧೆನಿಭ** ಅಮೃತಸಮಾನ
**ಸುನಗವಾಸ** ಬೆಟ್ಟದಮೇಲೆ ವಾಸಿಸುವವನು, ತಿರುಪತಿ ತಿಮ್ಮಪ್ಪ-ವೇಂಕಟೇಶ
**ಸುನಾಮ** ಪ್ರಸಿದ್ಧನಾದವನು, ಇಂದ್ರ
**ಸುನಾಸಾ** ಒಳ್ಳೆಯ ನಿಡಿದಾದ ಮೂಗುಳ್ಳವಳು
**ಸುನೂಪುರ** ಒಳ್ಳೆಯ ಕಾಲಿನ ಆಭರಣ
**ಸುಪದ್ಮಗಂಧಿನಿ** ಕಮಲದಂತೆ ಸುವಾಸನೆಯುಳ್ಳವಳು
**ಸುಪಬ್ಬಾ** ಜರರಾತಿವಸ್ತು
**ಸುಪರಣ, ಸುಪರ್ಣ, ಸುಪರ್ನ** ಗರುಡ
**ಸುಪರ್ಣವಾಹನ, ಸುಪರ್ಣಗವ** ಗರುಡಗಮನ-ವಿಷ್ಣು
**ಸುಪರ್ಣಾಂಸಗ** ಗರುಡನ ಹೆಗಲೇರಿದ ಶ್ರೀಹರಿ
**ಸುಪಲ್ಲು** ಚೆಂದವಾದ ಹಲ್ಲು
**ಸುಪಾಣಿ, ಸುಪ್ಪಾಣಿ** ಶ್ರೇಷ್ಠವಾದುದು, ಉತ್ತಮವಾದುದು
**ಸುಪೆರೆ** ಸಮೀಚೀನ ಚಂದ್ರ
**ಸುಪ್ತಿ** ನಿದ್ರೆ, ನಿದ್ರಾವಸ್ಥೆ
**ಸುಪ್ತಿಪ್ರೇರಕ** ನಿದ್ರೆಯಲ್ಲಿಯೂ ಪ್ರೇರಣೆಯನ್ನು ಮಾಡುವವನು-ವಿಷ್ಣು(ಪ್ರಾಜ್ಞ)
**ಸುಪ್ಪತ್ತಿಗೆ** ಮೆತ್ತನೆಯ ಹಾಸಿಗೆ, ಗಾದಿ, ತಲ್ಪ
**ಸುಪ್ಪಾಣಿ** ಉತ್ತಮವಾದ, ಶ್ರೇಷ್ಠವಾದ
**ಸುಪ್ಪಾಣಿಸು** ಸುಪ್ಪತ್ತಿಗೆಯಲ್ಲಿ ಮಲಗಿಸು
**ಸುಪ್ಷಮಲ** ಶ್ರೇಷ್ಟವಾದ ಸೌಂದರ್ಯ
**ಸುಪ್ರಸ್ತ** ಶುಭಸಮಾರಂಭ, ಹಬ್ಬದ ಭೋಜನ
**ಸುಫಲದ** ಶುಭಫಲವನ್ನುಕೊಡುವನು-ಶ್ರೀಹರಿ
**ಸುಫಳ** ಸುಫಲ, ಒಳ್ಳೆಯ ಹಣ್ಣು
**ಸುಬೋಧ** ಯೋಗ್ಯತಾನುಸಾರ ತಿಳಿಸಿಕೊಡುವ
**ಸುಬ್ರಹ್ಮಣ್ಯ** ಯಾಗ ಮುಂತಾದ ಕಾರ್ಯಗಳಲ್ಲಿ ಭಾಗವಹಿಸುವ ಹದಿನಾರು ಋತ್ವಿಕ್ಕುಗಳಲ್ಲಿ ಒಬ್ಬ; ಕಾರ್ತಿಕೇಯ, ಸ್ಕಂದ; ಒಂದು ಪುಣ್ಯಕ್ಷೇತ್ರದ ಹೆಸರು; ಬ್ರಾಹ್ಮಣರಿಗೆ ಪ್ರಿಯನಾದವನು
**ಸುಭಗ** ಐಶ್ವರ್ಯಾದಿಗಳಿಂದ ಪೂರ್ಣ
**ಸುಭಗತ** ಒಳ್ಳೆಯ ಭಕ್ತ; ಚೆಲುವ, ಸುಂದರ; ಅದೃಷ್ಟವಂತ
**ಸುಭುಜ** ತನ್ನ ಸ್ವಾಖ್ಯರಸವನ್ನು ಮಾತ್ರ ಸ್ವೀಕರಿಸುವವನು; ಅಸದೃಶ ಪರಾಕ್ರಮಿ
**ಸುಭ್ರಾಜ** ಪ್ರಕಾಶಮಾನವಾದ
**ಸುಮ** ಹೂವು, ಪುಷ್ಪ
**ಸುಮತ** ಒಳ್ಳೆಯ ಮತ; ಪರ್ವತ
**ಸುಮನ** ಹೊವು, ಹೂವಿನಂಥಹ ಮನಸ್ಸು, ಏಕಾಗ್ರ, ನಿರ್ವಿಕಾರಮನ, ಒಳ್ಳೆಯ ಮನಸ್ಸು
**ಸುಮನಸ** ದೇವತೆ, ಅಮರ; ಸುಂದರ ಚೆಲುವ
**ಸುಮನಸತತಿ** ದೇವತಾಸಮೂಹ
**ಸುಮನಸನದಿ** ದೇವನದಿ, ಗಂಗಾನದಿ
**ಸುಮನಸರಮುಖ** ಅಗ್ನಿ
**ಸುಮನಸರಾಜ, ಸುಮನಸೇಂದ್ರ** ಇಂದ್ರ
**ಸುಮನಸಾರ** ಮಕರಂದ
**ಸುಮನಸಾರ್ಕ** ದೇವೇಂದ್ರ
**ಸುಮಶರ** ಮನ್ಮಥ
**ಸುಮಶರಜನಕ** ಶ್ರೀಹರಿ
**ಸುಮಶರಪಿತ** ಕಾಮನ ತಂದೆ ಶ್ರೀಹರಿ
**ಸುಮಾರ್ಗಣ** ಬಾಣ
**ಸುಮೇಧ** ಉತ್ತಮ ಸಂಸಿದ್ಧಿಯುಳ್ಳವ; ಯಜ್ಞನಾಮಕ ಶ್ರೀಹರಿ
**ಸುಮೇಧರ** ಹರಿಯನುಗ್ರಹ
**ಸುಮೇರು** ಮೇರು ಪರ್ವತ
**ಸುಮ್ಮನ** ಸಂತೋಷ, ಹಿಗ್ಗು; ಒಳ್ಳೆಯ ಮನಸ್ಸು, ಶುದ್ಧ ಮನಸ್ಸು; ತೃಪ್ತಿ, ತಣಿವು
**ಸುಮ್ಮನಸ** ದೇವತೆ; ಶುದ್ಧವಾದ ಮನಸ್ಸುಳ್ಳವ; ಸೌಹಾರ್ದ, ಪ್ರೀತಿ
**ಸುಮ್ಮನೆ** ಮೌನವಾಗಿ, ಸದ್ದಿಲ್ಲದೆ, ಕಾರಣವಿಲ್ಲದೆ, ನಿಷ್ಕಾರಣವಾಗಿ, ಕೆಲಸವಿಲ್ಲದೆ, ವ್ಯರ್ಥವಾಗಿ
**ಸುಮ್ಮಹಿಮ** ಒಳ್ಳೆಯ ಹಿರಿಮೆಯುಳ್ಳವ

Rarest Archive

**ಸುಮ್ಮಾನ** ಸಂತೋಷ, ಹಿಗ್ಗು; ತೃಪ್ತಿ, ತಣಿವು
**ಸುಮ್ಮಾನಿ** ಅನುಕೂಲವಾಗಿರುವವನು, ಸುಖಿ
**ಸುಯಜ್ಞಮೂರುತಿ** ಯಜ್ಞವರಾಹನೆಂಬ ರೂಪ
**ಸುಯಿದಾನ, ಸುಯಿಧಾನ** ಕಾಪು, ಕಾವಲು, ರಕ್ಷಣೆ, ಜೋಪಾನ; ಎಚ್ಚರಿಕೆ, ಜಾಗರೂಕತೆ
**ಸುಯಿಲು** ಉಸಿರು, ಶ್ವಾಸ, ನಿಡಿದಾದ ಉಸಿರು, ನಿಟ್ಟುಸಿರು
**ಸುರ** ದೇವತೆ, ಅಮರ
**ಸುರಋಷಿ** ದೇವ ಋಷಿ ನಾರದ
**ಸುರಕದಂಬ** ದೇವತೆಗಳ ಸಮೂಹ
**ಸುರಕಿ** ಸುರಕೋ, ಸವಿಮಾಡಿಕೊ; ರಾಶಿ
**ಸುರಕುಲ** ದೇವತಾಕುಲ
**ಸುರಗಂಗೋದಿತ ಚರಣ** ದೇವಗಂಗೆಯನ್ನು ಸೃಷ್ಟಿಸಿದ ಪಾದವುಳ್ಳವನು–ತ್ರಿವಿಕ್ರಮ
**ಸುರಗಿರಿ** ಮೇರುಪರ್ವತ
**ಸುರಗುರು** ಬೃಹಸ್ಪತಿ
**ಸುರಜ್ಯೇಷ್ಠ** ಬ್ರಹ್ಮ
**ಸುರತ** ರತಿತಲ್ಲೀನ
**ಸುರತಟಿನೀತಾತ** ಗಂಗಾನದಿಯ ತಂದೆ–ತ್ರಿವಿಕ್ರಮ
**ಸುರತಟಿನೀಧರ** ಶಿವ
**ಸುರತರು** ದೇವವೃಕ್ಷ, ಕಲ್ಪವೃಕ್ಷ, ಕಲ್ಪತರು
**ಸುರಥ** ಬ್ರಹ್ಮದೇವರ ತಂದೆ–ಶ್ರೀಹರಿ
**ಸುರದ್ರುಮ** ಕಲ್ಪವೃಕ್ಷ
**ಸುರಧೇನು** ದೇವ ಲೋಕದ ಆಕಳು, ಕಾಮಧೇನು
**ಸುರನದಿ** ಗಂಗಾನದಿ
**ಸುರಪ, ಸುರಪತಿ** ಇಂದ್ರ, ಷಣ್ಮುಖ
**ಸುರಪತಿವಜ್ರ** ದೇವೇಂದ್ರನ ವಜ್ರಾಯುಧ
**ಸುರಪತಿಸುತ** ಅರ್ಜುನ
**ಸುರಪಥ** ಗಗನ ಮಾರ್ಗ, ಆಕಾಶ ಮಾರ್ಗ
**ಸುರಪನದಿಸೆ** ಇಂದ್ರದೆಸೆ, ಪೂರ್ವದಿಕ್ಕು
**ಸುರಪನಸೊಸೆ** ದ್ರೌಪದಿ
**ಸುರಪಶು** ಕಾಮಧೇನು
**ಸುರಪಾಜನಕ** ಗಂಗಾಜನಕ–ತ್ರಿವಿಕ್ರಮ
**ಸುರಪಾದಪ** ಕಲ್ಪವೃಕ್ಷ
**ಸುರಪುರ** ದೇವಲೋಕ
**ಸುರಪುರೋಹಿತ** ವಶಿಷ್ಠ
**ಸುರಪ್ರಮುಖ** ದೇವೇಂದ್ರ
**ಸುರಭಿ** ಕಾಮಧೇನುವಿನ ಮಗಳು; (ಪರಶುರಾಮನವತಾರ), ಪರಿಮಳ
**ಸುರಭಿಯಘ್ರಾಣದ** ಸುವಾಸನೆಯನ್ನು ಸೇವಿಸಿದ
**ಸುರಭೀತೋಯ** ಸುವಾಸಿತ ಹಾಲು
**ಸುರಭೂಜ, ಸುರಭೂರುಹ** ಕಲ್ಪವೃಕ್ಷ
**ಸುರಮಣಿ** ಚಿಂತಾಮಣಿ
**ಸುರಮಾತೆ** ಅದಿತಿ
**ಸುರಮುನಿ** ನಾರದ
**ಸುರಯೂಥ** ದೇವತಾ ಸಮೂಹ
**ಸುರರಂಗನೆ** ದೇವತಾ ಸ್ತ್ರೀ, ದೇವಲೋಕದ ಹೆಂಗಸು
**ಸುರರಾಜ** ಇಂದ್ರ
**ಸುರರಾಜಗಜ** ಐರಾವತ
**ಸುರರಾಜನಂದನ** ಅರ್ಜುನ
**ಸುರರಾಯ** ಇಂದ್ರ
**ಸುರವರರಾನನ, ಸುರವರಾನನ** ದೇವತೆಗಳ ಮುಖ–ಅಗ್ನಿ
**ಸುರವಾರ** ದೇವತೆಗಳ ಸಮೂಹ
**ಸುರವಿನುತ** ದೇವತೆಗಳಿಂದ ಸ್ತುತಿಸಿಕೊಳ್ಳುವ
**ಸುರವ್ರಾತ** ದೇವತೆಗಳ ಗುಂಪು
**ಸುರಸರಿತ(ತೆ)** ದೇವನದಿ, ಗಂಗಾನದಿ
**ಸುರಸಿಂಧು** ಗಂಗಾನದಿ ಸೇರುವ ಸಮುದ್ರ
**ಸುರಸೇನಾಧಿಪ, ಸುರಸೈನ್ಯನಾಯಕ** ಶಿವ, ಕುಮಾರಸ್ವಾಮಿ, ಸ್ಕಂಧ, ಷಣ್ಮುಖ
**ಸುರಸೌರಭಿ** ಕಾಮಧೇನು
**ಸುರಳೀತ** ಸುಲಲಿತ, ಸರಾಗ, ಸಲೀಸು
**ಸುರಾಣಕ** ದೇವತೆ

Rarest Archiver

**ಸುರಾಧಿಪತಿ** ಇಂದ್ರ

**ಸುರಾಧೀಶ** ದೇವತೆಗಳ ಒಡೆಯ–ಇಂದ್ರ

**ಸುರಾಧ್ಯಕ್ಷ** ದೇವತೆಗಳ ಪ್ರಮುಖ–ಇಂದ್ರ

**ಸುರಾಪಗಾಪಿತ** ದೇವನದಿಯಾದ ಗಂಗೆಯ ಜನಕ–ವಿಷ್ಣು

**ಸುರಾಪಗೆ** ದೇವನದಿ, ದೇವಗಂಗೆ

**ಸುರಾಪಾನ** ಹೆಂಡ ಕುಡಿಯುವುದು, ಮದ್ಯಪಾನ

**ಸುರಾರ್ಚಿತ** ದೇವತೆಗಳಿಂದ ಪೂಜಿಸಲ್ಪಡುವವನು

**ಸುರಾಸುರ** ಸುರ–ಅಸುರ, ದೇವತೆ–ರಾಕ್ಷಸ

**ಸುರಾಳಿ** ದೇವಗತೆಗಳ ಸಮೂಹ

**ಸುರಿ** ಸಪ್ಪಳವಾಗುವಂತೆ ಹೀರು, ಸೊರ್ರನೆ ಎಳೆದುಕೊಳ್ಳು, ಸೇವಿಸು; ಪೋಣಿಸು; ಚೆಲ್ಲು, ಹೊರಹಾಕು

**ಸುರಿಗೆ** ಕತ್ತಿ

**ಸುರುಚಿ** ಒಳ್ಳೆಯ ರುಚಿ; ಉತ್ಥಾನಪಾದನ ಕಿರಿಯ ಹೆಂಡತಿ

**ಸುರುಚಿರ** ಕಾಂತಿಯುಕ್ತ

**ಸುರೂಪ** ಚಲುವಿನಿಂದ ಕೂಡಿದ

**ಸುರೆ** ಹೆಂಡ

**ಸುರೇಶರು** ದೇವತೆಗಳಲ್ಲಿ ಮುಖ್ಯರಾದವರು

**ಸುಲಲಿತ** ಸುಂದರ, ಸರಳ

**ಸುಲಿ** ಬಿಡಿಸು, ತೆಗೆ, ಕಳಚು

**ಸುಲಿ(ಳಿ)ಪಲ್ಲು** ಚೆನ್ನಾಗಿ ಉಜ್ಜಿದ ಹಲ್ಲು, ಸ್ವಚ್ಛವಾದ ಹಲ್ಲು

**ಸುವರ್ಣ** ಚಿನ್ನ

**ಸುವರ್ಣಕ** ಬಂಗಾರ

**ಸುವರ್ಣವರ್ಣ** ಬಂಗಾರದ ಬಣ್ಣದವನು–ವಿಷ್ಣು

**ಸುವಸ್ತು** ಪರವಸ್ತು, ಪರಬ್ರಹ್ಮ, ಶ್ರೀಹರಿ

**ಸುವೈಕುಂಠಪತಿ** ವಿಷ್ಣು

**ಸುಶೀಲಶಾಸ್ತ್ರ** ಮಧ್ವಶಾಸ್ತ್ರ

**ಸುಶೇಷಣ** ಒಬ್ಬ ವಾನರ

**ಸುಷಿರ** ಉಸಿರಿನಿಂದ ಸ್ವರ ಹೊರಡುವ ವಾದ್ಯ, ಕೊಳಲು

**ಸುಷುಪ್ತಿ** ನಿದ್ರಾವಸ್ಥೆ

**ಸುಷುಮ್ನ, ಸುಷುಮ್ನಾ** ದೇಹದ ಪ್ರಮುಖ ನಾಡಿಗಳಲ್ಲಿ ಒಂದು, ಮುಖ್ಯನಾಡಿ

**ಸುಷ್ಠು** ಸಮರ್ಥ, ದಕ್ಷ; ಅತ್ಯುತ್ತಮ, ಚೆನ್ನಾಗಿ, ಸ್ಪಷ್ಟವಾಗಿ; ನಿಜವಾಗಿ

**ಸುಷ್ಮಮಲ** ನಿರ್ಮಲವಾದ ಸೌಂದರ್ಯ

**ಸುಸ್ನಾನ** ಒಳ್ಳೆಯ ಜಳಕ, ಯೋಗ್ಯ ಸ್ನಾನ

**ಸುಸ್ವಾಂತ** ಶುದ್ಧಮನಸ್ಸು

**ಸುಹೃತ್** ದಯಾಮಯಿ; ಗೆಳೆಯ

**ಸುಳಿ** ತಿರುಗುಣಿ

**ಸುಳಿಗುರುಳು** ಗುಂಗುರು ಕೂದಲು

**ಸುಳಿನಾಭಿ** ಹೊಕ್ಕುಳಲ್ಲಿಯ ಸುಳಿ

**ಸುಳಿನುಡಿ** ಬಳಸುಮಾತು

**ಸುಳಿವಳಿ** ಚಕ್ರಾಕಾರವಾಗಿ ಸಂಚರಿಸುವ ದುಂಬಿ

**ಸುಳಿವು** ಚಿಹ್ನೆ, ಗುರುತು

**ಸುಳುಹು** ಕುರುಹು, ಗುರುತು; ರೂಪ

**ಸೂಕರ** ಹಂದಿ, ವರಾಹ

**ಸೂಕರಭೋಜನ** ಹೇಸಿಕೆ, ಅಮೇಧ್ಯ, ಹಂದಿಗಳ ತಿನಿಸು

**ಸೂಕರಾಸ್ಯ** ಹಂದಿಮುಖದವನು, ವಿಷ್ಣುವಿನ ವರಾಹಾವತಾರ

**ಸೂಕ್ತಸ್ನಾನ** ಅಗ್ನಿಸೂಕ್ತಾದಿ ಮಂತ್ರಗಳಿಂದ ಕೂಡಿದ ಸ್ನಾನ

**ಸೂಕ್ಷ್ಮಾಂಬರಧರ** ರೇಷ್ಮೆಯ ಪೀತಾಂಬರವನ್ನು ಧರಿಸಿರುವ ಅಥವಾ ಆಕಾಶ ಮತ್ತು ಭೂಮಿಗಳ ಅಧ್ಯಕ್ಷ–ಧಾರಕ–ಆಶ್ರಯ–ಶ್ರೀಹರಿ

**ಸೂಚ್ಯಾಗ್ರ** ಸೂಜಿಯ ಮೊನೆ

**ಸೂಟಿ** ಚುರುಕುತನ, ಚೂಟಿ; ಉಪಾಯ; ಹಂಚಿಕೆ; ವೇಗ, ರಭಸ

**ಸೂಡು** ಕಟ್ಟು; ಮುಡಿ, ಧರಿಸು, ತೊಡು, ಹಾಕಿಕೊ

Rarest Archiver

**ಸೂತ** ಪುರಾಣಗಳನ್ನು ಬೋಧಿಸಿದ ಒಬ್ಬ ಋಷಿಯ ಹೆಸರು; ಸಾರಥಿ, ರಥ ನಡೆಸುವವನು
**ಸೂತಕ** ಜನನ ಮರಣಗಳಿಂದಾಗುವ ಮೈಲಿಗೆ
**ಸೂತಕುಲ** ಕ್ಷತ್ರಿಯ ತಂದೆ ಬ್ರಾಹ್ಮಣ ತಾಯಿಗೆ ಜನಿಸಿಸದವನು; ಬೆಸ್ತ; ಬಡಗಿ; ಸಾರಥಿಯ ಕೆಲಸ ಮಾಡುವವ
**ಸೂತಿಕಾವಸ್ಥೆ** ಮೈಲಿಗೆಯಿಂದ ಕೂಡಿದವನು; ಮಗು ಹುಟ್ಟುವ ಕಾಲ
**ಸೂತ್ರ** ದಾರ, ನೂಲು, ಜನಿವಾರ; ಶ್ವಾಸ, ನಿಯಮ; ಪ್ರಾಣದೇವರ ಹೆಸರು
**ಸೂತ್ರನಾಮಕ** ಚೇತನಾಚೇತನಗಳಲ್ಲಿ ಅಂತರ್ಗತನಾಗಿರುವ ವಾಯುದೇವರು
**ಸೂತ್ರಾಂತ** ಸೂತ್ರದಲ್ಲಿ ಅಡಗಿದ
**ಸೂತ್ರಾಂತ್ರ** ಸೂತ್ರವನ್ನು ಆಡಿಸುವವ, ಸೂತ್ರಧಾರ
**ಸೂದನ** ನಾಶ, ಧ್ವಂಸ, ನಾಶಕಾರಕ, ನಾಶ ಮಾಡುವವನು
**ಸೂದನಿ** ನಾಶಮಾಡುವವಳು
**ಸೂನ** ಪುಷ್ಪ, ಹೂವು, ಅರಳಿದ, ವಿಕಸಿಸಿದ; ಹುಟ್ಟಿದ
**ಸೂನಶರ** ಹೂಬಾಣ, ಕಾಮ
**ಸೂನೀತಿ** ಸುನೀತಿ, ಒಳ್ಳೆಯ ನಡವಳಿಕೆ
**ಸೂನು** ಮಗ
**ಸೂನೃತ** ಪ್ರಾಮಾಣಿಕವಾದ ಮಾತು, ರಮ್ಯವೂ ಸತ್ಯವೂ ಆದ ಮಾತು
**ಸೂಪ** ತೊವ್ವೆ, ಸಾರು ಮುಂತಾದ ವ್ಯಂಜನ ಪದಾರ್ಥ
**ಸೂಪಾರ** ಮೆತ್ತೆ
**ಸೂರಿ** ಜ್ಞಾನಿ, ವಿದ್ವಾಂಸ, ಬಲ್ಲಿದ; ದೇವತೆ
**ಸೂರಿಗಮ್ಯ** ಜ್ಞಾನಗಮ್ಯ
**ಸೂರಿಜನ** ಪಂಡಿತರು
**ಸೂರಿಧ್ಯೇಯ** ಜ್ಞಾನಿಗಳಿಂದ ಧ್ಯಾನಿಸಲ್ಪಡುವ
**ಸೂರೆ** ಲೂಟಿ, ಕೊಳ್ಳೆ, ದರೋಡೆ, ಸುಲಿಗೆ
**ಸೂರೆಗಾರ** ಸುಲಿಗೆಗಾರ (ತತ್ತ್ವಾಭಿಮಾನಿ ದೇವತೆ)
**ಸೂರ್ಯಚಂದ್ರಾಗ್ನಿನಯನ** ಸೂರ್ಯ ಚಂದ್ರ ಮತ್ತು ಅಗ್ನಿಯನ್ನು ಕಣ್ಣಾಗಿ ಉಳ್ಳವನು–ಶಿವ
**ಸೂರ್ಯನಯನ** ಚಂದ್ರ ಸೂರ್ಯರನ್ನು ಕಣ್ಣಾಗಿ ಉಳ್ಳವನು–ಶ್ರೀಹರಿ
**ಸೂರ್ಯಸುತ** ಸೂರ್ಯಪುತ್ರನಾದ ಯಮ, ಸುಗ್ರೀವ, ಕರ್ಣ, ಶನೈಶ್ಚರ
**ಸೂರ್ಯಾಡು** ಸೂರೆಮಾಡು, ಚೆಲ್ಲಾಡು
**ಸೂರೆ(ರ್ಯ)ಪಾನ** ದೇವರ ಅಥವಾ ರಾಜರ ಮೆರೆವಣಿಗೆಂಯಲ್ಲಿ ಗೌರವಾರ್ಥವಾಗಿ ಕೊಂಡೊಯ್ಯುವ ಒಂದು ಬಗೆಯ ಫಲಕ ಅಥವಾ ಅಲಂಕಾರದ ಚಾಮರ
**ಸೂವಿನೂಬೀಬಿ, ಸೂವಿಯಾಬೀಬಿ** ಅಂತಃಪುರದಲ್ಲಿ, ಹೆಂಗೆಳೆಂಯರ ಒಳಕೋಣೆಯಲ್ಲಿ ಊಳಿಗಮಾಡುವ ವಯಸ್ಸಾದ ಹೆಂಗಸು
**ಸೂಸಕ** ಬೈತಲೆ ಬಟ್ಟು
**ಸೂಸಲು** ಕಾಣಿಸಿಕೊಳ್ಳು; ಎಳ್ಳು, ಕಡಲೆ ಮುಂತಾದವುಗಳನ್ನು ಸೇರಿಸಿ ಮಾಡಿದ ಖಾದ್ಯ, ಚಿಗಳಿ
**ಸೂಸು** ಹೊಮ್ಮು; ಹರಿದಾಡು; ಚಲಿಸು; ತುಳುಕು, ತುಂಬು; ಪ್ರಕಟವಾಗು; ಸಿಂಪಡಿಸು
**ಸೂಸುಕ** ಬೈತಲೆ ಮಣಿ, ಹೂವಿನದಂಡೆ
**ಸೂಸುತಲಿರು** ತುಂಬಿತುಳುಕುತ್ತಿರು
**ಸೂಳ್** ಸರದಿ
**ಸೂಳೈಸುತಲಿರೆ** ಗಟ್ಟಿಯಾಗಿ ಧ್ವನಿಮಾಡುತ್ತಿರಲು, ಹೊಡೆ, ಬಾರಿಸು
**ಸೂಳ್ನುಡಿ** ಸಂಭಾಷಣೆ, ಮಾತುಕತೆ, ಸಲ್ಲಾಪ
**ಸೃಕ್** ಹೂವು; ಹೋಮಾದಿಗಳಲ್ಲಿ ಆಹುತಿ ಹಾಕಲು ಉಪಯೋಗಿಸುವ ಮರದ ಸೌಟು
**ಸೃಗಾಲ** ನರಿ; ಸೃಗಾಲವಾಸುದೇವನೆಂಬ ದೈತ್ಯ
**ಸೃಜನ** ಸೃಷ್ಟಿ

Rarest Archiver

**ಸೃಜಾಹತ** ಮಾಲೆಯಿಂದ ಹೊಡೆಯಲ್ಪಟ್ಟ
**ಸೃಜಿತರಹಿತ** ಹುಟ್ಟು ಇಲ್ಲದ, ಅನಾದಿ
**ಸೃಜಿಸು** ಸೃಷ್ಟಿಸು
**ಸೃತಾನಿ** ಹಾರಗಳಿಂದ, ಆಭರಣಗಳಿಂದ ಅಲಂಕೃತನಾದವನು
**ಸೃತಿ** ಮಾರ್ಗ, ದಾರಿ, ಪಥ
**ಸೃಷ್ಟಾರ** ಸೃಷ್ಟಿಸುವವನು
**ಸೃಷ್ಟಿ** ನಿರ್ಮಾಣ, ಉತ್ಪತ್ತಿ, ಹುಟ್ಟು; ಪ್ರಕೃತಿ, ಜಗತ್ತು, ಪ್ರಪಂಚ
**ಸೆಂಡು** ಚೆಂಡು, ಕಂದಕ
**ಸೆಜ್ಜೆ** ಶಯ್ಯೆ, ಹಾಸಿಗೆ
**ಸೆಜ್ಜೆವಾಹರಿ** ಶಯನಗೃಹ
**ಸೆಟವಿ** ಒಂದು ಕ್ಷುದ್ರ ದೇವತೆ
**ಸೆಣಸು** ಸ್ಪರ್ಧೆ, ಸ್ಪರ್ಧಿಸು; ವಿನೋದ; ಕೆಣಕು; ಹೋರಾಡು, ಮೇಲಾಡು
**ಸೆರಗು** ಸೀರೆಯಲ್ಲಿ ಹೊದೆಯುವ ಭಾಗ, ವಸ್ತ್ರದ ಕೊನೆ ಭಾಗ, ಅಂಚು
**ಸೆರಗುಸಂವರಿಸು** ಉಟ್ಟ ಬಟ್ಟೆಯನ್ನು ಸರಿಪಡಿಸಿಕೊ
**ಸೆರಗೊಡ್ಡು** ಅಂಗಲಾಚು
**ಸೆರೆ** ಒಂದು ಕೈಯ ಬೊಗಸೆ
**ಸೆಳವು** ಆಕರ್ಷಣೆ, ಸೆಳೆತ
**ಸೆಳೆ** ಆಕರ್ಷಿಸು, ವಶಪಡಿಸಿಕೊಳ್ಳು; ಎಳೆ, ಜಗ್ಗು, ಕೋಲಿನಿಂದ ಹೊಡೆ; ಬಟ್ಟೆಯನ್ನು ಒಗೆ
**ಸೆಳೆಮಂಚ** ತೂಗು ಮಂಚ
**ಸೆಳೆವು** ಎಳೆತ, ರಭಸ
**ಸೆಳ್ಳುಗುರು** ಹರಿತವಾದ ಉಗುರು, ಚೂಪಾದ ಉಗುರು
**ಸೇತುಮಾಧವ** ರಾಮ
**ಸೇತುರಾಮ** ರಾಮೇಶ್ವರದ ರಾಮ
**ಸೇದು, ಸೇದೆ** ಉಸಿರನ್ನು ಒಳಗೆ ಎಳೆದುಕೊಳ್ಳು; (ಬಾವಿ ಮೊದಲಾದವುಗಳಿಂದ) ನೀರನ್ನು ಮೇಲಕ್ಕೆ ಎತ್ತಿ ತೆಗೆ
**ಸೇನಭಾಗ** ಶಾನುಭೋಗ
**ಸೇರಿದಾಬದುಕು** ಇದುವರೆಗಿನ ಬದುಕು, ಇಲ್ಲಿಯವರೆಗೆ ಬಾಳಿದ ಬದುಕು
**ಸೇರೆ** ಬೊಗಸೆ
**ಸೇವ್ಯ** ಪೂಜಿಸಲು ಯೋಗ್ಯವಾದುದು, ಸೇವಿಸಲು ಯೋಗ್ಯನಾದವನು, ಸೇವೆಯನ್ನು ಸ್ವೀಕರಿಸುವವನು
**ಸೇವ್ಯೋತ್ತಮ** ಸೇವೆ ಮಾಡಿಸಿಕೊಳ್ಳುವುದರಲ್ಲಿ ಶ್ರೇಷ್ಠನಾದವನು, ಶರಣಾಗತಪ್ರಿಯ, ವಿಷ್ಣು
**ಸೇಸೆ** ಮಂತ್ರಾಕ್ಷತೆ; ಆಶೀರ್ವಾದ
**ಸೈಂಧವ** ಸಿಂಧುದೇಶ ಮತ್ತು ಅಲ್ಲಿಯ ಜನ, ಜಯದ್ರಥ
**ಸೈಂಧವಾಸ್ಯ** ಕುದುರೆಯ ಮುಖದ, ಹಯಗ್ರೀವ; ಆನೆಯ ಬಲಉಳ್ಳವ
**ಸೈಪು** ಪುಣ್ಯ, ಸುಕೃತ
**ಸೈರಂಧ್ರಿ** ಅಂತಃಪುರದ ಸೇವಕ ಅಥವಾ ಸೇವಕಿ; ಒಬ್ಬ ಅಪ್ಸರೆ, ಇವಳೇ ಕುಬ್ಜೆಯಾಗಿ, ಗೂನಿಯಾಗಿ ಅವತರಿಸಿದಳು; ಅಜ್ಞಾತವಾಸದಲ್ಲಿ ದ್ರೌಪದಿಯ ಹೆಸರು
**ಸೈಲಿ** ಒಂದು ಕ್ಷುದ್ರ ದೇವತೆ, ಚಂಚಲವಾದ ದೇವತೆ
**ಸೈಸು** ಸಹಿಸು
**ಸೊಂಟ** ಟೊಂಕ
**ಸೊಂಪು** ಸೌಂದರ್ಯ, ಲಾವಣ್ಯ, ಕಾಂತಿ; ಮಧುರ, ಸವಿ
**ಸೊಕ್ಕು** ಗರ್ವ, ಅಹಂಕಾರ
**ಸೊಗ** ಸುಖ
**ಸೊಗಡುಗಂಧ** ಸುವಾಸನೆ, ಒಳ್ಳೆಯ ವಾಸನೆ
**ಸೊಡರು** ದೀಪ
**ಸೊಣಗ** ನಾಯಿ
**ಸೊನೆ** ವನಸ್ಪತಿಗಳಿಂದ ಒಸರುವ ರಸ
**ಸೊನ್ನಗದಿರ** ಸುವರ್ಣ ಬಣ್ಣದ ಕಿರಣ, ಹೊಂಬಣ್ಣಕಿರಣ, ಸೂರ್ಯ

Rarest Archiver

**ಸೊನ್ನು** ಬಂಗಾರ
**ಸೊನ್ನೆದಾಮ** ಚಿನ್ನದ ಡಾಬು
**ಸೊನ್ನೊಡಲ** ಬ್ರಹ್ಮ
**ಸೊಬಗ** ಚೆಲುವ, ಸುಂದರ
**ಸೊಬಗಿ** ಚೆಲುವೆ, ಸುಂದರಿ
**ಸೊಮ್ಮು** ಒಡವೆ, ಸ್ವತ್ತು, ಐಶ್ವರ್ಯ; ಸಂಬಂಧ, ನಂಟು; ಸೊಬಗು, ಚೆಲುವು
**ಸೊರೆ** ಹೆಚ್ಚು; ಊಟಮಾಡುವಾಗ ಸಪ್ಪಳ ವಾಗುವಂತೆ ಹೀರು
**ಸೊರೆಗಾಣು** ಅತಿಶಯ ಕಾಣು
**ಸೊಲಗಿ, ಸೊಲಿಗೆ, ಸೊಲ್ಲಿಗೆ** ಧಾನ್ಯ ಅಳೆಯುವ ಒಂದು ಮಾನ, ಎಂಟು ಸೇರು
**ಸೊಲುಗೆ<ಸೊಲ್** ಚೆಲುವೆ, ಸರಸ್ವತಿ, ವಾಣಿ
**ಸೊಲ್ಲು** ಹೇಳು, ಮಾತನಾಡು, ಮಾತು, ಶಬ್ದ, ಧ್ವನಿ
**ಸೊಲ್ಲುಬಡಿ** ಎಲ್ಲರೂ ಕೇಳುವಂತೆ ಹೇಳು; ಡಂಗುರ ಸಾರು
**ಸೋಂಕು, ಸೋಕು** ಮುಟ್ಟು, ತಟ್ಟು, ಪರಿಣಾಮ ಬೀರು
**ಸೋಕು** ಮುಟ್ಟು
**ಸೋಗಿಲು** ಉಡಿ, ಮಡಿಲು
**ಸೋಗು** ಸೋಂಗು, ಬೂಟಾಟಿಕೆ, ಕಪಟವೇಷ
**ಸೋಗೆ** ಅಡಕೆ ಅಥವಾ ತೆಂಗಿನ ಗರಿ; ಗಂಡು ನವಿಲು, ನವಿಲಿನ ಪುಚ್ಛ; ಕಣ್ಣಿನ ಕುಡಿಯ ಕಾಡಿಗೆ ಗೆರೆ
**ಸೋಗೆಗಣ್ಣು** ಕಾಡಿಗೆ ಹಚ್ಚಿದ ಕಣ್ಣು
**ಸೋಜಿಗ** ಆಶ್ಚರ್ಯ, ವಿಸ್ಮಯ
**ಸೋತ್ತಮ** ಅತ್ಯುತ್ತಮ, ಸರ್ವೋತ್ತಮ–ಶ್ರೀಹರಿ
**ಸೋನೆ** ಮಳೆ, ತುಂತುರು ಹನಿ, ಜಿನುಗುಧಾರೆ, ಜಡಿಮಳೆ
**ಸೋಪಸ್ಕರ** ಆವಶ್ಯಕ ವಸ್ತು; ಬೇಯದ ಪದಾರ್ಥ
**ಸೋಪಾನ** ಮೆಟ್ಟಿಲು, ಪಾವಟಿಗೆ
**ಸೋಮ** ಚಂದ್ರ, ಶಿವ; ಅಮೃತ, ಸುಧೆ
**ಸೋಮಕವಿಭಾಸಿಕ** ಚಂದ್ರಸೂರ್ಯರಂತೆ ಹೊಳೆಯುವ ಪ್ರಭೆಯವನು
**ಸೋಮಕಾಸುರಾಂತಕ** ವಿಷ್ಣು
**ಸೋಮಕುಲ** ಚಂದ್ರವಂಶ
**ಸೋಮಕುಲಪ** ಚಂದ್ರವಂಶದಲ್ಲಿ ಪ್ರಮುಖ
**ಸೋಮಧರ, ಸೋಮನಧರಿಸಿದವ** ಚಂದ್ರಮೌಳಿ–ಶಿವ
**ಸೋಮಪ** ಶಿವನ ತಂದೆ ಬ್ರಹ್ಮ
**ಸೋಮಪಾಧಿಪ** ಇಂದ್ರ
**ಸೋಮರಸ** ಯಜ್ಞಕಾಲದಲ್ಲಿ ಸೇವಿಸುವ ಶೀತಲಪ್ರದ ಸೋಮವೆಂಬ ಪಾನೀಯ
**ಸೋಮಶಾಲೆ** ಚಂದ್ರಶಾಲೆ, ಬಿಸಿಲುಮಚ್ಚು
**ಸೋಮಶೇಖರ** ತಲೆಯಲ್ಲಿ ಚಂದ್ರನನ್ನು ಧರಿಸಿದ ವನು–ಶಿವ
**ಸೋಮಶೇಖರಧ್ಯೇಯ** ಶಿವನ ಗುರಿಯಾದ ವಿಷ್ಣು
**ಸೋಮಸನ್ನಿಭ** ಚಂದ್ರನನ್ನು ಧರಿಸಿದವನು–ಶಿವ; ಚಂದ್ರಕಾಂತಿಯುಳ್ಳವ
**ಸೋಮಸೂರ್ಯನಯನ** ಚಂದ್ರಸೂರ್ಯರನ್ನು ಕಣ್ಣಾಗುಳ್ಳವನು–ಶ್ರೀಹರಿ
**ಸೋಮಸೂರ್ಯೋಪರಾಗ** ಚಂದ್ರ ಇಲ್ಲವೆ ಸೂರ್ಯರ ಗ್ರಹಣ ಕಾಲದ ಪರ್ವಕಾಲ
**ಸೋಮಸೋದರಿ** ಚಂದ್ರನಸೋದರಿ–ಲಕ್ಷ್ಮಿ
**ಸೋಮಸ್ತೋಮಕಾಯ** ಚಂದ್ರರ ಸಮೂಹಗಳ ಕಾಂತಿಯಂತೆ ಕಾಂತಿಯುಳ್ಳ ಶರೀರ
**ಸೋಮಹಾಸ** ಚಂದ್ರಹಾಸ
**ಸೋಮಾರ್ಕ** ಚಂದ್ರ–ಸೂರ್ಯ
**ಸೋರುಮುಡಿ** ಸಡಿಲವಾಗಿ ಕಟ್ಟಿದ ತುರುಬು
**ಸೋರುವಮನೆ** ನವದ್ವಾರಗಳ ದೇಹ
**ಸೋರೆ** ಅಲುಬು, ಮಡಕೆ; ತಂಬೂರಿ ಅಥವಾ ವೀಣೆಯ ಬುರುಡೆ

Rarest Archive

7 ಅನಪಾಯಿನಿ
8 ಅಬುಜೆ
9 ಅಬ್ಜಸದನೆ
10 ಅಬ್ಧಿಜೆ
11 ಅಬ್ಧಿತನಯೆ
12 ಅರವಿಂದಮಂದಿರೆ
13 ಅರವಿಂದಾನನೆ
14 ಅರ್ಥಕಾರಿಣಿ
15 ಅಲಮೇಲುಮಂಗಮ್ಮ
16 ಅವಿಯೋಗಿನಿ
17 ಆನಂದ
18 ಆನಂದವರ್ಧಾಂಗಿ
19 ಆರ್ಯಳು
20 ಆರ್‍ಯಾ
21 ಇಂಗಡಲಸುತೆ
22 ಇಂಗಡಲಾತ್ಮಜೆ
23 ಇಂದಿರಾ(ರೆ)
24 ಇಭರಾಜಗಮನೆ
25 ಇಳಾಸುತೆ
26 ಈಶಕೋಟಿಪ್ರವಿಷ್ಟೆ
27 ಕಂಜಭವೆ
28 ಕಂಜಾಕ್ಷಿ
29 ಕಂಜೋದ್ಭವನಮ್ಮ
30 ಕಡಲತನುಜೆ
31 ಕಮಲಾಲಯೆ
32 ಕಮಲಾಲಿಯ
33 ಕಾಮಿತದಾತೆ
34 ಕೀಲಾಲಭವ
35 ಕುಂಭಿನಿಜಾ
36 ಕೃತಿ
37 ಕ್ಷಿತಿಜದೇವಿ
38 ಕ್ಷಿತಿಸುತೆ
39 ಕ್ಷೀರವಾರಿಧಿಕನ್ನಿಕೆ
40 ಕ್ಷೀರಾಬ್ಧಿಕನ್ನಿಕೆ
41 ಕ್ಷೋಣಿಜಾ
42 ಗುಣಗಳತ್ರಯಮಾನಿ
43 ಗೋಮಿನಿ
44 ಗ್ರೀವಸ್ಥೆ
45 ಘೃಪ್ರತೀಕ
46 ಚಂದ್ರಸಹೋದರಿ
47 ಚಾರುಮತಿ
48 ಚಿತ್ತಾಭಿಮಾನಿ
49 ಚೇತೋದ್ಭವ ಜನನಿ
50 ಜನಕಜಾ(ಜೆ)
51 ಜನನಿ
52 ಜಯಾ
53 ಜಲಜಪಾಣಿ
54 ಜಲಧಿಜೆ
55 ಜಾನಕಿ
56 ಜ್ಞಾನಶುಭಕಾಯಳು
57 ತನುಜಾತೆ
58 ತಾಮರಸಪದೆ
59 ತೋಯಜನಯನೆ
60 ತೋಯಜಮುಖಿ
61 ತೋಯಜಾಂಬಕಿ
62 ತ್ರಿಜಗನ್ಮಾತೆ
63 ದಾರಿದ್ರ್ಯಭಂಜಿನಿ
64 ದುರಿತವಿಧ್ವಂಸಿನೀ
65 ಧರಣಿಜಾ
66 ಧರಣಿಜಾತೆ
67 ಧರಣಿಸುತೆ
68 ಧರಣೀನಾರಿ
69 ಧರೆಪುತ್ರಿ
70 ಧಾತ್ರಿಜಾ(ತೆ)
71 ಧಾತ್ರಿಜೆ
72 ಧಾತ್ರಿಪುತ್ರಿ

Rarest Archiver

73 ನರಸಿಂಹಾಂಕಮಂದಿರೆ
74 ನಾಡೊಳರ್ಚಕನಾಥೆ
75 ನಾರಾ
76 ನಾರಾಯಣೀ
77 ನಿತ್ಯಮುಕ್ತಳು
78 ನಿತ್ಯಾವಿಯೋಗಿನಿ
79 ನಿರಂಜನೀ
80 ನೀರಜಾಕ್ಷಿ
81 ನೀರಜಾಲಯೆ
82 ನೀರಧಿಸುತೆ
83 ಪಂಕಜನೇತ್ರೆ
84 ಪಂಕಜಮುಖಿ
85 ಪಟ್ಟಮಹಿಷಿ
86 ಪದುಮೆ
87 ಪದ್ಮಮುಖಿ
88 ಪಯೋನಿಧಿಸುತೆ
89 ಪರಾವರಿ
90 ಪಾಲಬಾಲೆ
91 ಪಾಲಾಬ್ಧಿಸಂಜಾತೆ
92 ಪೃಥಿವಿಸುತೆ
93 ಪ್ಲಧ್ವಿಜೆ
94 ಪ್ರೌಢಜನೇಶ್ವರಿ
95 ಬಿಸಜಾಕ್ಷಿ
96 ಬುವಿಜೆ
97 ಭವಘ್ನೆ
98 ಭಾನುಮತಿ
99 ಭಾಮೆ
100 ಭಾರ
101 ಭಾರ್ಗವಿ
102 ಭೀಷ್ಮಕನೃಪಜಾತೆ
103 ಭೂ
104 ಭೂಜೆ
105 ಭೂತಿದೇವತೆ
106 ಭೂಮಿಜಾ(ಜೆ)
107 ಭೈಷ್ಮಿ
108 ಮಂಗಳಗಾತ್ರೆ
109 ಮಂಗಳದೇವಿ
110 ಮಚ್ಚಗಂಗಳು
111 ಮಹಾಮಾಯೆ
112 ಮಹಾಸತಿ
113 ಮಹಿಜೆ
114 ಮಹಿತನುಜೆ
115 ಮಾ
116 ಮಾಯಾ(ಯೆ)
117 ಮಾಯಾದೇವಿ
118 ಮಾರಜನನಿ
119 ಮುಕುತಿಯಲಲನೆ
120 ಮುಕ್ತಿಕಾಂತೆ
121 ಮೂಲಪ್ರಕೃತಿ
122 ಮೈಥಿಲಿ
123 ಯಜ್ಞಪತ್ನಿ
124 ಯೆಂಕಾಯೀ
125 ರನ್ನೆ
126 ರಮಣವಕ್ಷಾಂಕಕ್ಷೇತ್ರೇ
127 ರಮಾ
128 ರಮೆ
129 ರಮ್ಮೆ
130 ರಾಮರಮಣಿ
131 ರಾಮೆ
132 ಲಕುಮಿ
133 ಲಚುಮೆವ್ವ
134 ಲೋಕಮಾತೆ
135 ವನಜೆ
136 ವನರುಹಾಕ್ಷಿ
137 ವರಾಶಿಜಾ
138 ವಸುಧಾಕಾಯಸಂಭೂತೆ

Rarest Archiver

139 ವಸುಧಾಸುತೆ
140 ವಸುಧೀಜೆ
141 ವಸುಮತಿಸುತೆ
142 ವಾಮಾಕ್ಷಿ
143 ವಾರಾಶಿಜಾತೆ
144 ವಾರಾಸಿಜೆ
145 ವಾರಿಜಭವಮುಖಿ
146 ವಾರಿಜಮುಖಿ
147 ವಾರಿಜಾಕ್ಷಿ
148 ವಾರಿಜಾನನೆ
149 ವಾರಿಜಾಸನಮಾತೆ
150 ವಾರಿರೂಪಿ
151 ವಾರುಧಿತನುಜೆ
152 ವಿಧಿಮಾತೆ
153 ವಿಮಲಾ
154 ವಿಷತನುಜೆ
155 ವೇದವತಿ
156 ವೈದರ್ಭಿ
157 ವೈದರ್ಭೆ
158 ಶರಧಿಕುಮಾರಿ
159 ಶರಧಿಜೆ
160 ಶರಧಿಮಗಳು
161 ಶರಧಿಸುತೆ
162 ಶಶಾಂಕಸೋದರಿ
163 ಶಾಂತಿ
164 ಶ್ರೀತರುಣಿ
165 ಶ್ರೀದಯಿತೆ
166 ಶ್ರೀಧರಣಿ
167 ಶ್ರೀಧರಾದುರ್ಗಾ
168 ಶ್ರೀಲಕ್ಷುಮಿಣಿ
169 ಶ್ರೀವನಿತೆ
170 ಶ್ರುತಿಯರಸಿ
171 ಸಗರತನಯಾ
172 ಸಮಾಸಮೆ
173 ಸರಸಿಜಮುಖಿ
174 ಸರಸಿಜಾಕ್ಷಿ
175 ಸರಸಿಜಾಯತನೇತ್ರೆ
176 ಸಾಗರಸುತೆ
177 ಸಾರಸವೈರಿಸಹೋದರಿ
178 ಸಿಂಧುತನಯೆ
179 ಸಿಂಧುಶಯನಪ್ರಿಯೆ
180 ಸಿಂಧುಸುತೆ
181 ಸಿರಿ
182 ಸಿರಿದೇವಿ
183 ಸಿರಿಮಹಿಳೆ
184 ಸುದತಿ
185 ಸೋಮಸೋದರಿ
186 ಸೌಮ್ಯನಾಯಕಿ
187 ಸ್ವೇದಾಪಳು
188 ಹರಿಸರ್ವಾಂಗೆ
189 ಹೃದಂಬರವಾಸಿನಿ

## ಬ್ರಹ್ಮ-ವಾಯು

1 ಅಂಚೆಗಮನ
2 ಅಂಜನಾಸುತ
3 ಅಂಡಜ
4 ಅಂಬುಜಭವ
5 ಅಂಬುಜಸಂಭವ
6 ಅಂಬುಜಾಸನ
7 ಅಂಬುರುಹೋದ್ಭವ
8 ಅಕ್ಷಾಸುರಾಂತಕ
9 ಅಜ
10 ಅಜಭವ
11 ಅದ್ರಿ
12 ಅನಲಸಖಿತನಯ

Rarest Archiver

13 ಅನಲಸ್ನೇಹಿತ
14 ಅನಿರುದ್ಧಜಾತ
15 ಅನಿಲಜ
16 ಅನಿಲಸುತ
17 ಅನಿಶ
18 ಅಬುಜಭವ
19 ಅಬ್ಜಜ
20 ಅಬ್ಜಭವ
21 ಅಬ್ಜಸಂಭವ
22 ಅಭವ
23 ಅರವಿಂದಾಸನ
24 ಅಷ್ಟಪದೋದರ
25 ಅಸುದೇವ
26 ಅಸುನಾಥ
27 ಅಸುನಾಥಸುತ
28 ಅಸುಪತಿ
29 ಅಸುಪಾಲ
30 ಅಸುರುಹ
31 ಆಖಣಾಶ್ಮ
32 ಆತ್ಮಭೂ
33 ಆನಂದಶತಕ
34 ಆನನಚತುಷ್ಟ
35 ಆಪಜಾಸನ
36 ಈರ
37 ಉದಕಜಾಸನ
38 ಉದಧಿಹಾರಿದವ
39 ಉನ್ನತಭಕ್ತ
40 ಋಜುಗಣಾಧಿಪ
41 ಋಜುಪುಂಗವ
42 ಕಂಜಜ
43 ಕಂಜಜಾತ
44 ಕಂಜಭವ
45 ಕಂಜಾಸನ
46 ಕಂಜೋದ್ಭವ
47 ಕನಕಗರ್ಭ
48 ಕಪಿಕುಂಜರ
49 ಕಪಿಪ
50 ಕಪೀಶ
51 ಕಮಲಜ
52 ಕಮಲಭವ
53 ಕಮಲಸಂಭವ
54 ಕಮಲಾಸನ
55 ಕಲಿಮಲಾಪಕ
56 ಕಲಿಹನುಮ
57 ಕಲಿಹರ್ತ
58 ಕವೇರಜ
59 ಕಾಶೀಜಾಧವ
60 ಕೀಶೇಶ
61 ಕುಲಿಶಾಂಗ
62 ಕುಸುಮಪೀಠ
63 ಕುಸುಮಸಂಭವ
64 ಕೃಶಾನುಸಖ
65 ಗಂಧವಹ
66 ಗಾಳಿನಂದನ
67 ಗಿರಿಸುತಪಾಲಕ
68 ಗೀಶ
69 ಘನಮರುತ
70 ಚತುರಮುಖ
71 ಚತುರಾಸ್ಯ
72 ಚಿದ್ಘನ
73 ಚಿನ್ನಗರ್ಭ
74 ಚೈತನ್ಯಸತ್ರಾಣಿ
75 ಜಗದ್ದಾತ
76 ಜಡಜಸಂಭವ
77 ಜಯಾ ಸಂಕರ್ಷಣಾತ್ಮಜ
78 ಜಲಜಗರ್ಭ

Rarest Archive

79 ಜಲಜಪೀಠ
80 ಜಲಜಭವ
81 ಜಲಜಸಂಭವ
82 ಜಲಜಾಸನ
83 ಜೀವೋತ್ತಮ
84 ಜ್ಯೇಷ್ಠದೂತ
85 ಝಂಝಾವಾತ
86 ತರುಚರವರ
87 ತಾಮರಸಪೀಠ
88 ತಾಮರಸಭವ
89 ತಾಮರಸಾಸನ
90 ತೋಯಜಭವ
91 ತೋಯುಜಾಸನ
92 ದೃಹಿಣಿ
93 ದ್ಯುಭವ
94 ದ್ರುಂಕಿಣ
95 ದ್ರುಹಿಣ
96 ಧಾತೃ
97 ನರಕೇಶಭೂಷಾ
98 ನಳಿನಜ
99 ನಳಿನಭವ
100 ನಳಿನಿಸಂಭವ
101 ನಳಿನೋದ್ಭವ
102 ನಾಲ್ಮೊಗ
103 ನಿಗಮಧರ
104 ನೀರಜಭವ
105 ನೀರಜಾಸನ
106 ಪಂಕಜತನುಜ
107 ಪಂಕಜಾಸನ
108 ಪಂಕಜೋದ್ಭವ
109 ಪಂಚನಂದನ
110 ಪಂಚವಿಂಶಾಖ್ಯ
111 ಪದುಮಜ
112 ಪದುಮಪೀಠಪದಾರ್ಹ
113 ಪದುಮಸಂಭವ
114 ಪದ್ಮಜ
115 ಪದ್ಮಭವ
116 ಪದ್ಮಸಂಭವ
117 ಪಯೋಜಜ
118 ಪಯೋಜಸಂಭವ
119 ಪರಮೇಷ್ಠಿ
120 ಪವನಜ
121 ಪವನನಂದನ
122 ಪವನಸುತ
123 ಪವಮಾನ
124 ಪಾವನಿ
125 ಪುಂಡರೀಕೋದ್ಭವ
126 ಪೊಂಬಸಿರ
127 ಪೊಂಬಸುರ
128 ಪ್ರಜ್ಞಾಶ್ರೀದ
129 ಪ್ರಥಮಾಂಗ
130 ಪ್ರಾಣ
131 ಪ್ರಾಣಸುತ
132 ಪ್ರಾಣೇಶ
133 ಪ್ಲವಂಗನಾಯಕ
134 ಫುಲ್ಲಭವ
135 ಬಂಗಾರದೊಡಲ
136 ಬಲದೇವ
137 ಬಿಸಜಭವ
138 ಬಿಸಜಸಂಭವ
139 ಭರಮಪ್ಪ
140 ಭರ್ಮಗರ್ಭ
141 ಭವಿಷ್ಯದಬ್ರಹ್ಮ
142 ಭಾರತೀಪತಿ
143 ಭಾರತೀಶ
144 ಭಾಷಾಪತಿ
145 ಮಂದಜಭವ
146 ಮಂದಜಾಸನ

Rarest Archiver

147 ಮರುತಸುತ
148 ಮರುತಾತ್ಮಜ
149 ಮಾತರಿಶ್ವ
150 ಮಾರುತ
151 ಮಿಹಿರಜಾಮಾತ್ಯ
152 ಮುಖ್ಯಪ್ರಾಣ
153 ಮೂರೊಂದುಮೊಗ
154 ಮೃಡನಯ್ಯ
155 ರಂಗನಸುತ
156 ರಾಜೀವಪೀಠ
157 ರಾಜೀವಭವ
158 ವನಜಜ
159 ವನಜಪೀಠ
160 ವನಜಭವ
161 ವನಜಸಂಭವ
162 ವನರುಹಸಂಭವ
163 ವನರುಹಾಸನ
164 ವನೌಕಸಾರ್ಯ
165 ವರಕಪಿ
166 ವಾಣಿನಲ್ಲ
167 ವಾಣಿಯರಸ
168 ವಾಣೀಪತಿ
169 ವಾತ
170 ವಾತಜ
171 ವಾತಜಾತ
172 ವಾತತನಯ
173 ವಾತದೇವ
174 ವಾತಿ
175 ವಾನರ
176 ವಾಯು
177 ವಾಯುಜಾತ
178 ವಾಯುನಂದನ
179 ವಾರಿಜಭವ
180 ವಾರಿಜಾಸನ
181 ವಾರಿಜೋದ್ಭವ
182 ವಿಕಸಿತಾಬ್ಜದ
183 ವಿಜಯರಥಕೇತುನಾಥ
184 ವಿಧಾತೃ
185 ವಿಧಿ
186 ವಿರಂಚ
187 ವಿರಂಚಿ
188 ವಿರಿಂಚ
189 ವೀತಿಹೋತ್ರಸಖ
190 ವೃಷಕೇತುಪಿತ
191 ವೇದ
192 ವೇದಗರ್ಭ
193 ವೇದಮುಖ
194 ವೈಧಾತೃ
195 ವೈಧಾತ್ರ
196 ಶತಧೃತಿ
197 ಶತಪತ್ರದಳಗೇಹ
198 ಶತಮೋದ
199 ಶತಾನಂದ
200 ಶತಾಮೋದ
201 ಶಾತಕುಂಭೋದರ
202 ಶಾರದೇಶ
203 ಶಿಖಿಸಖ
204 ಶುಭವಿಗ್ರಹ
205 ಶ್ರದ್ಧೇಶ
206 ಶ್ರೀಕಾಂತನಾತ್ಮಜ
207 ಶ್ರೇಷ್ಠಸುಗಂಧಿ
208 ಶ್ವಸನ
209 ಶ್ವಾಸ
210 ಸಂಜೀವರಾಯ
211 ಸಂಚೆರರಾರಿ
212 ಸತ್ಯೇಶ

Rarest Archiver

213 ಸತ್ವರಾಜಸರು
214 ಸನಾತನ
215 ಸಮೀರ
216 ಸಮೀರಜ
217 ಸಮೀರಣ
218 ಸರಸಿಜಜಾತ
219 ಸರಸಿಜಭವ
220 ಸರಸಿಜಾಸನ
221 ಸರಸಿಜೋದ್ಭವ
222 ಸರಸೀರುಹಾಸನ
223 ಸಾರಸಭವ
224 ಸುಟ್ಟದಾಸ
225 ಸುರಜ್ಯೇಷ್ಠ
226 ಸೂತ್ರ
227 ಸೂತ್ರನಾಮಕ
228 ಸೊನ್ನೊಡಲ
229 ಸೋಮಪ
230 ಸ್ವರ್ಣಗರ್ಭ
231 ಹಂಸವಾಹನ
232 ಹಂಸಾಶ್ವ
233 ಹರಿಕುಮಾರಕ
234 ಹರಿವೀರ
235 ಹರಿಸುತ
236 ಹಾಟಕಗರ್ಭ
237 ಹಾಟಕೋದರ
238 ಹಿರಣ್ಯಗರ್ಭ
239 ಹೇಮಾಂಗ
240 ಹೇಮೋದರ

## ಸರಸ್ವತಿ–ಭಾರತಿ

1 ಅಂಚೆಗಮನೆ
2 ಅಜನರಸಿ
3 ಅಜನರಾಣಿ
4 ಇಂದ್ರಸೇನಾ
5 ಕಮಲಜಸತಿ
6 ಕಾಳಿ
7 ಜಗದುದರಸೊಸೆ
8 ಜನಿಮೃತಿಭಯಭಿದೆ
9 ಜ್ಞಾನಶುಭಕಾಯಳು
10 ದ್ವಿಜಗಾಮಿನಿ
11 ಧಾತಮಹಿಳೆ
12 ನುಡಿವೆಣ್ಣು
13 ಬ್ರಹ್ಮಾಣಿ
14 ಮಯೂರವಾಹಿನಿ
15 ಮರುತನನಿಜಪತ್ನಿ
16 ವನಜಸಂಭವನರಸಿ
17 ವಾಗಭಿಮಾನಿ
18 ವಾಣಿ
19 ವಿಧಿಕಾಂತೆ
20 ವಿಧಿಜಾತೆ
21 ಶರ್ವದೇವನಮ್ಮ
22 ಶಾರದ
23 ಶ್ರದ್ಧಾದೇವಿ
24 ಶ್ವಸನದೇವಿ
25 ಸರಸಿಜೋದ್ಭವಸತಿ
26 ಸೊಲುಗೆ
27 ಹಂಸವಾಹಿನಿ

## ಶೇಷ

1 ಅದೃಶ್ಯಾಂಘ್ರಿ
2 ಅಹಿಪ
3 ಅಹಿಪತಿ
4 ಅಹಿರಾಜ
5 ಅಹಿವರ

Rarest Archive

6 ಅಹೀಂದ್ರ
7 ಆಲುಕ
8 ಉದರಪಾದಶೈಲಸದನ
9 ಉರಗಪರು
10 ಉರಗಾಧಿನಾಥ
11 ಉರಗೇಂದ್ರ
12 ಉರಗೇಶ
13 ಕಣ್ಣುಮೂಗಿನ ಮಂಚ
14 ಕದ್ರುಜ
15 ಕರ್ಣಶೂನ್ಯ
16 ಕರ್ಣಹೀನ
17 ಕಾಕೋದರಾಳಿಪತಿ
18 ಕಾದ್ರವೇಯ
19 ಕಾರ್ದ್ರವೇಯ
20 ಗತಶ್ರವಣ
21 ತ್ರಿಜಗಾಧಾರಕ
22 ತ್ರೈಘೋಷಣಮುಖ
23 ದ್ವಿಸಾಸಿರಾಂಬಕ
24 ನಂಜಿನೊಡೆಯ
25 ನಂಜೇಶ
26 ನರ
27 ನಾಗಪತಿ
28 ನಾಗರಾಜ
29 ನಾಗೇಂದ್ರ
30 ಪನ್ನಗ
31 ಪನ್ನಗರಾಜ
32 ಪನ್ನಗಾಧಿಪ
33 ಪನ್ನಗೇಂದ್ರ
34 ಪರಮಾಹಿ
35 ಪರಿಯಂಕ
36 ಪಾತಾಳಪ
37 ಪೆಡೆದ(ಲಿ)ಲೆ
38 ಪೊಡವಿಹೊತ್ತಿಹಮಂಚ
39 ಫಣಿ
40 ಫಣಿಪ
41 ಫಣಿಪತಿ
42 ಫಣೀಂದ್ರ
43 ಭುಜಂಗ
44 ಭುಜಂಗಪತಿ
45 ಭುಜಂಗಮವರ
46 ಭುಜಗಶ್ರೇಷ್ಠ
47 ಭುಜಗೇಂದ್ರ
48 ಭುಜಗೇಶ
49 ಭುವಿಧರ
50 ಭೋಗೀಶ
51 ಮಹೋರಗ
52 ವಾತಾಶನ
53 ವಾಯುಭುಕ್
54 ವೀತಕರ್ಣ
55 ವ್ಯಾಳದೇವ
56 ವ್ಯಾಳೇಶ
57 ಶೇಷಮೂರುತಿ
58 ಶ್ರೀಶಯನ
59 ಸಮೀರಾಶನ
60 ಸಹಸ್ರವದನ
61 ಸಾವಿರಮುಖಿ
62 ಸಾಸಿರಜಿಹ್ವೆ
63 ಸಾಸಿರಫಣ
64 ಸಾಸಿರಾನನ
65 ಹರಿಶಯ್ಯ
66 ಹೊನ್ನುಕಾದಿಹಮಂಚ

## ಶಿವ

1 ಅಂಡ
2 ಅಂಬಕತ್ರಯ
3 ಅಂಬರಕೇಶ

Rarest Archive

4 ಅಂಬರದಹನ
5 ಅಂಬುಜಾರಿಧರ
6 ಅಕ್ಷಿತ್ರಯ
7 ಅಗಜಾವಲ್ಲಭ
8 ಅಗ್ನಿನೇತ್ರ
9 ಅಘಹರ
10 ಅಚಲಜಾವರ
11 ಅಜಪಿತನಮೊಮ್ಮಗ
12 ಅಜಭವ
13 ಅಣು
14 ಅದ್ರಿಜಾಪತಿ
15 ಅದ್ರಿಜಾಮಾತ
16 ಅನಲನೇತ್ರ
17 ಅನಲಾಕ್ಷ
18 ಅಪಟ
19 ಅರ್ಧಚಂದ್ರಫಾಲ
20 ಅಷ್ಟಮೂರ್ತಿ
21 ಅಸಮನೇತ್ರ
22 ಅಹಂಕೃತು
23 ಅಹಿಕಂಕಣ
24 ಅಹಿಧರ
25 ಅಹಿಭೂಷಣ
26 ಅಹಿರಾಜಕಂಕಣ
27 ಅಳಕ
28 ಆರುನಾಲ್ಕುಭುಜ
29 ಆರುಮೊಗನಯ್ಯ
30 ಇಂದುಧರ
31 ಇಂದುಮೌಲಿ(ಳಿ)
32 ಇಂದುರವಿನೇತ್ರ
33 ಇಂದುಶೇಖರ
34 ಉಗ್ರೇಶ್ವರ
35 ಉಡುಪಶೇಖರ
36 ಉದ್ದಂಡಧಾರ
37 ಉಮೇಶ
38 ಉಮ್ಮೆಯರಸ
39 ಉರಗಭೂಷ
40 ಉರಗಭೂಷಣ
41 ಉರಿಗಣ್ಣ
42 ಉರಿನಯನ
43 ಎಂಟುಮೈಯವನು
44 ಎರೆಡೊಂದು ನೇತ್ರ
45 ಏಣಾಂಕಧರ
46 ಐದಲೆ
47 ಐದುತಲೆಗಳವನು
48 ಐದುಮೌಳಿ
49 ಓಷಧೀಶಧರ
50 ಕಂತುದಹನ
51 ಕಂತುವೈರಿ
52 ಕಂತುಹರ
53 ಕಂದರ್ಪಹರ
54 ಕಂದುಕಂಧರ
55 ಕಂದುಕೊರಳ
56 ಕಂದುಗೊರಳ
57 ಕಣ್ಣುಮೂರುಳ್ಳವ
58 ಕದ್ರುಜಧಾರಿ
59 ಕಪರ್ದಿ
60 ಕಪಾಲಧರ
61 ಕಪಾಲಿ
62 ಕಪ್ಪುಕಂಠ
63 ಕಪ್ಪುಗೊರಲ
64 ಕರಿಗೊರಳ
65 ಕರಿಚರ್ಮಾಂಬರ
66 ಕಾಕೋಲ
67 ಕಾಕೋಲಕಂಧರ
68 ಕಾಮಾರಿ
69 ಕಾದ್ರವೇಯಭೂಷಣ

Rarest Archive

70 ಕಾಲಕಾಲ
71 ಕಾಲಹತ್ಯ
72 ಕಾಲಾಂತಕ
73 ಕಾಶೀಶ
74 ಕುಧ್ರಜಾಧವ
75 ಕುಮಾರಪಿತ
76 ಕುರಂಗಧರಧರ
77 ಕೃತ್ತಿವಾಸ
78 ಕೃಶಾನುನೇತ್ರ
79 ಕೆಂಜಡೆ
80 ಕೇರಕುಮಾರ
81 ಕ್ರತುಧ್ವಂಸಿ
82 ಖಂಡಪರಶು
83 ಗಂಗಾಧರ
84 ಗಂಗಾಶಿರ
85 ಗಜಚರ್ಮಧರ
86 ಗಜಚರ್ಮಾಂಬರ
87 ಗಜಚರ್ಮಾಂಬರಧರ
88 ಗಜಮುಖನಯ್ಯ
89 ಗಜಶಾರ್ದೂಲಚರ್ಮಧರ
90 ಗರಳಕಂಧರ
91 ಗರಳಭುಕ್
92 ಗಿರಿಯೊಡತಿಯಪತಿ
93 ಗಿರಿಶ
94 ಗಿರೀಶ
95 ಗುಹಪಿತ
96 ಗೊಂದೆವಳವಿಗ
97 ಗೌರಿಮನೋಹರ
98 ಚಂಡೀಶ
99 ಚಂದ್ರಚೂಡ
100 ಚಂದ್ರಜೂಟ
101 ಚಂದ್ರಮೌಳಿ
102 ಚಂದ್ರಶೇಖರ
103 ಚಳಿಗಿರೀಶ
104 ಚಿದಂಬರ
105 ಚೈಲಭೂಷಿತ
106 ಜಲಧರ
107 ಜವನಾರಿ
108 ಜಾತವೇದಸನೇತ್ರ
109 ಜಿತಕಾಮ
110 ಜಿತಮದನ
111 ಜಿತಮರಣ
112 ತತ್ಪುರುಷ
113 ತ್ರಯಂಬಕ
114 ತ್ರಯನೇತ್ರ
115 ತ್ರಿಣಯನ
116 ತ್ರಿನಯನ
117 ತ್ರಿನೇತ್ರ
118 ತ್ರಿಪುರಾರಿ
119 ತ್ರಿಯಂಬಕ
120 ತ್ರಿಲೋಚನ
121 ತ್ರಿಶೂಲಧರ
122 ತ್ರ್ಯಂಬಕ
123 ತ್ರ್ಯಕ್ಷ
124 ದಂತಿಚರ್ಮಾಂಬರ
125 ದಕ್ಷಭಂಜನ
126 ದಕ್ಷಯಜ್ಞ ವಿಭಂಜನ
127 ದಕ್ಷಸುತೆಪತಿ
128 ದ್ರುಹಿಣಿ
129 ದ್ರುಂಕಿಣ
130 ದ್ರುಹಿಣ
131 ಧೂರ್ಜಟಿ
132 ನಂದಿನೀಧರ
133 ನಂದಿವಾಹನ
134 ನಂದಿಸ್ಯಂದನ
135 ನಗಚಾಪ
136 ನಗಜಾಧವ
137 ನಗಜೆಯಾಳ್ದ

Rarest Archive

138 ನಾಗಭೂಷಣ
139 ನಾಗಾಭರಣ
140 ನಾಗೋತ್ತರೀಯ
141 ನಿಟಿಲನಯನ
142 ನಿಟಿಲನೇತ್ರ
143 ನಿಟಿಲಾಂಬಕ
144 ನಿಟಿಲಾಕ್ಷ
145 ನೀರಮಸ್ತಕದಲ್ಲಿಧರಿಸಿದವ
146 ನೀಲಕಂಠ
147 ನೀಲಕಂಧರ
148 ನೀಲಗಳ
149 ನೀಲಗ್ರೀವ
150 ನೀಲಲೋಹಿತ
151 ಪಂಚಮುಖ
152 ಪಂಚವದನ
153 ಪಂಚಶರಹರ
154 ಪಂಚಾನನ
155 ಪತ್ರತಾಪಕ
156 ಪನ್ನಗಧರ
157 ಪನ್ನಗಭೂಷಣ
158 ಪರಮವೈಷ್ಣವ
159 ಪಶುಪ
160 ಪಶುಪತಿ
161 ಪಾರ್ವತೀಶ
162 ಪಿನಾಕಧನುಕರ
163 ಪಿನಾಕಧರ
164 ಪಿನಾಕಿ
165 ಪುರಂದರ
166 ಪುರರಿಪು
167 ಪುರವೈರಿ
168 ಪುರಹರ
169 ಪುರಾರಿ
170 ಫಣಿಧರ
171 ಫಾಲನಯನ
172 ಫಾಲನೇತ್ರ
173 ಫಾಲಲೋಚನ
174 ಫಾಲಾಕ್ಷ
175 ಬಾಂಜಡೆಯ
176 ಬಾನ್ನವಿರ
177 ಬಾಲಶಶಿಧರ
178 ಬೇಗೆಗಣ್ಣ
179 ಭರ್ಗ
180 ಭರ್ಮಗರ್ಭಜ
181 ಭವ
182 ಭಾವಜಾರಿ
183 ಭಾಳನೇತ್ರ
184 ಭಾಳಲೋಚನ
185 ಭಾಳಾಕ್ಷ
186 ಭುಜಗಧರ
187 ಭುಜಗಭೂಷ(ಣ)
188 ಭೂತಪತಿ
189 ಭೂತೇಶ
190 ಭೂಷಣ
191 ಭೃಕುಟಿ
192 ಭೈರವ
193 ಭೋಗಿಭೂಷಣ
194 ಮಂದಾಕಿನೀಧರ
195 ಮಕರಧ್ವಜಾರಿ
196 ಮದನಾರಿ
197 ಮಲ್ಲಿಕಾರ್ಜುನ
198 ಮಹೀಧರಪಜಾಧವ
199 ಮಾರವೈರಿ
200 ಮಾರಾಂತಕ
201 ಮಾರಾರಿ
202 ಮುಕ್ಕಣ್ಣ
203 ಮುಪ್ಪುರಹರ

Rarest Archives

204 ಮುಪ್ಪುರಾರಿ
205 ಮುಪ್ಪೊಳಲುರಿಗ
206 ಮೂರುಕಣ್ಣ
207 ಮೂರೆರಡುತಲೆ ಹರ
208 ಮೃಗಧರ
209 ಮೃಗಧರ
210 ಮೃಗಾಂಕಧರ
211 ಮೃಗಾಂಕಮೌಳಿ
212 ಮೃಡ
213 ಮೃತ್ಯುಂಜಯ
214 ಯಕ್ಷೇಶನಾಪ್ತ
215 ರಜತಾಚಲವಾಸ
216 ರಾಕೇಂದುಧರ
217 ರಾಜಧರ
218 ರುದ್ರ
219 ಲಲಾಟನೇತ್ರ
220 ಲಲಾಟಾಕ್ಷ
221 ವಾತಭುಗ್ಭೂಷ
222 ವಾಮದೇವ
223 ವಾಸವನುತ
224 ವಾಸವವಂದಿತ
225 ವಾಸವಾರ್ಚಿತ
226 ವಿಧಿಕಂದ
227 ವಿಧಿಜ
228 ವಿರೂಪಾಕ್ಷ
229 ವಿಷಭುಂಜ
230 ವೀಶೋಮಾಧವ
231 ವೃಷಕೇತು
232 ವೃಷರಾಜವರೂಥ
233 ವ್ಯಾಘ್ರವಸನ
234 ವ್ಯೋಮಕಚ
235 ವ್ಯೋಮಕೇಶ
236 ಶಂಕರ
237 ಶಂಭು
238 ಶಂಭುದೇವ
239 ಶರ್ವ
240 ಶಶಾಂಕಧರ
241 ಶಶಿಜೂಟ
242 ಶಶಿಧರ
243 ಶಶಿಮೌಳಿ
244 ಶಾರ್ವರಿಧವಧರ
245 ಶಾರ್ವರೀಕರಧರ
246 ಶಿಖನೇತ್ರ
247 ಶಿತಿಕಂಠ
248 ಶಿತಿಗ್ರೀವ
249 ಶಿರೋಧೃತ್
250 ಶೂಲಪಾಣಿ
251 ಶೂಲಿ
252 ಶೇಷಭೂಷಣ
253 ಶೇಷಾಭರಣ
254 ಸಂಕರ
255 ಸದ್ಯೋಜಾತ
256 ಸನಾತನ
257 ಸಿತಾಂಗಪ್ರಭ
258 ಸಿರಿಕಂಠ
259 ಸುಡುಗಾಡುದಾಸ
260 ಸುರತಟಿನೀಧರ
261 ಸುರಸೇನಾಧಿಪ
262 ಸುರಸೈನ್ಯನಾಯಕ
263 ಸೂರ್ಯಚಂದ್ರಾಗ್ನಿನಯನ
264 ಸೋಮಧರ
265 ಸೋಮನಧರಿಸಿದವ
266 ಸೋಮಶೇಖರ
267 ಸೋಮಸನ್ನಿಭ
268 ಸ್ಥಾಣು
269 ಸ್ಮರಹರ

Rarest Archive

270 ಹಂಸ
271 ಹಂಸಲೋಚನ
272 ಹರ
273 ಹರಿಯಂಕಪದಕರ್ಹ
274 ಹುತನೇತ್ರ
275 ಹೈಮವತೀವರ

## ಪಾರ್ವತಿ

1 ಅಂಬಿಕಾ
2 ಅಗಜೆ
3 ಅಚಲಸುತೆ
4 ಅದ್ರಿಕುವರಿ
5 ಅದ್ರಿಜೆ
6 ಅಪರ್ಣ
7 ಉಮ
8 ಉಮೆ
9 ಉಮ್ಮಾ
10 ಉಮ್ಮಿ
11 ಕಾತ್ಯಾಯಿನಿ
12 ಕಾಮಾಕ್ಷಿ
13 ಗಿರಿಜೆ
14 ಗೌರಿ
15 ಚಳಿಯಮಗಳು
16 ದಾಕ್ಷಾಯಿಣಿ
17 ದೊಡ್ಡಬೆಟ್ಟದಹೆಣ್ಣು
18 ನಗಜೆ
19 ನಗಸುತೆ
20 ಪರ್ವತೇಶನಣುಗಿ
21 ಪಾರ್ವತಿ
22 ಬೆಟ್ಟದಣುಗೆ
23 ಬೆಟ್ಟದಾತ್ಮಜೆ
24 ಭಾರ್ಗವಿ
25 ಮಹಿಧರನಂದನೆ
26 ಮೃಡಾಣಿ
27 ಮೇನಕಾತ್ಮಜಾ(ಜೆ)
28 ಮೈನಾಕಿ
29 ಲಲಿತ
30 ಶಂಕರದಾರೆ
31 ಶರ್ವಾಣಿ
32 ಶೀತಗಿರಿಸುತೆ
33 ಶೈಲಕುಮಾರಿ
34 ಶೈಲಜ
35 ಶ್ರೀಕೃಷ್ಣಾನುಜೆ
36 ಹಿಮಜೆ
37 ಹೈಮವತಿ

## ಗಣಪತಿ

1 ಅಂಗಜಾವರಸುತ
2 ಅಂಬರಮಾನಿ
3 ಅಂಬರಾಧಿಪ
4 ಅಂಬರಾಧೀಶ್ವರ
5 ಅಂಬಾತನಯ
6 ಅಂಬಿಕಜ
7 ಅಗಜೆನಂದನ
8 ಆಕಾಶತತ್ತ್ವಾಭಿಮಾನಿ
9 ಆಕಾಶಾಭಿಮಾನಿ
10 ಆಖುವಾಹ
11 ಆಖುವಾಹನ
12 ಇಂದುಮೌಳಿಜ
13 ಇಭಮುಖ
14 ಉಂದುರವರವಾಹನ
15 ಉಮೆನಂದನ
16 ಏಕದಂತ
17 ಏಕಪಿಂಗಳಾದಿಗಳಪಿರಿಯ
18 ಏಕವಾಕ್ಯಪ್ರವೀಣ
19 ಏಕಶೃಂಗಧರ

Rarest Archive

20 ಕಂಬುಕಂಠ
21 ಕಂಬುಕಂಧರ
22 ಕಂಬುಗೊರಳ
23 ಕಂಬುಗ್ರೀವ
24 ಕಟಿಕಟಾಂಗ
25 ಕರಿಗೊರಳ
26 ಕರಿಮುಖ
27 ಕಿರಿಡೊಳ್ಳಿನುದರ
28 ಕುಕ್ಷಿಂಭರ
29 ಕ್ಷಿಪ್ರಪ್ರಸಾದ
30 ಕ್ಷಿಪ್ರಮನದ
31 ಖೇಶ
32 ಗಜವಕ್ತ್ರ
33 ಗಣರಾಜ
34 ಚಾರುದೇಷ್ಣ
35 ತುಂದಿಲೋದರ
36 ದಂತಿವದನ
37 ನತಮಿತ್ರ
38 ನಾಗಧರಸುತ
39 ನಾಗೇಂದ್ರಾನನ
40 ನಾಸಿಕಾಧರ
41 ಪಾಶಧರ
42 ಪಾಶಾಂಕುಶಧರ
43 ಪ್ರದ್ಯೋತಸನ್ನಿಭ
44 ಬೆನಕ
45 ಭಗ್ನದಂತ
46 ಭವಜ
47 ಭೂತಾಂಬರಾಧಿಪ
48 ಮಲಿನಜನಿತ
49 ಮೂಷಕಗಮನ
50 ಮೂಷಕಾಸನ
51 ರದನಾಮಲೇಕ
52 ರದನಿ
53 ಲಂಬಕರ್ಣ
54 ಲಂಬೋದರ
55 ವಕ್ರತುಂಡ
56 ವಾರಣಮುಖ
57 ವಿಘ್ನೌಘಾಂಧಕಾರಶರಚ್ಚಂದಿರ
58 ವಿತ್ತಪತಿಮಿತ್ರಸುತ
59 ವಿದ್ಯಾಶರನಿಧೆ
60 ವೈಕೃತಗಾತ್ರ
61 ಶಾಸ್ತ್ರೋದ್ದಾಮ
62 ಶೂರ್ಪಕರ್ಣ
63 ಶೈಲಜಾಶರೀರಮಲಜ
64 ಸಿಂಧುರವದನ
65 ಸ್ವೇದಜ
66 ಹೆಬ್ಬಸುರ
67 ಹೆಮ್ಮೈಯ
68 ಹೇರಂಬ
69 ಹೇರೊಡಲ
70 ಹೊಟ್ಟೆಗುಡುಮ

~ ~ ~ * ~ ~ ~

Rarest Archive

# ದಾಸರುಗಳ ಸಂಕ್ಷಿಪ್ತ ಜೀವನ ಪರಿಚಯ

**ಅನುಸರಿಸಿರುವ ಕ್ರಮ:** ಅಂಕಿತ, ಜನಪ್ರಿಯ ಹೆಸರು, ಅಂಕಿತಪ್ರಾಪ್ತಿಯಾದದ್ದು, ದಾಸರ ಹೆಸರು, ಹುಟ್ಟೂರು, ವೃತ್ತಿ, ಕಾರ್ಯಕ್ಷೇತ್ರ, ಶಿಷ್ಯರು, ರಚನೆಗಳು ಮತ್ತು ಕಾಲವಾದ ತಿಥಿ ಹಾಗು ಸ್ಥಳ. ಗುರುಗಳ ಅಥವಾ ಶಿಷ್ಯರ ಹೆಸರಿನ ಜೊತೆ * ಗುರುತಿದ್ದರೆ ಅವರ ಪರಿಚಯವೂ ಈ ವಿಭಾಗದಲ್ಲಿದೆಯೆಂದು ತಿಳಿಯುವುದು. ಆಯಾ ದಾಸರ ಮಾಹಿತಿಯ ಸಂಗ್ರಹಕ್ಕೆ ಆಧಾರ ಗ್ರಂಥಗಳ ಕ್ರಮ ಸಂಖ್ಯೆಯನ್ನು [.] ಚೌಕಕಂಸದಲ್ಲಿ ಕೊಡಲಾಗಿದೆ. *ನನಗೆ ದೊರೆತಿರುವ ಹೆಚ್ಚಿನ ವಿವರಗಳನ್ನು ಓರೆ ಅಕ್ಷರದಲ್ಲಿ ತೋರಿಸಲಾಗಿದೆ.*

ಭಾಗ–1ರಲ್ಲಿ ಅಂಕಿತ ದೊರೆತವರ ವಿವರಗಳನ್ನು, ಭಾಗ–2ರಲ್ಲಿ ಅಂಕಿತ ದೊರೆತಿಲ್ಲದವರ ವಿವರಗಳನ್ನು, ಭಾಗ–3ರಲ್ಲಿ ಅತಿ ಕಡಿಮೆ ಮಾಹಿತಿ ದೊರೆತವರ ವಿವರಗಳನ್ನು ಕೊಡಲಾಗಿದೆ. ಎಲ್ಲಾ ಪಟ್ಟಿಗಳನ್ನು ಅಕಾರಾದಿಯಲ್ಲಿ ಸಿದ್ಧಪಡಿಸಲಾಗಿದೆ.

**ರಚನೆಗಳು:** ದಾಸರುಗಳ ಅನೇಕ ರಚನೆಗಳು ಸಹಾಯಕ ಸಾಹಿತ್ಯದ ಗ್ರಂಥಗಳಲ್ಲಿ ನನಗೆ ಕಂಡುಬಂದಿವೆ. ಇವುಗಳ ವಿವರಗಳನ್ನು ಆಯಾ ದಾಸರ ಪರಿಚಯದಲ್ಲಿ "ದೊರೆತಿವೆ"ಎಂದು ಹೇಳಲಾಗಿದೆ ಮತ್ತು ಆ ಗ್ರಂಥಗಳ ಸಹಾಯಕ ಸಾಹಿತ್ಯದಲ್ಲಿನ ಸಂಖ್ಯೆಗಳನ್ನು ಪರಿಚಯದ ಕೊನೆಯಲ್ಲಿ [ . ] ಚೌಕಕಂಸದಲ್ಲಿ ಕೊಡಲಾಗಿದೆ. ಅಲ್ಲದೇ ಗ್ರಂಥ ಸಂಖ್ಯೆ [22] "ಕರ್ನಾಟಕ ಶ್ರೀ ಹರಿದಾಸರ ಪರಂಪರೆ ಪೀಳಿಗೆ"ಯಲ್ಲಿ ತಿಳಿಸಿರುವಂತೆ, ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸುಗೂರು, ಇವರಿಗೆ ದೊರೆತಿರುವ ರಚನೆಗಳ ವಿವರಗಳನ್ನು ( . ) ಕಂಸದಲ್ಲಿ ಕೊಡಲಾಗಿದೆ.

## ಭಾಗ – 1

1. **ಅಚಲಾನಂದ ವಿಠಲ (ಕ್ರಿ.ಶ. 15–16ನೆಯ ಶತಮಾನ)** ಅಚಲಾನಂದ ದಾಸರು, 6 ಕೀರ್ತನೆಗಳು, 44 ಉಗಾಭೋಗಗಳು, 4 ಸುಳಾದಿಗಳು ದೊರೆತಿವೆ. ಇಬ್ಬರು ಅಚಲಾನಂದರಿದ್ದರೆಂಬುದರ ವಿಚಾರದಲ್ಲಿ ಶ್ರೀಮತಿ ಡಾ.ಟಿ.ಎನ್.ನಾಗರತ್ನ ಅವರ ಅಭಿಪ್ರಾಯವನ್ನು ಗ್ರಂಥ 14 ಪುಟ 359ರಲ್ಲಿ ನೋಡಿ. [14, 179, 165]

Rarest Archive

2. **ಅಚ್ಯುತವಿಠಲ (ಕಿ.ಶ. ಸು. 1560)** ಬೇಲೂರು ವೈಕುಂಠದಾಸರಿಂದ* ಅಂಕಿತಪ್ರಾಪ್ತಿ, ವೈಕುಂಠದಾಸರನ್ನು ಕುರಿತ 3 ಕೀರ್ತನೆಗಳು ದೊರೆತಿವೆ, ಅಲ್ಲದೆ ತುಳಸಿಮಹಾತ್ಮ್ಯವೆಂಬ ಪದ್ಯಗ್ರಂಥವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿರುವರು (2 ಸುಳಾದಿಗಳು). [22, 75, 108, 178]

3. **ಅಚ್ಯುತವಿಠಲ** ಹೆಸರು ಲಕ್ಷ್ಮಣದಾಸರು, ಮೋಹನದಾಸರ ಕೋಲುಹಾಡಿಗೆ ಇವರು ರಚಿಸಿರುವ ಫಲಶ್ರುತಿ ದೊರೆತಿದೆ. [130]

4. **ಅಡವಿರಾಮದಾಸರು (ಕಿ.ಶ. ಸು. 1740–?)** ಹುಟ್ಟೂರು ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕದರಮಂಡಲಗಿ, ಅವಧೂತರು; ಶಿಷ್ಯರು ಕದರುಮಂಡಲಗಿ ಹನುಮಯ್ಯನವರೆಂದು* ಹೇಳಿದೆಯಾದರೂ, ಅಡವಿರಾಮದಾಸರೇ ಕದರುಮಂಡಲಗಿ ಹನುಮಯ್ಯನವರೆಂಬ ಒಂದು ಅಭಿಪ್ರಾಯವಿದೆ. [158]

5. **ಅನಂತಾದ್ರೀಶ (ಕ್ರಿ.ಶ. ಸು. 1776–1840)** ಗೋಕಾವಿ ಅನಂತಾದ್ರೀಶರೆಂದು ಪರಿಚಿತರು, ಅಡವಿ ಆಚಾರ್ಯರೆಂದು ಪ್ರಸಿದ್ಧರಾದ ವಿಷ್ಣುತೀರ್ಥರಿಂದ ಅಂಕಿತಪ್ರಾಪ್ತಿ, ಹೆಸರು ಅನಂತಾಚಾರ್ಯ(ಕೆಲವು ಗ್ರಂಥಗಳಲ್ಲಿ ಭೀಮಾಚಾರ್ಯರೆಂದು ಹೇಳಲಾಗಿದೆ), ಹುಟ್ಟೂರು ಬೆಳಗಾಂವ್ ಜಿಲ್ಲೆ ಬೈಲಹೊಂಗಲ ತಾಲ್ಲೂಕಿನ ಕಿತ್ತೂರು, ಸಂಗೀತ ವಿದ್ವಾಂಸರು, ಕಾರ್ಯಕ್ಷೇತ್ರ ಬೆಳಗಾಂವ್ ಜಿಲ್ಲೆ ಗೋಕಾವಿ(ಗೋಕಾಕ); 7 ಕೀರ್ತನೆಗಳು, 6 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಬೆಳಗಾಂವ್ ಜಿಲ್ಲೆ ರಾಮದುರ್ಗ ತಾಲ್ಲೂಕಿನ ಕಟಕೊಲ್ ಗ್ರಾಮದಲ್ಲಿ. [3,6,166]

6. **ಅಭಿನವಜನಾರ್ದನವಿಠಲ (ಕ್ರಿ.ಶ. ಸು. 1800)** ಜನಾರ್ದನವಿಠಲಾಂಕಿತ ತಿರುಮಲದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಪ್ರೇಮದಾಸರು, ಹುಟ್ಟೂರು ಸೋಮಪುರ (ಜಿಲ್ಲೆ ತಾಲ್ಲೂಕು ಸಿಕ್ಕಿಲ್ಲ), ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಮಾನ್ವಿ; ಶಿಷ್ಯರು ಕೇಶವವಿಠಲರು*; ಭಾಗ್ಯನಿಧಿವಿಠಲ*ರಿರಬಹುದು, ಹನುಮದೀಶವಿಠಲರು (ಬಾದನ ಹಟ್ಟಿ ದೊಡ್ಡಪ್ಪ); 18 ಕೀರ್ತನೆಗಳು, 2 ಉಗಾಭೋಗಗಳು, 1 ಸುಳಾದಿ ದೊರೆತಿವೆ, (82 ಕೀರ್ತನೆಗಳು, 9 ಸುಳಾದಿಗಳು); ಇವರು ಜಗನ್ನಾಥದಾಸರ ಶಿಷ್ಯರೆಂದು ಹಲವಾರು ಕಡೆ ಹೇಳಲಾಗಿದೆ; ಇದರ ಬಗ್ಗೆ ಅನುಬಂಧ –3 ನೋಡಿ. [22, 99, 108, 111, 166, 76, 164, 129, 165, 39, 183, 186, 77, 78]

7. **ಅಭಿನವಪುರಂದರವಿಠಲ (ನಿರ್ಯಾಣ ಕ್ರಿ.ಶ. 1564)** ಹೆಸರು ಅಪ್ಪಣ್ಣ/ಅಭಿನವಪ್ಪ, ಪುರಂದರದಾಸರ * ಮಕ್ಕಳು, ವ್ಯಾಸರಾಯರನ್ನು ಕುರಿತ 1 ಕೀರ್ತನೆ ದೊರೆತಿದೆ, (6 ರಚನೆಗಳು). [22, 97, 99, 108, 161, 178]

8. **ಅಭಿನವಪ್ರಾಣೇಶವಿಠಲ (ಕ್ರಿ.ಶ. 1903–1978)** ವರದೇಂದ್ರ ಯತಿಗಳಿಂದ* ಅಥವಾ ಪ್ರಾಣೇಶದಾಸರಿಂದ* ಸ್ವಪ್ನಲಬ್ಧ ಅಥವಾ ಶಾಮಸುಂದರವಿಠಲರಿಂದ* ಅಂಕಿತ ಪ್ರಾಪ್ತಿ, ಹೆಸರು ಹನುಮಂತರಾವ್, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು, ಅರ್ಚಕರು ಹಾಗೂ

Rarest Archives

ಅಧ್ಯಾಪಕರು, ಸಂಗ್ರಹಕಾರರು, ಪ್ರಕಾಶಕರು, ಕಾರ್ಯಕ್ಷೇತ್ರ ಲಿಂಗಸುಗೂರು; 9 ಕೀರ್ತನೆಗಳು, 22 ಸುಳಾದಿಗಳು ದೊರೆತಿವೆ; ಕಾಲವಾದದ್ದು ಪುಷ್ಯ ಬಹುಳ ಸಪ್ತಮಿಯಂದು; ಲಿಂಗಸುಗೂರಿನಲ್ಲಿ. [49, 95, 147, 157, 189, 147, 76, 164, 39, 185, 46, 4, 110, 194]

9. **ಆದಿಕೇಶವ (ಕ್ರಿ.ಶ. 1508-1606)** ಕನಕದಾಸರು, ವ್ಯಾಸರಾಯಸ್ವಾಮಿಗಳಿಂದ* ಅಂಕಿತಪ್ರಾಪ್ತಿ, ಹೆಸರು ತಿಮ್ಮಪ್ಪ/ಕನಕನಾಯಕ, ಹುಟ್ಟೂರು ಹಾವೇರಿ ಜಿಲ್ಲೆ ಶಿಗ್ಗಾಂವ್ ತಾಲ್ಲೂಕಿನ ಬಂಕಾಪುರ (ಬಾಡಗ್ರಾಮದ ಬಳಿ); ಅಲ್ಲದೇ ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯ ಚರಿತ್ರೆ ಮತ್ತು ಹರಿಭಕ್ತಿಸಾರ ಕಾವ್ಯಗಳನ್ನು ರಚಿಸಿದ್ದಾರೆ; ಶಿಷ್ಯರು ಚನ್ನಕೇಶವ*, ವರದಕೇಶವ*; 261 ಕೀರ್ತನೆಗಳು, 5 ಉಗಾಭೋಗಗಳು, 50 ಮುಂಡಿಗೆಗಳು ದೊರೆತಿವೆ; ಕಾಲವಾದದ್ದು ಪುಷ್ಯ ಶುದ್ಧ ಏಕಾದಶಿಯಂದಿರಬಹುದು; ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕಾಗಿನೆಲೆಯಲ್ಲಿ. [15, 22, 166]

10. **ಆದ್ಯರು** ಶ್ರೀ ನರಹರಿತೀರ್ಥರ ಸಮಕಾಲೀನರು ಎಂದು ಹೇಳಲಾಗಿದೆ. ಮತ್ತೊಂದು ಹೇಳಿಕೆಯ ಪ್ರಕಾರ 60 ಜನ ಆದ್ಯರು ಪುರಂದರದಾಸರ ಹಿಂದಿನವರು ಅಥವಾ ಸಮಕಾಲೀನರೆಂದೂ ಮತ್ತು/ಅಥವಾ ಪುರಂದರದಾಸರು ಮತ್ತು ವಿಜಯದಾಸರ ಕಾಲಗಳ ಮಧ್ಯದಲ್ಲಿ ಇದ್ದವರೆಂದು ಅಭಿಪ್ರಾಯವಿದೆ. ಗ್ರಂಥ [73]ರಲ್ಲಿ ಕೆಲವು ಆದ್ಯರ ಕೀರ್ತನೆಗಳನ್ನು ಪ್ರಕಟಿಸಿದ್ದಾರೆ. ಇದಕ್ಕೆ ಆಧಾರವಾಗಿ ಅವರು ವಿಜಯದಾಸರ ಸುಳಾದಿಗಳನ್ನು "ಯಾತರ ವಳಗೆ ಗಣನೆ ಎನ್ನಯ ಸ್ವರೂಪ ಬಲು" ಮತ್ತು "ಆವ ಜನುಮದಲಿ ಸ್ನಾನ ಮಾಡಿದೆನೋ" ಎಂದು ಪ್ರಾರಂಭವಾಗುವ ಸುಳಾದಿಗಳನ್ನು ಮತ್ತು ಹಯವದನವಿಠಲರ "ಸಂತರನನ್ಯನಸಿ ಜನರು" ಎಂದು ಪ್ರಾರಂಭವಾಗುವ ಕೀರ್ತನೆಯನ್ನು ಉಲ್ಲೇಖಿಸಿದ್ದಾರೆ. ಗ್ರಂಥ [73]ರಲ್ಲಿನ ಕೀರ್ತನೆಗಳ ಭಾಷೆಯು ನರಹರಿತೀರ್ಥರಕಾಲದ ಭಾಷೆಯಲ್ಲವೆಂಬ ಅಭಿಪ್ರಾಯವಿದೆ. ಆದ್ದರಿಂದ ಆದ್ಯರ ಕಾಲದ ಬಗ್ಗೆ ಎರಡನೇ ಅಭಿಪ್ರಾಯವೇ ಸರಿಯೆನಿಸುತ್ತದೆ. ಒಟ್ಟು ಇವರವು 51 ಕೀರ್ತನೆ, 20 ಸುಳಾದಿಗಳು, ಕೆಲವು ಉಗಾಭೋಗಗಳು ದೊರೆತಿವೆಯೆಂದು ಗ್ರಂಥ [22]ರಲ್ಲಿ ತಿಳಿಸಿದೆ. ಆದ್ಯರ ಬಗ್ಗೆ ಹೆಚ್ಚಿನ ವಿವರಗಳಿಗೆ ಗ್ರಂಥ [150] ನೋಡಿ. [22, 73, 99, 150, 179]

ಉಲ್ಲೇಖಿತ ಗ್ರಂಥಗಳಿಂದ ಪಡೆದ ಹೆಸರುಗಳನ್ನು ಸೇರಿಸಿ ಕೆಳಕಂಡ ಪಟ್ಟಿಯನ್ನು ತಯಾರಿಸಲಾಗಿದೆ. ಆದರೆ ಇವರುಗಳೇ ಆದ್ಯರೆಂದು ಖಚಿತವಾಗಿ ಹೇಳಲಾಗದು. ದೊರೆತಿರುವ ರಚನೆಗಳ ವಿವರಗಳನ್ನು, ಅವು ದೊರೆತಿರುವ ಗ್ರಂಥಗಳ ಕ್ರಮಸಂಖ್ಯೆಯನ್ನು [.] ಚೌಕಕಂಸದಲ್ಲಿ ಕೊಡಲಾಗಿದೆ. ಕೀ=ಕೀರ್ತನೆ, ಉ=ಉಗಾಭೋಗ, ಸು=ಸುಳಾದಿ, ಕೆಳಗೆರೆ ಇರುವ ಹೆಸರುಗಳ ಜನ ಆದ್ಯರಲ್ಲದಿರಬಹುದು.

ಅಚಲಾನಂದವಿಠಲ*, ಅಚ್ಯುತ, ಅಚ್ಯುತವಿಠಲ-2ಸು[179], ಅನಂತ, ಅರವಿಂದನಾಭ, ಆನಂದ/ಚರಿತಾನಂದ, ಕೃಷ್ಣ- 1ಸು[179], ಗರುಡವಾಹನ-1ಸು[179], ಗುರು, ಗೋಪೀನಾಥ-1ಕೀ[73], ಚತುರ, ಚನ್ನ/ಚಿನ್ನವಿಠಲ-1ಕೀ[73], ಚನ್ನಕೇಶವ-1ಸು[179], ಚನ್ನಸ್ವಾಮಿ, ಚಲುವ,

Rarest Archiver

ತಿಮ್ಮಣ್ಣ/ತಿಮ್ಮಣ್ಣದಾಸ, ದಾನಿ(ವಿಠಲ)–1ಉ[165], ದಾರಿಪನ, ದಾಸಿಪಚನ್ನ, ನರಕಂಠೀರವ–1ಉ,1ಸು[165,179]; ನರಸಿಂಹ, ನರಹರಿ, ನರಹರಿದಾಸ, ನಳಿನಾಕ್ಷ–1ಉ[165], ನಾರಾಯಣವಿಠಲ–1ಉ(165), ಪರಿಪೂರ್ಣ, ಪಾಂಡುರಂಗವಿಠಲ–1ಉ[165], ಬಲ್ಲಿದವಿಠಲ–1ಉ[165], ಬೋಧಪತಿ, ಮಧ್ವಪತಿ, ಮುದ್ದುವಿಠಲ–3ಕೀ,2ಉ,4ಸು[73,165,179], ಯದುಪತಿವಿಠಲ–1ಉ[165], ಯೋಗೇಂದ್ರ–6ಉ[165], ರಂಗಪತಿ, ರುಕ್ಮಿಣೀಪತಿವಿಠಲ–1ಉ[165], ಲಕ್ಷ್ಮೀಕಾಂತ/ಸಿರಿಲಕ್ಷ್ಮೀಕಾಂತ–1ಕೀ,1ಉ,1ಸು[73, 165, 179]; ಲಕ್ಷ್ಮೀಪತಿವಿಠಲ–1ಉ[165], ಲೋಕೈಕವಿಠಲ–1ಉ[165], ವರದ, ವರದಕೇಶವ–2ಸು[179], ವರದರಾಜಕೃಷ್ಣ–4ಸು[179], ವರದರಾಜರಾಮ–1ಸು[179], ವರದರಾಜವೆಂಕಟೇಶ–1ಸು[179], ವರದಾನಿ, ವರವಿಠಲ, ವೆಂಕಟಪತಿ–1ಉ[165], ವೆಂಕಟೇಶ, ವೈಕುಂಠ–1ಸು[179], ವೈಕುಂಠವಿಠಲ–1ಉ,2ಸು[165,179], ವ್ಯಾಸ/ವ್ಯಾಸಪತಿ, ಶಿ(ಸಿ)ರಿಪತಿ–1ಉ[165], ಶೃಂಗಾರ, ಶ್ರೀಕರ, ಶ್ರೀಕೃಷ್ಣ, ಶ್ರೀಧರ, ಶ್ರೀರಂಗ, ಶ್ರೀರಾಮ; ಶ್ರೀರಾಮಕೃಷ್ಣ–5ಉ[165], ಶ್ರೀವಿಠಲ–1ಉ[165], ಸಿರಿ, ಸಿರಿಕೃಷ್ಣವಿಠಲ–1ಸು[179], ಸುಂದರ ಸುಲಭ–1ಕೀ[73], ಸೊಬಗುವಿಠಲ–3ಕೀ,1ಉ,1ಸು[73, 165, 179]; ಸ್ವಾಮಿವಿಠಲ–1ಉ[165], ಹರಿ, ಹರಿದಾಸ

11. **ಆನಂದವಿಠಲ (ಕಿ.ಶ. 1869–1917)** ಗುರುಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ರಾಮರಾವ್ ಕುಲಕರ್ಣಿ; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ತಿಳಿದು ಬಂದಿದೆ; ಕಾಲವಾದದ್ದು ಆಶ್ವಯುಜ ಶುಕ್ಲ ದ್ವಿತೀಯೆಯಂದು; ರಾಯಚೂರು ಜಿಲ್ಲೆ ಲಿಂಗಸುಗೂರಿನಲ್ಲಿ. [194]

12. **ಆರಾಧ್ಯರು** ಪ್ರಾಣಪತಿವಿಠಲರೂ ಸೇರಿ 9 ಜನ; ಹಯವದನ ವಿಠಲರು ಇವರು 9 ಜನ ಆದ್ಯರಿಂದ ಬೇರೆಯೆಂದು ಹೇಳಿದ್ದಾರೆ. ಉಳಿದ 8 ಹೆಸರು ಸಿಕ್ಕಿಲ್ಲ. ಪ್ರಾಣಪತಿವಿಠಲರ 1 ಕೀರ್ತನೆ ದೊರೆತಿದೆ. [22, 73]

13. **ಇಂದಿರೇಶ (ಕ್ರಿ.ಶ. 1895–1939)** ದೇವಋಷಿ ನಾರದರಿಂದ ಸ್ವಪ್ನಾಂಕಿತರು; ಹೆಸರು ಪಾಂಡುರಂಗಿ ಹುಚ್ಚಾಚಾರ್ಯರು, ಹುಟ್ಟೂರು ಶಿವಮೊಗ್ಗ ಜಿಲ್ಲೆ ಶಿಕಾರಿಪುರ, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ತಿರುಪತಿ; ಶಿಷ್ಯರು ಪಾಂಡುರಂಗವಿಠಲ*; 165 ಕೀರ್ತನೆಗಳು, 7 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಕಾರ್ತೀಕ ಬಹುಳ ದಶಮಿಯಂದು; ತಿರುಪತಿಯಲ್ಲಿ. [8]

14. **ಇಂದಿರೇಶ (ಕ್ರಿ.ಶ. 19–20ನೆಯ ಶತಮಾನ)** ಕಮಲೇಶವಿಠಲರಿಂದ* ಅಥವಾ ಕೇಶವವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಹರಪನಹಳ್ಳಿ ರಾಮಾಚಾರ್ಯ, ಮಂತ್ರಾಲಯದಲ್ಲಿ ನೆಲೆಸಿದವರೆಂದು ಹೇಳಲಾಗಿದೆ; ಕನ್ನಡ ಭಾಮಿನಿಯಲ್ಲಿ ರಾಯರ ಸ್ತೋತ್ರ ಇವರೇ ರಚಿಸಿರಬಹುದು; ಶಿಷ್ಯರು ಗುರುಇಂದಿರೇಶ*ರಿರಬಹುದು. [22, 175]

15. **ಇಭವರದವಿಠಲ (ಕ್ರಿಶ. 18–19ನೆಯ ಶತಮಾನ, 1898?)** ಕಮಲಾಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಜಮಖಂಡಿ ವಾದಿರಾಜಾಚಾರ್ಯ, ಕಾರ್ಯಕ್ಷೇತ್ರ ಬಾಗಲಕೋಟೆ ಜಿಲ್ಲ ಜಮಖಂಡಿ; (8/10 ಕೀರ್ತನೆಗಳು). [22, 108, 175]

Rarest Archive

16. **ಇಷ್ಟಮೂರ್ತಿ (ಕ್ರಿ.ಶ. ಸು 1850)** ವಿಜಯರಾಮಚಂದ್ರವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸರ್‌ಪಿ.ಎನ್.ಮೂರ್ತಿ, ತುಮಕೂರಿನಲ್ಲಿ ಜಿಲ್ಲಾಧಿಕಾರಿಗಳಾಗಿದ್ದರು. [86, 166]

17. **ಉರಗಾದ್ರಿವಾಸವಿಠಲ (ಅಂಕಿತಪೂರ್ವದಲ್ಲಿ ಶ್ರೀವೆಂಕಟೇಶ) (ಕ್ರಿ.ಶ. 1871–1964)** ತಂದೆ ಮುದ್ದುಮೋಹನ ವಿಠಲದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಶ್ರೀನಿವಾಸರಾಯರು, ಹುಟ್ಟೂರು ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಹೊಳೆಹೊನ್ನೂರು, ಅಧ್ಯಾಪಕರು, ಕಾರ್ಯಕ್ಷೇತ್ರ ಚಿತ್ರದುರ್ಗ; ಶಿಷ್ಯರು 200ಕ್ಕೂ ಹೆಚ್ಚು ಜನ, ದೊರೆತಷ್ಟು ಹೆಸರುಗಳು [14]ರಲ್ಲಿದೆ; 91 ಕೀರ್ತನೆಗಳು, 1 ಸುಳಾದಿ ದೊರೆತಿವೆ; ಕಾಲವಾದದ್ದು ಕಾರ್ತೀಕ ಬಹುಳ ದ್ವಾದಶಿಯಂದು; ಚಿತ್ರದುರ್ಗದಲ್ಲಿ. [14]

18. **ಏರಿಕೃಷ್ಣಾಚಾರ್** ಗುರುಗಳು ಗದ್ವಾಲದ ಪಂಡಿತ ಏರಿಮುದ್ಗಲಾಚಾರ್ಯರು, ಹೆಸರು ಕೃಷ್ಣಾಚಾರ್, ಶಿಷ್ಯರು ಏರಿವೆಂಕಟ* (ಏರಿಶೇಷಾಚಾರ್ಯರು) ಮತ್ತು ಕೋಲಾರಕ್ಕೆ ಬಂದ ಏರಿವೆಂಕಟೇಶಾಚಾರ್. [175 ]

19. **ಏರಿವೆಂಕಟ (ಕ್ರಿ.ಶ. ಸು. 1790)** ಏರಿಕೃಷ್ಣಾಚಾರ್ಯರಿಂದ* ಅಂಕಿತಪ್ರಾಪ್ತಿ, ಹೆಸರು ಏರಿಶೇಷಾಚಾರ್ಯ, ಹುಟ್ಟೂರು ಕೋಲಾರ ಜಿಲ್ಲೆ ಬಂಗಾರಪೇಟೆಯ ಬಳಿ ಬೂದಿಕೋಟೆ, ಪುರೋಹಿತರು, ಕಾರ್ಯಕ್ಷೇತ್ರ ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ; ಶ್ರೀನಿವಾಸ ಕಲ್ಯಾಣ ಎಂಬ ಹಾಡಿನ ರೂಪವಾದ ಗ್ರಂಥವನ್ನು ಬರೆದಿದ್ದಾರೆ, ಇದಲ್ಲದೇ ಬೇರೆ ರಚನೆಗಳ ಬಗ್ಗೆ ಮಾಹಿತಿ ಇಲ್ಲ; ಕಾಲವಾದದ್ದು ಚಿಂತಾಮಣಿಯಲ್ಲಿ. [108, 175, 178 ಮತ್ತು ವಂಶಸ್ಥರಿಂದ ]

20. **ಏರಿವೆಂಕಟೇಶಾಚಾರ್** ಗುರುಗಳು ಗದ್ವಾಲದ ಪಂಡಿತ ಏರಿಮುದ್ಗಲಾಚಾರ್ಯರು, ಹೆಸರು ಏರಿವೆಂಕಟೇಶಾಚಾರ್. [175]

21. **ಐಹೊಳೆವೆಂಕಟ, ವೆಂಕಟ (ಕ್ರಿ.ಶ. 1835–1915)** ಹೆಸರು ಭೀಮರಾವ್ ರಾಘವೇಂದ್ರ ಕುಲಕರ್ಣಿ, ಹುಟ್ಟೂರು ಬಾಗಲಕೋಟೆ ಜಿಲ್ಲೆ ಹುನಗುಂದ ತಾಲ್ಲೂಕಿನ ಐಹೊಳೆ, ಫೌಜುದಾರರು, ಕಾರ್ಯಕ್ಷೇತ್ರ ಬೆಳಗಾಂವ್ ಜಿಲ್ಲೆ ಸೌದತ್ತಿ ತಾಲ್ಲೂಕಿನ ಮುರಗೋಡ ಮತ್ತು ಗದಗ ಜಿಲ್ಲೆ ರೋಣ; 6 ಕೀರ್ತನೆಗಳು, 9 ದೀರ್ಘಕೃತಿಗಳು ದೊರೆತಿವೆ. [8]

22. **ಕದರಮಂಡಲಗಿ ಪಾಂಡುರಂಗ (ಕ್ರಿ.ಶ. ಸು. 1860)** ಹೆಸರು ಶ್ರೀನಿವಾಸದಾಸರು, ಹುಟ್ಟೂರು ಹಾಗೂ ಕಾರ್ಯಕ್ಷೇತ್ರ ಕೊಪ್ಪಳ ತಾಲ್ಲೂಕಿನ ಕಿನ್ನಾಳ; ಅನೇಕ ಕೃತಿಗಳನ್ನು ರಚಿಸಿದ್ದಾರೆ. [194]

23. **ಕದರಮಂಡಲಗಿ ಹನುಮ/ಹನುಮಯ್ಯ (ಕ್ರಿ.ಶ. 1760–1845)** ಗುರುಗಳು ಅಡವಿ ರಾಮದಾಸರು*, ಹೆಸರು ಭೀಮಾಚಾರ್ಯ, ಹಿರೇ ಆಚಾರ್ಯರೆಂದು ಪರಿಚಿತರು, ಹುಟ್ಟೂರು ದಾವಣಗೆರೆ ಜಿಲ್ಲೆ ಹರಿಹರ, ಕಾರ್ಯಕ್ಷೇತ್ರ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕದರಮಂಡಲಗಿ; 10 ಕೀರ್ತನೆಗಳು, 1 ದಂಡಕ ದೊರೆತಿವೆ; ಕಾಲವಾದದ್ದು ಕದರಮಂಡಲಗಿಯಲ್ಲಿ; ಇವರೇ ಅಡವಿರಾಮದಾಸರೆಂದು ಒಂದು ಅಭಿಪ್ರಾಯವಿದೆ. [158, 166]

Rarest Archiver

24. **ಕದರುಂಡಲಗೀಶ (ಕ್ರಿ.ಶ. ಸು. 1850)** ಹೆಸರು ಶ್ರೀನಿವಾಸದಾಸ, ಹುಟ್ಟೂರು ಕೊಪ್ಪಳ ತಾಲ್ಲೂಕಿನ ಕಿನ್ನಾಳ, ವೃತ್ತಿ ಗೊಂಬೆಯಾಟ, ಕಾರ್ಯಕ್ಷೇತ್ರ ಹಾವೇರಿ ಜಿಲ್ಲೆ ಬ್ಯಾಡಗಿ ತಾಲ್ಲೂಕಿನ ಕದರಮಂಡಲಗಿ: 5 ಕೀರ್ತನೆಗಳು ದೊರೆತಿವೆ. [158]

25. **ಕನಕಾದ್ರಿವಿಠಲ (ಕ್ರಿ.ಶ.19–20ನೆಯ ಶತಮಾನ)** ರಾಘವೇಂದ್ರಸ್ವಾಮಿಗಳನ್ನು ಕುರಿತು 1 ಸುಳಾದಿ ದೊರೆತಿದೆ. [22, 108, 39]

26. **ಕಮಲನಾಭವಿಠಲ (ಕ್ರಿ.ಶ. 1897–1983)** ಉರಗಾದ್ರಿವಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ನಿಡಗುರುಕಿ ಜೀವೂಬಾಯಿ, ಹುಟ್ಟೂರು ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿ ತಾಲ್ಲೂಕಿನ ನಿಡಗುರುಕಿ, ಕಾರ್ಯಕ್ಷೇತ್ರ ಬೆಂಗಳೂರು ಹಾಗು ಮೈಸೂರು; 170 ಕೀರ್ತನೆಗಳು, 10 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ವೈಶಾಖ ಬಹುಳ ಚತುರ್ದಶಿಯಂದು. [54]

27. **ಕಮಲಾಪತಿವಿಠಲ (ಕ್ರಿ.ಶ. ಸು. 1820)** ಕಮಲೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸಂತೆಬೆನ್ನೂರು ರಾಮದಾಸರು, ಕಾರ್ಯಕ್ಷೇತ್ರ ಮೈಸೂರು ಜಿಲ್ಲೆ ಟಿ.ನರಸೀಪುರ; ಶಿಷ್ಯರು ಇಭವರದವಿಠಲರು*, ಗುರುಕಮಲಾಪತಿವಿಠಲರು (ಉಟಕೂರು ಲಕ್ಷ್ಮಣಾಚಾರ್ಯ), ಜಾನಕೀಪತಿವಿಠಲರು (ಕಚೋಟಿ ನಾಗೇಶರಾಯರು), ಪೂತಾತ್ಮವಿಠಲರು (ಹನುಮಂತರಾಯರು ಕುಡುತಿನಿ), ಭೂತನಾಥವಿಠಲರು (ಕುಂಭಕೋಣದ ಬಿಂದುಮಾಧವರಾಯರು), ಮಧ್ವೇಶವಿಠಲರು (ಗರ್ಗೇಶ್ವರಿ ಕೇಶವರಾಯರು), ಮಾಧವವಿಠಲರು*, ಯದುಪತಿವಿಠಲರು (ಹಡಗಲಿ ರಾಘಪ್ಪ), ರಮಾಪತಿವಿಠಲರು (ಕಲ್ಲಾಪುರದ ರಾಮದಾಸರು), ವರದಕಮಲಾಪತಿವಿಠಲರು (ಉಟಕೂರು ರಾಮಚಂದ್ರಾಚಾರ್ಯ), ಶ್ರೀರಮಣವಿಠಲರು (ಕೊಮಾರ ಕಾಲವೀ ನರಸಿಂಗರಾಯರು), ಹರಿವಿಠಲರು (ಉತ್ತಕಲ್ಲರಾಮರಾಯರು), ಶ್ರೀಕರವಿಠಲರು*, ಗಂಡೀಶವಿಠಲರು*; 3 ಕೀರ್ತನೆಗಳು, 1 ಸುಳಾದಿ ದೊರೆತಿವೆ: [87, 108, 178]

28. **ಕಮಲೇಶವಿಠಲ (ಕ್ರಿ.ಶ. ಸು. 1790)** ಸುರಪುರದ ಆನಂದದಾಸರು, ಶ್ರೀಶವಿಠಲರಿಂದ* ಅಂಕಿತಪ್ರಾಪ್ತಿ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರವಿ, ಕಾರ್ಯಕ್ಷೇತ್ರ ಸುರಪುರ (ಗುಲಬರ್ಗ ಜಿಲ್ಲೆ ಶೋರಾಪುರ ?); ಶಿಷ್ಯರು ಗುಂಡಾಚಾರ್ಯ, ಗುರುಭೀಮೇಶವಿಠಲರು*, ಭೀಮೇಶವಿಠಲರು (ಮಡಕಶಿರದ ಭೀಮದಾಸರು), ಶ್ರೀಶಕೇಶವವಿಠಲರು (ಸುರಪುರದ/ಎಲಗೋಡದ ಭೀಮದಾಸರು), ಕಮಲಾಪತಿವಿಠಲರು*, ವೆಂಕಟೇಶವಿಠಲರು*, ಗುರುಇಂದಿರೇಶರು(?)*, ಇಂದಿರೇಶರು*, ವೆಂಕಟೇಶವಿಠಲರು*; 21 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಭಾದ್ರಪದ ಶುದ್ಧ ದ್ವಾದಶಿಯಂದು; ಸುರಪುರದಲ್ಲಿ. [87, 99, 166, 22, 152, 76, 164, 98, 39, 77, 78]

29. **ಕರಿಗಿರೀಶ (ಕ್ರಿ.ಶ. 1899–1954)** ಶ್ರೀಕಾಂತದಾಸರಿಂದ* ಅಂಕಿತಪ್ರಾಪ್ತಿ, ಹೆಸರು ವರವಣಿ ರಾಮರಾಯರು, ಸರ್ಕಾರೀ ನೌಕರಿ, ಕಾರ್ಯಕ್ಷೇತ್ರ ಬೆಂಗಳೂರು, ಇವರು

Rarest Archiver

ರಘುರಾಮವಿಠಲಾಂಕಿತ ಸುಬೋಧ ರಾಮರಾಯರು ಮತ್ತು ಅಂಕಿತ ಗುರುಗಳ ಜೊತೆ ಕರ್ನಾಟಕ ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟನೆಗಳಿಗಾಗಿ ದುಡಿದವರು; 91 ಕೀರ್ತನೆಗಳು, 6 ಉಗಾಭೋಗಗಳು ದೊರೆತಿವೆ; ಕಾಲವಾದದ್ದು 31–10–1954ರಂದು. [92]

30. **ಕರಿವರ/ಕರಿವರದವಿಠಲ (ಕ್ರಿ.ಶ. 1830–1918)** ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಮಚಂದ್ರಪ್ಪ. [92, 97, 175]

31. **ಕಾರ್ಪರ, ಕಾರ್ಪರ ನರಹರಿ (ಕ್ರಿ.ಶ. 1896–1979)** ಕಾರ್ಪರ ನರಹರಿದಾಸರು, ಸ್ವತಃ ಕೊಪ್ಪರದ ಲಕ್ಷ್ಮೀನರಸಿಂಹ ದೇವರ ಹೆಸರಿನಲ್ಲಿ ಅಥವಾ ಸ್ವಪ್ನಾಂಕಿತರು, ಹೆಸರು ಗಿರಿಯಾಚಾರ್ಯ, ಹುಟ್ಟೂರು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಕೊಪ್ಪರ, ಕೊಪ್ಪರದಲ್ಲಿ ಪಂಡಿತರು ಹಾಗೂ ಪುರೋಹಿತರು; ಶಿಷ್ಯರು ರಂಗನಾಥಾಂಕಿತ ರಾಮಭದ್ರಾಚಾರ್ ಕುರಕುಂದಿ; 119 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಆಷಾಢ ಬಹುಳ ತ್ರಯೋದಶಿ ಯಂದು; ಕೊಪ್ಪರದಲ್ಲಿ. [6, 49]

32. **ಕಾಳಿಮರ್ದನಕೃಷ್ಣ (ಕ್ರಿ.ಶ. 20ನೇ ಶತಮಾನ)** ಗುರುಗಳು ಪುತ್ತಿಗೆ ಮಠದ ಆಗಿನ ಶ್ರೀಗಳು, ಹೆಸರು ಕಳಸದ ಸುಂದರಮ್ಮ, ಹುಟ್ಟೂರು ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಕಳಸ, ಕಳಸದ ಗೌಡರ ಮನೆತನ, ಕಾರ್ಯಕ್ಷೇತ್ರ ಮೈಸೂರು; 30 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮೈಸೂರಿನಲ್ಲಿ. [8, 53]

33. **ಕೇಶವ, ಚನ್ನಕೇಶವ (ಕ್ರಿ.ಶ. 1900–1975)** ಹೆಸರು ಈಶ್ವರ ಕೇಶವ ಭಟ್ಟ, ಹುಟ್ಟೂರು ಮತ್ತು ಕಾರ್ಯಕ್ಷೇತ್ರ ಉತ್ತರ ಕನ್ನಡ ಜಿಲ್ಲೆ ಹೊನ್ನಾವರ ತಾಲ್ಲೂಕಿನ ಕರ್ಕಿ, ವಕೀಲರು, ಅದ್ವೈತಿಗಳು; 95 ಕೀರ್ತನೆಗಳು ದೊರೆತಿವೆ; ಕಾಲವಾದದ್ದು 31–01–1975ರಂದು. [26]

34. **ಕೇಶವವಿಠಲ** ಈ ಅಂಕಿತದ ಬಗ್ಗೆ ಬೇರೆಬೇರೆ ರೀತಿಯ ಮಾಹಿತಿ ದೊರೆತಿದೆ, ಅನುಬಂಧ–2 ನೋಡಿ.

35. **ಕೋರವಾರೇಶ, ಕೋರವಾರದ ಹನುಮ (ಕ್ರಿ.ಶ. 1916–76)** ಬಿಜಾಪುರ ಜಿಲ್ಲೆ ಸಿಂದಗಿ ತಾಲ್ಲೂಕಿನ ಕೋರವಾರದ ಪ್ರಾಣದೇವರ ಉಪಾಸನೆಯಿಂದ ಅಂಕಿತಪ್ರಾಪ್ತಿ, ಹೆಸರು ಶೇಷದಾಸ ಹೋಳಿ, ಹುಟ್ಟೂರು ಗುಲಬರ್ಗಾ ಜಿಲ್ಲೆ ಶಹಪುರ, ಅನೇಕ ಹುದ್ದೆಗಳಲ್ಲಿದ್ದುದಲ್ಲದೇ ಗುಲಬರ್ಗಾ ಜಿಲ್ಲೆ ಚಿತಾಪುರ ತಾಲ್ಲೂಕಿನ ಸನ್ನತಿ(ಸಂತಿ) ಚಂದ್ರಲಾಂಬಾ ದೇವಸ್ಥಾನದ ಸೇವೆಯಲ್ಲಿದ್ದವರು; ಸುಮಾರು 200 ಕೃತಿಗಳನ್ನು ರಚಿಸಿದ್ದಾರೆಂದು ತಿಳಿದಿದೆ; ಕಾಲವಾದದ್ದು ಸನ್ನತಿಯಲ್ಲಿ. [194]

36. **ಕೋಸಲಪುರ/ ಕೋಸಲಪುರೀಶ (ಕ್ರಿ.ಶ. ಸು. 19ನೆಯ ಶತಮಾನ)** ಶ್ರೀವೈಷ್ಣವರು; 16 ಕೀರ್ತನೆಗಳು ದೊರೆತಿವೆ. [7]

Rarest Archive

37. **ಖಾದ್ರಿನರಸಿಂಹ, ಖಾದ್ರಿನೃಸಿಂಗ (ಕ್ರಿ.ಶ. ಸು. 1500)** ಹೆಸರು ನವಸಾಲ್ಪುರಿ ತಿಪ್ಪಣ್ಣಾಚಾರ್ಯ, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಕದಿರಿ/ಖಾದ್ರಿ; 4 ಕೀರ್ತನೆಗಳು ದೊರೆತಿವೆ ಮತ್ತು ಹನುಮದ್ವಿಲಾಸ, ಸುದಾಮಚರಿತ್ರೆ, ಕಾಳಿಂಗಮರ್ದನ, ಕುಚೇಲೋಪಾಖ್ಯಾನವೆಂಬ ಕೃತಿಗಳನ್ನು ರಚಿಸಿದ್ದಾರೆ. [22, 76, 77, 78]

38. **ಗಂಡೀಶವಿಠಲ (ಕ್ರಿ.ಶ. ಸು. 1840)** ಕಮಲಾಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕುಂಪಣಿಪುರ ಸುಬ್ಬಣ್ಣಾಚಾರ್ಯರು. [87, 108, 178]

39. **ಗದುಗಿನ ವೀರನಾರಾಯಣ (ಕ್ರಿ.ಶ. ಸು 1446)** ಕುಮಾರವ್ಯಾಸರು, ಹೆಸರು ಸಿ(ಶಿ?)ಕಾರಪುರ ನಾರಾಯಣಪ್ಪ ಕೋಳಿವಾಡ, ಕಾರ್ಯಕ್ಷೇತ್ರ ಧಾರವಾಡ, ಕುಮಾರವ್ಯಾಸ ಭಾರತದ ಕರ್ತೃಗಳು; [22]

40. **ಗದುಗಿನ ವೀರನಾರಾಯಣ (ಕ್ರಿ.ಶ. 19–20ನೆಯ ಶತಮಾನ)** ಹೆಸರು ಹುಯಿಲಗೋಳ ನಾರಾಯಣರಾಯರು, ಹುಟ್ಟೂರು ಮತ್ತು ಕಾರ್ಯಕ್ಷೇತ್ರ ಗದಗು, ವಕೀಲರು, ಕವಿಗಳು; 87 ಕೀರ್ತನೆಗಳು ದೊರೆತಿವೆ. [8]

41. **ಗರುಡವಾಹನವಿಠಲ** ಹೆಸರು ಸುಬ್ಬಣ್ಣದಾಸರಿರಬಹುದು, 1ಕೀರ್ತನೆ ದೊರೆತಿದೆ. [22, 39]

42. **ಗುರುಇಂದಿರೇಶ (ಕ್ರಿ.ಶ. 19ನೆಯ ಶತಮಾನದ ಕೊನೆ)** ಕೇಶವವಿಠಲರು* ಅಥವಾ ಇಂದಿರೇಶವಿಠಲ*(ಹರಪನಹಳ್ಳಿ ರಾಮಾಚಾರ್ಯ)ರಿಂದ ಅಂಕಿತಪ್ರಾಪ್ತಿ, ಹೆಸರು ಹರಪನಹಳ್ಳಿ ಕೃಷ್ಣಾಚಾರ್ಯ, ಹುಟ್ಟೂರು ದಾವಣಗೆರೆ ಜಿಲ್ಲೆ ಹರಪನಹಳ್ಳಿ; ಇವು ಯಾವುವೂ ಖಚಿತವಾದ ಮಾಹಿತಿಯಲ್ಲ. [8, 98, 22]

43. **ಗುರುಗೋಪಾಲವಿಠಲ (ಕ್ರಿ.ಶ. ಸು. 1727)** ಗೋಪಾಲದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಸೀನಪ್ಪದಾಸರು, ಹುಟ್ಟೂರು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಮಸರುಕಲ್ಲು, ಇವರು ಗೋಪಾಲದಾಸರ ತಮ್ಮ, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಗದ್ವಾಲ/ಐಜಿ ಬಳಿಯ ಉತ್ತನೂರು; ಶಿಷ್ಯರು ಜನಾರ್ದನ(ಸಿರಿಜನಾರ್ದನ?)ವಿಠಲರು*; ವಾಮನವಿಠಲರು*, ಪದ್ಮನಾಭವಿಠಲರು*, ಮಾಧವವಿಠಲರು (ಇವರೆಲ್ಲರ ಅಂಕಿತಪದಗಳು ದೊರೆತಿವೆ); 43 ಕೀರ್ತನೆಗಳು, 3 ಉಗಾಭೋಗಗಳು, 1 ಸುಳಾದಿ, 1 ವೃತ್ತನಾಮ ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಐದನೇ ತಿಂಗಳಲ್ಲಿ ನಿಶ್ಚೈಸಿದೆ"). (75 ಕೀರ್ತನೆಗಳು). [99, 100, 175, 22]

44. **ಗುರುಗೋವಿಂದವಿಠಲ (ಕ್ರಿ.ಶ. 19–20ನೆಯ ಶತಮಾನ)** ಅಸ್ಕಿಹಾಳ ಗೋವಿಂದದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಜಯದಾಸರು, ಹುಟ್ಟೂರು ಮತ್ತು ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು ಅಥವಾ ಚೀಕಲಪರವಿ ಇದ್ದಿರಬಹುದು; 1 ಕೀರ್ತನೆ ದೊರೆತಿದೆ, (3 ಕೀರ್ತನೆಗಳು). [39, 22]

Rarest Archives

45. **ಗುರುಗೋವಿಂದವಿಠಲ (ಕ್ರಿ.ಶ. 1894–1983)** ಗುರುಗೋವಿಂದ ದಾಸರು, ತಂದೆ ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಗೋವಿಂದರಾಯರು, ಹುಟ್ಟೂರು ಚಿಕ್ಕಮಗಳೂರು, ಲೋಕೋಪಯೋಗಿ ಇಲಾಖೆ ಅಧಿಕಾರಿಗಳು, ಕಾರ್ಯಕ್ಷೇತ್ರ ಮೈಸೂರು, ನೂರಾರು ಕೃತಿಗಳನ್ನು ರಚಿಸಿ ಪ್ರಕಟಿಸಿದ್ದಾರೆ; ಶಿಷ್ಯರು ಒಟ್ಟು 254 ಜನ (ವಿವರಗಳಿಗೆ [86] ನೋಡಿ); 484 ಕೀರ್ತನೆಗಳು, 2 ಉಗಾಭೋಗಗಳು, 1 ಸುಳಾದಿ, 8 ದೀರ್ಘಕೃತಿಗಳು, 253 ಅಂಕಿತಪದಗಳು ದೊರೆತಿವೆ; ಕಾಲವಾದದ್ದು ಮಾರ್ಗಶಿರ ಬಹುಳ ದ್ವಾದಶಿಯಂದು; ಆಂಧ್ರಪ್ರದೇಶದ ಅನಂತಪುರದಲ್ಲಿ. [33, 101, 166]

46. **ಗುರುಜಗಜ್ಜನ್ಮಾದಿಕಾರಣವಿಠಲ (ಕ್ರಿ.ಶ. ಸು. 1772)** ಹೆಸರು ಶಿಂಗಾ ಜೋಶಿ ರಾಮಾಚಾರ್ಯ, ಹುಟ್ಟೂರು ಮತ್ತು ಕಾರ್ಯಕ್ಷೇತ್ರ ರಾಯಚೂರು ತಾಲ್ಲೂಕಿನ ಸಗಂಕುಂಟಾ ಇದ್ದಿರಬಹುದು; (9 ಕೀರ್ತನೆಗಳು ಮತ್ತು 5 ಬಯಲಾಟಗಳು) [22, 180]

47. **ಗುರುಜಗನ್ನಾಥವಿಠಲ (ಕ್ರಿ.ಶ. 1837–1918)** ಹೆಸರು ಸ್ವಾಮಿರಾಯ, ಹುಟ್ಟೂರು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಕೋಶಿಗಿ, ಕಾರ್ಯಕ್ಷೇತ್ರ ಕೋಶಿಗಿ; ಶಿಷ್ಯರು ವರದೇಶವಿಠಲರು*, ಸುಂದರವಿಠಲರು*, ಆನಂದವಿಠಲರು*, ವರದೇಂದ್ರವಿಠಲರು*, ವರದವಿಠಲರು*, ಮುದ್ದುಗುರುಜಗನ್ನಾಥವಿಠಲರು (ಪುತ್ರ–ರಾಘವೇಂದ್ರಾಚಾರ್ಯ), ಜಗದೀಶವಿಠಲರು(?), ಶ್ರೀನಿವಾಸವಿಠಲರು(?); 162 ಕೀರ್ತನೆಗಳು, 18 ಉಗಾಭೋಗಗಳು, 2 ಸುಳಾದಿಗಳು ಮತ್ತು 6 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಆಶ್ವಯುಜ ಬಹುಳ ಪಾಡ್ಯದಂದು; ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕೌತಾಳದಲ್ಲಿ. ಇವರ *ಹಿಂದಿನ ಪೀಳಿಗೆಯ ವಿವರಗಳು ಮೂರು ಕಡೆ ಬೇರೆ ಬೇರೆಯಾಗಿ ದೊರೆತಿವೆ; ಅನುಬಂಧ 1 ನೋಡಿ.* [102, 165]

48. **ಗುರುಜಯವಿಠಲ (ಕ್ರಿ.ಶ. ಸು. 19ನೆಯ ಶತಮಾನ)** ಜಯವಿಠಲರಿಂದ* ಅಂಕಿತಪ್ರಾಪ್ತಿಯಾಗಿರಬಹುದು, 3 ಕೀರ್ತನೆಗಳು, 1 ಲಾವಣಿಮಟ್ಟು ದೊರೆತಿವೆ. [73, 77, 78]

49. **ಗುರುಜಯೇಶವಿಠಲ (ಕ್ರಿ.ಶ. 19–20ನೆಯ ಶತಮಾನ)** ಜಯೇಶವಿಠಲರಿಂದ* ಅಂಕಿತಪ್ರಾಪ್ತಿ, ಜಯೇಶವಿಠಲರ ಪತ್ನಿ; 4 ಕೀರ್ತನೆಗಳು, 1 ಸುಳಾದಿ ದೊರೆತಿವೆ. [92]

50. **ಗುರುತಂದೆ ಗೋಪಾಲವಿಠಲ (ಕ್ರಿ.ಶ. ಸು. 1800)** ತಂದೆಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ (ತಂದೆಯವರು), ಹೆಸರು ಸೋಮಪುರ ಗೋಪಾಲದಾಸರು; 27 ಉಗಾಭೋಗಗಳು ದೊರೆತಿವೆ; (18 ಕೀರ್ತನೆಗಳು); ಕಾಲವಾದದ್ದು ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆ ಗದ್ವಾಲ್ ತಾಲ್ಲೂಕಿನ ವೇಣೀಸೋಮಪುರದಲ್ಲಿ. ಇವರ *ಪೀಳಿಗೆಯ ವಿವರಗಳು ಮೂರು ಕಡೆ ಬೇರೆ ಬೇರೆಯಾಗಿ ದೊರೆತಿವೆ, ಅನುಬಂಧ–1 ನೋಡಿ.* [22, 99, 175, 165]

Rarest Archiver

51. **ಗುರುತಂದೆ ವರದಗೋಪಾಲವಿಠಲ (ಕ್ರಿ.ಶ. 20ನೆಯ ಶತಮಾನ)** ತಂದೆ ವರದಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕಟ್ಟೆಮನೆ ನರಸಿಂಗರಾಯರು; ಶಿಷ್ಯರು ಸಿರಿಗುರುತಂದೆ ವರದಗೋಪಾಲವಿಠಲರು*; 9 ಕೀರ್ತನೆಗಳು, 2 ಸುಳಾದಿಗಳು ದೊರೆತಿವೆ. [8]

52. **ಗುರುಪುರಂದರವಿಠಲ (ಕ್ರಿ.ಶ. ಸು. 16-17ನೆಯ ಶತಮಾನ)** ಹೆಸರು ಗುರುರಾಯ/ ಹೇಮಣದಾಸ, ಪುರಂದರದಾಸರ ಪುತ್ರ; (32 ಕೀರ್ತನೆಗಳು, 19 ಸುಳಾದಗಳು, 12 ಉಗಾಭೋಗಗಳು). [22]

53. **ಗುರುಪ್ರಸನ್ನವೆಂಕಟವಿಠಲ (ಕ್ರಿ.ಶ. 19ನೆಯ ಶತಮಾನ)** ಪ್ರಸನ್ನವೆಂಕಟವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ನಾಮಗಿರಿಯಮ್ಮ; 1 ಕೀರ್ತನೆ ದೊರೆತಿದೆ. [167]

54. **ಗುರುಪ್ರಾಣೇಶವಿಠಲ (ಕ್ರಿ.ಶ. 1785-1860)** ತಂದೆಯವರಾದ ಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ವೆಂಕಟರಾಯ, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು, ಕಾರ್ಯಕ್ಷೇತ್ರ ಲಿಂಗಸುಗೂರು; ಶಿಷ್ಯರು ತಂದೆಪ್ರಾಣೇಶವಿಠಲರು*, ಮನೋಹರ ವಿಠಲರು(ರಾಮಕೃಷ್ಣಪ್ಪ), ವರದೇಂದ್ರವಿಠಲರು (ಸವದತ್ತಿ ಲಂಗೋಟಪ್ಪ), ವೆಂಕಟೇಶವಿಠಲರು(ಗಜೇಂದ್ರಗಡ ಕೃಷ್ಣದಾಸರು), ಸುಖದಸುಂದರವಿಠಲರು*, ಸುಂದರವಿಠಲರು (ರೋಣದ ಕೃಷ್ಣಪ್ಪದಾಸರು), ಶ್ರೀಶಪ್ರಾಣೇಶವಿಠಲರು*, ಮೋದವಿಠಲರು*; 18 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮಾಘ ಬಹುಳ ಅಮಾವಾಸ್ಯೆಯಂದು; ಲಿಂಸುಗೂರಿನಲ್ಲಿ. [22, 126, 166]

55. **ಗುರುಭೀಮೇಶವಿಠಲ (ಕ್ರಿ.ಶ. 19ನೆಯ ಶತಮಾನದ ಪೂರ್ವಾರ್ಧ)** ಕಮಲೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ವೆಂಕಟಸುಬ್ಬದಾಸರು, ಹುಟ್ಟೂರು ಮೈಸೂರು, ಕೀರ್ತನಕಾರರು, ಕಾರ್ಯಕ್ಷೇತ್ರ ಹಾಸನ ಜಿಲ್ಲೆ ಬೇಲೂರು, ಕರ್ನಾಟಕ ಭಕ್ತ ವಿಜಯ ಗ್ರಂಥ ಲೇಖಕರಾದ ಬೇಲೂರು ಕೇಶವದಾಸರ ತಂದೆಯವರು; 1 ಕೀರ್ತನೆ ದೊರೆತಿದೆ. [98]

56. **ಗುರುಮಧ್ವ (ಕ್ರಿ.ಶ. 1882-1962)** ಹೆಸರು ಗುರುಮಧ್ವಾಚಾರ್ಯರು, ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ನವಲಿ, ಪಂಡಿತರು, ಕಾರ್ಯಕ್ಷೇತ್ರ ನವಲಿ; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ತಿಳಿದುಬಂದಿದೆ. [194]

57. **ಗುರುಮಹಿಪತಿ (ಕ್ರಿ.ಶ. ಸು. 1650)** ಮಹಿಪತಿದಾಸರಿಂದ* ಅಂಕಿತಪ್ರಾಪ್ತಿ, ಕಾರ್ಯಕ್ಷೇತ್ರ ಬಿಜಾಪುರ ಜಿಲ್ಲೆ ಕಾಖಂಡಕಿ; (5 ಕೀರ್ತನೆಗಳು); ಕಾಲವಾದದ್ದು ಬಿಜಾಪುರದಲ್ಲಿ. [22]

58. **ಗುರುಮೋಹನವಿಠಲ** ಮಧ್ವಪತಿವಿಠಲರಿಂದ* ಅಥವಾ ತಂದೆಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ದಾಸಪ್ಪ; ರಾಘವೇಂದ್ರದಾಸರು ಮತ್ತು ಶ್ರೀನಿವಾಸದಾಸರು ಇವರ ಶಿಷ್ಯರೆಂದೂ ಹಾಗೂ ತಂದೆಮೋಹನವಿಠಲರ ಶಿಷ್ಯರೆಂದೂ ಹೇಳಲಾಗಿದೆ; (1 ಕೀರ್ತನೆ). [22, 175]

Rarest Archiver

59. **ಗುರುರಾಮವಿಠಲ (ಕ್ರಿ.ಶ. ಸು. 1850–1915)** ಬಾಗೇಪಲ್ಲಿ ಸುಬ್ಬರಾಯದಾಸರೆಂದು ಪರಿಚಿತರು, ರಾಮವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸುಬ್ರಹ್ಮಣ್ಯ, ಹುಟ್ಟೂರು ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ; 337 ಕೀರ್ತನೆಗಳು ಮತ್ತು 7 ದೀರ್ಘಕೃತಿಗಳು ದೊರೆತಿವೆ. [103, 175]

60. **ಗುರುರಾಮವಿಠಲ (ಕ್ರಿ.ಶ. 19–20ನೆಯ ಶತಮಾನ)** ಜಗನ್ನಾಥದಾಸರ* ಪೀಳಿಗೆ, ಹೊನ್ನಾಳಿ ಭೀಮೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಶ್ರೀನಿವಾಸದಾಸರು, ಕಾರ್ಯಕ್ಷೇತ್ರ ಮೈಸೂರು; ಶಿಷ್ಯರು ಗುರುಶ್ರೀನಿವಾಸವಿಠಲರು*, (1 ಕೀರ್ತನೆ). [22]

61. **ಗುರುವಾಸುದೇವವಿಠಲ (ಕ್ರಿ.ಶ. 18ನೆಯ ಶತಮಾನ)** ವ್ಯಾಸತತ್ತ್ವಜ್ಞತೀರ್ಥರಿಂದ(ವಾಸುದೇವವಿಠಲ)* ಅಂಕಿತಪ್ರಾಪ್ತಿ; (1 ಕೀರ್ತನೆ, 1 ಸುಳಾದಿ). [22]

62. **ಗುರುವಿಜಯವಿಠಲ (ಕ್ರಿ.ಶ. 1802–1855–1885)** ಮೊದಲಕಲ್ಲು ಶೇಷದಾಸರು, ವಿಜಯದಾಸರಿಂದ* ಸ್ವಪ್ನಾಂಕಿತರು, ಚನ್ನಪಲ್ಲಿ ಶೇಷದಾಸರೆಂದೂ ಪರಿಚಿತರು, ಹುಟ್ಟೂರು ಆಂಧ್ರಪ್ರದೇಶದ ಗದ್ವಾಲದಿಂದ 5 ಮೈಲಿದೂರದಲ್ಲಿರುವ ದರೂರು, ಗ್ರಾಮದ ಕುಲಕರ್ಣಿಗಳು, ಕಾರ್ಯಕ್ಷೇತ್ರ ಗದ್ವಾಲದ ಬಳಿಯ ಆದಿಶಿಲೆ/ಮೊದಲಕಲ್ಲು(ಮದರಕಲ್ಲು?); 5 ಕೀರ್ತನೆಗಳು, 13 ಉಗಾಭೋಗಗಳು, 44 ಸುಳಾದಿಗಳು ದೊರೆತಿವೆ; ಕಾಲವಾದದ್ದು ವೈಶಾಖ ಶುದ್ಧ ಅಷ್ಟಮಿಯಂದು; ಮೊದಲಕಲ್ಲಿನಲ್ಲಿ. [87, 108, 165]

63. **ಗುರುವೇಣುಗೋಪಾಲವಿಠಲ (ಕ್ರಿ.ಶ. 17–18ನೆಯ ಶತಮಾನ)** ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, 1 ಕೀರ್ತನೆ ದೊರೆತಿದೆ, (1 ಸುಳಾದಿ). [22, 87, 97, 99, 45]

64. **ಗುರುವ್ಯಾಸವಿಠಲ (ಕ್ರಿ.ಶ. 18ನೆಯ ಶತಮಾನ)** ವ್ಯಾಸವಿಠಲರಿಂದ* ಅಂಕಿತಪ್ರಾಪ್ತಿ, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು ಇರಬಹುದು; 1 ಕೀರ್ತನೆ ದೊರೆತಿದೆ. [147, 87]

65. **ಗುರುಶ್ಯಾಮಸುಂದರವಿಠಲ (ಕ್ರಿ.ಶ. 1932–87)** ಶ್ಯಾಮಸುಂದರವಿಠಲರಿಂದ* ಸ್ವಪ್ನಾಂಕಿತರು, ಹೆಸರು ಸುಶೀಲೇಂದ್ರಾಚಾರ್ಯರು, ಇಂಜಿನಿಯರ್, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಗಿಲೆಸುಗೂರು; 141 ಕೀರ್ತನೆಗಳು, 1 ಉಗಾಭೋಗ ದೊರೆತಿವೆ, ಕಾಲವಾದದ್ದು 24/4/1987ರಂದು; ರಾಯಚೂರಿನಲ್ಲಿ. [194, 37]

66. **ಗುರುಶ್ರೀನಿವಾಸವಿಠಲ (ಕ್ರಿ.ಶ. 19ನೆಯ ಶತಮಾನ)** ವೇಣುಗೋಪಾಲವಿಠಲರ* ಪೀಳಿಗೆ, ತಂದೆಶ್ರೀನಿವಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಬೆಂಗಳೂರು ಕೃಷ್ಣದಾಸ. [108, 175]

67. **ಗುರುಶ್ರೀನಿವಾಸವಿಠಲ (ಕ್ರಿ.ಶ. 19–20ನೆಯ ಶತಮಾನ)** ಜಗನ್ನಾಥದಾಸರ*/ಹೊನ್ನಾಳಿ ಭೀಮೇಶವಿಠಲರ* ಪೀಳಿಗೆ, ಗುರುರಾಮವಿಠಲರಿಂದ* ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು

Rarest Archive

ಮೈಸೂರು ಕೃಷ್ಣದಾಸ; 1 ಕೀರ್ತನೆ ರಚಿಸಿದ್ದಾರೆ, ಭಗವದ್ಗೀತೆಯನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದ್ದಾರೆ. [22, 98]

68. **ಗುರುಶ್ರೀಶಪ್ರಾಣೇಶವಿಠಲ (ಕ್ರಿ.ಶ. ? –1902)** ಶ್ರೀಶಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ವೆಂಕಪ್ಪ, ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಗೋರೆಬಾಳ ಇವರ ಹುಟ್ಟೂರು ಮತ್ತು ಕಾರ್ಯಕ್ಷೇತ್ರವಿದ್ದಿರಬಹುದು; 1 ಸುಳಾದಿ ದೊರೆತಿದೆ; (51 ಕೀರ್ತನೆಗಳು); ಕಾಲವಾದದ್ದು ಗೋರೆಬಾಳದಲ್ಲೇ ಇರಬಹುದು. [22, 175, 112]

69. **ಗುರುಶ್ರೀಶವಿಠಲ (ಕ್ರಿ.ಶ. 1740–1846)** ಶ್ರೀಶವಿಠಲರಿಂದ* ಅಂಕಿತಪ್ರಾಪ್ತಿ, ಕುಂಟೋಜಿ ನರಸಿಂಹದಾಸರು, ಕಂಪ್ಲಿ ದಾಸರೆಂದು ಪರಿಚಿತರು, ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿಯ ಕುಂಟೋಜಿ ಗ್ರಾಮ, ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಕಂಪ್ಲಿ; ಶಿಷ್ಯರು ಲಕ್ಷ್ಮೀಪತಿವಿಠಲರು*; 24 ಕೀರ್ತನೆಗಳು, 6 ಉಗಾಭೋಗಗಳು, 7 ಸುಳಾದಿಗಳು ದೊರೆತಿವೆ; ಕಾಲವಾದದ್ದು ಬದರಿಯತ್ತ ನಾವೆಯಲ್ಲಿ ಪ್ರಯಾಣಿಸುತ್ತಿದ್ದಾಗ; ಮಾರ್ಗಶಿರ ಬಹುಳ ಅಮಾವಾಸ್ಯೆಯಂದು. ಇವರು ಜಗನ್ನಾಥದಾಸರ ಶಿಷ್ಯರೆಂದು ಹಲವಾರು *ಕಡೆ ಹೇಳಲಾಗಿದೆ; ಇದರ ಬಗ್ಗೆ ಅನುಬಂಧ–3 ನೋಡಿ.* [22, 38, 166, 175]

70. **ಗೋಪತಿ, ಗೋಪತಿಕೃಷ್ಣವಿಠಲ (ಕ್ರಿ.ಶ. ಸು. 1875)** ಹೆಸರು ಸುಬ್ಬಣ್ಣಾಚಾರ್ಯರು, ಹುಟ್ಟೂರು ಹಾವೇರಿ ಜಿಲ್ಲೆ ರಾಣಿಬೆನ್ನೂರು ತಾಲ್ಲೂಕಿನ ಹೊಳೆ ಆನವೇ(ವೇ)ರಿ/ಮುದೇನೂರು (ತುಂಗಭದ್ರಾ ಕುಮುದ್ವತಿ ಸಂಗಮ), ಆಸ್ಥಾನ ಪಂಡಿತರು, ತಪಸ್ವಿಗಳು, ಕಾರ್ಯಕ್ಷೇತ್ರ ಸುರಪುರ(ಗುಲಬರ್ಗಾ ಜಿಲ್ಲೆ ಶೋರಾಪುರ?) ಹಾಗೂ ಆನವೇರಿ; 5 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಹಾವೇರಿ ತಾಲ್ಲೂಕಿನ ಹಾವನೂರಿನಲ್ಲಿ. [8, 178, 194]

71. **ಗೋಪಾಲ (ಕ್ರಿ.ಶ. ಸು. 1815)** ಹೆಸರು ತಮ್ಮಣ್ಣ, ಹುಟ್ಟೂರು ರಾಯಚೂರು ಜಿಲ್ಲೆ ಅಪರಾಳ(ತಾಲ್ಲೂಕು ಸಿಕ್ಕಿಲ್ಲ) ಕಮಲೇಶವಿಠಲರ ಸಮಕಾಲೀನರು; ಅನೇಕ ಕೀರ್ತನೆಗಳನ್ನು ರಚಿಸಿರುವರೆಂದೂ, ಅವು ಇಂದು ಉಪಲಬ್ಧವಿಲ್ಲವೆಂದೂ ಹೇಳಲಾಗಿದೆ; ಶ್ರೀ ಕೃಷ್ಣಪಾರಿಜಾತದ ಕರ್ತೃಗಳು. [194]

72. **ಗೋಪಾಲಕೃಷ್ಣವಿಠಲ (ಕ್ರಿ.ಶ. ಸು. 1902–1945)** ತಂದೆಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಅಂಬಾಬಾಯಿ, ಹುಟ್ಟೂರು ಚಿತ್ರದುರ್ಗ, ಮುಖ್ಯವಾಗಿ ತೀರ್ಥಯಾತ್ರೆಯಲ್ಲಿದ್ದು ಅನೇಕ ಸ್ಥಳಗಳಲ್ಲಿ ವಾಸಮಾಡಿದವರು; 245 ಕೀರ್ತನೆಗಳು, 14 ಉಗಾಭೋಗಗಳು, 2 ಸುಳಾದಿಗಳು, 2 ವೃತ್ತನಾಮಗಳು, 4 ದೀರ್ಘಕೃತಿಗಳು ದೊರೆತಿವೆ; ಕಾವೇರಿಯಲ್ಲಿ ಜಲಸಮಾಧಿಯಾಗಿರಬಹುದೆಂದು ನಂಬಿಕೆ. [1]

73. **ಗೋಪಾಲವಿಠಲ (ಮೊದಲ ಅಂಕಿತ ವೆಂಕಟಕೃಷ್ಣ) (ಕ್ರಿ.ಶ. 1721–63)** ಗೋಪಾಲದಾಸರು, ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಭಾಗಣ್ಣ, ಹುಟ್ಟೂರು ರಾಯಚೂರು ಜಿಲ್ಲೆ

Rarest Archives

ದೇವದುರ್ಗ ತಾಲ್ಲೂಕಿನ ಮಸರುಕಲ್ಲು, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆ ಗದ್ವಾಲ ತಾಲ್ಲೂಕಿನ ಐಜಿ ಬಳಿ ಉತ್ತನೂರು; ಶಿಷ್ಯರು ಗುರುಗೋಪಾಲವಿಠಲರು*(ತಮ್ಮ), ವರದಗೋಪಾಲವಿಠಲರು*(ತಮ್ಮ), ತಂದೆಗೋಪಾಲವಿಠಲರು*(ತಮ್ಮ), ಗೋವಿಂದವಿಠಲರು*, ವಾಸುದೇವವಿಠಲರು*, ಕೇಶವವಿಠಲರು*(ಇವರು ಅಭಿನವಜನಾರ್ಧನವಿಠಲರ ಶಿಷ್ಯರೆಂದೂ ಹೇಳಲಾಗಿದೆ), ಹೆಳವನಕಟ್ಟೆ ಗಿರಿಯಮ್ಮ*(ಇವರು ಹೆಳವನಕಟ್ಟೆ ರಂಗನಾಥ ಕ್ಷೇತ್ರದ ಪ್ರಭಾವದಿಂದ ಅಂಕಿತಸ್ವೀಕಾರ ಮಾಡಿದರೆಂದೂ ಹೇಳಲಾಗಿದೆ); 96 ಕೀರ್ತನೆಗಳು, 21 ಉಗಾಭೋಗಗಳು, 70 ಸುಳಾದಿಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಉರಗನಂದದಿಗುಣವುಳ್ಳಪುರುಷ ನೀನು", "ಪಾಲಿಸಯ್ಯ ಪವನನಯ್ಯ"), (233 ಕೀರ್ತನೆಗಳು); ಕಾಲವಾದದ್ದು ಪುಷ್ಯ ಬಹುಳ ಅಷ್ಟಮಿಯಂದು; ಉತ್ತನೂರಿನಲ್ಲಿ. [22, 51, 104]

74. **ಗೋಪಾಲಾರ್ಯ (ಕ್ರಿ.ಶ. 17ನೆಯ ಶತಮಾನ)** ಅದ್ವೈತಿಗಳು; 24 ಕೀರ್ತನೆಗಳು ದೊರೆತಿವೆ. [95]

75. **ಗೋವಿಂದ (ಕ್ರಿ.ಶ. 1902–59)** ಹೆಸರು ಗೋವಿಂದ ಗೋಳಿ, ಹುಟ್ಟೂರು ಉಡುಪಿ ತಾಲ್ಲೂಕಿನ ಕೊಕ್ಕರ್ಣೆ ಸಮೀಪದ ಮೈರ್ಮಾಡಿ, ಅಧ್ಯಾಪಕರು, ಕಾರ್ಯಕ್ಷೇತ್ರ ಮೈರ್ಮಾಡಿ, ಅದ್ವೈತಿಗಳು; 138 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮೈರ್ಮಾಡಿಯಲ್ಲಿ. [136]

76. **ಗೋವಿಂದವಿಠಲ (ಕ್ರಿ.ಶ. 18ನೆಯ ಶತಮಾನ)** ಗೋಪಾಲದಾಸರಿಂದ* ಅಂಕಿತಪ್ರಾಪ್ತಿ; (1 ಸುಳಾದಿ). [22]

77. **ಚನ್ನಕೇಶವ (ಕ್ರಿ.ಶ. 16ನೆಯ ಶತಮಾನ)** ಕನಕದಾಸರಿಂದ* ಅಂಕಿತಪ್ರಾಪ್ತಿ; (3 ಕೀರ್ತನೆಗಳು, 2 ಸುಳಾದಿಗಳು, 2 ಉಗಾಭೋಗಗಳು). [22]

78. **ಚನ್ನಯ್ಯದಾಸ (ಕ್ರಿ.ಶ. 15–16ನೆಯ ಶತಮಾನ)** ಬೇಲೂರು ವೈಕುಂಠದಾಸರಿಂದ* ಅಂಕಿತಪ್ರಾಪ್ತಿ; (1 ಕೀರ್ತನೆ). [22]

79. **ಚಿಕನಾಗಪುರವಾಸ (ಕ್ರಿ.ಶ. ಸು. 1750–1825)** ಹುಟ್ಟೂರು ಚಿಕ್ಕನಾಗಪುರ (ಚಿಕ್ಕನಾಯಕನಹಳ್ಳಿ?), ಹೆಸರು ವೆಂಕಟದಾಸರು, ಅದ್ವೈತಿಗಳು; 16 ಕೀರ್ತನೆಗಳು ದೊರೆತಿವೆ. [95]

80. **ಚಿದಾನಂದ (ಕ್ರಿ.ಶ. 1700–1781)** ಚಿದಾನಂದ ಅವಧೂತರು, ಪೂರ್ವಾಶ್ರಮದ ಹೆಸರು ಝುಂಕಪ್ಪ, ಗುರುಗಳು ಚಿದಾನಂದರೆಂಬ ಸಿದ್ಧಪುರುಷರು, ಹುಟ್ಟೂರು ಆಂಧ್ರಪ್ರದೇಶದ ಆದವಾನಿ ತಾಲ್ಲೂಕಿನ ದೊಡ್ಡ ಹರಿವಾಣ, ಯೋಗಿಗಳು, ಕಾರ್ಯಕ್ಷೇತ್ರ ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಅಯೋಧ್ಯೆ; 428 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮಾಘ ಬಹುಳ ತ್ರಯೋದಶಿಯಂದು; ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿಯಲ್ಲಿ. [42]

Rarest Archive

81. **ಜಗನ್ನಾಥವಿಠಲ (ಕ್ರಿ.ಶ. 1728–1809)** ಜಗನ್ನಾಥದಾಸರು, ಮಹಾರಾಷ್ಟ್ರದ ಪಂಡರಪುರದ ಚಂದ್ರಭಾಗಾ ನದಿಯಲ್ಲಿ ಶಿಲಾ ಫಲಕದಲ್ಲಿ ದೊರೆತ ಅಂಕಿತ, ಹೆಸರು ಶ್ರೀನಿವಾಸ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟ, ಕಾರ್ಯಕ್ಷೇತ್ರ ಮಾನ್ವಿ; ಶಿಷ್ಯರ ವಿವರಗಳಿಗೆ ಅನುಬಂಧ–3 ನೋಡಿ; 207 ಕೀರ್ತನೆಗಳು, 2 ಉಗಾಭೋಗಗಳು, 3 ಸುಳಾದಿಗಳು ದೊರೆತಿವೆ, 'ಹರಿಕಥಾಮೃತಸಾರ'ವೆಂಬ ಮಧ್ವಶಾಸ್ತ್ರ ಗ್ರಂಥವನ್ನೂ ರಚಿಸಿದ್ದಾರೆ; ಕಾಲವಾದದ್ದು ಭಾದ್ರಪದ ಶುದ್ಧ ನವಮಿಯಂದು; ಮಾನ್ವಿಯಲ್ಲಿ. [107, 108, 110, 111, 109]

82. **ಜನಾರ್ದನವಿಠಲ (ಕ್ರಿ.ಶ. 18ನೆಯ ಶತಮಾನ)** ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಜನಾರ್ದನಾಚಾರ್ಯ, ಇವರದೇ ಇರಬಹುದಾದ ವ್ಯಾಸರಾಯರನ್ನು ಕುರಿತ 1 ಕೀರ್ತನೆ ದೊರೆತಿದೆ. [97]

83. **ಜನಾರ್ದನವಿಠಲ, ಸಿರಿಜನಾರ್ದನವಿಠಲ(?) (ಕ್ರಿ.ಶ. ಸು. 18ನೇ ಶತಮಾನ)** ಗೋಪಾಲದಾಸರ ಶಿಷ್ಯರಾದ ಗುರುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಅಂಕಿತಪ್ರದಾನವಾದದ್ದು 23/1/1776ರಂದು, ಅಂಕಿತಪದ ದೊರೆತಿದೆ, ಹೆಸರು ತಿರುಮಲದಾಸರು; ಇವರದೇ ಇರಬಹುದಾದ ವ್ಯಾಸರಾಯರನ್ನು ಕುರಿತ 1 ಕೀರ್ತನೆ ದೊರೆತಿದೆ, (115 ಕೀರ್ತನೆಗಳು) ಶಿಷ್ಯರು ಅಭಿನವಜನಾರ್ದನವಿಠಲರು*; [22, 103, 175]

*ಜನಾರ್ದನವಿಠಲ ಅಂಕಿತದಲ್ಲಿ 4 ಕೀರ್ತನೆಗಳು ದೊರೆತಿವೆ, ಮೇಲಿನ ಇಬ್ಬರು ದಾಸರುಗಳಲ್ಲಿ ಯಾರವೆಂದು ತಿಳಿದಿಲ್ಲ.* [161, 76, 39, 110]

84. **ಜಯವಿಠಲ (ಕಿ.ಶ. ಸು. 19ನೆಯ ಶತಮಾನದ ಪೂರ್ವಾರ್ಧ)** ವಿಜಯರಾಮಚಂದ್ರವಿಠಲರಿಂದ* ಅಥವಾ ಹೊನ್ನಾಳಿದಾಸರ ಪೀಳಿಗೆಯಿಂದ ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು ಶ್ರೀನಿವಾಸದಾಸರು, ಕಾರ್ಯಕ್ಷೇತ್ರ ಮೈಸೂರು; ಅನೇಕ ಕೃತಿಗಳು ಮತ್ತು ಗ್ರಂಥಗಳನ್ನು ರಚಿಸಿದ್ದಾರೆ (ಉದಾಹರಣೆಗೆ "ಹರಿಭಕ್ತಿಸಾರ"), 2 ಕೀರ್ತನೆಗಳು ದೊರೆತಿವೆ; ಶಿಷ್ಯರು ಗುರುಜಯವಿಠಲರಿರಬಹುದು*. [73, 166, 175, 98]

85. **ಜಯವೆಂಕಟೇಶ (ಕ್ರಿ.ಶ. ಸು. 1841)** ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿ, ಹೆಸರು ಜಯವೆಂಕಟಾಚಾರ್ಯರು; ಭೋಗಾಪುರೇಶ ಪ್ರಾಣದೇವರನ್ನು ಕುರಿತು "ಕರಾವಲಂಬನ" ಸ್ತೋತ್ರವನ್ನು ಮತ್ತು ಕನಕಾಚಲಪತಿಯ ಮೇಲೆ ದಂಡಕವನ್ನು ರಚಿಸಿದ್ದಾರೆಂದು ಹೇಳಲಾಗಿದೆ. [194]

86. **ಜಯೇಶವಿಠಲ (ಕ್ರಿ.ಶ. 1850–1932)** ವಿಜಯರಾಮಚಂದ್ರವಿಠಲರಿಂದ* ಅಂಕಿತಪ್ರಾಪ್ತಿ, ಅಟ್ಟಾಜಿ/ಅಟ್ಯಾಚಿ ವೆಂಕಟರಾಯರೆಂದು ಪರಿಚಿತರು, ಹುಟ್ಟೂರು ಬೆಂಗಳೂರು, ಡೆಪ್ಯುಟಿ ಕಮಿಷನರ್ ಆಗಿದ್ದವರು, ಕಾರ್ಯಕ್ಷೇತ್ರ ಮೈಸೂರು ಕಟ್ಟೆಮನೆ; ಶಿಷ್ಯರು ಗುರುಜಯೇಶವಿಠಲರು(ಪತ್ನಿ)*, ಕರಿವರದವಿಠಲರು (ವೆಂಕಟರಮಣಾಚಾರ್ಯ),

Rarest Archive

ಪರಾತ್ಪರವಿಠಲರು (ಎಸ್.ನಾರಾಯಣರಾಯರು), ಪ್ರಸನ್ನವಿಠಲರು (ಹೊಳವನಹಳ್ಳಿ ನರಸಿಂಗರಾಯರು), ಯದುಪತಿವಿಠಲರು (ಶ್ರೀನಿವಾಸರಾಯರು), ರಾಮವಿಠಲರು (ಅರ್ಚಕ ರಾಮರಾಯರು), ಸರ್ವಜ್ಞವಿಠಲರು (ಮುರಾರಿರಾಯರು); 61 ಕೀರ್ತನೆಗಳು, 1 ಉಗಾಭೋಗ ದೊರೆತಿವೆ; ಕಾಲವಾದದ್ದು ವೈಶಾಖ ಬಹುಳ ದ್ವಿತೀಯೆಯಂದು; ಮೈಸೂರಿನಲ್ಲಿ. [92]

87. **ಜಾಜೀಪುರೀಶ, ಹೆಜ್ಜಾಜಿಪುರವಾಸ (ಕ್ರಿ.ಶ. 1912–92)** ಆರಾಧ್ಯದೈವ ಹೆಜ್ಜಾಜಿ ಚೆನ್ನಕೇಶವನ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ನಾರಾಯಣಶರ್ಮರು, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡ ಹೆಜ್ಜಾಜಿ, ಅಧ್ಯಾಪಕರು, ಕಾರ್ಯಕ್ಷೇತ್ರ ದೊಡ್ಡ ಹೆಜ್ಜಾಜಿ, ಶ್ರೀವೈಷ್ಣವರು; 26 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಚೈತ್ರ ಶುದ್ಧ ಪಂಚಮಿಯಂದು; ದೊಡ್ಡ ಹೆಜ್ಜಾಜಿಯಲ್ಲಿ. [75]

88. **ಜಾಜೀಶ, ಹೆಜ್ಜಾಜಿ ಕೇಶವ, ಹೆಜ್ಜಾಜಿ ಚೆನ್ನಕೇಶವ (ಕ್ರಿ.ಶ. 1891–1972)** ಆರಾಧ್ಯದೈವ ಹೆಜ್ಜಾಜಿ ಚೆನ್ನಕೇಶವನ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ಶಾಮಶರ್ಮರು, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡ ಹೆಜ್ಜಾಜಿ, ಅಧ್ಯಾಪಕರು, ಕಾರ್ಯಕ್ಷೇತ್ರ ದೊಡ್ಡ ಹೆಜ್ಜಾಜಿ, ಶ್ರೀವೈಷ್ಣವರು; 111 ಕೀರ್ತನೆಗಳು ದೊರೆತಿವೆ; ಕಾಲವಾದದ್ದು 23/09/1972ರಂದು. [75]

89. **ಜ್ಞಾನಬೋಧ** ಗುರುಗಳು ಗೋವಿಂದಗುರುಗಳು, ಸಿಂದಗಿ ಸಂಪ್ರದಾಯದವರು, 13 ಕೀರ್ತನೆಗಳು ದೊರೆತಿವೆ. [173]

90. **ತಂದೆಗೋಪಾಲವಿಠಲ (ಕ್ರಿ.ಶ. ಸು. 1775)** ಗೋಪಾಲದಾಸರಿಂದ* ಅಂಕಿತಪ್ರಾಪ್ತಿ, ಹೆಸರು ರಂಗಪ್ಪದಾಸರು, ಇವರು ಗೋಪಾಲದಾಸರ ತಮ್ಮ, ಹುಟ್ಟೂರು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಮಸರುಕಲ್ಲು, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಗದ್ವಾಲ/ಐಜಿ ಬಳಿಯ ಉತ್ತನೂರು; ಶಿಷ್ಯರು ಗುರುತಂದೆಗೋಪಾಲವಿಠಲರು*; 19 ಕೀರ್ತನೆಗಳನ್ನು ರಚಿಸಿದ್ದಾರೆ; *ಇವರ ಮುಂದಿನ ಪೀಳಿಗೆಯ ವಿವರಗಳು ಮೂರು ಕಡೆ ಬೇರೆ ಬೇರೆಯಾಗಿ ದೊರೆತಿವೆ; ಅನುಬಂಧ–1 ನೋಡಿ.* [22, 104, 108, 175]

91. **ತಂದೆಪುರಂದರವಿಠಲ (ಕ್ರಿ.ಶ. 19ನೆಯ ಶತಮಾನದ ಉತ್ತರಾರ್ಧ)** ಹೆಸರು ಕುಂಭಕೋಣದ ಶಾಮರಾಯರು, ರಂಗವಲಿದ ಚಿಕ್ಕದಾಸರೆಂದು ಮಾನ್ಯರು; 19–20ನೆಯ ಶತಮಾನದಲ್ಲಿ ಇದೇ ಅಂಕಿತದ ಒಬ್ಬ ದಾಸರು ಅಪರೋಕ್ಷ ಜ್ಞಾನಿಗಳೆಂದೂ, ದಕ್ಷಿಣ ದೇಶದಲ್ಲಿದ್ದು, ಅಲ್ಲಿ ಅವರ ಪದಗಳು ಅಚ್ಚಾಗಿವೆಯೆಂದೂ ಅವು ಪುರಂದರದಾಸರ ಮಗಳವಲ್ಲ ಎಂದೂ ಹೇಳಲಾಗಿದೆ. ಕಾಲವನ್ನು ಗಮನಿಸಿದರೆ ಎರಡೂ ವಿವರಗಳು ಒಬ್ಬರದೇ ಇರಬಹುದು; ರಾಘವೇಂದ್ರಸ್ವಾಮಿಗಳನ್ನು ಕುರಿತು 4 ಕೀರ್ತನೆಗಳು ದೊರೆತಿವೆ. [175, 22, 76, 39]

92. **ತಂದೆಪ್ರಾಣೇಶವಿಠಲ (ಕ್ರಿ.ಶ. 18–19ನೆಯ ಶತಮಾನ)** ಗುರುಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ; (1 ಕೀರ್ತನೆ). [22, 126, 166]

Rarest Archive

93. **ತಂದೆಮುದ್ದುಮೋಹನವಿಠಲ (ಕ್ರಿ.ಶ. 1865–1940)** ಪರಮಪ್ರಿಯ ಸುಬ್ಬರಾಯದಾಸರೆಂದು ಪ್ರಸಿದ್ಧರು, ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸುಬ್ಬರಾಯರು, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ ತಾಲ್ಲೂಕಿನ ನರಸೀಪುರ ಗ್ರಾಮ, ಕಾರ್ಯಕ್ಷೇತ್ರ ತುಮಕೂರು ತಾಲ್ಲೂಕಿನ ದೇವರಾಯನದುರ್ಗ; ಶಿಷ್ಯರು ಒಟ್ಟು 1165 ಜನ (ವಿವರಗಳಿಗೆ ಜಯಸಿಂಹ ಅವರ "ಪರಮಪ್ರಿಯ ತಂದೆಮುದ್ದುಮೋಹನ ದಾಸರು" ಗ್ರಂಥ ನೋಡಿ): 5 ಕೀರ್ತನೆಗಳು, 11 ಉಗಾಭೋಗಗಳು ದೊರೆತಿವೆ; ಕಾಲವಾದದ್ದು ಚೈತ್ರ ಶುದ್ಧ ನವಮಿಯಂದು; ದೇವರಾಯನದುರ್ಗದಲ್ಲಿ. [86, 165]

94. **ತಂದೆಮೋಹನವಿಠಲ (ಕ್ರಿ.ಶ. 18ನೆಯ ಶತಮಾನ)** ತಂದೆಯವರಾದ ಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಗುರುರಾಯದಾಸ/ವೆಂಕಪ್ಪದಾಸ; ಶಿಷ್ಯರು ಗುರುಮೋಹನವಿಠಲ*, ಅಲ್ಲದೇ ರಾಘವೇಂದ್ರದಾಸರು ಮತ್ತು ಶ್ರೀನಿವಾಸದಾಸರು ಇವರ ಶಿಷ್ಯರೆಂದೂ, ಗುರುಮೋಹನವಿಠಲರ ಶಿಷ್ಯರೆಂದೂ ಹೇಳಲಾಗಿದೆ; (1 ಕೀರ್ತನೆ) [22, 87,175]

95. **ತಂದೆವರದಗೋಪಾಲವಿಠಲ (ಕ್ರಿ.ಶ. 19–20ನೆಯ ಶತಮಾನ)** ಗೋಪಾಲದಾಸರಿಂದ* ಸ್ವಪ್ನಾಂಕಿತರು, ಹೆಸರು ಪ್ರಹ್ಲಾದ ಗೌಡರು, ಹುಟ್ಟೂರು ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಕಳಸ; ಶಿಷ್ಯರು ಗುರುತಂದೆ ವರದಗೋಪಾಲವಿಠಲರು*; 76 ಕೀರ್ತನೆಗಳು, 1 ಉಗಾಭೋಗ, 14 ಸುಳಾದಿಗಳು ದೊರೆತಿವೆ: ಕಾಲವಾದದ್ದು ಮಾದನೂರಿನಲ್ಲಿ (ಮಾದಲಾಪುರ) (ಜಿಲ್ಲೆ ತಾಲ್ಲೂಕು ಸಿಕ್ಕಿಲ್ಲ). [8, 46, 186]

*ಗ್ರಂಥ [22/267]ರಲ್ಲಿ ವಾಂಯಿ ಕೃಷ್ಣಾಚಾರ್ಯರೆಂಬ ಹರಿದಾಸರ ಪರಿಚಯ ಹೀಗಿದೆ:– ಅಂಕಿತ ತಂದೆವರದ ಗೋಪಾಲವಿಠಲ, 19–20ನೆಯ ಶತಮಾನದವರು, ಸ್ವಪ್ನಾಂಕಿತರು, 4 ಪದಗಳು ದೊರೆತಿವೆ. ಗ್ರಂಥ [8]ರಲ್ಲಿ ವಾಂಯಿ ಕೃಷ್ಣಾಚಾರ್ಯರು ಪ್ರಹ್ಲಾದ ಗೌಡರ ಸೋದರಮಾವನವರೆಂದೂ, ಪ್ರಹ್ಲಾದ ಗೌಡರ ಸಹೋದರಿ ಕಳಸದ ಸುಂದರಮ್ಮ (ಕಾಳೀಯ ಮರ್ದನ ಕೃಷ್ಣಾಂಕಿತರು*)ನವರ ಪತಿಯೆಂದೂ ಹೇಳಲಾಗಿದೆ.*

96. **ತಂದೆವರದವಿಠಲರು (ಕ್ರಿ.ಶ. 1912–44)** ಹೆಸರು ಶ್ರೀನಿವಾಸರಾಯರು, ಕಳಸದ ಗೌಡರ ಮನೆತನ; 19 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಆಶ್ವೀಜ ಶುದ್ಧ ನವಮಿಯಂದು; *ಈ ವಿವರಗಳು "ಗುರುಕಥಾಮೃತಸಾರ"ವೆಂಬ ಸುದೀರ್ಘ ಸುಳಾದಿಯಯಲ್ಲಿ ದೊರೆತ ಮಾಹಿತಿಯಿಂದ ಎಂದು ಹೇಳಲಾಗಿದೆ. ಆದರೆ ಸಂಖ್ಯೆ 294ರ ಸುಳಾದಿಯಲ್ಲಿ ಈ ಮಾಹಿತಿ ಕಂಡು ಬರುತ್ತದೆ.* [8]

97. **ತಂದೆವೆಂಕಟೇಶವಿಠಲ (ಕ್ರಿ.ಶ. 1907–82)** ಉರಗಾದ್ರಿವಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಆರ್. ರಾಮಚಂದ್ರರಾವ್, ಹುಟ್ಟೂರು ಚಿತ್ರದುರ್ಗ, ಅಧ್ಯಾಪಕರು; 106 ಕೀರ್ತನೆಗಳು, 1 ದೀರ್ಘಕೃತಿ, 1 ಸುಳಾದಿ ದೊರೆತಿವೆ; ಕಾಲವಾದದ್ದು ಆಷಾಢ ಬಹುಳ ಅಷ್ಟಮಿಯಂದು; [166, 175, 76, 39, 186, 77, 78, 174, 5, 110, 147, 152, 155, 79, 45]

Rarest Archiver

**98.** **ತಂದೆವೇಣುಗೋಪಾಲವಿಠಲ (ಕ್ರಿ.ಶ. 17–18ನೆಯ ಶತಮಾನ)** ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, 1 ಕೀರ್ತನೆ ದೊರೆತಿದೆ. [87, 97, 99, 147]

**99.** **ತಂದೆಶ್ರೀನಿವಾಸವಿಠಲ (ಕ್ರಿ.ಶ. 18–19ನೆಯ ಶತಮಾನ)** (ವೇಣುಗೋಪಾಲವಿಠಲರ* ಪೀಳಿಗೆ), ಶ್ರೀನಿವಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕಲ್ಲೂರು ಶ್ರೀನಿವಾಸದಾಸರು; ಶಿಷ್ಯರು ಗುರುಶ್ರೀನಿವಾಸವಿಠಲರು*. [175]

**100.** **ತಂದೆಶ್ರೀಪತಿವಿಠಲ (ಕ್ರಿ.ಶ. 1800–1890)** ಶ್ರೀಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಹರಪನಹಳ್ಳಿ ವೆಂಕಟದಾಸರು, ಹುಟ್ಟೂರು ದಾವಣಗೆರೆ ಜಿಲ್ಲೆ ಹರಪನಹಳ್ಳಿ, ದೇಶಾವರವೃತ್ತಿ, ಕಾರ್ಯಕ್ಷೇತ್ರ ಹರಪನಹಳ್ಳಿ ಮತ್ತು ಆಂಧ್ರಪ್ರದೇಶದ ಗದ್ವಾಲ; ಶಿಷ್ಯರು ಶ್ರೀನಿಧಿವಿಠಲ*; 5 ಕೀರ್ತನೆಗಳು, 1 ಸುಳಾದಿ ದೊರೆತಿವೆ; (27 ಕೀರ್ತನೆಗಳು). *(ಬಾದರಾಯಣವಿಠಲಾಂಕಿತ ವೇದವ್ಯಾಸಾಚಾರ್ಯರು ಕೂಡ ಇವರ ಶಿಷ್ಯರೆಂದು ಹೇಳಲಾಗಿದೆ, ಇದು ಸರಿಯಲ್ಲವೆನಿಸುತ್ತದೆ; ಅನುಬಂಧ–3 ನೋಡಿ)* [22, 166, 175, 194, 76, 164, 186, 78]

**101.** **ತಿರುಪತಿವಿಠಲ (ಕ್ರಿ.ಶ. 19ನೆಯ ಶತಮಾನ)** ಶ್ರೀಶಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ; 1 ಕೀರ್ತನೆ ದೊರೆತಿದೆ. [126, 22]

**102.** **ತಿರುಪತಿವೆಂಕಟ (ಕ್ರಿ.ಶ. 1770–1860)** ಹೆಸರು ತಿಮ್ಮಪ್ಪಯ್ಯ, ಹುಟ್ಟೂರು ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ, ಅರಸರ ಬಳಿ ರಾಯಸದ ವೃತ್ತಿ, ಕಾರ್ಯಕ್ಷೇತ್ರ ಚಿಕ್ಕನಾಯಕನಹಳ್ಳಿ ಮತ್ತು ಹಾಸನ ಜಿಲ್ಲೆ ಅರಕಲಗೂಡು, ಅದ್ವೈತಿಗಳು; 159 ಕೀರ್ತನೆಗಳು, 1 ದಂಡಕ ದೊರೆತಿವೆ; ಕಾಲವಾದದ್ದು ಮೈಸೂರಿನಲ್ಲಿ. [95]

**103.** **ತೀರ್ಥಪಾದವಿಠಲ, ಶ್ರೀ ತೀರ್ಥಪಾದವಿಠಲ (ಕ್ರಿ.ಶ. ಸು. 1870)** ಶ್ರೀನಿಧಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕರ್ಜಗಿ ತಿಮ್ಮಪ್ಪ(ತೀರ್ಥಪ್ಪ); ಶಿಷ್ಯರು ರಮಾಪತಿವಿಠಲರು*. [97, 108]

**104.** **ತುಳಶಿ(ಸಿ)ರಾಮ (ಕ್ರಿ.ಶ. 1850–1920)** ತುಳಸಿರಾಮದಾಸರ* ಶಿಷ್ಯರಿರಬಹುದು, ಹೆಸರು ಚನ್ನಪಟ್ಟಣದ ಅಹೋಬಲದಾಸರು, ಹುಟ್ಟೂರು ರಾಮನಗರ ಜಿಲ್ಲೆ ಚನ್ನಪಟ್ಟಣ, ಕಾರ್ಯಕ್ಷೇತ್ರ ಚನ್ನಪಟ್ಟಣ, ಶ್ರೀವೈಷ್ಣವರು; 114 ಕನ್ನಡದ ಮತ್ತು 5 ತೆಲುಗು–ಹಿಂದಿ ಮಿಶ್ರಿತ ಕೀರ್ತನೆಗಳು ದೊರೆತಿವೆ. [75]

**105.** **ತುಳಸಿರಾಮದಾಸ (ಕ್ರಿ.ಶ. 1847–1903)** ಹುಟ್ಟೂರು ಆಂಧ್ರಪ್ರದೇಶದ ಕಡಪ ಜಿಲ್ಲೆ ಸಿದ್ಧವಟ್ಟಂ, ಯೋಗಿಗಳು, ಕಾರ್ಯಕ್ಷೇತ್ರ ಬೆಂಗಳೂರು, ಕೋಲಾರ, ಮತ್ತು ಕೋಲಾರ ಜಿಲ್ಲೆ ಮುಳಬಾಗಿಲು ಹಾಗೂ ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣದ ಬಳಿ ಇದ್ದಿರಬಹುದಾದ ದರಿಶಕುಪ್ಪ, ಶ್ರೀವೈಷ್ಣವರು; 25 ಕನ್ನಡದ ಮತ್ತು 3 ತೆಲುಗು ಮಿಶ್ರಿತ ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮಾಘ ಬಹುಳ ದ್ವಿತೀಯೆಯಂದು; ದರಿಶಕುಪ್ಪದಲ್ಲಿ. [75]

Rarest Archiver

106. **ಧನ್ವಂತರಿವಿಠಲ (ಕ್ರಿ.ಶ. 19–20ನೆಯ ಶತಮಾನ)** ರಾಘವೇಂದ್ರಸ್ವಾಮಿಗಳನ್ನು ಕುರಿತು 1 ಸುಳಾದಿ ದೊರೆತಿದೆ. [39]

107. **ಧೀರವೇಣುಗೋಪಾಲ (ಕ್ರಿ.ಶ. 1596–1671)** ಮಂತ್ರಾಲಯದ ರಾಘವೇಂದ್ರತೀರ್ಥರು, ಪೂರ್ವಾಶ್ರಮದ ಹೆಸರು ವೆಂಕಣ್ಣಭಟ್ಟ, ಆಶ್ರಮಗುರುಗಳು ಸುಧೀಂದ್ರತೀರ್ಥರು, ಹುಟ್ಟೂರು ತಮಿಳುನಾಡಿನ ಕುಂಭಕೋಣಂ, ಪೀಠಾಧಿಪತಿಗಳು; 1 ಕೀರ್ತನೆ ಮಾತ್ರ ದೊರೆತಿದೆ; ಸಶರೀರವಾಗಿ ಬೃಂದಾವನಸ್ಥರಾದದ್ದು ಶ್ರಾವಣ ಕೃಷ್ಣ ದ್ವಿತೀಯದಂದು; ಮಂತ್ರಾಲಯದಲ್ಲಿ. [153]

108. **ಧೇನುಪುರ, ಧೇನುನಗರ (ಕ್ರಿ.ಶ. 1866–1937)** ಹೆಸರು ಬೇಟೆರಾಯ ದೀಕ್ಷಿತರು, ಹುಟ್ಟೂರು ತುಮಕೂರು ಜಿಲ್ಲೆ ತುರುವೇಕೆರೆ(ಧೇನುಪುರ), ಅಧ್ಯಾಪಕರು, ಕಾರ್ಯಕ್ಷೇತ್ರ ತುರುವೇಕೆರೆ, ಅದ್ವೈತಿಗಳು; 88 ಕೀರ್ತನೆಗಳು ದೊರೆತಿವೆ. [26]

109. **ನಡ(ಡು)ಪುರೇಶ, ನಡಪುರಿಹನುಮ (ಕ್ರಿ.ಶ. 1829–1904)** ಸ್ವಗ್ರಾಮದ ಪ್ರಾಣದೇವರ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ರಾಘವಾರ್ಯ ಒಡೆಯರು, ಹುಟ್ಟೂರು ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕಿನ ನಡುವಲಕೊಪ್ಪ, ಪಂಡಿತರು, ಕಾರ್ಯಕ್ಷೇತ್ರ ನಡುವಲಕೊಪ್ಪ; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ತಿಳಿದಿದೆ, ಆದರೆ ದೊರೆತಿರುವುದು 13 ಕೀರ್ತನೆಗಳು ಮತ್ತು 3 ದೀರ್ಘಕೃತಿಗಳು ಮಾತ್ರ; ಕಾಲವಾದದ್ದು ಪುಷ್ಯ ಬಹುಳ ಏಕಾದಶಿಯಂದು; ಕುಷ್ಟಗಿಯಲ್ಲಿ. [166, 168]

110. **ನರಸಿಂಹವಿಠಲ (ಕ್ರಿ ಶ. ಸು. 1765)** ಪುರಂದರದಾಸರಿಂದ* ಸ್ವಪ್ನಾಂಕಿತರು ಅಥವಾ ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ನರಸಪ್ಪ, ಇವರು ಜಗನ್ನಾಥದಾಸರ* ತಂದೆಯವರು, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟ; (1 ಕೀರ್ತನೆ); ಕಾಲವಾದದ್ದು ಮಾರ್ಗಶಿರ ಬಹುಳ ಷಷ್ಠಿಯಂದು; ಬ್ಯಾಗವಟ್ಟದಲ್ಲಿ. [22, 49, 97, 99, 108, 109]

111. **ನರಸಿಂಹವಿಠಲ (ಕ್ರಿ.ಶ. 1865–1950)** ಹೆಸರು ಓರಬಾ(ವಾ)ಯಿ ಲಕ್ಷ್ಮೀದೇವಮ್ಮ, ಹುಟ್ಟೂರು ಬಳ್ಳಾರಿ ಜಿಲ್ಲೆ ಸಂಡೂರು, ಸಮಾಜಸೇವಕರು, ಕಾರ್ಯಕ್ಷೇತ್ರ ಬಳ್ಳಾರಿ ಹಾಗೂ ಗುಂತಕಲ್ ಬಳಿಯಿರುವ ಆಂಧ್ರಪ್ರದೇಶದ ಗುತ್ತಿ; 21 ಕೀರ್ತನೆಗಳು, 11 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು 1950ರ ಜನವರಿ ತಿಂಗಳಿನ ಮೊದಲನೆಯ ವಾರದಲ್ಲಿ; ಬಳ್ಳಾರಿಯಲ್ಲಿ. [53, 166, 128]

112. **ನರಸಿಂಹವಿಠಲ (ಕ್ರಿ.ಶ. 1904–86)** ಸ್ವಪ್ನಾಂಕಿತರು, ಹೆಸರು ಇಟಗಿ ಹನುಮಂತಾಚಾರ್ಯರು, ಹುಟ್ಟೂರು ಕೊಪ್ಪಳ ಜಿಲ್ಲೆ ಯಲಬುರ್ಗ ತಾಲ್ಲೂಕಿನ ಇಟಗಿ, ನಿಝಾಮರಲ್ಲಿ ಸರ್ಕಾರಿ ನೌಕರಿ; 300 ರಚನೆಗಳು ಇವರ ವಂಶಸ್ಥರಲ್ಲಿವೆ ಎಂದು ತಿಳಿದು ಬಂದಿದೆ, ಕಾಲವಾದದ್ದು ತಮಿಳುನಾಡಿನ ರಾಮೇಶ್ವರದಲ್ಲಿ. [194]

Rarest Archiver

**113.** **ನರಸಿಂಹವಿಠಲ (ಕ್ರಿ.ಶ. 1912–65)** ಹೆಸರು ಕಲ್ಯಾಣಿ ಶ್ರೀನಿವಾಸಾಚಾರ್ಯರು, ಹುಟ್ಟೂರು ರಾಯಚೂರು ತಾಲ್ಲೂಕಿನ ಕಾಡ್ಲೂರು, ಪಂಡಿತರು, ಕಾರ್ಯಕ್ಷೇತ್ರ ಕಾಡ್ಲೂರು; 100 ಕೃತಿಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ; ಕಾಲವಾದದ್ದು ಮಾರ್ಗಶಿರ ಅಮಾವಾಸ್ಯೆಯಂದು. [194]

**114.** **ನರಸಿಂಹವಿಠಲ** ಹೆಸರು ಹನುಮಂತಾಚಾರ್ಯ, ಹುಟ್ಟೂರು ಹಾವೇರಿ ಜಿಲ್ಲೆ ಹಿರೇಕೇರೂರ ತಾಲ್ಲೂಕಿನ ಕುಂಚೂರು, ಹಾವೇರಿಯಲ್ಲಿ ಶಿಕ್ಷಣ ಖಾತೆಯಲ್ಲಿದ್ದಿರಬಹುದು; 124 ಕೀರ್ತನೆಗಳು ದೊರೆತಿವೆ. [158]

**115.** **ನರಹರಿ (ಕ್ರಿ.ಶ. 1890–1975)** ಸಾಗರಕಟ್ಟೆ ಪ್ರದ್ಯುಮ್ನ ತೀರ್ಥರು, ಪೂರ್ವಾಶ್ರಮದ ಹೆಸರು ವ್ಯಾಸರಾಯಾಚಾರ್ಯರು, ಆಶ್ರಮಗುರುಗಳು ಕುಂದಾಪುರ ವ್ಯಾಸರಾಜಮಠದ, ವ್ಯಾಸರಾಜರ ನಂತರ 18ನೆಯ ಪೀಠಾಧಿಪತಿಗಳಾದ ಲಕ್ಷ್ಮೀಪ್ರಿಯತೀರ್ಥರು, ಹುಟ್ಟೂರು ಹಾವೇರಿ ಜಿಲ್ಲೆ ಶಿಗ್ಗಾಂವ್ ತಾಲ್ಲೂಕಿನ ಬಂಕಾಪುರ, ಪೀಠಾಧಿಪತಿಗಳು, ಮೈಸೂರಿನ ಹತ್ತಿರ ಮಂಡ್ಯ ಜಿಲ್ಲೆಯ ಕೃಷ್ಣರಾಜಸಾಗರದ ಬಳಿಯಿರುವ ಸಾಗರಕಟ್ಟೆ ಮಠ; ಶಿಷ್ಯರು ಶ್ರೀಶ್ರೀನಿವಾಸ*; 44 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ಜೇಷ್ಠ ಅಮಾವಾಸ್ಯೆಯಂದು; ಮೈಸೂರಿನಲ್ಲಿ. [153]

**116.** **ನಾಗೇಶಶಯನ (ಕ್ರಿ.ಶ. 1912–92)** ತಂದೆಯವರಾದ ಬಿ.ನಾಗೇಶರಾಯರಿಂದ ಅಂಕಿತಪ್ರಾಪ್ತಿ, ಹೆಸರು ಪದ್ಮಾಬಾಯಿ ಕೋಲಾರ್(ಕೃಷ್ಣವೇಣಿ), ಹುಟ್ಟೂರು ಗುಲಬರ್ಗ ಜಿಲ್ಲೆ, ಗೃಹಿಣಿ, ಕಾರ್ಯಕ್ಷೇತ್ರ ಬಳ್ಳಾರಿ; ರಾಘವೇಂದ್ರಸ್ವಾಮಿಗಳನ್ನು ಕುರಿತು 4 ಕೀರ್ತನೆ, 1 ಸ್ತೋತ್ರಪದ ದೊರೆತಿವೆ, 8 ಸಂಕಲನಗಳು ಪ್ರಕಟಗೊಂಡಿವೆಯೆಂದು ಹೇಳಲಾಗಿದೆ, ಕಾಲವಾದದ್ದು ಬೆಂಗಳೂರಿನಲ್ಲಿ. [171, 194, 39]

**117.** **ನಾಮಗಿರಿ (ಕ್ರಿ.ಶ. 1837–1915)** (ಆಶ್ರಮಕಾಲ 1903–15) ವಿದ್ಯಾರತ್ನಾಕರ ತೀರ್ಥರು, ಪೂರ್ವಾಶ್ರಮದ ಹೆಸರು ಸೋಸಲೆ/ತೆಕ್ಕಲೂರು ಅಹೋಬಲ ಆಚಾರ್ಯರು, ಆಶ್ರಮಗುರುಗಳು ವಿದ್ಯಾಸಮುದ್ರತೀರ್ಥರು, ಸೋಸಲೆಯ ವ್ಯಾಸರಾಜಮಠದ, ವ್ಯಾಸರಾಜರ ನಂತರ 23ನೇ ಪೀಠಾಧಿಪತಿಗಳು; 23 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ವೈಶಾಖ ಬಹುಳ ನವಮಿಯಂದು; ಮೈಸೂರು ಜಿಲ್ಲೆ ಟಿ.ನರಸೀಪುರ ತಾಲ್ಲೂಕಿನ ಸೋಸಲೆಯಲ್ಲಿ. [153]

**118.** **ನಾರಸಿಂಹ (ಕ್ರಿ.ಶ. ಸು. 19–20ನೆಯ ಶತಮಾನ)** ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ನರಸಿಂಹಮೂರ್ತಿ, ಕರಿಗಿರೀಶಾಂಕಿತ* ವರವಣಿ ರಾಮರಾಯರ ತಂದೆಯವರು, ಅರಣ್ಯ ಇಲಾಖೆಯಲ್ಲಿ ಉನ್ನತ ಹುದ್ದೆ, ಕಾರ್ಯಕ್ಷೇತ್ರ ಬೆಂಗಳೂರು; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [92]

**119.** **ನಾರಾಯಣಾಖ್ಯ/ದಾಸ (ಕ್ರಿ.ಶ. 1822–1902)** ಹೆಸರು ನಾರಾಯಣದಾಸರು, ಮೈಸೂರು ಅರಮನೆ ದೇವಾಲಯದ ಉಸ್ತುವಾರಿ, ಕಾರ್ಯಕ್ಷೇತ್ರ ಮೈಸೂರು, ಅದ್ವೈತಿಗಳು; 37 ಕೀರ್ತನೆಗಳು ದೊರೆತಿವೆ. [95]

Rarest Archive

**120. ನೆಂಟತಂದೆ(ಗುರು)ಗೋಪಾಲವಿಠಲ (ಕ್ರಿ.ಶ. 19ನೆಯ ಶತಮಾನ)** *ಇವರ ಪೀಳಿಗೆಯ ವಿವರಗಳು ಮೂರು ಕಡೆ ಬೇರೆ ಬೇರೆಯಾಗಿ ದೊರೆತಿವೆ; ಅನುಬಂಧ–1 ನೋಡಿ.* [99, 175, 22]

**121. ಪದ್ಮನಾಭವಿಠಲ (ಕ್ರಿ.ಶ. 18ನೆಯ ಶತಮಾನ)** ಗುರುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಅಂಕಿತಪ್ರದಾನವಾದದ್ದು 6/2/1776ರಂದು, ಅಂಕಿತಪದ ದೊರೆತಿದೆ. [100]

**122. ಪಾಂಡುರಂಗ (ಕ್ರಿ.ಶ. ಸು. 1700)** ಹೆಸರು ಭಾಗಮ್ಮ/ಪ್ರಯಾಗವ್ವ, ಗಲಗಲಿ ಅವ್ವನವರ ಆತ್ಮೀಯರು; ಕೆಲವು ಕೃತಿಗಳನ್ನು ರಚಿಸಿದ್ದಾರೆಂದು ತಿಳಿದಿದೆ. [166]

**123. ಪಾಂಡುರಂಗವಿಠಲ (ಕ್ರಿ.ಶ. 1918–78)** ಇಂದಿರೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಪಾಂಡುರಂಗರಾವ್ ಕಸಬೆ, ಹುಟ್ಟೂರು ರಾಯಚೂರು, ಕರಣಿಕರು, ಕಾರ್ಯಕ್ಷೇತ್ರ ರಾಯಚೂರು; 30 ಕೀರ್ತನೆಗಳು ರಚಿಸಿದ್ದಾರೆಂದು ಹೇಳಲಾಗಿದೆ. [194]

**124. ಪಾವಂಜೇಶ, ಪಾವಂಜೆಪುರದೀಶದಾಸ (ಕ್ರಿ.ಶ. 1876–1956)** ಹೆಸರು ಬೆಳ್ಳೆ ದಾಸಪ್ಪಯ್ಯನವರು, ಅಧ್ಯಾಪಕರು, ಹುಟ್ಟೂರು ಉಡುಪಿ ತಾಲ್ಲೂಕಿನ ಬೆಳ್ಳೆ (ಪಾಜಕ), ಕಾರ್ಯಕ್ಷೇತ್ರ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಪಾವಂಜೆ; 73 ಕೀರ್ತನೆಗಳು ದೊರೆತಿವೆ. [136]

**125. ಪುರಂದರವಿಠಲ (ಕ್ರಿ.ಶ. ಸು. 1480–1564)** ಪುರಂದರದಾಸರು, ವ್ಯಾಸರಾಯಸ್ವಾಮಿಗಳಿಂದ ಅಂಕಿತಪ್ರಾಪ್ತಿ, ಹೆಸರು ಶೀನಪ್ಪನಾಯಕ, ಹುಟ್ಟೂರು ಮಹಾರಾಷ್ಟ್ರದ ಪುಣೆಯಿಂದ 18ಮೈಲಿ ದೂರದಲ್ಲಿರುವ ಪುರಂದರಗಡ, ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಹಂಪಿ; ಶಿಷ್ಯರು ಸಿರಿಪುರಂದರವಿಠಲರು* (ಪತ್ನಿ–ಸರಸ್ವತೀಬಾಯಿ), ತಂದೆ ಪುರಂದರವಿಠಲರು (ಪುತ್ರಿ–ರುಕ್ಮಿಣೀಬಾಯಿ), ಗುರುಪುರಂದರವಿಠಲರು* (ಪುತ್ರ–ಗುರುರಾಯ/ಹೇಮಣದಾಸ), ವರದಪುರಂದರವಿಠಲರು* (ಪುತ್ರ ವರದಪ್ಪ/ಲಕ್ಷ್ಮಣದಾಸ), ಮಧ್ವಪತಿ/ಗುರುಮಧ್ವಪತಿ ವಿಠಲರು* (ಪುತ್ರ–ಗುರುಮಧ್ವರಾಯ/ಮಧ್ವಪತಿದಾಸ), ಅಭಿನವಪುರಂದರವಿಠಲರು* (ಪುತ್ರ?–ಅಪ್ಪಣ್ಣ ಭಾಗವತ); 703 ಕೀರ್ತನೆಗಳು, 261 ಉಗಾಭೋಗಗಳು, 72 ಸುಳಾದಿಗಳು ದೊರೆತಿವೆ. ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಹಾಗೂ ಬುಡುಬುಡಕೆ ಹಾಡುಗಳು ಸೇರಿವೆ (ಉದಾಹರಣೆಗೆ: ಊರದೇವರ ಮಾಡಬೇಕಣ್ಣ, ಮಾಡುಸಿಕ್ಕದಲ್ಲ, ಮುಳ್ಳುಕೊನೆಯ ಮೇಲೆ, ಜಯವದೆ ಜಯವದೆ ಈ ಮನೆತನಕ), ಒಟ್ಟು 4,25,000 ಕೃತಿಗಳನ್ನು ರಚಿಸಿದ್ದಾರೆಂದು ಪ್ರತೀತಿ; ಕಾಲವಾದದ್ದು ಪುಷ್ಯ ಅಮಾವಾಸ್ಯೆಯಂದು; ಹಂಪಿಯಲ್ಲಿರಬಹುದು. [51, 65, 99, 178, 165]

*ಮೇಲಿನ ವಿಷಯಗಳಲ್ಲಿ ಹೆಚ್ಚಿನ ಭಾಗ ಊಹಾಪೋಹಗಳೆಂದು ತಿಳಿದುಬರುತ್ತದೆ. ಕ್ರಿ.ಶ. 1526ರ ಫೆಬ್ರುವರಿ 24ರಂದು ದೊರೆ ಕೃಷ್ಣದೇವರಾಯ ಗುರುವ್ಯಾಸರಾಯರಿಗೆ ದಾನ ಕೊಟ್ಟ*

Rarest Archiver

*ವಿಚಾರವನ್ನು ತಿಳಿಸುವ ಕಮಲಾಪುರದ ತಾಮ್ರಶಾಸನವೊಂದು ಪುರಂದರದಾಸರ ಜೀವನದ ಬಗ್ಗೆ ಸ್ವಲ್ಪ ಬೆಳಕು ಚೆಲ್ಲುತ್ತದೆ. ಅದರ ಪ್ರಕಾರ ಪುರಂದರದಾಸರಿಗೆ ಲಕ್ಷ್ಮಣದಾಸ, ಹೇಬಣದಾಸ, ಮಧ್ವಪದಾಸ ಎಂಬ ಮೂವರು ಗಂಡು ಮಕ್ಕಳಿದ್ದರು. ಅವರು ಯಜುರ್ವೇದಿಗಳು ಮತ್ತು ವಸಿಷ್ಠಗೋತ್ರದವರು ಎನ್ನುವ ವಿಚಾರಗಳು ತಿಳಿಯುತ್ತವೆ. ಪುರಂದರದಾಸರ ಬಗ್ಗೆ ಚಾರಿತ್ರಿಕವಾಗಿ ಮತ್ತು ಅಧಿಕೃತವಾಗಿ ತಿಳಿಯುವ ವಿಷಯಗಳು ಇವಿಷ್ಟೆ. [ಎಪಿಗ್ರಾಫಿಕಾ ಇಂಡಿಕ ಸಂಪುಟ 21, ಪಿಪಿ. 139ಎಫ್‌ಎಫ್]*

126. **ಪೆತ್ತತಂದೆ(ಗುರು)ಗೋಪಾಲವಿಠಲ (ಕ್ರಿ.ಶ. 19ನೆಯ ಶತಮಾನ)** *ಇವರ ಪೀಳಿಗೆಯ ವಿವರಗಳು ಮೂರು ಕಡೆ ಬೇರೆ ಬೇರೆಯಾಗಿ ದೊರೆತಿವೆ; ಅನುಬಂಧ–1 ನೋಡಿ.* [99, 175, 22]

127. **ಪ್ರಸನ್ನ (ಕ್ರಿ.ಶ. 1899–1969) (ಆಶ್ರಮಕಾಲ 1940–69)** ವಿದ್ಯಾಪ್ರಸನ್ನ ತೀರ್ಥರು (ಪೂರ್ವಾಶ್ರಮದ ಹೆಸರು ತೆಕ್ಕಲೂರು ವೆಂಕಟನರಸಿಂಹಾಚಾರ್ಯ), ಆಶ್ರಮ ಗುರುಗಳು ವಿದ್ಯಾವಾರಿಧಿತೀರ್ಥರು, ಹುಟ್ಟೂರು ಮೈಸೂರು ಜಿಲ್ಲೆ ಟಿ. ನರಸೀಪುರ ತಾಲ್ಲೂಕಿನ ಸೋಸಲೆ, ಸೋಸಲೆ ವ್ಯಾಸರಾಜ ಮಠದ, ವ್ಯಾಸರಾಜರ ನಂತರ 25ನೆಯ ಪೀಠಾಧಿಪತಿಗಳು, ಕಾರ್ಯಕ್ಷೇತ್ರ ಬೆಂಗಳೂರು; 241 ಕೀರ್ತನೆಗಳು, 4 ಉಗಾಭೋಗಗಳು ದೊರೆತಿವೆ; ಬೃಂದಾವನಸ್ಥರಾದದ್ದು ಮಾರ್ಗಶಿರ ಶುಕ್ಲ ಪೌರ್ಣಿಮೆಯಂದು; ಸೋಸಲೆಯಲ್ಲಿ. [153]

128. **ಪ್ರಸನ್ನವೆಂಕಟ, ಪ್ರಸನ್ನವೆಂಕಟಕೃಷ್ಣ, ಪ್ರಸನ್ನವೆಂಕಟೇಶ (ಕ್ರಿ.ಶ ಸು. 1680–1752)** ಪ್ರಸನ್ನವೆಂಕಟದಾಸರು, ಸ್ವಪ್ನದಲ್ಲಿ ಶ್ರೀನಿವಾಸದೇವರೇ ಅಂಕಿತ ಅನುಗ್ರಹಿಸಿದಂತೆ ಭಾವನೆ, ಹೆಸರು ವೆಂಕಟೇಶ, ಹುಟ್ಟೂರು ಬಾಗಲಕೋಟೆ ಇರಬಹುದು, ಕಾರ್ಯಕ್ಷೇತ್ರ ಬಾಗಲಕೋಟೆ ಹಾಗೂ ಬಿಜಾಪುರ ತಾಲ್ಲೂಕಿನ ಕಾಖಂಡಕಿ; 428 ಕೀರ್ತನೆಗಳು, 20 ಉಗಾಭೋಗಗಳು, 9 ಸುಳಾದಿಗಳು, 1 ವೃತ್ತನಾಮ, 3 ಕೋಲುಹಾಡುಗಳು ದೊರೆತಿವೆ; ಕಾಲವಾದದ್ದು ಭಾದ್ರಪದ ಶುದ್ಧ ದ್ವಾದಶಿಯಂದು; ಬಾಗಲಕೋಟೆ ಜಿಲ್ಲೆ ಬಾದಾಮಿಯಲ್ಲಿರಬಹುದು. [49, 123, 166, 165]

129. **ಪ್ರಸನ್ನವೆಂಕಟವಿಠಲ (ಕ್ರಿ.ಶ. ಸು. 1825)** ಮಧ್ವಪತಿ/ಮಧ್ವವರದವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕುಂಭಕೋಣದ ವೆಂಕಟದಾಸರು; ಶಿಷ್ಯರು ವಿಜಯರಾಮಚಂದ್ರ ವಿಠಲರು*, ಗುರುಪ್ರಸನ್ನವೆಂಕಟವಿಠಲರು*, ವಿಜಯರಘುಪತಿವಿಠಲರು (ಲಕ್ಷ್ಮೀನಾರಾಯಣ ರಾಯರು); 24 ಕೀರ್ತನೆಗಳು ಮತ್ತು 3 ಸುಳಾದಿಗಳು ದೊರೆತಿವೆ. [108, 167, 175]

130. **ಪ್ರಸನ್ನಶ್ರೀನಿವಾಸ (ಕ್ರಿ.ಶ. ಸು. 1900–90)** ಗೋಪಾಲದಾಸರಿಂದ* ಸ್ವಪ್ನಾಂಕಿತ, ಹೆಸರು ಪ್ರಸನ್ನಶ್ರೀನಿವಾಸದಾಸರು, ಹುಟ್ಟೂರು ಸೂಲಪುರ ಗ್ರಾಮ (ಕಾವೇರಿ–ತಾಮ್ರಪರ್ಣಿ ನದಿಗಳ ಮಧ್ಯಪ್ರದೇಶ), ಅಂಚೆ ಕಛೇರಿಯಲ್ಲಿ ಕೆಲಸ, ಕಾರ್ಯಕ್ಷೇತ್ರ ಸೂಲಪುರ; ಶಿಷ್ಯರು ಗೋಪೀವಲ್ಲಭಗೋಪಾಲವಿಠಲರು, ಪ್ರಸನ್ನಗೋಪಿವಲ್ಲಭಕೃಷ್ಣಾಂಕಿತರು, ಪ್ರಸನ್ನಹಯವದನ

Rarest Archiver

ವಿಠಲರು, ಶ್ರೀಶ(ಶ್ರೀ)ಪ್ರಸನ್ನ ಭೂವರಾಹಾಂಕಿತರು; 163 ಕೀರ್ತನೆಗಳು, 10 ದೀರ್ಘಕೃತಿಗಳು ದೊರೆತಿವೆ. [125]

**131.** **ಪ್ರಹ್ಲಾದವರದ /ವರದಪ್ರಹ್ಲಾದ ಶ್ರೀಹರಿವಿಠಲ (ಕ್ರಿ.ಶ. 19–20ನೆಯ ಶತಮಾನವಿರಬಹುದು)** ಹೆಸರು ರಾಘವೇಂದ್ರರಾಯರು, ಮೈಸೂರು ಸರ್ಕಾರದ ಸರ್ವೇ ಇಲಾಖೆಯಲ್ಲಿ ಉದ್ಯೋಗ, ಕಾರ್ಯಕ್ಷೇತ್ರ ಬೆಂಗಳೂರು; 7 ಕೀರ್ತನೆಗಳು ದೊರೆತಿವೆ. [39, 147]

**132.** **ಪ್ರಾಣನಾಥವಿಠಲ (ಅಂಕಿತ ಪೂರ್ವದಲ್ಲಿ ಶೇಷವಿಠಲ) (ಕ್ರಿ.ಶ. 1865–1924)** ತಂದೆ ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಶೇಷಗಿರಿ, ಬಾಗೇಪಲ್ಲಿ ಶೇಷದಾಸರೆಂದು ಪರಿಚಿತರು, ಹುಟ್ಟೂರು ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕಿನ ಇರಕಸಂದ್ರ, ಕಾರ್ಯಕ್ಷೇತ್ರ ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ; ಶಿಷ್ಯರು ವೆಂಕೋಬಾಚಾರ್ಯ, ಶ್ರೀನಿಧಿಮೋಹನವಿಠಲ (ನಂದಗುಡಿ ಶ್ಯಾಮದಾಸ); 32 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಭಾದ್ರಪದ ಶುದ್ಧ ಚತುರ್ದಶಿಯಂದು; ಚಿಕ್ಕಬಳ್ಳಾಪುರ ಜಿಲ್ಲೆ ಚಿಂತಾಮಣಿಯಲ್ಲಿ. [86]

**133.** **ಪ್ರಾಣಪತಿವಿಠಲ (ಕ್ರಿ.ಶ. 19ನೆಯ ಶತಮಾನ)** ವಾದಿರಾಜರ ಕುರಿತು 2 ಕೀರ್ತನೆಗಳು ದೊರೆತಿವೆ. [76, 186]

**134.** **ಪ್ರಾಣೇಶವಿಠಲ (ಕ್ರಿ.ಶ. 1736–1822)** ಪ್ರಾಣೇಶದಾಸರು, ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಯೋಗೀಂದ್ರರಾಯರು, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು, ಕಾರ್ಯಕ್ಷೇತ್ರ ಲಿಂಗಸುಗೂರು; ಶಿಷ್ಯರು ಪುತ್ರ ಗುರುಪ್ರಾಣೇಶವಿಠಲರು*, ಲಕ್ಷ್ಮೀಶವಿಠಲರು*, ವೇದವ್ಯಾಸಾಂಕಿತರು, ವೆಂಕಟೇಶವಿಠಲರು*; 258 ಕೀರ್ತನೆಗಳು, 18 ಉಗಾಭೋಗಗಳು, 3 ಸುಳಾದಿಗಳು, 2 ವೃತ್ತನಾಮಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ(ಉದಾಹರಣೆಗೆ "ಬಾಣವದನ ಸಲಹೋ", "ಸಂವತ್ಸರಂಬರಧರ ನತಜನಪರಿಪಾಲ"); ಕಾಲವಾದದ್ದು ಆಶ್ವೀಜ ಶುದ್ಧ ಸಪ್ತಮಿಯಂದು; ಲಿಂಗಸುಗೂರಿನಲ್ಲಿ. [99, 126, 181, 112]

**135.** **ಬಾದರಾಯಣವಿಠಲ–ನಂಜನಗೂಡು (ಕ್ರಿ. ಶ. ಸು. 1775)** ಜಗನ್ನಾಥದಾಸರಿಂದ ಅಂಕಿತಪ್ರಾಪ್ತಿಯಾಗಿರಬಹುದು, ಇದರ ಬಗ್ಗೆ ಅನುಬಂಧ–3 ನೋಡಿ; ಇವರದೇ ಇರಬಹುದಾದ 17 ಕೀರ್ತನೆಗಳು, 1 ವೃತ್ತನಾಮ ದೊರೆತಿವೆ. [73, 108, 110]

**136.** **ಬಾದರಾಯಣವಿಠಲ (ಕ್ರಿ.ಶ. 19ನೆಯ ಶತಮಾನ)** ವಿಜಯರಾಮಚಂದ್ರವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಬೆಂಗಳೂರು ವೇದವ್ಯಾಸಾಚಾರ್ಯ. [166]

**137.** **ಬಾದರಾಯಣವಿಠಲ** ಹೆಸರು ವೇದವ್ಯಾಸಾಚಾರ್ಯ, ಹರಪನಹಳ್ಳಿ ಶ್ರೀಪತಿವಿಠಲರಿಂದ* ಅಂಕಿತಪ್ರಾಪ್ತಿಯೆಂದು ಹೇಳಲಾಗಿದೆ. ಇದು *ಸರಿಯೆನಿಸುವುದಿಲ್ಲ; ಇದರ ಬಗ್ಗೆ ಅನುಬಂಧ–3 ನೋಡಿ.* [97]

Rarest Archive

138. **ಬಾಲಕೃಷ್ಣವಿಠಲ (ಕ್ರಿ.ಶ. 1835/1840–1910)** ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಬಾಲಕೃಷ್ಣರಾಯರು, ಹುಟ್ಟೂರು ಮತ್ತು ಕಾರ್ಯಕ್ಷೇತ್ರ ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ; ಶಿಷ್ಯರು ಪುತ್ರ–ಶ್ರೀಕಾಂತ/ಲಕ್ಷ್ಮೀಕಾಂತವಿಠಲರು*, ಜಯರಾಯರು; (2 ಕೀರ್ತನೆಗಳು); ಕಾಲವಾದದ್ದು ಆಶ್ವೀಜ ಬಹುಳ ದಶಮಿಯಂದು; ಬೆಂಗಳೂರಿನಲ್ಲಿ. [22, 92, 97, 108, 175]

139. **ಬಾಳೆಹಳ್ಳಿ ಒಡೆಯ (ಕ್ರಿ.ಶ. 16ನೆಯ ಶತಮಾನ)** ಬಾಳೆಹಳ್ಳಿ ರುದ್ರಾಕ್ಷಿಮಠದ ಸ್ವಾಮಿ, ಸೋದೆ ವಾದಿರಾಜತೀರ್ಥರಿಂದ (ಹಯವದನ*) ಅಂಕಿತಪ್ರಾಪ್ತಿ; 1 ಕೀರ್ತನೆ ದೊರೆತಿದೆ. [186, 22]

140. **ಭವತಾರಕ (ಕ್ರಿ.ಶ. 19ನೆಯ ಶತಮಾನದ ಪೂರ್ವಾರ್ಧ)** ಹೆಸರು ನರಸಪ್ಪ ಕುಲಕರ್ಣಿ, ಶಾನುಭೋಗರು, ಕಾರ್ಯಕ್ಷೇತ್ರ ಧಾರವಾಡ ಜಿಲ್ಲೆ ಕುಂದಗೋಳ ತಾಲ್ಲೂಕಿನ ಮಲ್ಲಿಗವಾಡ, ಅದ್ವೈತಿಗಳು; 69 ಕೀರ್ತನೆಗಳು ದೊರೆತಿವೆ. [173]

141. **ಭಾಗ್ಯನಿಧಿವಿಠಲ (ಕ್ರಿ.ಶ. ಸು. 1830)** ಅಭಿನವಜನಾರ್ಧನವಿಠಲರು* ಅಥವಾ ಶ್ರೀದವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸವಣೂರು ದೂರ್ವಾಸರಾಯರು, ಹುಟ್ಟೂರು ಹಾವೇರಿ ಜಿಲ್ಲೆ ಸವಣೂರು, ಕಾರ್ಯಕ್ಷೇತ್ರ ಬೆಂಗಳೂರು; ಶಿಷ್ಯರು ರಾಮ/ಶ್ರೀರಾಮ/ ವಿಜಯರಾಮವಿಠಲರು*; 3 ಕೀರ್ತನೆಗಳು ದೊರೆತಿವೆ. *19ಅ/196ರ ಪ್ರಕಾರ ಗುರುರಾಮ ವಿಠಲರು ಇವರ ಶಿಷ್ಯರು.* [8, 97, 98, 175, 78, 22]

142. **ಭೀಮಾಶಂಕರ (ಕ್ರಿ.ಶ. 1660–1731)** ಗುರುಗಳು ಗುರಪ್ಪಯ್ಯನವರು, ಹೆಸರು ಕುಲಕರ್ಣಿ ಸಂಕಣ್ಣ, ಆಶ್ರಮನಾಮ ಶಂಕರಾನಂದ ಸರಸ್ವತಿ, ಹುಟ್ಟೂರು ಬಿಜಾಪುರ ಜಿಲ್ಲೆ ಸಿಂದಗಿ, ಆಧ್ಯಾತ್ಮಜೀವನ, ಕಾರ್ಯಕ್ಷೇತ್ರ ಸಿಂದಗಿ, ಸಿಂದಗಿ ಸಂಪ್ರದಾಯದವರು; 26 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಆಶ್ವೀಜ ಬಹುಳ ದ್ವಿತೀಯೆದಂದು; ಸಿಂದಗಿಯಲ್ಲಿ. [173]

143. **ಭೀಮೇಶಕೃಷ್ಣ (ಕ್ರಿ.ಶ. 1823–1903)** ಹರಪನಹಳ್ಳಿ ಭೀಮವ್ವ, ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನಿಂದ (ನಾರದರೆಂದು ಭಾವನೆ) ಅಂಕಿತಪ್ರಾಪ್ತಿ, ಹೆಸರು ಕಮಲಾಕ್ಷಿ, ಹುಟ್ಟೂರು ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ನಾರಾಯಣದೇವರ ಕೆರೆ/ಡೇರೆ, ಕಾರ್ಯಕ್ಷೇತ್ರ ದಾವಣಗೆರೆ ಜಿಲ್ಲೆ ಹರಪನಹಳ್ಳಿ; 143 ಕೀರ್ತನೆಗಳು, 6 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಪುಷ್ಯ ಶುದ್ಧ ದ್ವಾದಶಿ/ತ್ರಯೋದಶಿಯಂದು; ಹರಪನಹಳ್ಳಿಯಲ್ಲಿರಬಹುದು. [49, 171, 176]

144. **ಭೀಮೇಶವಿಠಲ (ಕ್ರಿ.ಶ. ಸು. 1880)** ಜಗನ್ನಾಥದಾಸರ ಪೀಳಿಗೆ, ಶ್ರೀದವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಹೊನ್ನಾಳಿ ಭೀಮ/ಭೀಮೇಶದಾಸರು, ಶಿಷ್ಯರು ಗುರುರಾಮವಿಠಲರು*; 6 ಕೀರ್ತನೆಗಳು ದೊರೆತಿವೆ. [76, 164, 39, 78, 97, 108, 175]

Rarest Archiver

145. **ಭುಜಂಗಶಯನ (ಕ್ರಿ.ಶ. 1904–69)** ಶ್ಯಾಮಸುಂದರವಿಠಲರ* ಪ್ರೇರಣೆಯಿಂದ ಅಂಕಿತಸ್ವೀಕಾರ, ಹೆಸರು ಭುಜಂಗಶಯನ, ಹುಟ್ಟೂರು ಚಿತ್ರದುರ್ಗದ ಹಿರಿಯೂರಿನ ಆದಿವಾಲಾ ಗ್ರಾಮ, ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಗೋನವಾರದಲ್ಲಿ ನೌಕರಿಯಲ್ಲಿದ್ದವರು; 400 ಕೀರ್ತನೆಗಳನ್ನು ರಚಿಸಿರುವರೆಂದು ತಿಳಿದು ಬಂದರೂ ಉಪಲಬ್ಧವಿರುವುದು 32 ಮಾತ್ರ ಎಂದು ಹೇಳಲಾಗಿದೆ; ಕಾಲವಾದದ್ದು ಬಳ್ಳಾರಿಯಲ್ಲಿ. [194]

146. **ಭೂಪತಿವಿಠಲ (ಕ್ರಿ.ಶ. 1896–1988)** ತಾನಾಗಿ ಹೊಮ್ಮಿದ ಅಂಕಿತ, ಹೆಸರು ರಾಮಾಚಾರ್ಯ, ಹುಟ್ಟೂರು ಬಿಜಾಪುರ ತಾಲ್ಲೂಕಿನ ಕಾಖಂಡಕಿ, ಕಾರ್ಯಕ್ಷೇತ್ರ ಬಾಗಲಕೋಟೆ ಜಿಲ್ಲೆ ಬಿಳಗಿ ತಾಲ್ಲೂಕಿನ ಗಲಗಲಿ; 50 ಕೀರ್ತನೆಗಳು, 1 ಖಂಡಕಾವ್ಯ ದೊರೆತಿವೆ; ಕಾಲವಾದದ್ದು ಗಲಗಲಿಯಲ್ಲಿ. [158]

147. **ಮಧ್ವಪತಿವಿಠಲ, ಗುರುಮಧ್ವಪತಿವಿಠಲ (ಕ್ರಿ.ಶ. ಸು. 1560)** ತಂದೆಯವರಾದ ಪುರಂದರದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಗುರುಮಧ್ವರಾಯ/ಮಧ್ವಪತಿದಾಸ, ಮುಂದೆ ಇವರೇ ವಿಜಯದಾಸರಾಗಿ ಹುಟ್ಟಿದವರೆಂದು ನಂಬಿಕೆ; ಶ್ರೀಪಾದರಾಯರನ್ನು ಕುರಿತ 1 ಕೀರ್ತನೆ ಮತ್ತು ವ್ಯಾಸರಾಯರನ್ನು ಕುರಿತ 2 ಕೀರ್ತನೆಗಳು ದೊರೆತಿವೆ. [108, 161, 175]

148. **ಮಧ್ವಪತಿಮಧ್ವವರದವಿಠಲ (ಕ್ರಿ.ಶ. 1753–1833)** ಮೋಹನದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಚಿಕ್ಕೇರಹಳ್ಳಿ ತ(ತಿ)ಮ್ಮಣ್ಣದಾಸ, ಅರ್ಚಕರು, ಕಾರ್ಯಕ್ಷೇತ್ರ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಚಿಕ್ಕೇರಹಳ್ಳಿ; ಶಿಷ್ಯರು ಪ್ರಸನ್ನವೆಂಕಟವಿಠಲ*; 5 ಕೀರ್ತನೆಗಳು ದೊರೆತಿವೆ [108, 166, 167, 175]

149. **ಮನೋಹರವಿಠಲ (ನಿರ್ಯಾಣ ಕ್ರಿ.ಶ. ಸು. 1825 ಇರಬಹುದು)** ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಬುದ್ದಿಣ್ಣೆ(ನ್ನಿ) ನಾರಾಯಣಪ್ಪ/ಮೋನಪ್ಪ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಬುದ್ದಿಣ್ಣೆ(ನ್ನಿ), ಪಂಡಿತರು. ಇವರು ಜನಾರ್ದನವಿಠಲಾಂಕಿತರಾದ ತಿರುಮಲರಾಯರ ಪುತ್ರರಿರಬಹುದು; ಇವರದೇ ಇರಬಹುದಾದ 2 ಕೀರ್ತನೆಗಳು, 2 ಉಗಾಭೋಗಗಳು ದೊರೆತಿವೆ; ಇವರ ಕಾಲವನ್ನು *(1)ಕ್ರಿ.ಶ. 1682–1762, ಗ್ರಂಥ [194] (2)1703–72, ಗ್ರಂಥ [166] ಎಂದು ಹೇಳಲಾಗಿದೆ. ಹಾಗೆಯೇ ಜಗನ್ನಾಥದಾಸರ ಹರಿಕಥಾಮೃತಸಾರಕ್ಕೆ ಫಲಶ್ರುತಿ ಬರೆದಿದ್ದಾರೆಂದು ಹೇಳಲಾಗಿದೆ. ಜಗನ್ನಾಥದಾಸರು ಹರಿಕಥಾಮೃತಸಾರ ಗ್ರಂಥವನ್ನು ಪೂರ್ಣಗೊಳಿಸಿದ್ದು ಕ್ರಿ.ಶ.1796ರಲ್ಲಿ ಎಂದು ತಿಳಿದುಬರುವುದರಿಂದ, ಈ ಎರಡೂ ಕಾಲಗಳು ಸರಿಯಲ್ಲವೆನಿಸುತ್ತದೆ. ಮನೋಹರವಿಠಲರು ಕ್ರಿ.ಶ. ಸುಮಾರು 1800ರ ವರೆಗೆ ಜೀವಂತರಾಗಿದ್ದಿರಬಹುದು.* [22, 97, 111, 166, 194, 147, 164, 165]

150. **ಮಹಿಪತಿ, ದೀನಮಹಿಪತಿ (ಒಟ್ಟು 14 ಅಂಕಿತಗಳು) (ಕ್ರಿ.ಶ. 1611–81)** ಮಹಿಪತಿದಾಸರು, ಗುರುಗಳು ಭಾಸ್ಕರ ಸ್ವಾಮಿಗಳು, ಹೆಸರು ಗುರುರಾಯ, ಹುಟ್ಟೂರು ಬಿಜಾಪುರ ತಾಲ್ಲೂಕಿನ

Rarest Archiver

ಕಾಖಂಡಕಿ, ರಾಜದರ್ಬಾರಿನಲ್ಲಿ ಸೇವೆ, ಕಾರ್ಯಕ್ಷೇತ್ರ ಕಾಖಂಡಕಿ; ಶಿಷ್ಯರು ಮಹಿಪತಿನಂದನಾಂಕಿತರು* (ಪುತ್ರ ಕಾಖಂಡಕಿ ಕೃಷ್ಣದಾಸ); ಕನ್ನಡದಲ್ಲಿ 702 ಕೀರ್ತನೆಗಳು, 1 ಮಿಶ್ರಭಾಷೆಯ ಕೀರ್ತನೆ, 6 ಉಗಾಭೋಗಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ರಾಶಿಯ ಮಸ್ತಕನಳಿಯನಯ್ಯನಯ್ಯನೇ", "ನಕ್ಷತ್ರರಮಣನಯ್ಯನಿಗೊಲಿದು ಶರವನಿತ್ತೆ"), ಇವಲ್ಲದೇ ಮರಾಠಿ, ದಖಣಿ, ಉರ್ದು ಮತ್ತು ಮಿಶ್ರಭಾಷೆಗಳಲ್ಲಿ 89 ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ; ಕಾಲವಾದದ್ದು ಕಾರ್ತೀಕ ಅಮಾವಾಸ್ಯೆಯಂದು; ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾಲ್ಲೂಕಿನ ಕೊಲ್ಹಾರದಲ್ಲಿ. [29, 51, 165]

151. **ಮಹಿಪತಿನಂದನ, ಮಹಿಪತಿಸುತ (ಒಟ್ಟು 21 ಅಂಕಿತಗಳು) (ಕ್ರಿ.ಶ. ಸು. 1673–1729)** ತಂದೆಯವರಾದ ಮಹಿಪತಿದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಕಾಖಂಡಕಿ ಕೃಷ್ಣದಾಸ, ಹುಟ್ಟೂರು ಬಿಜಾಪುರ ತಾಲ್ಲೂಕಿನ ಕಾಖಂಡಕಿ; 710 ಕೀರ್ತನೆಗಳು, 38 ಉಗಾಭೋಗಗಳು, 1 ಸುಳಾದಿ, 1 ವೃತ್ತನಾಮ ದೊರೆತಿವೆ; ಕಾಲವಾದದ್ದು ಕಾಖಂಡಕಿಯಲ್ಲಿ. ಇವರ ವಂಶಸ್ಥರು ರಚಿಸಿರುವ ಕೀರ್ತನೆಗಳು ದೊರೆತಿವೆ, ಅವುಗಳೆಂದರೆ ಶ್ರೀಗುರುಕೃಷ್ಣ–1 ಕೀರ್ತನೆ, ಗುರುಕೃಷ್ಣ–2 ಕೀರ್ತನೆಗಳು, ಗಿರಿಧರಸುತ–1 ಕೀರ್ತನೆ, ಗುರುಶ್ರೀಪತಿ–1 ಕೀರ್ತನೆ, ಗಿರಿಧರಕಂದ–1 ಕೀರ್ತನೆ, ಶ್ರೀಪತಿತನಯ–1 ಕೀರ್ತನೆ, ತಾತಮಹಿಪತಿ–1 ಕೀರ್ತನೆ, ಕೃಷ್ಣ–1 ಕೀರ್ತನೆ. [27]

152. **ಮಾಂಗಿರೀಶ (ಕ್ರಿ.ಶ. 1886–1984)** ಆಸೂರಿ ರಾಮಸ್ವಾಮಿ ದಾಸರು, ಮಾವಿನಕೆರೆ (ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕು) ರಂಗನಾಥನ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ರಾಮಸ್ವಾಮಿ ಅಯ್ಯಂಗಾರ್, ಹುಟ್ಟೂರು ಹಾಸನ ಜಿಲ್ಲೆ ಅರಕಲಗೂಡು ತಾಲ್ಲೂಕಿನ ಕೇರಳಾಪುರ, ಸರ್ಕಾರೀ ಆಡಿಟರ್, ಶ್ರೀವೈಷ್ಣವರು; 446 ಕೀರ್ತನೆಗಳು ದೊರೆತಿವೆ. [7]

153. **ಮಾಧವವಿಠಲ (ಕ್ರಿಶ. ಸು. 1840)** ಕಮಲಾಪತಿವಿಠಲರಿಂದ ಅಂಕಿತಪ್ರಾಪ್ತಿ, ಹೆಸರು ಜಟ್ಟಿ/ಜಟ್ಟರ ವೆಂಕಟದಾಸರು, ಶಿಷ್ಯರು ನಾರಾಯಣವಿಠಲರು(ಕೋಟಕೋಡ ವೆಂಕಟರಾವ್), ಶ್ರೀರಾಮವಿಠಲರು(ಹೈದರಾಬಾದ ಸಿದ್ಧಿ ವೆಂಕಟರಾವ್); 1 ಉಗಾಭೋಗ ದೊರೆತಿದೆ. [87, 108, 178, 165]

154. **ಮಾನನಿಧಿವಿಠಲ, ಮಾನಿಧಿವಿಠಲ (ಕ್ರಿ.ಶ. 1809–84)** ಹೆಸರು ಮೈಸೂರು ವೆಂಕಟರಮಣಾಚಾರ್ಯರು, ಕಾರ್ಯಕ್ಷೇತ್ರ ಮೈಸೂರು; 8 ಕೀರ್ತನೆಗಳು ದೊರೆತಿವೆ. [158]

155. **ಮಾರುತಿ ಒಡೆಯ (ಕ್ರಿ.ಶ. ಸು 1850)** ವಿಜಯರಾಮಚಂದ್ರವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಚೇಚಮ್ಮ ಶೇಷಕ್ಕ, ಕಾರ್ಯಕ್ಷೇತ್ರ ಮೈಸೂರು ಕಟ್ಟೆಮನೆ. [166, 168]

Rarest Archiver

**156. ಮುದ್ದುಮೋಹನವಿಠಲ (ಕ್ರಿ.ಶ. ಸು. 1830–98)** ಶ್ರೀವರವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ದೊಡ್ಡಬಳ್ಳಾಪುರ ರಾಘವೇಂದ್ರಪ್ಪ, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ, ಕಾರ್ಯಕ್ಷೇತ್ರ ದೊಡ್ಡಬಳ್ಳಾಪುರ; ಶಿಷ್ಯರು ಕರಿವರ/ಕರಿವರದ ವಿಠಲರು*, ಕರುಣಾಕರವಿಠಲರು(ರಾಘವೇಂದ್ರದಾಸರು), ಜ್ಞಾನದಾಯಕವಿಠಲರು (ವೆಂಕಟದಾಸರು), ಪರಮಪಾವನವಿಠಲರು(ಸುಬ್ಬಣ್ಣದಾಸರು), ಬಾಲಕೃಷ್ಣವಿಠಲರು*, ವರದವಿಜಯ/ವರಜಯವಿಠಲರು*, ವಾಗೀಶವಿಠಲರು(ಬಾಳಾಜಿರಾಯರು), ವಾಸುಕೀಶಯನವಿಠಲರು (ಗುಂಡೂರಾವ್), ವಿಜಯಮೋಹನವಿಠಲರು, ಹಯಗ್ರೀವವಿಠಲರು(ತಿಮ್ಮಪ್ಪದಾಸರು/ಕೃಷ್ಣದಾಸರು), ತಂದೆ ಮುದ್ದುಮೋಹನವಿಠಲರು*, ಅಚಿಂತ್ಯಾದ್ಭುತವಿಠಲರು (ಸುಬ್ಬರಾಯರು), ಗರುಡವಾಹನವಿಠಲರು*, ವಾಮನವಿಠಲರು, ಗೋಪೀನಾಥವಿಠಲರು, ಒಡೆಯಮೋಹನವಿಠಲರು, ವಿಜಯಸಾರಥಿವಿಠಲರು, ಶ್ರೀರಮಣವಿಠಲರು, ನಾರಸಿಂಹಾಂಕಿತರು*; 4 ಕೀರ್ತನೆಗಳು, 11 ಉಗಾಭೋಗಗಳು, 1 ಸುಳಾದಿ ದೊರೆತಿವೆ, ಕಾಲವಾದದ್ದು ಕಾರ್ತೀಕ ಬಹುಳ ಚತುದರ್ಶಿಯಂದು; ದೊಡ್ಡಬಳ್ಳಾಪುರದಲ್ಲಿ. [86, 92, 97, 166, 175, 165]

**157. ಮುದ್ದುವಿಠಲ (ಕ್ರಿ.ಶ. ಸು. 1700)** ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಮೀ(ಮಾ)ನಪ್ಪದಾಸರು; 3 ಕೀರ್ತನೆಗಳು ದೊರೆತಿವೆ. [77, 78]

**158. ಮೋದವಿಠಲ (ಕ್ರಿ.ಶ. 1820–1906)** ಗುರುಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಘಪ್ಪ, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಕುಪ್ಪಿಗುಡ್ಡ, ಕುಲಕರ್ಣಿಕೆ, ಕಾರ್ಯಕ್ಷೇತ್ರ ಕುಪ್ಪಿಗುಡ್ಡ; ಶಿಷ್ಯರು ಸುಂದರವಿಠಲರು (ಗೌಡೂರ ರಾಘಪ್ಪ); (14 ಕೀರ್ತನೆಗಳು); ಕಾಲವಾದದ್ದು ಆಷಾಢ ಪೌರ್ಣಿಮೆಯಂದು. [22, 175, 194]

**159. ಮೋಹನವಿಠಲ (ಕ್ರಿ.ಶ. 1730–1815)** ಮೋಹನದಾಸರು, ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಮೋಹನ, ಇವರು ವಿಜಯದಾಸರ ಸಾಕು ಮಗ, ಹುಟ್ಟೂರು ಆಂಧ್ರಪ್ರದೇಶದ ಚಿಪ್ಪಗಿರಿ ಅಥವಾ ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಆನೆಗುಂದಿ, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರವಿ; ಶಿಷ್ಯರು ಪುತ್ರ–ತಂದೆಮೋಹನವಿಠಲರು*, ವಿರಜಿ ಪ್ರಾಣೇಶವಿಠಲರು, ಮಧ್ವಪತಿ/ಮಧ್ವವರದವಿಠಲರು*; 56 ಕೀರ್ತನೆಗಳು, 2 ಉಗಾಭೋಗಗಳು, 3 ಸುಳಾದಿಗಳು ದೊರೆತಿವೆ; ಅಲ್ಲದೆ ಕೋಲುಹಾಡು ಇವರ ವಿಶಿಷ್ಟ ರಚನೆ; ಕಾಲವಾದದ್ದು ಜೇಷ್ಠ ಶುಕ್ಲ ಶಷ್ಠಿಯಂದು; ಚೀಕಲಪರವಿಯಲ್ಲಿ. [87, 189]

**160. ರಂಗ (ಕ್ರಿ.ಶ. ಸು. 1830–1910)** ಹೆಸರು ರಂಗದಾಸ, ಹುಟ್ಟೂರು ತುಮಕೂರು ತಾಲ್ಲೂಕಿನ ಉರುಡುಗೆರೆ ಹೋಬ್ಳಿ ಮಾದಗೋನಹಳ್ಳಿ(ಮಾದಗೊಂಡನಹಳ್ಳಿ), ಅರ್ಚಕರು, ಕಾರ್ಯಕ್ಷೇತ್ರ ಮಾದಗೋನಹಳ್ಳಿ, ಶ್ರೀವೈಷ್ಣವರು; 17 ಕೀರ್ತನೆಗಳು ದೊರೆತಿವೆ. [75]

Rarest Archiver

**161. ರಂಗವಿಠಲ (ಕ್ರಿ.ಶ. 1409–1504)** ಶ್ರೀಪಾದರಾಜರು, ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ, ಆಶ್ರಮ ಗುರುಗಳು ಸ್ವರ್ಣವರ್ಣತೀರ್ಥರು, ಹುಟ್ಟೂರು ರಾಮನಗರ ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರು, ಪೀಠಾಧಿಪತಿಗಳು, ಕಾರ್ಯಕ್ಷೇತ್ರ ಕೋಲಾರ ಜಿಲ್ಲೆ ಮುಳಬಾಗಿಲು; ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರೆಂದು ಮಾನ್ಯರಾಗಿದ್ದಾರೆ; ಭ್ರಮರಗೀತೆ, ವೇಣುಗೀತೆ, ಗೋಪೀಗೀತೆಯಂಥಹ ವಿಶೇಷ ಕೃತಿಗಳನ್ನು ರಚಿಸಿದ್ದಾರೆ, ಒಂದು ಅಪರೂಪ ಕೀರ್ತನೆಯೂ ಸೇರಿ 80 ಕೀರ್ತನೆಗಳು, 17 ಉಗಾಭೋಗಗಳು, 3 ಸುಳಾದಿಗಳು, 1 ವೃತ್ತನಾಮ, 1 ದಂಡಕ ದೊರೆತಿವೆ, (133 ಸುಳಾದಿಗಳು); ಬೃಂದಾವನಸ್ಥರಾದದ್ದು ಜ್ಯೇಷ್ಠ ಶುದ್ಧ ಚತುರ್ದಶಿಯಂದು; ಮುಳಬಾಗಿಲಿನಲ್ಲಿ. [22, 161, 187, 160]

**162. ರಂಗಸ್ವಾಮಿದಾಸ (ಕ್ರಿ.ಶ. 1868–ಸು. 1941)** ತುಳಸಿರಾಮದಾಸರಿಂದ* ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು ಮಳಿಗೆ ರಂಗಸ್ವಾಮಿ, ಹುಟ್ಟೂರು ಕೋಲಾರ ಜಿಲ್ಲೆ, ಮುಳಬಾಗಿಲು; ಮುಳಬಾಗಿಲಿನ ಗಾಣಿಗ ಶೆಟ್ಟಿ ಮತಸ್ಥರು, ಶ್ರೀವೈಷ್ಣವ ಮತದ ಅನುಯಾಯಿಗಳಿರಬಹುದು; 15 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಮುಳಬಾಗಿಲಿನಲ್ಲಿ. [95]

**163. ರಂಗೇಶವಿಠಲ (ಕ್ರಿ.ಶ. 1875–1954)** ತಂದೆ ಮುದ್ದುಮೋಹನ ವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸಂಜೀವರಾಯರು, ಹುಟ್ಟೂರು ತುಮಕೂರು ತಾಲ್ಲೂಕಿನ ಅರಕೆರೆ, ಹಲವಾರು ವೃತ್ತಿಗಳಲ್ಲಿದ್ದವರು, ಕಾರ್ಯಕ್ಷೇತ್ರ ಅರಕೆರೆ; 104 ಕೀರ್ತನೆಗಳು, 12 ಉಗಾಭೋಗಗಳು ದೊರೆತಿವೆ. [92]

**164. ರಘುತಿಲಕ (ಆಶ್ರಮಕಾಲ ಕ್ರಿ.ಶ. 1669–1714)** ರಘುವರ್ಯತೀರ್ಥರು, ಪಲಿಮಾರು ಮಠದ 20ನೆಯ ಪೀಠಸ್ಥರು, ಆಶ್ರಮ ಗುರುಗಳು ರಾಮಭದ್ರತೀರ್ಥರು; 2 ಕೀರ್ತನೆಗಳು ದೊರೆತಿವೆ. [136]

**165. ರಘುಪತಿ (ಆಶ್ರಮಕಾಲ ಕ್ರಿ.ಶ. 1324–33)** ನರಹರಿತೀರ್ಥರು, ಆಶ್ರಮ ಗುರುಗಳು ಆನಂದತೀರ್ಥರು (ಮಧ್ವಾಚಾರ್ಯರು), ಪೂರ್ವಾಶ್ರಮದ ಹೆಸರು ಸ್ವಾಮಿಶಾಸ್ತ್ರಿ, ಸ್ಥಳ ಗಂಜಾಂ, 3 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ಪುಷ್ಯ ಬಹುಳ ಸಪ್ತಮಿಯಂದು; ಬಳ್ಳಾರಿ ಜಿಲ್ಲೆ ಹೊಸಪೇಟ ತಾಲ್ಲೂಕಿನ ಹಂಪಿಯಲ್ಲಿರುವ ಚಕ್ರತೀರ್ಥದ ಬಳಿ ತುಂಗಭದ್ರಾ ನದಿಯ ತಟದಲ್ಲಿ. [84]

**166. ರಘುಪತಿವಿಠಲ (ಕ್ರಿ.ಶ. 1730–1815)** ವೈರಾಗ್ಯಶಾಲಿ ತ(ತಿ)ಮ್ಮಣ್ಣರೆಂದು ಪರಿಚಿತರು, ವ್ಯಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಘವೇಂದ್ರಾಚಾರ್ಯ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು, ಕಾರ್ಯಕ್ಷೇತ್ರ ಕಲ್ಲೂರು; ಶಿಷ್ಯರು ಶ್ರೀನಿವಾಸ ಭೂವರಾಹರಘುಪತಿವಿಠಲರು*, ವರದಗುರುಮುದ್ದುಕೃಷ್ಣಾಂಕಿತರು* ವಿಜಯರಘುಪತಿ

Rarest Archiver

ಅಂಕಿತರು; 3 ಕೀರ್ತನೆಗಳು, 5 ಉಗಾಭೋಗಗಳು, 2 ಸುಳಾದಿಗಳು ದೊರೆತಿವೆ, (22 ಸುಳಾದಿಗಳು. [22, 87, 166, 175, 194]

167. **ರಘುಪತಿವಿಠಲ (ಕ್ರಿ.ಶ. 19ನೆಯ ಶತಮಾನ)** ಹೆಸರು ದಿನ್ನಿ ರಾಘಪ್ಪನವರು, ಪಾಲಮಾರ ರಾಘವೇಂದ್ರದಾಸರೆಂದೂ, ಯಜಮಾನರೆಂದೂ ಪರಿಚಿತರು; ಶಿಷ್ಯರು: ಸಿರಿ(ಶಿರಿ) ಗೋವಿಂದವಿಠಲರು*; (4 ಕೀರ್ತನೆಗಳು) [22]

168. **ರಘುರಾಮವಿಠಲ (ಕ್ರಿ.ಶ. 1890–1970)** ಹೆಸರು ಸುಬೋಧ ರಾಮರಾಯರು, ಹುಟ್ಟೂರು ಚಿಕ್ಕಮಗಳೂರು, ಮುದ್ರಕರು, ಕಾರ್ಯಕ್ಷೇತ ಬೆಂಗಳೂರು; ಕರ್ನಾಟಕ ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟನೆಗಳಿಗೆ ದುಡಿದವರು; 15 ಕೀರ್ತನೆಗಳು ದೊರೆತಿವೆ. ಇವಲ್ಲದೇ ಅವರ ವಂಶಸ್ಥರಲ್ಲಿ ಇನ್ನೂ 36 ಕೀರ್ತನೆಗಳು ಇವೆಯೆಂದು ತಿಳಿದುಬಂದಿದೆ; ಕಾಲವಾದದ್ದು ಫಾಲ್ಗುಣ ಶುದ್ಧ ದ್ವಾದಶಿಯಂದು; ಬೆಂಗಳೂರಿನಲ್ಲಿ. [14 ಮತ್ತು ವಂಶಸ್ಥರಿಂದ]

169. **ರಮಾಕಾಂತವಿಠಲ (ಕ್ರಿ.ಶ. 1906–84)** ತಂದೆಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಚಳ್ಳಕೆರೆ ಕೃಷ್ಣರಾಯರು, ಹುಟ್ಟೂರು ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ, ರೈಲ್ವೆ ನೌಕರರು; 86 ಕೀರ್ತನೆಗಳು, 3 ಉಗಾಭೋಗಗಳು, 1 ಸುಳಾದಿ ದೊರೆತಿವೆ; ಕಾಲವಾದದ್ದು ಪುಷ್ಯ ಬಹುಳ ಏಕಾದಶಿಯಂದು. [131]

170. **ರಮಾಪತಿವಿಠಲ (ಮೊದಲ ಅಂಕಿತ ವೆಂಕಟ) (ಕ್ರಿ.ಶ. 1830–1900)** ತೀರ್ಥಪಾದ ವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ನರೇಗಲ್ಲ ರಾಮಣ್ಣ, ಕಾರಕೂನ, ಕಾಲವಾದದ್ದು ಗದಗ ಜಿಲ್ಲೆ ರೋಣ ತಾಲ್ಲೂಕಿನ ನರೇಗಲ್ಲಿನಲ್ಲಿ. 6 ಕೀರ್ತನೆಗಳು ದೊರೆತಿವೆ. [8]

171. **ರಮಾವಲ್ಲಭವಿಠಲ (ಕ್ರಿ.ಶ. 1882–1984)** ತಂದೆಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸರಸಾಬಾಯಿ, ಹುಟ್ಟೂರು ತುಮಕೂರು ಜಿಲ್ಲೆ ಸಿರಾ ತಾಲ್ಲೂಕಿನ ಗೌಡಗೆರೆ, ಗೃಹಿಣಿ, ಕಾರ್ಯಕ್ಷೇತ್ರ ಚಿತ್ರದುರ್ಗ; 13 ಕೀರ್ತನೆಗಳು ದೊರೆತಿವೆ. [53]

172. **ರಾಘವೇಂದ್ರ (ಕ್ರಿ.ಶ. 1916–76)** ಹೆಸರು ರಾಘವೇಂದ್ರಾಚಾರ್ಯ, ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ನವಲಿ, ಅರ್ಚಕರು, ಕಾರ್ಯಕ್ಷೇತ್ರ ನವಲಿ; ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆಂದೂ, ಆದರೆ ಉಪಲಬ್ಧವಿರುವುದು 25 ಮಾತ್ರ ಎಂದೂ ಹೇಳಲಾಗಿದೆ. [194]

173. **ರಾಜಗೋಪಾಲ (ಕ್ರಿ.ಶ. 19ನೆಯ ಶತಮಾನದ ಪೂರ್ವಾರ್ಧ)** ಹೆಸರು ರಾಜಗೋಪಾಲಾಚಾರ್ಯ, ಹುಟ್ಟೂರು ಹಾವೇರಿ ಜಿಲ್ಲೆ ಸವಣೂರು ತಾಲ್ಲೂಕಿನ ಕಡಕೊಳ, ಕವಿಗಳು, ಪಂಡಿತರು, ಕಾರ್ಯಕ್ಷೇತ್ರ ಕಡಕೊಳ; 3 ಕೀರ್ತನೆಗಳು ಮತ್ತು 34 ದೀರ್ಘಕೃತಿಗಳು ದೊರೆತಿವೆ. [8]

Rarest Archive

**174. ರಾಜೇಶ ಹಯಮುಖ/ಹಯಾಸ್ಯ, ರಾಜನಾಥ ಹಯಮುಖ (ಕ್ರಿ.ಶ. 1881–1943) (ಆಶ್ರಮಕಾಲ 1897–1943)** ವಿಶ್ವೇಂದ್ರತೀರ್ಥರು, ಪೂರ್ವಾಶ್ರಮದ ಹೆಸರು ಲಕ್ಷ್ಮೀನಾರಾಯಣ, ಆಶ್ರಮ ಗುರುಗಳು ವಿಶ್ವಾಧೀಶತೀರ್ಥರು, ಸೋದೆ ವಾದಿರಾಜ ಮಠದ, ವಾದಿರಾಜರ ನಂತರ 14ನೆಯ ಪೀಠಾಧಿಪತಿಗಳು, ಕಾರ್ಯಕ್ಷೇತ್ರ ಉತ್ತರ ಕನ್ನಡ ಜಿಲ್ಲೆ ಸಿರ್ಸಿ ತಾಲ್ಲೂಕಿನ ಸೋಂದಾ/ಸೋದೆ/ಸ್ವಾದಿ; 45 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ಆಶ್ವೀಜ ಶುದ್ಧ ಪಂಚಮಿಯಂದು; ಉಡುಪಿ ತಾಲ್ಲೂಕಿನ ಉದ್ಯಾವರದಲ್ಲಿ. [136]

**175. ರಾಮಚಂದ್ರವಿಠಲ (ಕ್ರಿ.ಶ. 17–18ನೆಯ ಶತಮಾನ)** ವಿಜಯದಾಸರಿಂದ* ಅಥವಾ ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಮಚಂದ್ರಪ್ಪ; 2 ಕೀರ್ತನೆ, 1 ಉಗಾಭೋಗ, 5 ಸುಳಾದಿಗಳು ದೊರೆತಿವೆ, (11 ಸುಳಾದಿಗಳು). [87, 97, 99, 22]

**176. ರಾಮವಿಠಲ, ಶ್ರೀರಾಮವಿಠಲ, ವಿಜಯರಾಮವಿಠಲ (ಕ್ರಿ.ಶ. ಸು. 1835)** ಭಾಗ್ಯನಿಧಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಚಿತ್ರದುರ್ಗದ ಮಾಧವರಾಯರು; ಶಿಷ್ಯರು ಗುರುರಾಮವಿಠಲರು*. [22, 103, 108, 175]

**177. ರಾಮಸುಂದರವಿಠಲ (ಕಿ.ಶ. 19–20ನೆಯ ಶತಮನ)** ಜಗನ್ನಾಥದಾಸರಿಂದ ಪ್ರಭಾವಿತರಾದವರು, ಹೆಸರು ಆದವಾನಿ ರಾಮಸುಂದರ; 1 ಕೀರ್ತನೆ ದೊರೆತಿದೆ, (2 ಕೀರ್ತನೆಗಳು). [22, 98]

**178. ರಾಮೇಶ, ರಮಿಅರಸು (ಕ್ರಿ.ಶ. ಸು. 1670–1760)** ಗಲಗಲಿ ಅವ್ವನವರು, ಹೆಸರು ರಮಾ, ಹುಟ್ಟೂರು ಕೊಪ್ಪಳ ತಾಲ್ಲೂಕಿನ ಭೋಗಾಪುರ ಗ್ರಾಮ, ಕಾರ್ಯಕ್ಷೇತ್ರ ಬಾಗಲಕೋಟೆ ಜಿಲ್ಲೆ ಬಿಳಗಿ ತಾಲ್ಲೂಕಿನ ಗಲಗಲಿ, ಮಹಿಳಾ ಕೀರ್ತನಕಾರರಲ್ಲಿ ಬಹುಶಃ ಮೊದಲಿಗರು; 264 ಕೀರ್ತನೆಗಳು ದೊರೆತಿವೆ, ಅಲ್ಲದೇ ಅವರವೆಂದು ಪ್ರಚಲಿತವಿರುವ 2 ದೀರ್ಘ ಕೀರ್ತನೆಗಳೂ ದೊರೆತಿವೆ; ಕಾಲವಾದದ್ದು ಬಾಗಲಕೋಟೆ ಜಿಲ್ಲೆ ಜಮಖಂಡಿ ತಾಲ್ಲೂಕಿನ ಶೂರ್ಪಾಲಿ ಗ್ರಾಮದಲ್ಲಿ. [32]

**179. ರಾಮೇಶ, ರಾಮೇಶ್ವರ (ಕ್ರಿ.ಶ. ಸು. 1775–?)** ಕೆಳದಿ ವೆಂಕಣ್ಣ ಕವಿ ಎಂದು ಪರಿಚಿತರು, 42 ಕೀರ್ತನೆಗಳು ದೊರೆತಿವೆ. [42]

**180. ರುಕ್ಮ (ಕ್ರಿ.ಶ. ಸು. 1610–1710)** ಗುರುಗಳು ಗೌರಾನಂದ ಯತಿಗಳು, ಹೆಸರು ರುಕ್ಮಾಂಗದ ಪಂಡಿತರು, ಆಶ್ರಮನಾಮ ರುಕ್ಮಾಂಗದ ಸರಸ್ವತಿ, ಹುಟ್ಟೂರು ಬಿಜಾಪುರ, ಪಂಡಿತರು, ಕಾರ್ಯಕ್ಷೇತ್ರ ಬಿಜಾಪುರ, ಅದ್ವೈತಿಗಳು; 31 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಫಾಲ್ಗುಣ ಶುದ್ಧ ದ್ವಾದಶಿಯಂದು; ಬಿಜಾಪುರದಲ್ಲಿ. [173]

Rarest Archives

181. **ರುಕ್ಮಿಣಿಕೃಷ್ಣ (ಕ್ರಿ.ಶ. 1938–92)** ಸ್ವಪ್ನಸೂಚಕವಾಗಿ ಅಂಕಿತಪ್ರಾಪ್ತಿ, ಹೆಸರು ರುಕ್ಮಿಣಿಬಾಯಿ ರೊಟ್ಟಿ, ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ ಹೊಸಪೇಟೆ, ಸುಮಾರು 250 ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [194]

182. **ರುಕ್ಮಿಣೀಶವಿಠಲ (ಕ್ರಿ.ಶ. ಸು. 1900)** ತಂದೆ ಮುದ್ದುಮೋಹನವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಗುಂಡಮ್ಮ, ಗೃಹಿಣಿ, ಕಾರ್ಯಕ್ಷೇತ್ರ ಚಿತ್ರದುರ್ಗ; 7 ಕೀರ್ತನೆಗಳು ದೊರೆತಿವೆ. [53]

183. **ಲಕ್ಷ್ಮೀನಾರಾಯಣ (ಕ್ರಿ.ಶ. 1854–1924)** ಕಾಶೀಮಠದ ಶ್ರೀ ಭುವನೇಂದ್ರತೀರ್ಥ ಸ್ವಾಮಿಗಳ ಆಶ್ರಯ, ಹೆಸರು ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯ, ಹುಟ್ಟೂರು ದಕ್ಷಿಣಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಮೂಲ್ಕಿಯ ಸಮೀಪ ಅತ್ತೂರು, ಬೈರಾಗಿಗಳಂತಿದ್ದರು, ಕಾರ್ಯಕ್ಷೇತ್ರ ಮಂಗಳೂರು ತಾಲ್ಲೂಕಿನ ಪಾವಂಜೆ; 200 ಕೀರ್ತನೆಗಳು ದೊರೆತಿವೆ. [47, 166]

184. **ಲಕ್ಷ್ಮೀಪತಿವಿಠಲ (ಕ್ರಿ.ಶ. 18–19ನೆಯ ಶತಮಾನ)** ಗುರುಶ್ರೀಶವಿಠಲರಿಂದ* ಅಂಕಿತಪ್ರಾಪ್ತಿ; 5 ಕೀರ್ತನೆಗಳು, 2 ಉಗಾಭೋಗಗಳು, 22 ಸುಳಾದಿಗಳು ದೊರೆತಿವೆ. [22, 175, 147, 164, 155, 39, 112, 183]

185. **ಲಕ್ಷ್ಮೀಶ, ಲಕ್ಷ್ಮೀಪತಿ (ಕ್ರಿ.ಶ. ಸು. 1550–1600)** ಕವಿ ಲಕ್ಷ್ಮೀಶ, ಹೆಸರು ಲಕ್ಷ್ಮೀಕಾಂತ ಹೆಬ್ಬಾರ, ಹುಟ್ಟೂರು ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ದೇವನೂರು (ಸುರಪುರ/ಸುಮನಸಪುರ), ಕೀರ್ತನಕಾರರು, ಕಾರ್ಯಕ್ಷೇತ್ರ ದೇವನೂರು; ಶ್ರೀವೈಷ್ಣವರು, 27 ಕೀರ್ತನೆಗಳು ದೊರೆತಿವೆ. [75]

186. **ಲಕ್ಷ್ಮೀಶವಿಠಲ (ಕ್ರಿ.ಶ. 18–19ನೆಯ ಶತಮಾನ)** ಪ್ರಾಣೇಶದಾಸರಿಂದ* ಅಂಕಿತಪ್ರಾಪ್ತಿ; (1 ಕೀರ್ತನೆ). [22]

187. **ಲಕ್ಷ್ಮೀಶ (ಆಶ್ರಮ ಕಾಲ ಕ್ರಿ.ಶ. 1938–89)** ಶ್ರೀ ಲಕ್ಷ್ಮೀಶತೀರ್ಥರು, ಆಶ್ರಮ ಗುರುಗಳು ಲಕ್ಷ್ಮೀಮನೋಜ್ಞತೀರ್ಥರು, ಕುಂದಾಪುರ ವ್ಯಾಸರಾಜ ಮಠದ, ವ್ಯಾಸರಾಜರ ನಂತರ 21ನೆಯ ಪೀಠಾಧಿಪತಿಗಳು; 2 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ರಾಮನಗರ ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರಿನಲ್ಲಿ. [163]

188. **ವರ(ಗುರು)ಬಂಡೇ ರಂಗವಿಠಲ (ಕ್ರಿ.ಶ. ಸು. 1854–1934)** ಹೆಸರು ಭೀಮಸೇನಾಚಾರ್ಯರು, ಹುಟ್ಟೂರು ರಾಯಚೂರು ತಾಲ್ಲೂಕಿನ ಸಿಂಗನೋಡಿ, ಜೋಯಿಸರು, ಕಾರ್ಯಕ್ಷೇತ್ರ ಸಿಂಗನೋಡಿ; ಅನೇಕ ಕೀರ್ತನೆಗಳು ಹಾಗೂ ಬಯಲಾಟಗಳನ್ನು ರಚಿಸಿದ್ದಾರೆಂದೂ, ಆದರೆ ಅವಾವೂ ಉಪಲಬ್ಧವಿಲ್ಲವೆಂದೂ ಹೇಳಲಾಗಿದೆ. [180, 194]

189. **ವರದಕೇಶವ (ಕ್ರಿ.ಶ. 16ನೆಯ ಶತಮಾನ)** ಕನಕದಾಸರಿಂದ* ಅಂಕಿತಪ್ರಾಪ್ತಿ; (2 ಸುಳಾದಿಗಳು, 2 ಉಗಾಭೋಗಗಳು). [22]

Rarest Archives

190. **ವರದಗುರು ಮುದ್ದುಕೃಷ್ಣ (ಕ್ರಿ.ಶ. 18–19ನೆಯ ಶತಮಾನ)** ರಘುಪತಿವಿಠಲರಿಂದ* ಅಂಕಿತಪ್ರಾಪ್ತಿ; (63 ಕೀರ್ತನೆಗಳು, 3 ಸುಳಾದಿಗಳು). [22]

191. **ವರದಗೋಪಾಲವಿಠಲ (ಕ್ರಿ.ಶ. ಸು. 1775)** ಗೋಪಾಲದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಸುಬ್ಬಣ್ಣ, ದಾಸಪ್ಪದಾಸರೆಂದು ಪರಿಚಿತರು, ಇವರು ಗೋಪಾಲದಾಸರ ತಮ್ಮ, ಹುಟ್ಟೂರು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಮಸರುಕಲ್ಲು, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಗದ್ವಾಲ/ಐಜಿಯ ಬಳಿ ಉತ್ತನೂರು; ಇವರದೇ ಇರಬಹುದಾದ 2 ಕೀರ್ತನೆಗಳು ದೊರೆತಿವೆ; ಶಿಷ್ಯರು ಪುತ್ರ ವೆಂಕಟೇಶವಿಠಲ*; 9 ಕೀರ್ತನೆಗಳು, 24 ಉಗಾಭೋಗಗಳು, 1 ಸುಳಾದಿ ದೊರೆತಿವೆ, (138 ಕೀರ್ತನೆಗಳು, 30 ಸುಳಾದಿಗಳು); ಕಾಲವಾದದ್ದು ಉತ್ತನೂರಿನಲ್ಲಿ. [22, 73, 108, 175, 178]

192. **ವರದಪುರಂದರ (ಕ್ರಿ.ಶ. ಸು. 16–17ನೆಯ ಶತಮಾನ)** ಹೆಸರು ವರದಪ್ಪ/ಲಕ್ಷ್ಮಣದಾಸ, ಪುರಂದರದಾಸರ* ಪುತ್ರ; (22 ಕೀರ್ತನೆಗಳು). [22]

193. **ವರದವಿಜಯ/ವರಜಯವಿಠಲ (ಕ್ರಿ..ಶ. 19ನೆಯ ಶತಮಾನ)** ಮುದ್ದುಮೋಹನ ವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಶೇಷದಾಸರು, ಇವರದೇ ಇರಬಹುದಾದ ವ್ಯಾಸರಾಯರನ್ನು ಕುರಿತ 1 ರಚನೆ ದೊರೆತಿದೆ. [175, 161]

194. **ವರದವಿಠಲ (ಕ್ರಿ.ಶ. 1830–1900)** ಹೆಸರು ಸರಗೂರು ವೆಂಕಟವರದಾಚಾರ್ಯ, ಹುಟ್ಟೂರು ಮೈಸೂರು ಜಿಲ್ಲೆ ಹೆಗ್ಗಡದೇವನಕೋಟೆ ತಾಲ್ಲೂಕಿನ ಸರಗೂರು ಇರಬಹುದು, ಕಾರ್ಯಕ್ಷೇತ್ರ ಸರಗೂರು, ಶ್ರೀವೈಷ್ಣವರು; 102 ಕನ್ನಡದ ಮತ್ತು 1 ಹಿಂದಿ ಮಿಶ್ರಿತ ಕೀರ್ತನೆಗಳು ದೊರೆತಿವೆ. [75]

195. **ವರದವಿಠಲ (ಕ್ರಿ.ಶ. 1872–1935)** ಗುರುಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಕರಣಂ ಹನುಮಂತರಾವ್, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕೌತಾಳ; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆಯಾದರೂ, 1 ಕೀರ್ತನೆ ದೊರೆತಿದೆ; ಕಾಲವಾದದ್ದು ಕಾರ್ತೀಕ ಶುದ್ಧ ಚತುರ್ದಶಿಯಂದು; ಕೌತಾಳದಲ್ಲಿರಬಹುದು. [49, 102, 126]

196. **ವರದೇಂದ್ರಯತಿ (ಆಶ್ರಮಕಾಲ ಕ್ರಿ.ಶ. 1761–85)** ಶ್ರೀ ವರದೇಂದ್ರತೀರ್ಥರು, ಪೂರ್ವಾಶ್ರಮದ ಹೆಸರು ಬಲರಾಮಾಚಾರ್ಯರು, ಶ್ರೀ ರಾಘವೇಂದ್ರಸ್ವಾಮಿಗಳವರ ಮಠದ, ಶ್ರೀ ರಾಘವೇಂದ್ರಸ್ವಾಮಿಗಳ ನಂತರ 7ನೆಯ ಪೀಠಾಧಿಪತಿಗಳು, ಆಶ್ರಮ ಗುರುಗಳು ಶ್ರೀ ವಸುಧೇಂದ್ರತೀರ್ಥರು, ಹುಟ್ಟೂರು ಮೈಸೂರು ಜಿಲ್ಲೆ ನಂಜನಗೂಡು, ಅನೇಕ ಹರಿದಾಸರಿಗೆ ಗುರುಗಳೂ ಆಶ್ರಯದಾತರೂ ಆಗಿದ್ದರು; ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ; ಕನ್ನಡ ತಂತ್ರಸಾರ ರಚಿಸಿದ್ದಾರೆ, ಈ ಪದವು ಜಗನ್ನಾಥದಾಸರ ರಚನೆಯೆಂಬ ಅಭಿಪ್ರಾಯವಿದ್ದು, ಇದರ ಬಗ್ಗೆ ಗ್ರಂಥ [23–ಪುಟ228]ರಲ್ಲಿ ವಿಚಾರ ಮಾಡಲಾಗಿದೆ;

Rarest Archiver

ಬೃಂದಾವನಸ್ಥರಾದದ್ದು ಆಷಾಢ ಶುದ್ಧ ಷಷ್ಠಿಯಂದು; ಮಹಾರಾಷ್ಟ್ರದ ಪುಣೆಯಲ್ಲಿ. ಅಲ್ಲದೇ ರಾಯಚೂರು ಜಿಲ್ಲೆಯ ಲಿಂಗಸುಗೂರಿನಲ್ಲಿ ಇವರ ಸ್ವಪ್ನ ಬೃಂದಾವನವಿದೆ. [23, 22, 178]

197. **ವರದೇಂದ್ರವಿಠಲ (ಕ್ರಿ.ಶ. 1886–1960)** ಗುರುಜಗನ್ನಾಥವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ವೆಂಕಟೇಶ ಹಳ್ಳೇರಾವ್, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು, ಕುಲಕರ್ಣಿಕೆ, ಸತ್ಯಪರಾಕ್ರಮತೀರ್ಥರ ಕಾಲದಲ್ಲಿ ಲಿಂಗಸುಗೂರು ತಾಲ್ಲೂಕಿನ ಚಿತಾಪುರ ಗ್ರಾಮದಲ್ಲಿನ ಉತ್ತರಾದಿ ಮಠದ ಆಸ್ತಿ ಉಸ್ತುವಾರಿ; 30 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಲಿಂಗಸುಗೂರಿನಲ್ಲಿ; ಶ್ರಾವಣ ಬಹುಳ ಏಕಾದಶಿಯಂದು ಇರಬಹುದು. [194, 135, 126]

198. **ವರದೇಶವಿಠಲ (ಮೊದಲ ಅಂಕಿತ ಕುಪ್ಪಿಭೀಮ) (ಕ್ರಿ.ಶ. 1885–1918)** ಗುರುಜಗನ್ನಾಥವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸಂತೆಕೆಲ್ಲೂರು ಸ್ವಾಮಿರಾಯ, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಸಂತೆಕೆಲ್ಲೂರು, ವಕೀಲರು, ಕಾರ್ಯಕ್ಷೇತ್ರ ಲಿಂಗಸುಗೂರು; 37 ಕೀರ್ತನೆಗಳು, 2 ಉಗಾಭೋಗಗಳು ದೊರೆತಿವೆ; ಕಾಲವಾದದ್ದು ಆಶ್ವೀಜ ಶುದ್ಧ ತೃತೀಯೆಯಂದು; ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಕೋಶಿಗಿಯಲ್ಲಿ. [102]

199. **ವರಾಹ ತಿಮ್ಮಪ್ಪ (ಕ್ರಿ.ಶ. 1759–63–?)** ಕೃಷ್ಣಾಪುರ ಮಠದ ಶ್ರೀವಿಭುಧೇಂದ್ರ ಅಥವಾ ಶ್ರೀವಿದ್ಯಾನಿಧಿತೀರ್ಥರಿಂದ ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು ನೆಕ್ಕಾರು ಕೃಷ್ಣದಾಸ, ಹುಟ್ಟೂರು ಉಡುಪಿಯ ಬಳಿ ಪೆರಂಪಳ್ಳಿ, ಕಾರ್ಯಕ್ಷೇತ್ರ ಪೆರಂಪಳ್ಳಿ; ಶಿವಳ್ಳಿ ಮನೆತನ, ಭಾಗವತ ಸಂಪ್ರದಾಯ; 65 ಕೀರ್ತನೆಗಳು, 6 ದೀರ್ಘಕೃತಿಗಳು ದೊರೆತಿವೆ. [50, 136]

200. **ವಾದೀಂದ್ರ (ಆಶ್ರಮಕಾಲ ಕ್ರಿ.ಶ. 1728–50)** ವಾದೀಂದ್ರತೀರ್ಥರು, ಪೂರ್ವಾಶ್ರಮದ ಹೆಸರು ಶ್ರೀನಿವಾಸಾಚಾರ್ಯ, ಆಶ್ರಮ ಗುರುಗಳು ಉಪೇಂದ್ರತೀರ್ಥರು, ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳ ಮಠದ, ರಾಘವೇಂದ್ರಸ್ವಾಮಿಗಳ ನಂತರ 6ನೆಯ ಪೀಠಾಧಿಪತಿಗಳು; 2 ಕೀರ್ತನೆಗಳು ದೊರೆತಿವೆ; ಬೃಂದಾವನಸ್ಥರಾದದ್ದು ಜ್ಯೇಷ್ಠ ಶುದ್ಧ ನವಮಿಯಂದು; ಮಂತ್ರಾಲಯದಲ್ಲಿ. [22, 23, 185]

201. **ವಾಮನವಿಠಲ (ಕ್ರಿ.ಶ. 18ನೆಯ ಶತಮಾನ)** ಗುರುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಅಂಕಿತಪ್ರದಾನವಾದದ್ದು 1/3/1777ರಂದು, ಅಂಕಿತಪದ ದೊರೆತಿದೆ, (1 ಕೀರ್ತನೆ). [126, 100]

202. **ವಾಮನವಿಠಲ (ಕ್ರಿ.ಶ. 19ನೆಯ ಶತಮಾನ)** ಶ್ರೀಶಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ; 1 ಕೀರ್ತನೆ ದೊರೆತಿದೆ (2 ಕೀರ್ತನೆಗಳು). [126, 22]

203. **ವಾಸುದೇವವಿಠಲ (ಕ್ರಿ.ಶ. 1704–1800)** ವ್ಯಾಸತತ್ತ್ವಜ್ಞತೀರ್ಥರು, ಐಜಿ ಸ್ವಾಮಿಗಳೆಂದು ಪ್ರಸಿದ್ಧರು, ಪೂರ್ವಾಶ್ರಮದ ಹೆಸರು ವೆಂಕಟರಾಮಾಚಾರ್ಯ, ಗೋಪಾಲದಾಸರಿಂದ* ಅಂಕಿತಪ್ರಾಪ್ತಿ, ಹುಟ್ಟೂರು ಆಂಧ್ರಪ್ರದೇಶದ ಮಹಬೂಬನಗರ ಜಿಲ್ಲೆ ಗದ್ವಾಲದ ಬಳಿಯ

Rarest Archiver

ಐಜಿ, ಪಂಡಿತರು, ಸಂನ್ಯಾಸಿಗಳು, ಕಾರ್ಯಕ್ಷೇತ್ರ ಗದ್ವಾಲ್ ತಾಲ್ಲೂಕಿನ ವೇಣೀಸೋಮಪುರ; ಶಿಷ್ಯರು ತಂದೆವಾಸುದೇವವಿಠಲ (ಪುತ್ರ ಐಜಿ ಗೋಪಾಲಕೃಷ್ಣಾಚಾರ್ಯ), ಕೃಷ್ಣವಿಠಲ, ಗುರುವಾಸುದೇವವಿಠಲ*; 66 ಕೀರ್ತನೆಗಳು, 9 ಉಗಾಭೋಗಗಳು, 13 ಸುಳಾದಿಗಳು ದೊರೆತಿವೆ; ಬೃಂದಾವನಸ್ಥರಾದದ್ದು ಶ್ರಾವಣ ಬಹುಳ ಅಷ್ಟಮಿಯಂದು; ವೇಣೀಸೋಮಪುರದಲ್ಲಿ. [22, 99, 153]

**204. ವಿಜಯರಾಮಚಂದ್ರ ವಿಠಲ (ಕ್ರಿ.ಶ. 1819–72)** ಪ್ರಸನ್ನ ವೆಂಕಟವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಮಚಂದ್ರ/ ಸರಮಿನ್ ರಾಮರಾಯರು, ಹುಟ್ಟೂರು ತಮಿಳುನಾಡಿನ ರಾಮೇಶ್ವರದ ಬಳಿ ರಾಮನಾಥಪುರ, ಶಿರಸ್ತೇದಾರರು, ಕಾರ್ಯಕ್ಷೇತ್ರ ಮೈಸೂರು ಕಟ್ಟೆಮನೆ; ಶಿಷ್ಯರು ಗುರುವಿಜಯರಾಮಚಂದ್ರ ವಿಠಲರು(ಸಂತೇಪೇಟೆ ರಾಮರಾಯರು), ಬಾಲಕೃಷ್ಣ/ ಬಾಲಕೃಷ್ಣವಿಠಲರು(ರಂಗಮ್ಮ), ಜಯೇಶವಿಠಲರು*, ಮಾರುತಿ ಒಡೆಯಅಂಕಿತರು*, ಶ್ರೀಶಾಂಕಿತರು(ಲಕ್ಷುಂಬಾಯಿ), ಜಯವಿಠಲರು*, ಹನುಮೇಶವಿಠಲರು (ಹನುಮಾಜಿ ರಾಯರು), ವಿಜಯರಾಮಾರ್ಯ ವರದವೆಂಕಟವಿಠಲರು(ಕಳಲೆ ಕೂಸಣ್ಣನವರು), ಬಾದರಾಯಣವಿಠಲರು*,ಶ್ರೀನಿವಾಸಾಂಕಿತರು(ಸೀತಾಬಾಯಿ), ಗಂಗಾಜನಕಾಂಕಿತರು (ಗಿರಿಯಮ್ಮ), ಇಷ್ಟಮೂರ್ತಿಅಂಕಿತರು*, ಒಟ್ಟು 30 ಜನ ಶಿಷ್ಯರಿದ್ದರೆಂದು ತಿಳಿದು ಬಂದಿದೆ; 37 ಕೀರ್ತನೆಗಳು, 2 ಸುಳಾದಿಗಳು ದೊರೆತಿವೆ; ಕಾಲವಾದದ್ದು ವೈಶಾಖ ಶುದ್ಧ ತದಿಗೆಯಂದು; ಮೈಸೂರಿನಲ್ಲಿ. [22, 92, 166, 168 ]

**205. ವಿಜಯವಿಠಲ (ಕ್ರಿ.ಶ. 1682–1755)** ವಿಜಯದಾಸರು, ಸ್ವಪ್ನದಲ್ಲಿ ಪುರಂದರದಾಸರಿಂದ* ಅಂಕಿತಪ್ರಾಪ್ತಿ, ಹೆಸರು ದಾಸಪ್ಪ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಚೀಕಲಪರವಿ, ಕಾರ್ಯಕ್ಷೇತ್ರ ಗುಂತಕಲ್ಲಿನಿಂದ 4 ಮೈಲಿ ದೂರದಲ್ಲಿರುವ ಆಂಧ್ರಪ್ರದೇಶದ ಚಿಪ್ಪಗಿರಿ; ಶಿಷ್ಯರು ಗುರುಮಧ್ವೇಶ/ಮಧ್ವೇಶವಿಠಲರು (ಕೊಂಡಲಿ/ಕೂಡ್ಲಿಗಿ ಮಧ್ವಾಚಾರ್ಯ), ರಾಮಚಂದ್ರವಿಠಲರು*, ಹಯಗ್ರೀವವಿಠಲರು*, ಹಯವದನವಿಠಲರು*, ಮೋಹನವಿಠಲರು*, ವೇಣುಗೋಪಾಲವಿಠಲರು*, ಗೋಪಾಲವಿಠಲರು*, ವೆಂಕಟವಿಠಲರು*, ಮುದ್ದುವಿಠಲರು*, ವೆಂಕಟೇಶವಿಠಲರು*; 540 ಕೀರ್ತನೆಗಳು, 77 ಉಗಾಭೋಗಗಳು, 500 ಸುಳಾದಿಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಒದ್ದವನೆ ಒದ್ದೆ ಪೋದಾ", "ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಟು", "ಹದಿನಾಲ್ಕು ಲೋಕಕ್ಕೆ ದಾತಾ"); (882 ಕೀರ್ತನೆಗಳು, 525 ಸುಳಾದಿಗಳು), ಒಟ್ಟು 75,000 ಕೃತಿಗಳನ್ನು ರಚಿಸಿದ್ದಾರೆಂದು ಪ್ರತೀತಿ; ಕಾಲವಾದದ್ದು ಕಾರ್ತೀಕ ಶುದ್ಧ ದಶಮಿಯಂದು; ಚಿಪ್ಪಗಿರಿಯಲ್ಲಿ. [22, 51, 140, 97, 99, 108]

**206. ವಿಜಯಸಾರಥಿ (ಕ್ರಿ.ಶ. 1904–89)** ಶಾಮಸುಂದರವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕಿಷನ್‌ರಾವ್ ದೇಸಾಯಿ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಮರಕಂದಿನ್ನಿ, ಗ್ರಾಮದ ದೇಸಾಯಿಗಳು, ಕಾರ್ಯಕ್ಷೇತ್ರ ಮರಕಂ/ವಾಲ್ಕದಿನ್ನಿ; ನೂರಾರು ಕೃತಿಗಳನ್ನು ರಚನೆ

Rarest Archiver

ಮಾಡಿದ್ದರೂ ಉಪಲಬ್ಧವಿರುವುದು ಕೆಲವು ಮಾತ್ರ ಎಂದು ಹೇಳಲಾಗಿದೆ, ಶಾಮಸುಂದರವಿಠಲರನ್ನು ಕುರಿತ 1 ಕೀರ್ತನೆ ದೊರೆತಿದೆ. [95, 194]

**207. ವಿಜಯೀಂದ್ರರಾಮ (ಕ್ರಿ.ಶ. 1517–1614) (ಆಶ್ರಮಕಾಲ 1575–1614)** ವಿಜಯೀಂದ್ರ ತೀರ್ಥರು, ಪೂರ್ವಾಶ್ರಮದ ಹೆಸರು ವಿಠಲಾಚಾರ್ಯ, ಆಶ್ರಮ ಗುರುಗಳು ಸುರೇಂದ್ರತೀರ್ಥರು, ಪೀಠಾಧಿಪತಿಗಳು, ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳ ಪರಮಗುರುಗಳು, ಕಾರ್ಯಕ್ಷೇತ್ರ ತಮಿಳುನಾಡಿನ ಕುಂಭಕೋಣಂ; 2 ಕೀರ್ತನೆಗಳು, 1 ಉಗಾಭೋಗ, 2 ಸುಳಾದಿಗಳು ದೊರೆತಿವೆ; ಬೃಂದಾವನಸ್ಥರಾದದ್ದು ಜ್ಯೇಷ್ಠ ಬಹುಳ ತ್ರಯೋದಶಿಯಂದು; ಕುಂಭಕೋಣಂನಲ್ಲಿ. [153]

**208. ವಿಠಲವ್ಯಾಸ (ಕ್ರಿ.ಶ. ಸು. 18ನೆಯ ಶತಮಾನ)** ಬಡಣ್ಣಯ್ಯಾಚಾರ್ಯರು ಅಥವಾ ಅಣ್ಣಾವಧೂತರೆಂದು ಪರಿಚಿತರು, ಪಂಡಿತರು, ಅವಧೂತರು, ಕಾರ್ಯಕ್ಷೇತ್ರ ತುಂಗಾ–ವರದಾ ನದಿಗಳ ಮಧ್ಯ ಪ್ರದೇಶ ಮತ್ತು ಹಾವೇರಿ ಜಿಲ್ಲೆ ಸವಣೂರ ಸುತ್ತಮುತ್ತ, ಶ್ರೀವೈಷ್ಣವರು; ಕನ್ನಡದಲ್ಲಿ 3 ಮತ್ತು ಹಿಂದಿಯಲ್ಲಿ 1 ಕೀರ್ತನೆ ದೊರೆತಿವೆ, ಕಾಲವಾದದ್ದು ಸವಣೂರಿನಲ್ಲಿ. [7, 98]

**209. ವಿಠಲೇಶ (ಕ್ರಿ.ಶ. ?–1982)** ಹೆಸರು ವಿಠೋಬಾಚಾರ್ಯ ವೈದ್ಯ, ವೈದ್ಯರು, 22 ಕೀರ್ತನೆಗಳು ದೊರೆತಿವೆ ಮತ್ತು ಅನೇಕ ಕವನಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ [39]

**210. ವಿದ್ಯಾಕಾಂತ (ಆಶ್ರಮಕಾಲ ಕ್ರಿ.ಶ. 1812–24)** ವಿದ್ಯಾಕಾಂತತೀರ್ಥರು, ಸೋಸಲೆ ವ್ಯಾಸರಾಜಮಠದ, ವ್ಯಾಸರಾಜರ ನಂತರ 16ನೆಯ ಯತಿಗಳು, ಆಶ್ರಮ ಗುರುಗಳು ವಿದ್ಯಾವಲ್ಲಭತೀರ್ಥರು; 1 ಕೀರ್ತನೆ ದೊರೆತಿದೆ; ಬೃಂದಾವನಸ್ಥರಾದದ್ದು ಜ್ಯೇಷ್ಠ ಶುದ್ಧ ನವಮಿಯಂದು; ಮೈಸೂರು ಜಿಲ್ಲೆ ಟಿ.ನರಸೀಪುರ ತಾಲ್ಲೂಕಿನ ಸೋಸಲೆಯಲ್ಲಿ. [153, 84]

**211. ವಿಮಲಾನಂದ, ಗುರುವಿಮಲಾನಂದ (ಕ್ರಿ.ಶ. 17–18ನೆಯ ಶತಮಾನ)** ವಿಮಲಾನಂದಸ್ವಾಮಿಗಳಿಂದ ಅಂಕಿತಪ್ರಾಪ್ತಿ, ಹೆಸರು ಲಕ್ಷ್ಮಣ, ಭಟಕಳ ಅಪ್ಪಯ್ಯರೆಂದು ಪರಿಚಿತರು, ಗುರುಸೇವೆ ಮಾಡಿಕೊಂಡಿದ್ದವರು, ಕಾರ್ಯಕ್ಷೇತ್ರ ಉತ್ತರ ಕನ್ನಡ ಜಿಲ್ಲೆ ಭಟ್ಕಳ ತಾಲ್ಲೂಕಿನ ಭೈಟೂರು, ಸಾರಸ್ವತ ಕುಟುಂಬದವರು, ಅದ್ವೈತಿಗಳು; 50 ಕೀರ್ತನೆಗಳು ದೊರೆತಿವೆ. [26]

**212. ವೆಂಕಟ, ವೆಂಕಟಕೃಷ್ಣ, ಶ್ರೀನಿವಾಸ (ಕ್ರಿ.ಶ. ಸು 1820–1908)** ಹೆಸರು ಯದುಗಿರಿಯಮ್ಮನವರು, ಕಾರ್ಯಕ್ಷೇತ್ರ ಬೆಂಗಳೂರಿನ ತುಳಸೀತೋಟ, ಶ್ರೀವೈಷ್ಣವರು; 52 ಕೀರ್ತನೆಗಳು ದೊರೆತಿವೆ. [53]

**213. ವೆಂಕಟಗಿರಿನಾಥ (ಕ್ರಿ.ಶ. 15–16ನೆಯ ಶತಮಾನ)** ಬೇಲೂರು ವೈಕುಂಠದಾಸರಿಂದ* ಅಂಕಿತಪ್ರಾಪ್ತಿ, (2 ಕೀರ್ತನೆಗಳು). [22]

Rarest Archiver

**214. ವೆಂಕಟನಾಥ (ಕ್ರಿ.ಶ. 19ನೆಯ ಶತಮಾನ)** ವಾದಿರಾಜರನ್ನು ಕುರಿತ 1 ಕೀರ್ತನೆ ದೊರೆತಿದೆ [186]

**215. ವೆಂಕಟಪತಿ (ಕ್ರಿ.ಶ. 19ನೆಯ ಶತಮಾನ)**, ವಾದಿರಾಜರನ್ನು ಕುರಿತ 1 ಕೀರ್ತನೆ ದೊರೆತಿದೆ. [186]

**216. ವೆಂಕಟವಿಠಲ, ಶ್ರೀವೆಂಕಟ (ಕ್ರಿ.ಶ. 1770–1865)** ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಹೊನ್ನಾಳಿ ವೆಂಕಟದಾಸರು, ಹುಟ್ಟೂರು ಶಿವಮೊಗ್ಗ ಜಿಲ್ಲೆ ಹೊನ್ನಾಳಿ, ಕಾರ್ಯಕ್ಷೇತ್ರ ಹೊನ್ನಾಳಿ; ಸುಮಾರು 300 ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [108, 166]

**217. ವೆಂಕಟವಿಠಲ (ಕ್ರಿ.ಶ. ಸು. 1780–1800)** ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಮಾನಾಮಧುರೀ ದಾಸರು, ಕಾರ್ಯಕ್ಷೇತ್ರ ತಮಿಳುನಾಡಿನ ಮಾನಾಮಧುರೈ, ಸುಪ್ರಸಿದ್ಧ ವಾಗ್ಗೇಯಕಾರರು; 10 ಕೀರ್ತನೆಗಳು ದೊರೆತಿವೆ. [87, 108, 110, 175]

**218. ವೆಂಕಟವಿಠಲ (ಕ್ರಿ.ಶ. 1888–1968)** ಕಲ್ಲೂರು ಮಹಾಲಕ್ಷ್ಮಿ ದೇವಿಯ ಪ್ರೇರಣೆಯಿಂದ ಅಂಕಿತಸ್ವೀಕಾರ, ಹೆಸರು ಕೃಷ್ಣಾಚಾರ್ಯರು, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು, ಪಂಡಿತರು; ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [194]

**219. ವೆಂಕಟವಿಠಲ, ಶ್ರೀರಾಘವೇಂದ್ರ (ಕ್ರಿ.ಶ. 1889–1976)** ಹೆಸರು ಬಳ್ಳಾರಿ ರಾಧಾಬಾಯಿ, ಹುಟ್ಟೂರು ಆಂಧ್ರಪ್ರದೇಶದ ಮದನಪಲ್ಲಿ, ಗೃಹಿಣಿ, ಕಾರ್ಯಕ್ಷೇತ್ರ ಬೆಂಗಳೂರು ಮತ್ತು ಆಂಧ್ರಪ್ರದೇಶದ ಕಡಪ; 35 ಕೀರ್ತನೆಗಳು ದೊರೆತಿವೆ. [53]

**220. ವೆಂಕಟಾಚಲವಾಸ, ಶೇಷಶಿಖರನಿವಾಸ, ಸರ್ಪರಾಜಬೆಟ್ಟ ನಿವಾಸಿ (ಕ್ರಿ.ಶ. ಸು. 1810–93)** ಜಗನ್ನಾಥದಾಸರಿಂದ* ಪ್ರಭಾವಿತರಾಗಿ ಅಂಕಿತಸ್ವೀಕಾರ, ಹೆಸರು ತುಪಾಕಿ ವೆಂಕಟರಮಣಾಚಾರ್ಯರು, ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು, ಕೋರ್ಟು ಕಚೇರಿಗೆ ಸಂಬಂಧಿಸಿದ ವೃತ್ತಿ, ಕಾರ್ಯಕ್ಷೇತ್ರ ಮಂಗಳೂರು; 309 ಕೀರ್ತನೆಗಳು ದೊರೆತಿವೆ. [47]

**221. ವೆಂಕಟಾದ್ರೀಶ, ವೆಂಕಟಗಿರಿಪತಿ, ವೆಂಕಟಗಿರಿನಿಲಯ (ಕ್ರಿ.ಶ. ? – 1917)** ಹೆಸರು ವೆಂಕಟಾದ್ರಿ ಶ್ಯಾಮರಾಯರು, ಹುಟ್ಟೂರು ಕೊಡಗು ಜಿಲ್ಲೆ ರಾಮಸ್ವಾಮಿ ಕಣಿವೆ ಹತ್ತಿರದ ಹಳ್ಳಿಯಲ್ಲಿರಬಹುದು, ಅರಣ್ಯ ಇಲಾಖೆಯಲ್ಲಿ ಕೆಲಸ; ಅನೇಕ ಕೀರ್ತನೆಗಳನ್ನು ಮತ್ತು ಯಕ್ಷಗಾನಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [188]

**222. ವೆಂಕಟೇಶವಿಠಲ (ಕ್ರಿ.ಶ. 18ನೆಯ ಶತಮಾನದ ಉತ್ತರಭಾಗ)** ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಬೇಲೂರು ವೆಂಕಟದಾಸರು, ಹುಟ್ಟೂರು ಗದಗ ಜಿಲ್ಲೆ ರೋಣ, ಪಂಡಿತರು, ಕಾರ್ಯಕ್ಷೇತ್ರ ಮೈಸೂರು, ಇವರ ಮಕ್ಕಳೇ ಬೇಲೂರು ವೆಂಕಟಸುಬ್ಬದಾಸರು (ಗುರುಭೀಮೇಶವಿಠಲ)*; (7 ಕೀರ್ತನೆಗಳು). [22, 98, 99]

Rarest Archiver

223. **ವೆಂಕಟೇಶ(ವೆಂಕಟ)ವಿಠಲ (ಕ್ರಿ.ಶ. 18–19ನೆಯ ಶತಮಾನ)** ಪ್ರಾಣೇಶದಾಸರಿಂದ* ಅಂಕಿತಪ್ರಾಪ್ತಿ; (2 ಕೀರ್ತನೆಗಳು); [22]

224. **ವೆಂಕಟೇಶವಿಠಲ (ಕ್ರಿ.ಶ. 1815/1823–1925)** ಕಮಲೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಜೋಶಿ ವೆಂಕಪ್ಪಾಚಾರ್ಯ/ಬಳ್ಳಾರಿ ವೆಂಕಟಾಚಾರ್ಯರು, ಹುಟ್ಟೂರು ಆಂಧ್ರಪ್ರದೇಶದ ಗದ್ವಾಲ್, ಕಾರ್ಯಕ್ಷೇತ್ರ ಬಳ್ಳಾರಿ; ಕಾಲವಾದದ್ದು ಬಳ್ಳಾರಿಯಲ್ಲಿ; 4 ಕೀರ್ತನೆಗಳು ದೊರೆತಿವೆ, 20 ಆಖ್ಯಾನಗಳನ್ನು ರಚಿಸಿದ್ದಾರೆಂದು ತಿಳಿದಿದೆ. [22, 166, 164, 98]

225. **ವೆಂಕಟೇಶವಿಠಲ (ಅಂಕಿತ ಪೂರ್ವದಲ್ಲಿ ಜೀರ್ಣಪೇಟೆಯ/ಹಳೇಪೇಟೆ ವೇಣುಗೋಪಾಲ) (ಕ್ರಿ.ಶ. 1912–85)** ತಿರುಪತಿ ವೆಂಕಟರಮಣನ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ವೆಂಕಟರಾವ್ ಕುಲಕರ್ಣಿ, ಹುಟ್ಟೂರು ಗುಲಬರ್ಗ ಜಿಲ್ಲೆ ಶಹಪುರ ತಾಲ್ಲೂಕಿನಲ್ಲಿರಬಹುದಾದ ಐಕೂರು (ಈಗಿನ ಅಲ್ಲೂರು?), ಸಮಾಜಸೇವಕರು, ಪಂಡಿತರು, ಕಾರ್ಯಕ್ಷೇತ್ರ ಐಕೂರು; 100 ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ; ಕಾಲವಾದದ್ದು ಗುಲಬರ್ಗದಲ್ಲಿ. [194]

226. **ವೇಣುಗೋಪಾಲವಿಠಲ (ಕ್ರಿ.ಶ. ಸು. 1688–1768)** ಪಂಗನಾಮ ತಿಮ್ಮಣ್ಣ ದಾಸರು, ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ತಿಮ್ಮಣ್ಣ, ಹುಟ್ಟೂರು ಆಂಧ್ರಪ್ರದೇಶದ ಆದವಾನಿ, ದಿವಾನರು, ಕಾರ್ಯಕ್ಷೇತ್ರ ಆದವಾನಿ; ಶಿಷ್ಯರು ಜನಾರ್ದನವಿಠಲರು*, ವ್ಯಾಸವಿಠಲರು*, ನರಸಿಂಹವಿಠಲರು*, ರಾಮಚಂದ್ರವಿಠಲರು*, ಗುರುವೇಣುಗೋಪಾಲವಿಠಲರು*, ತಂದೆವೇಣುಗೋಪಾಲವಿಠಲರು*, ಸಿರಿವೇಣುಗೋಪಾಲವಿಠಲರು*; 10 ಕೀರ್ತನೆಗಳು, 5 ಉಗಾಭೋಗಗಳು, 12 ಸುಳಾದಿಗಳು ದೊರೆತಿವೆ, (37 ಕೀರ್ತನೆಗಳು); ಕಾಲವಾದದ್ದು ಆದವಾನಿ ಬಳಿ ಇರಬಹುದಾದ ಮಲಗವೇಲಿಯಲ್ಲಿ. [22, 87, 97, 99]

227. **ವೇಣುಗೋಪಾಲವಿಠಲ (ಕ್ರಿ.ಶ. 1758–1809)** ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ (ಇದರ ಬಗ್ಗೆ ಅನುಬಂಧ–3 ನೋಡಿ); ಹೆಸರು ದೇಶಪಾಂಡೆ ಕೃಷ್ಣರಾವ್, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ, ಕಾರ್ಯಕ್ಷೇತ್ರ ದೊಡ್ಡಬಳ್ಳಾಪುರ; ಕಾಲವಾದದ್ದು ದೊಡ್ಡಬಳ್ಳಾಪುರದಲ್ಲಿ. [111]

228. **ವೈಕುಂಠ (ಕ್ರಿ.ಶ. ಸು. 1450–1540)** ಬೇಲೂರು ವೈಕುಂಠದಾಸರು, ಆರಾಧ್ಯದೈವ ಬೇಲೂರು ಚೆನ್ನಕೇಶವನ ಪ್ರೇರಣೆಯಿಂದ ಅಂಕಿತಸ್ವೀಕಾರ, ಹೆಸರು ಕೇಶವಯ್ಯಂಗಾರ್ಯ, ಹುಟ್ಟೂರು ಹಾಸನ ಜಿಲ್ಲೆ ಬೇಲೂರು, ಕಾರ್ಯಕ್ಷೇತ್ರ ಬೇಲೂರು, ಶ್ರೀವೈಷ್ಣವರು; ಶಿಷ್ಯರು ವೆಂಕಟಗಿರಿನಾಥ*, ಅಚ್ಯುತವಿಠಲ*, ಚನ್ನಯ್ಯದಾಸ*; 56 ಕೀರ್ತನೆಗಳು, 2 ಉಗಾಭೋಗಗಳು, 9 ಸುಳಾದಿಗಳು ಮತ್ತು ಶನೈಶ್ಚರ ದಂಡಕ ದೊರೆತಿವೆ; ಕಾಲವಾದದ್ದು ಬೇಲೂರಿನಲ್ಲಿ. [22, 75]

229. **ವ್ಯಾಸವಿಠಲ (ಕ್ರಿ.ಶ. 1720–1815 ಅಥವಾ 1710–75)** ವಿಜಯದಾಸರಿಂದ* ಅಥವಾ ವೇಣುಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕಲ್ಲೂರು ಸುಬ್ಬಣ್ಣಾಚಾರ್ಯರು,

Rarest Archive

ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು, ಪಂಡಿತರು, ಕಾರ್ಯಕ್ಷೇತ್ರ ಕಲ್ಲೂರು; ಶಿಷ್ಯರು ಕಲ್ಲೂರು ಗುರುವ್ಯಾಸವಿಠಲರು*, ಕಲ್ಲೂರು ವರದವ್ಯಾಸವಿಠಲರು, ರಘುಪತಿವಿಠಲರು*, ಶ್ರೀನಿವಾಸವಿಠಲರು*; 20 ಕೀರ್ತನೆಗಳು, 2 ಉಗಾಭೋಗ, 4 ಸುಳಾದಿಗಳು ದೊರೆತಿವೆ; ಕಾಲವಾದದ್ದು ಕಲ್ಲೂರಿನಲ್ಲಿ. [87, 97, 175, 189, 165]

**230.** **ಶಂಕರ (ಕ್ರಿ.ಶ. 1685–1769)** ಹೆಸರು ಜಕ್ಕಪ್ಪಯ್ಯ, ಹುಟ್ಟೂರು ಬಿಜಾಪುರ ಜಿಲ್ಲೆ ಸಿಂದಗಿ, ತಪಸ್ವಿಗಳು, ಭೀಮಾಶಂಕರರ* ಪುತ್ರರು, ಅದ್ವೈತ ಪಂಡಿತರು, ಸಿಂದಗಿ ಸಂಪ್ರದಾಯದವರು; 45 ಕೀರ್ತನೆಗಳು, 2 ಅಧ್ಯಾಯಗಳಲ್ಲಿ ಶ್ರೀ ರಾಮಚಂದ್ರ ಚರಿತ್ರಾನುಸಂಧಾನ ಮತ್ತು ದತ್ತಾತ್ರೇಯ ಷಟ್ಪದಿ ಎಂಬ ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಫಾಲ್ಗುಣ ಶುದ್ಧ ಚತುರ್ಥಿಯಂದು; ಸಿಂದಗಿಯಲ್ಲಿ. [173]

**231.** **ಶಾಂತಿ (ಕ್ರಿ.ಶ. 1860–1901)** ಹೆಸರು ನಾಡಿಗರ ಶಾಂತಿಬಾಯಿ, ಹುಟ್ಟೂರು ಶಿವಮೊಗ್ಗ ಜಿಲ್ಲೆ ಸಾಗರದ ಕೊಪ್ಪ, ಗೃಹಿಣಿ; 27 ಕೀರ್ತನೆಗಳು ದೊರೆತಿವೆ. [53]

**232.** **ಶಾಮಸುಂದರವಿಠಲ (ಕ್ರಿ.ಶ. 1896–1956)** ಅಸ್ಕಿಹಾಳ ಗೋವಿಂದದಾಸರಿಂದ* ಅಥವಾ ಸ್ವಪ್ನಾಂಕಿತರು, ಹೆಸರು ಗುಂಡಾಚಾರ್ಯರು, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕುರುಡಿ ಗ್ರಾಮ, ವೈದಿಕ–ಪುರೋಹಿತರು, ಕಾರ್ಯಕ್ಷೇತ್ರ ಮಾನ್ವಿ ಮತ್ತು ಮಾನ್ವಿ ತಾಲ್ಲೂಕಿನ ಬಲ್ಲಟಗಿ; ಶಿಷ್ಯರು ಅಭಿನವಪ್ರಾಣೇಶವಿಠಲ*ರಿರಬಹುದು, ಮಾನವಿ ದಾಸರಮೂರ್ತಿ, ಮೋತಿ, ವೆಂಕಟಾಧೀಶ*ರಿರಬಹುದು, ವಿಜಯಸಾರಥಿಅಂಕಿತರು*, ಪದ್ಮನಾಭಾಂಕಿತರು(ಉಕ್ಲಿ ಕುಪ್ಪೇರಾಯರು), ಶ್ರೀಲಕುಮೀಶಾಂಕಿತರು(ಕುರುಡಿ ರಾಘವೇಂದ್ರಾಚಾರ್ಯ); 247 ಕೀರ್ತನೆಗಳು, 2 ಉಗಾಭೋಗಗಳು, 4 ಸುಳಾದಿಗಳು, 1 ಕೋಲುಪದ ಮತ್ತು ಕೀರ್ತನೆಯ ರೂಪದಲ್ಲಿ ಸತ್ಯನಾರಾಯಣ ಕಥೆಯು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಅರಿತವರನು ಕಾಣೆ ನಿನ್ನ ದೇವ", "ಟಗರು ಕೊಯ್ಯುವುದು ಧರ್ಮ"), ಅಲ್ಲದೇ ಅನೇಕ ಬಯಲಾಟಗಳನ್ನು ರಚಿಸಿ ಆಡಿಸಿದ್ದಾರೆ; ಕಾಲವಾದದ್ದು ವೈಶಾಖ ಶುದ್ಧ ನವಮಿಯಂದು. ಮಾನ್ವಿಯಲ್ಲಿ. *ಕ್ರಿ.ಶ. ಸುಮಾರು 1825ರ ಕಾಲದಲ್ಲಿ, ಶ್ಯಾಮಸುಂದರವಿಠಲರೆಂಬ ಮತ್ತೊಬ್ಬ ದಾಸರಬಗ್ಗೆ ಪ್ರಸ್ತಾಪವಿದೆ. ಮಣಿಧಾಳ್ ದೇಸಾಯಿ ಶ್ರೀ ಸ್ವಾಮಿರಾಯರೆಂಬುವವರ ಅಂಕಿತ 'ಶ್ಯಾಮಸುಂದರ' ಎಂದೂ, ಅನೇಕ ಪದಗಳನ್ನು ರಚಿಸಿದ್ದಾರೆಂದೂ ತಿಳಿದು ಬಂದಿದೆ, ಶ್ರೀ ರಾಘವೇಂದ್ರಸ್ವಾಮಿಗಳನ್ನು ಕುರಿತು 1 ಕೀರ್ತನೆ ದೊರೆತಿದೆ; ಇವರ ಬಗ್ಗೆ ಉಳಿದ ಯಾವ ವಿವರಗಳೂ ದೊರೆತಿಲ್ಲ.* [51, 95, 157, 166, 39]

**233.** **ಶಿವರಾಮ (ಕ್ರಿ.ಶ. 17–18ನೆಯ ಶತಮಾನ)** ಹೆಸರು ಶಿವರಾಮ, ಹುಟ್ಟೂರು ಬಿಜಾಪುರ ಜಿಲ್ಲೆ ಸಿಂದಗಿ, ಪಂಡಿತರು, ಭೀಮಾಶಂಕರರ* ಪುತ್ರರು, ಅದ್ವೈತ ಪಂಡಿತರು, ಸಿಂದಗಿ ಸಂಪ್ರದಾಯದವರು; ಶಿಷ್ಯರು ಶ್ರೀಪತಿಗುರುವಿಠಲ*ರಿರಬಹುದು; 2 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಬಾಗಲಕೋಟೆಯಲ್ಲಿರಬಹುದು. [173]

Rarest Archive

234. **ಶೆಲ್ವ (ಕ್ರಿ.ಶ. 1900–83)** ಹೆಸರು ಸಂಪತ್ತಯ್ಯಂಗಾರ್ಯರು, ಹುಟ್ಟೂರು ಮೈಸೂರು, ಸಂಸ್ಕೃತ ಕಾಲೇಜಿನಲ್ಲಿ ಪ್ರಾಧ್ಯಾಪಕರು, ಕಾರ್ಯಕ್ಷೇತ್ರ ಮೈಸೂರು, ಶ್ರೀವೈಷ್ಣವರು; 8 ಕೀರ್ತನೆಗಳು ದೊರೆತಿವೆ; ಕಾಲವಾದದ್ದು 16/5/1983ರಂದು ಬೆಂಗಳೂರಿನಲ್ಲಿ. [75]

235. **ಶೇಷಗಿರೀಶ (ಒಟ್ಟು 7 ಅಂಕಿತಗಳು) (ಕ್ರಿ.ಶ. 1887–1982)** ಹೆಸರು ನಂಜನಗೂಡು ತಿರುಮಲಾಂಬಾ, ಹುಟ್ಟೂರು ಮೈಸೂರು ಜಿಲ್ಲೆ ನಂಜನಗೂಡು, ಸಂಪಾದಕಿ, ಸಮಾಜಸೇವಕಿ, ಕಾರ್ಯಕ್ಷೇತ್ರ ನಂಜನಗೂಡು, ಶ್ರೀವೈಷ್ಣವರು; 199 ಕೀರ್ತನೆಗಳು ದೊರೆತಿವೆ. [53]

236. **ಶ್ರೀಕರವಿಠಲ (ಕ್ರಿ.ಶ. 1911–89)** ಸ್ವಪ್ನ ಮುಖೇನ ಮುತ್ತಜ್ಜರಾದ ಶ್ರೀಕರವಿಠಲರಿಂದ ಅವರದೇ ಆದ ಅಂಕಿತಪ್ರಾಪ್ತಿ, ಹೆಸರು ಜಗನ್ನಾಥಾಚಾರ್ಯರು, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಕಲ್ಲೂರು, ಅಧ್ಯಾಪಕರು, ಕಾರ್ಯಕ್ಷೇತ್ರ ರಾಯಚೂರು; 13 ಕೀರ್ತನೆಗಳು ದೊರೆತಿವೆ. [194, 76, 164, 79, 39, 77, 78]

237. **ಶ್ರೀಕರವಿಠಲ (ಕ್ರಿ.ಶ. ಸು. 1840)** ಕಮಲಾಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ದಾತಾರ ಶ್ರೀನಿವಾಸರಾಯರು/ಗುತ್ತಿದಾಸರು. [87, 108, 175]

238. **ಶ್ರೀಕಾಂತ, ಲಕ್ಷ್ಮೀಕಾಂತ (ಕ್ರಿ.ಶ. 1880–1940)** ತಂದೆಯವರಾದ ಬಾಲಕೃಷ್ಣವಿಠಲ ರಿಂದ* ಅಂಕಿತಪ್ರಾಪ್ತಿ, ಹೆಸರು ದಾಸರ ಲಕ್ಷ್ಮೀನಾರಣಪ್ಪ, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೊಡ್ಡಬಳ್ಳಾಪುರ, ಸರ್ಕಾರೀ ಕೆಲಸ, ಕಾರ್ಯಕ್ಷೇತ್ರ ಬೆಂಗಳೂರು, ಶಿಷ್ಯರು ಕರಿಗಿರೀಶರು*; 76 ಕೀರ್ತನೆಗಳು, 5 ಉಗಾಭೋಗಗಳು ದೊರೆತಿವೆ; ಇವರು ರಘುರಾಮವಿಠಲಾಂಕಿತ ಸುಬೋಧ ರಾಮರಾಯರ ಜೊತೆ ಕರ್ನಾಟಕ ಹರಿದಾಸ ಸಾಹಿತ್ಯದ ಸಂಗ್ರಹಣೆ, ಸಂಪಾದನೆ ಮತ್ತು ಪ್ರಕಟನೆಗಳಿಗಾಗಿ ಕೆಲಸ ಮಾಡಿದವರು. [92]

239. **ಶ್ರೀಕಾಂತವಿಠಲ (ಕ್ರಿ.ಶ. 1925–1998)** ಉರಗಾದ್ರಿವಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಹೆಚ್.ಎಸ್.ಶ್ರೀನಿವಾಸಮೂರ್ತಿ, ಅಧ್ಯಾಪಕರು, ಕಾರ್ಯಕ್ಷೇತ್ರ ಬೆಂಗಳೂರು; ಅನೇಕ ದಾಸರ ಕೀರ್ತನೆಗಳನ್ನು ಸಂಗ್ರಹಿಸಿ, ಪ್ರಕಟಿಸಿ ಹರಿದಾಸ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ; ಕಾಲವಾದದ್ದು 13/7/1998ರಂದು. [79]

240. **ಶ್ರೀಕೃಷ್ಣವಿಠಲ, ಕೃಷ್ಣವಿಠಲ (ಕ್ರಿ.ಶ. ಸು. 1898–1963)** ಉರಗಾದ್ರಿವಾಸವಿಠಲರಿಂದ* ಪ್ರಾಪ್ತಿಯಾದ ಅಂಕಿತ "ನವನೀತಧರ ತಾಂಡವ ಕೃಷ್ಣವಿಠಲ", ಹೆಸರು ಭೀಮರಾಯರು, ಹುಟ್ಟೂರು ಹಾಸನ ಜಿಲ್ಲೆ ಹೊಳೆನರಸೀಪುರ, ವಕೀಲರು; 106 ಕೀರ್ತನೆಗಳು, 3 ಸುಳಾದಿಗಳು ದೊರೆತಿವೆ. *18–19ನೆಯ ಶತಮಾನದಲ್ಲಿ ಶ್ರೀಕೃಷ್ಣವಿಠಲರೆಂಬುವರು 145 ಕೀರ್ತನೆಗಳನ್ನು ರಚಿಸಿದ್ದಾರೆಂದು ಗ್ರಂಥ [22,108]ರಿಂದ ತಿಳಿದುಬರುತ್ತದೆ.* [86]

241. **ಶ್ರೀದವಿಠಲ (ಕ್ರಿ.ಶ. ಸು. 1740–1820)** ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಕರ್ಜಗಿ ದಾಸಪ್ಪ, ಹುಟ್ಟೂರು ಹಾವೇರಿ ತಾಲ್ಲೂಕಿನ ಕರ್ಜಗಿ ಅಥವಾ ಗದಗ ಜಿಲ್ಲೆ ಶಿರಹಟ್ಟಿ,

Rarest Archiver

ಕಾರ್ಯಕ್ಷೇತ್ರ ಕರ್ಜಗಿ; ಶಿಷ್ಯರು ಭಾಗ್ಯನಿಧಿವಿಠಲ*ರಿರಬಹುದು, ಭೀಮೇಶವಿಠಲರು*; 61 ಕೀರ್ತನೆಗಳು, 2 ಸುಳಾದಿಗಳು ದೊರೆತಿವೆ; ಅಲ್ಲದೇ ಜಗನ್ನಾಥದಾಸರ "ಹರಿಕಥಾಮೃತಸಾರಕ್ಕೆ" ಫಲಶ್ರುತಿ ಬರೆದಿದ್ದಾರೆ; ಕಾಲವಾದದ್ದು ಆಷಾಢ ಶುಕ್ಲ ಏಕಾದಶಿಯಂದು; ಕರ್ಜಗಿಯಲ್ಲಿ. [49, 158]

**242. ಶ್ರೀನರಹರಿವಿಠಲ (ಕ್ರಿ.ಶ. 1880–1976)** ಸ್ವಪ್ನಾಂಕಿತರು, ಹೆಸರು ಕಟ್ಟ್ಯಾಚಾರ್ಯ ಜೋಶಿ, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಪಾಮನಕಲ್ಲೂರು, ಜ್ಯೋತಿಷಿಗಳು; 48 ಕೀರ್ತನೆಗಳು ಲಭ್ಯವಿವೆ ಎಂದು ತಿಳಿದಿದೆ. [194]

**243. ಶ್ರೀನಿಧಿವಿಠಲ (ಕ್ರಿ.ಶ. ಸು. 1850 ಅಥವಾ 1800–75)** ತಂದೆ ಶ್ರೀಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ದೀಪದ ಅಣ್ಣಯ್ಯಾಚಾರ್ಯ, ಹುಟ್ಟೂರು ಧಾರವಾಡ, ಕಾರ್ಯಕ್ಷೇತ್ರ ಧಾರವಾಡ; ಶಿಷ್ಯರು ತಂದೆಶ್ರೀನಿಧಿವಿಠಲ(ಪುತ್ರ–ದೀಪದ ಗೋವಿಂದಪ್ಪ), ತೀರ್ಥಪಾದ/ಶ್ರೀತೀರ್ಥಪಾದವಿಠಲರು*, ಶ್ರೀಪಾದವಿಠಲರು(ಚಂದಿ/ಚಂಡಿ ಕೃಷ್ಣರಾಯರು), ಶ್ರೀವರವಿಠಲರು*; 3 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಒಂದು ದ್ವಾದಶಿಯಂದು; ಧಾರವಾಡದಲ್ಲಿ. [158, 189]

**244. ಶ್ರೀನಿವಾಸ (ಕ್ರಿ.ಶ. 1914–74)** ಮಹಿಪತಿದಾಸರಿಂದ* ಪ್ರಭಾವಿತರಾಗಿ ಅಂಕಿತಸ್ವೀಕಾರ, ಹೆಸರು ಕಾಖಂಡಕಿ ಶ್ರೀನಿವಾಸಾಚಾರ್ಯ, ಹುಟ್ಟೂರು ಬಿಜಾಪುರ ತಾಲ್ಲೂಕಿನ ಕಾಖಂಡಕಿ, ಸಂಗೀತ ಶಿಕ್ಷಕರು, ಕಾರ್ಯಕ್ಷೇತ್ರ ರಾಯಚೂರು; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ತಿಳಿದಿದೆ. [194]

**245. ಶ್ರೀನಿವಾಸಭೂವರಾಹ /ಭೂವರಾಹ ರಘುಪತಿವಿಠಲ (ಕ್ರಿ.ಶ. 1780–1865)** ರಘುಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ದಾಸಾಚಾರ್ಯ, ಹುಟ್ಟೂರು ಗುಲಬರ್ಗ ಜಿಲ್ಲೆ ಸುರಪುರ (ಶೋರಾಪುರ?) ತಾಲ್ಲೂಕಿನ ಕೆಂಭಾವಿ, ಕಾರ್ಯಕ್ಷೇತ್ರ ಆಂಧ್ರಪ್ರದೇಶದ ಗದ್ವಾಲ ಇರಬಹುದು; ಇವರು ರಚಿಸಿದ ಕೀರ್ತನೆಗಳು ಜನರಲ್ಲಿ ಪ್ರಚಲಿತವಿವೆ; ಶಿಷ್ಯರು ಶ್ರೀಪತಿವಿಠಲ*; [108, 175, 194]

**246. ಶ್ರೀನಿವಾಸವಿಠಲ (ಕ್ರಿ.ಶ. ಸು. 1790)** ವೇಣುಗೋಪಾಲವಿಠಲರ* ಪೀಳಿಗೆ, ವ್ಯಾಸವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಕಲ್ಲೂರು ಭುಜಂಗದಾಸರು, ಶಿಷ್ಯರು ತಂದೆಶ್ರೀನಿವಾಸವಿಠಲರು*; (1 ಕೀರ್ತನೆ). [22, 108, 175]

**247. ಶ್ರೀನಿವಾಸವಿಠಲ (ಕ್ರಿ.ಶ. ಸು. 18ನೆಯ ಶತಮಾನ)** ತಿರುಪತಿ ಶ್ರೀನಿವಾಸನ ಅನುಗ್ರಹದಿಂದ ಅಂಕಿತಪ್ರಾಪ್ತಿಯಾಯಿತೆಂದು ಹೇಳಿಕೆ, ಹೆಸರು ತಿಮ್ಮಪ್ಪಯ್ಯ ದೇವರು, ಹುಟ್ಟೂರು ಗುಲಬರ್ಗಾ ಜಿಲ್ಲೆ ಶೋರಾಪುರ ತಾಲ್ಲೂಕಿನ ತಿಂಥಣಿ, 70 ವರುಷ ಬಾಳಿದರೆಂದು ಹೇಳಲಾಗಿದೆ, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕು; 500 ಕೀರ್ತನೆಗಳನ್ನು ರಚಿಸಿದ್ದಾರೆಂದು ತಿಳಿದುಬಂದಿದೆ. [194]

Rarest Archiver

**248.** **ಶ್ರೀನಿವಾಸವಿಠಲ (ಕ್ರಿ.ಶ. 19ನೆಯ ಶತಮಾನ)** ಶ್ರೀಶಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ; 1 ಕೀರ್ತನೆ ದೊರೆತಿದೆ, (6 ಕೀರ್ತನೆಗಳು). [126, 22]

**249.** **ಶ್ರೀಪತಿಗುರುವಿಠಲ** ಶಿವರಾಮರಿಂದ* ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು ಶ್ರೀಪತಿ, ಸಿಂದಗಿ ಸಂಪ್ರದಾಯದವರು; 1 ಕೀರ್ತನೆ ದೊರೆತಿದೆ. [173]

**250.** **ಶ್ರೀಪತಿವಿಠಲ (ಕ್ರಿ.ಶ. 1798–1870)** ಶ್ರೀನಿವಾಸ ಭೂವರಾಹ ರಘುಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಶ್ರೀಪತಿ, ಹುಟ್ಟೂರು ಆಂಧ್ರಪ್ರದೇಶದ ಗದ್ವಾಲ್, ಕಾರ್ಯಕ್ಷೇತ್ರ ಗದ್ವಾಲ್ ಮತ್ತು ದಾವಣಗೆರೆ ಜಿಲ್ಲೆ ಹರಪನಹಳ್ಳಿ; ಶಿಷ್ಯರು ತಂದೆಶ್ರೀಪತಿವಿಠಲರು*; (35 ಕೀರ್ತನೆಗಳು, 3 ಸುಳಾದಿಗಳು); ಕಾಲವಾದದ್ದು ಗದ್ವಾಲದಲ್ಲಿ. [22, 166, 175, 194]

**251.** **ಶ್ರೀರಾಮ (ಕ್ರಿ.ಶ. 1882–ಸು.1940)** ಚಕ್ರತೀರ್ಥಕ್ಕೆ ಹಾರಿದಾಗ ಕೇಳಿದ ಮಂಗಲ ಧ್ವನಿಯಿಂದ ಅಂಕಿತಪ್ರಾಪ್ತಿ, ಹೆಸರು ಬಡೇಸಾಹೇಬರು, ಹುಟ್ಟೂರು ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಜೋಳದಹೆಡಿಗೆ, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಗೋನವಾರ, ಇಸ್ಲಾಂ ಧರ್ಮಕ್ಕೆ ಸೇರಿದ ಮನೆತನ; 676 ಕೀರ್ತನೆಗಳು, 95 ಉಗಾಭೋಗಗಳು, 6 ದೀರ್ಘಕೃತಿಗಳು ದೊರೆತಿವೆ; ಕಾಲವಾದದ್ದು ಮಾರ್ಗಶಿರ ಬಹುಳ ದಶಮಿಯಂದು; ರಾಯಚೂರು ಜಿಲ್ಲೆ ದೇವದುರ್ಗ ತಾಲ್ಲೂಕಿನ ಲಿಂಗದಹಳ್ಳಿಯಲ್ಲಿ. [132]

**252.** **ಶ್ರೀರಾಮ** ಹೆಸರು ಯೋಗೇಂದ್ರರಾಯರು, ಕಾರ್ಯಕ್ಷೇತ್ರ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ; 9 ಕೀರ್ತನೆಗಳು ದೊರೆತಿವೆ. [73, 39]

**253.** **ಶ್ರೀವರವಿಠಲ (ಕ್ರಿ.ಶ. ಸು. 1823–1873)** ಶ್ರೀನಿಧಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸವದಿರಾಮಚಂದ್ರಪ್ಪ, ಹುಟ್ಟೂರು ಬೆಳಗಾಂವ್ ಜಿಲ್ಲೆಯ ಅಥಣಿ ತಾಲ್ಲೂಕಿನ ಸವದಿ ಗ್ರಾಮ, ಸರ್ಕಾರೀ ಉದ್ಯೋಗ, ಕಾರ್ಯಕ್ಷೇತ್ರ ಧಾರವಾಡ; ಶಿಷ್ಯರು ಮುದ್ದುಮೋಹನವಿಠಲರು*, ಕರಿವರದ ಕೃಷ್ಣದಾಸರು, ಭಾಗವತ ಸುಬ್ಬರಾಯದಾಸರು; 1 ಕೀರ್ತನೆ ದೊರೆತಿದೆ; ಕಾಲವಾದದ್ದು ಶ್ರಾವಣ ಶುದ್ಧ ಏಕಾದಶಿ ಅಥವಾ ದ್ವಾದಶಿಯಂದು; ಧಾರವಾಡದಲ್ಲಿ. [22, 49, 158, 189, 164]

**254.** **ಶ್ರೀವೆಂಕಟೇಶ (ಕ್ರಿ.ಶ. ಸು. 19ನೆಯ ಶತಮಾನ)** ಉತ್ತರಾದಿ ಮಠದ ಸತ್ಯಪರಾಕ್ರಮತೀರ್ಥರಿಂದ ಅಂಕಿತಪ್ರಾಪ್ತಿ, ಹೆಸರು ತುಳಸಾಬಾಯಿ/ಸುಂದರಾಬಾಯಿ, ಹುಟ್ಟೂರು ಧಾರವಾಡ ತಾಲ್ಲೂಕಿನ ಹೆಬ್ಬಳ್ಳಿ, ಕಾರ್ಯಕ್ಷೇತ್ರ ಗುಲಬರ್ಗ ಜಿಲ್ಲೆ ಚಿತಾಪುರ.; ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [166]

**255.** **ಶ್ರೀಶ (ಕ್ರಿ.ಶ. 1850–1910)** ಹೆಸರು ಸಿಂಗಪ್ಪ, ಹುಟ್ಟೂರು ರಾಯಚೂರು ಜಿಲ್ಲೆ ಮಾನ್ವಿ ತಾಲ್ಲೂಕಿನ ಗೋರ್ಕಲ್ಲು; ಅನೇಕ ಕೀರ್ತನೆಗಳು ಮತ್ತು ಬಯಲಾಟಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ; ಕಾಲವಾದದ್ದು ಗೋರ್ಕಲ್ಲಿನಲ್ಲಿ. [180, 194]

Rarest Archives

256. **ಶ್ರೀಶಂಕರ, ಶಂಕರಗುರು, ಗುರುಶಂಕರ (ಕ್ರಿ.ಶ. 1897–1987)** ಹೆಸರು ಶಂಕರಭಟ್ಟ ಅಗ್ನಿಹೋತ್ರಿ, ಹುಟ್ಟೂರು ಗದಗ ತಾಲ್ಲೂಕಿನ ಹೊಂಬಳ, ಅಧ್ಯಾಪಕರು, ಕಾರ್ಯಕ್ಷೇತ್ರ ಹೊಂಬಳ ಮತ್ತು ಧಾರವಾಡ ಜಿಲ್ಲೆ ನವಲಗುಂದ, ಅದ್ವೈತಿಗಳು; 96 ಕೀರ್ತನೆಗಳು ದೊರೆತಿವೆ. [26]

257. **ಶ್ರೀಶಕೇಶವ (ಕ್ರಿ.ಶ. 1890–1955)** ಸ್ವಪ್ನಾಂಕಿತರು, ಹೆಸರು ಶ್ರೀನಿವಾಸರಾಯರು, ಹುಟ್ಟೂರು ಶಿವಮೊಗ್ಗ ಜಿಲ್ಲೆ ಸೊರಬ ತಾಲ್ಲೂಕಿನ ಚಿಟ್ಟೂರಿರಬಹುದು, ಶ್ಯಾನುಭೋಗಿಕೆ ಜೊತೆಗೆ ರೆವೆನ್ಯೂ ಇಲಾಖೆಯಲ್ಲಿ ಕೆಲಸ; 14 ಕೀರ್ತನೆಗಳು ದೊರೆತಿವೆ. [14]

258. **ಶ್ರೀಶಗೋಪಾಲವಿಠಲ (ಕ್ರಿ.ಶ. 19ನೆಯ ಶತಮಾನ)** ಗುರುತಂದೆಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಸೋಮಪುರದ ಕೃಷ್ಣದಾಸರು, ಹುಟ್ಟೂರು ಆಂಧ್ರಪ್ರದೇಶದ ಗದ್ವಾಲ/ಐಜಿ ಬಳಿಯ ಉತ್ತನೂರು; 2 ಕೀರ್ತನೆಗಳು ದೊರೆತಿವೆ, (24 ಕೀರ್ತನೆಗಳು); ಕಾಲವಾದದ್ದು ವೇಣೀಸೋಮಪುರದಲ್ಲಿ. [22, 147]

259. **ಶ್ರೀಶಪ್ರಾಣೇಶವಿಠಲ (ಕ್ರಿ.ಶ. 1807/1815–1892)** ಗುರುಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ರಾಮರಾಯ, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಮುದಗಲ್ಲು, ಪುರೋಹಿತರು, ಕಾರ್ಯಕ್ಷೇತ್ರ ಲಿಂಗಸುಗೂರು; ಶಿಷ್ಯರು ಗುರುಶ್ರೀಶಪ್ರಾಣೇಶವಿಠಲರು*, ಶ್ರೀಕರವಿಠಲರು(ಕುಷ್ಟಗಿ ನರಸಿಂಹಾಚಾರ್ಯಜೋಶಿ/ವೆಂಕಣ್ಣಾಚಾರ್ಯ), ಇಂದಿರೇಶವಿಠಲರು(ಪಲಿ/ಫಲಮಾರು ಕೃಷ್ಣಣ್ಣ), ವೆಂಕಟವಿಠಲರು (ಮೊದಲಗಿತ್ತಿ ಕೃಷ್ಣಣ್ಣ), ವಾಮನವಿಠಲರು*, ಶ್ರೀನಿವಾಸವಿಠಲರು*, ಸುಖನಿಧಿವಿಠಲರು*, ರಮಣಪತಿವಿಠಲರು(ರಮಣಪತಿರಾಯರು), ತಿರುಪತಿವಿಠಲರು*; 20 ಕೀರ್ತನೆಗಳು ದೊರೆತಿವೆ; ಕಾಲವಾದದ್ದು ಭಾದ್ರಪದ ಶುದ್ಧ ಅಷ್ಟಮಿಯಂದು; ಲಿಂಗಸುಗೂರಿನಲ್ಲಿ. [22, 49, 126, 194]

260. **ಶ್ರೀಶವಿಠಲ (ಕ್ರಿ.ಶ. 18ನೆಯ ಶತಮಾನ)** ಹುಂಡೇಕಾರದಾಸರು, ಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಹುಕ್ಕೇರಿ ದಾಸಪ್ಪ, ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಕಂಪ್ಲಿ; ಶಿಷ್ಯರು ಕಮಲೇಶವಿಠಲರು*, ಗುರುಶ್ರೀಶವಿಠಲರು*; 1 ಕೀರ್ತನೆ ದೊರೆತಿದೆ, (5 ಕೀರ್ತನೆಗಳು); [22, 110, 166, 175, 164]

261. **ಶ್ರೀಶ್ರೀನಿವಾಸ (ಕ್ರಿ.ಶ. ಸು. 1900–1982)** ನರಹರಿ ಅಂಕಿತರಾದ ಪ್ರದ್ಯುಮ್ನತೀರ್ಥರಿಂದ* ಅಂಕಿತಪ್ರಾಪ್ತಿ, ಹೆಸರು ಸರಸ್ವತಿ(ತುಳಸೀ)ಬಾಯಿ, ಹುಟ್ಟೂರು ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲ, ಗೃಹಿಣಿ, ಕಾರ್ಯಕ್ಷೇತ್ರ ಬೆಂಗಳೂರು; 144 ಕೀರ್ತನೆಗಳು, 4 ಉಗಾಭೋಗಗಳು, 2 ಸುಳಾದಿಗಳು, 5 ದೀರ್ಘಕೃತಿಗಳು ದೊರೆತಿವೆ. [53]

262. **ಸದಾನಂದ, ಶ್ರೀನಿವಾಸ (ಕ್ರಿ.ಶ. 1876–1946)** ಸದಾನಂದರು, ಪೂರ್ವಾಶ್ರಮದ ಹೆಸರು ಶ್ರೀನಿವಾಸಯ್ಯ, ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆ ನವ ಮಂಗಳೂರು ಬಂದರು ಪಣಂಬೂರಿನಲ್ಲಿ, ಪಂಡಿತರು, ಕಾರ್ಯಕ್ಷೇತ್ರ ಪಣಂಬೂರು; 71 ಕೀರ್ತನೆಗಳು ದೊರೆತಿವೆ. [136]

Rarest Archiver

263. **ಸಿಂಗರಿ (ಕ್ರಿ.ಶ. 1873–1950)** ದೇವಪ್ರೇರಣೆಯಿಂದ ಅಂಕಿತಸ್ವೀಕಾರ, ಹೆಸರು ಸಿಂಗರಾಚಾರ್ಯರು, ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಕನಕಗಿರಿ, ಅರ್ಚಕರು, ಕಾರ್ಯಕ್ಷೇತ್ರ ಕನಕಗಿರಿ, ಶ್ರೀವೈಷ್ಣವರು; ಅನೇಕ ಕೃತಿಗಳನ್ನು ರಚಿಸಿದ್ದಾರೆಂದು ಹೇಳಲಾಗಿದೆ. [194]

264. **ಸಿರಿ(ಶಿರಿ)ಗೋವಿಂದವಿಠಲ (ಕ್ರಿ.ಶ. 1891–1919)** ಅಸ್ಕಿಹಾಳ ಗೋವಿಂದ ದಾಸರು, ರಘುಪತಿವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಗೋವಿಂದದಾಸರು, ಹುಟ್ಟೂರು ರಾಯಚೂರು ತಾಲ್ಲೂಕಿನ ಅಸ್ಕಿಹಾಳ ಗ್ರಾಮ ಅಥವಾ ಗುಲಬರ್ಗ ಜಿಲ್ಲೆ ಸುರಪುರ(ಶೋರಾಪುರ?), ಕಾರ್ಯಕ್ಷೇತ್ರ ಅಸ್ಕಿಹಾಳ; ಶಿಷ್ಯರು ಶಾಮಸುಂದರವಿಠಲ*ರಿರಬಹುದು; 28 ಕೀರ್ತನೆಗಳು ದೊರೆತಿವೆ ಅಲ್ಲದೆ ಬಯಲಾಟಗಳನ್ನೂ ರಚಿಸಿದ್ದಾರೆಂದು ಹೇಳಲಾಗಿದೆ; ಕಾಲವಾದದ್ದು ಭಾದ್ರಪದ ಶುದ್ಧ ಪಂಚಮಿಯಂದು; ಆಂಧ್ರಪ್ರದೇಶದ ಮಹಬೂಬ್‌ನಗರದಲ್ಲಿ. [3, 6, 166, 189, 194]

265. **ಸಿರಿ(ಶಿರಿ)(ಶ್ರೀ)ವತ್ಸಾಂಕಿತ (ಕ್ರಿ.ಶ. ಸು. 19–20ನೆಯ ಶತಮಾನ)** ಹೆಸರು ಚಿಕ್ಕೋಡಿ ಆಚಾರ್ಯರು, 26 ಕೀರ್ತನೆಗಳು ದೊರೆತಿವೆ. [158]

266. **ಸಿರಿಕೃಷ್ಣ, ಶ್ರೀಕೃಷ್ಣ, ಉಡುಪಿ ಕೃಷ್ಣ, ಕೃಷ್ಣ (ಕ್ರಿ.ಶ. 1447–1539)** ವ್ಯಾಸರಾಜತೀರ್ಥರು, ಪೂರ್ವಾಶ್ರಮದ ಹೆಸರು ಯತಿರಾಜ, ಆಶ್ರಮ ಗುರುಗಳು ಶ್ರೀಪಾದರಾಜರು*, ಹುಟ್ಟೂರು ಮೈಸೂರು ಜಿಲ್ಲೆ ಟಿ.ನರಸೀಪುರ ತಾಲ್ಲೂಕಿನ ಬನ್ನೂರು, ಪೀಠಾಧಿಪತಿಗಳು, ಕಾರ್ಯಕ್ಷೇತ್ರ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಹಂಪಿ; ದಾಸಕೂಟದ ಪಿತಾಮಹರು, ಶಿಷ್ಯರು ಕನಕದಾಸರು*, ಪುರಂದರದಾಸರು*, ಗುರುಕೃಷ್ಣ/ಗುರುಮುದ್ದುಕೃಷ್ಣ (ಗೋವಿಂದ ಒಡೆಯರು); 158 ಕೀರ್ತನೆಗಳು, 1 ಮುಂಡಿಗೆ, 15 ಉಗಾಭೋಗಗಳು, 14 ಸುಳಾದಿಗಳು, 1 ವೃತ್ತನಾಮ ದೊರೆತಿವೆ, (250 ಕೀರ್ತನೆ); ಬೃಂದಾವನಸ್ಥರಾದದ್ದು ಫಾಲ್ಗುಣ ಬಹುಳ ಚತುರ್ಥಿಯಂದು; ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಆನೆಗುಂದಿಯ ಬಳಿ ನವವೃಂದಾವನದಲ್ಲಿ. [22, 51, 99, 161, 156]

267. **ಸಿರಿಗುರುತಂದೆ ವರದಗೋಪಾಲವಿಠಲ** (ಪ್ರಾಯಶಃ ದಾಸ ಸಾಹಿತ್ಯದಲ್ಲಿಯ ಅತ್ಯಂತ ದೀರ್ಘ ಮುದ್ರಿಕೆ) **(ಕ್ರಿ.ಶ. 20ನೆಯ ಶತಮಾನ)** ಗುರುತಂದೆ ವರದಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ, ಕಳಸದ ಗೌಡರ ಮನೆತನ; 4 ಕೀರ್ತನೆಗಳು, 1 ಸುಳಾದಿ ದೊರೆತಿವೆ. [8]

268. **ಸಿರಿವಿಠಲ (ಕ್ರಿ.ಶ.1882–1963)** ಸುಖನಿಧಿವಿಠಲರಿಂದ* ಅಂಕಿತಪ್ರಾಪ್ತಿ , ಹೆಸರು ಕಲಮದಾನಿ ನಾರಾಯಣರಾಯರು, ರೈಲ್ವೇ ನೌಕರರು, ಕಾರ್ಯಕ್ಷೇತ್ರ ಕೋಲಾರ; ಎಲ್ಲೆಲ್ಲಿಯೋ ಅಲೆದಾಡಿ ಹರಿದಾಸರ ಬಗ್ಗೆ ಮಾಹಿತಿಯನ್ನು ಕಲೆಹಾಕಿದರು; 4 ಕೀರ್ತನೆಗಳು ಮತ್ತು 2 ದೀರ್ಘಕೃತಿಗಳು ದೊರೆತಿವೆ. [8]

Rarest Archiver

**269. ಸಿರಿವೇಣುಗೋಪಾಲವಿಠಲ (ಕ್ರಿ.ಶ. 17–18ನೆಯ ಶತಮಾನ)** ವೇಣುಗೋಪಾಲ ವಿಠಲರಿಂದ* ಅಂಕಿತಪ್ರಾಪ್ತಿ, (2ಸುಳಾದಿ). [22, 87, 97, 99]

**270. ಸುಂದರವಿಠಲ (ಕ್ರಿ.ಶ. 1893–1969)** ಗುರುಜಗನ್ನಾಥದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಗೋರೆಬಾಳ ಹನುಮಂತರಾಯರು, ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ಗೋರೆಬಾಳ, ವಕೀಲರು, ಕಾರ್ಯಕ್ಷೇತ್ರ ಲಿಂಗಸುಗೂರು; ನೂರಾರು ದಾಸರ ಕೃತಿಗಳನ್ನು ಸಂಗ್ರಹಿಸಿ, ಸಂಶೋಧಿಸಿ, ಪ್ರಕಟಿಸಿ, ಮನೆ ಮನೆಗೆ ತಲುಪಿಸಿದ್ದಾರೆ; 5 ಕೀರ್ತನೆಗಳು, 5 ದೀರ್ಘಕೃತಿಗಳು, 1 ಸುಳಾದಿ ದೊರೆತಿವೆ, (13 ಸುಳಾದಿಗಳು, 1 ಉಗಾಭೋಗ); ಕಾಲವಾದದ್ದು ಆಂಧ್ರಪ್ರದೇಶದ ಹೈದರಾಬಾದಿನಲ್ಲಿ; ಪುಷ್ಯ ಬಹುಳ ದ್ವಾದಶಿಯಂದು. [22, 102, 194, 162]

**271. ಸುಖದಸುಂದರವಿಠಲ (ಕ್ರಿ.ಶ. 18–19ನೆಯ ಶತಮಾನ)** ಗುರುಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಗಜೇಂದ್ರಗಡ ನಾರಾಯಣದಾಸರು, 1 ಸುಳಾದಿ ದೊರೆತಿದೆ. [126, 166, 112]

**272. ಸುಖದಸುಂದರವಿಠಲ (ಕ್ರಿ.ಶ. 1851–1911)** ಹೆಸರು ಮದ್ದಿಕೇರಿ ಭೀಮಸೇನರಾಯರು, ಹುಟ್ಟೂರು ಕೊಪ್ಪಳ ಜಿಲ್ಲೆ ಗಂಗಾವತಿ, ಸರ್ಕಾರಿ ಉದ್ಯೋಗ, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ ಲಿಂಗಸುಗೂರು; (6 ಕೀರ್ತನೆಗಳು, 1 ಸುಳಾದಿ). [22, 194]

**273. ಸುಖನಿಧಿವಿಠಲ (ಕ್ರಿ.ಶ. 1840–ಸು. 1912)** ಶ್ರೀಶಪ್ರಾಣೇಶವಿಠಲರಿಂದ* ಅಂಕಿತಪ್ರಾಪ್ತಿ, ಹೆಸರು ಏರಿ ನಾರಾಯಣಾಚಾರ್ಯ, ಹುಟ್ಟೂರು ಧಾರವಾಡ, ಕಾರ್ಯಕ್ಷೇತ್ರ ಹಾವೇರಿ ತಾಲ್ಲೂಕಿನ ಕರ್ಜಗಿ; ಶಿಷ್ಯರು ಸಿರಿವಿಠಲರು*; 1 ಕೀರ್ತನೆ ದೊರೆತಿದೆ. [97, 158, 175, 178]

**274. ಸುರಗಿರೀಶ, ಸುರಶೈಲವಾಸ, ಸಹ್ಯಾದ್ರಿವಿಹಾರ (ಕ್ರಿ.ಶ. 1834–1926)** ಆರಾಧ್ಯದೇವರಾದ ಅಮರಗಿರಿ ದೇವರ ಹೆಸರಿನಲ್ಲಿ ಅಂಕಿತಸ್ವೀಕಾರ, ಹೆಸರು ಕಲ್ಲಂಗೆರೆ ತಿಮ್ಮಪ್ಪದಾಸರು, ಹುಟ್ಟೂರು ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನ ಕಲ್ಲಂಗೆರೆ, ಕಾರ್ಯಕ್ಷೇತ್ರ ಕಲ್ಲಂಗೆರೆ; 37 ಕೀರ್ತನೆಗಳು, 1 ಹರಿಕಥೆ ದೊರೆತಿವೆ, ಅಲ್ಲದೇ "ಶ್ರೀಮದ್ರಾಮಾಯಣಕಥಾಸಂಗ್ರಹ"ವೆಂಬ ಗ್ರಂಥವನ್ನು ರಚಿಸಿದ್ದಾರೆ. [24]

**275. ಹನುಮೇಶವಿಠಲ (ಕ್ರಿ.ಶ. 1854–1941)** ಉತ್ತರಾದಿಮಠದ ಶ್ರೀ ಸತ್ಯಜ್ಞಾನತೀರ್ಥರಿಂದ ಅಂಕಿತಪ್ರಾಪ್ತಿ, ಹೆಸರು ಹನುಮಂತ ರಂಗರಾವ್ ಬುರ್ಲಿ, ಹುಟ್ಟೂರು ಹಾವೇರಿ ತಾಲ್ಲೂಕಿನ ಹಾವನೂರು, ಕೋರ್ಟಿನ ಅಧಿಕಾರಿ, ಕಾರ್ಯಕ್ಷೇತ್ರ ಹಾವೇರಿ; 75 ಕೀರ್ತನೆಗಳು ದೊರೆತಿವೆ; [158, 175]

**276. ಹಯಗ್ರೀವವಿಠಲ (ಕ್ರಿ.ಶ. 17–18ನೆಯ ಶತಮಾನ)** ವಿಜಯದಾಸರಿಂದ* ಅಂಕಿತಪ್ರಾಪ್ತಿ, ಹೆಸರು ಶೇಷಗಿರಿರಾಯರು; (1 ಕೀರ್ತನೆ). [22]

Rarest Archives

**277.** **ಹಯವದನ (ಕ್ರಿ.ಶ. 1480–1600) (ಆಶ್ರಮಕಾಲ 1519–1600)** ಸೋದೆ ವಾದಿರಾಜ ತೀರ್ಥರು, ಪೂರ್ವಾಶ್ರಮದ ಹೆಸರು ವರಾಹ, ಆಶ್ರಮ ಗುರುಗಳು ವಾಗೀಶತೀರ್ಥರು, ಹುಟ್ಟೂರು ಉಡುಪಿ ಜಿಲ್ಲೆ ಕುಂದಾಪುರ ತಾಲ್ಲೂಕಿನ ಕುಂಭಾಸಿಯ ಬಳಿ ಹೂವಿನಕೆರೆ, ಪೀಠಾಧಿಪತಿಗಳು, ಕಾರ್ಯಕ್ಷೇತ್ರ ಉತ್ತರ ಕನ್ನಡ ಜಿಲ್ಲೆ ಸಿರಸಿ ತಾಲ್ಲೂಕಿನ ಸೋದೆ/ಸೋಂದಾ/ಸ್ವಾದಿ; 311 ಕೀರ್ತನೆಗಳು, 36 ಉಗಾಭೋಗಗಳು, 16 ಸುಳಾದಿಗಳು, 6 ದೀರ್ಘಕೃತಿಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಕಾಲತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ", "ಆನಂದಮಯಗೆ ಚಿನ್ಮಯಗೆ"), (329 ಕೀರ್ತನೆಗಳು); ಸಶರೀರವಾಗಿ ಬೃಂದಾವನಸ್ಥರಾದದ್ದು ಫಾಲ್ಗುಣ ಬಹುಳ ತದಿಗೆಯಂದು; ಸೋದೆಯಲ್ಲಿ. [138, 22]

**278.** **ಹಯವದನವಿಠಲ (ಕ್ರಿ.ಶ. ಸು 1750) (ಜನನ ಕ್ರಿ.ಶ. 1685 ಇರಬಹುದು)** ಸೋದರ ವಿಜಯದಾಸರಿಂದ* ಅಂಕಿತಪ್ರಧಾನ, ಹೆಸರು ಆನಂದತೀರ್ಥ; 15 ಕೀರ್ತನೆಗಳು, 4 ದೀರ್ಘಕೃತಿಗಳು ದೊರೆತಿವೆ. [22, 97, 108, 142]

**279.** **ಹೂನೂರೇಶ (ಕ್ರಿ.ಶ. 1728–1823)** ರಾಯಚೂರು ಜಿಲ್ಲೆ ಲಿಂಗಸುಗೂರು ತಾಲ್ಲೂಕಿನ ತುರಡಗಿಯ ಹೂನೂರ ಪ್ರಾಣದೇವರ ಹೆಸರಿನಲ್ಲಿ ಅಂಕಿತಸ್ವೀಕಾರ ಮಾಡಿರಬಹುದು, ಹೆಸರು ತಿಮ್ಮಮ್ಮ, ಹುಟ್ಟೂರು ತುರಡಗಿ ಗ್ರಾಮ, ಕಾರ್ಯಕ್ಷೇತ್ರ ತುರಡಗಿ; 1 ಕೀರ್ತನೆ ದೊರೆತಿದೆ; ಕಾಲವಾದದ್ದು ಮಾಘ ಶುದ್ಧ ಪಾಡ್ಯದಂದು; ತುರಡಗಿಯಲ್ಲಿ. [166, 194]

**280.** **ಹೆನ್ನೆ /ಹೆನ್ನೆರಂಗ/ ಹೊನ್ನ ವಿಠಲ (ಕ್ರಿ.ಶ. ಸು. 1800–60)** ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಗುತ್ತಿ ತಾಲ್ಲೂಕಿನ ಪೆನ್ನ ಅಹೋಬಲ ನರಸಿಂಹನ ಪ್ರೇರಣೆಯಿಂದ ಅಂಕಿತಸ್ವೀಕಾರ, ಹುಟ್ಟೂರು ಅನಂತಪುರ ಜಿಲ್ಲೆ ಇರಬಹುದು, ಕಾರ್ಯಕ್ಷೇತ್ರ ಗುಲಬರ್ಗ ಜಿಲ್ಲೆ ಸುರಪುರ(ಶೋರಾಪುರ?) ತಾಲ್ಲೂಕಿನ ಮ(ಮು)ದನೂರು ಗ್ರಾಮ ಇರಬಹುದು; 189 ಕೀರ್ತನೆಗಳು ದೊರೆತಿವೆ, ಹೆಚ್ಚಿನವು ಅಪೂರ್ಣವಾಗಿವೆ. [3, 6]

**281.** **ಹೆಳವನಕಟ್ಟೆ ರಂಗ, ಹೆಳವನಕಟ್ಟೆ ವೆಂಕಟ (ಕ್ರಿ.ಶ. 17–18ನೆಯ ಶತಮಾನ)** ದಾವಣಗೆರೆ ಜಿಲ್ಲೆ ಮಲೆಬೆನ್ನೂರಿನ ಬಳಿ ಕುಮಾರನಹಳ್ಳಿಯ ಒಂದು ಕೆರೆಯ ಹೆಸರಾದ ಹೆಳವನಕಟ್ಟೆ ಎಂಬ ರಂಗನಾಥ ಕ್ಷೇತ್ರದ ಪ್ರಭಾವದಿಂದ ಅಥವಾ ಗೋಪಾಲದಾಸರಿಂದ* ಅಂಕಿತಪ್ರಾಪ್ತಿಯಾಗಿರಬಹುದು, ಹೆಸರು ಗಿರಿಯಮ್ಮ, ಹುಟ್ಟೂರು ಹಾವೇರಿ ಜಿಲ್ಲೆ ರಾಣೆಬೆನ್ನೂರು, ಕಾರ್ಯಕ್ಷೇತ್ರ ಮಲೆಬೆನ್ನೂರು; 53 ಕೀರ್ತನೆಗಳು ಮತ್ತು 6 ದೀರ್ಘಕೃತಿಗಳು ದೊರೆತಿವೆ, ಕೀರ್ತನೆಗಳಲ್ಲಿ ಹಲವಾರು ಮುಂಡಿಗೆಗಳು ಸೇರಿವೆ (ಉದಾಹರಣೆಗೆ "ಎಲ್ಲಿಗೆ ಹೋದಲ್ಲೇನು ಸುಖ"); ಕಾಲವಾದದ್ದು ಶ್ರಾವಣ ಶುದ್ಧ ಪಂಚಮಿಯಂದು; ತುಂಗಭದ್ರಾ ಪ್ರವಾಹದಲ್ಲಿ ಅದೃಶ್ಯರಾದರೆಂದು ನಂಬಲಾಗಿದೆ, ಕೊಮರನಹಳ್ಳಿಯಲ್ಲಿ ಎಂದೂ ಹೇಳಲಾಗಿದೆ. [51, 191, 193]

Rarest Archiver

# ಭಾಗ -2

1. **ಕವಿ ಪರಮದೇವ (ಕ್ರಿ.ಶ. 1721–1805)** ಹೆಸರು ಪರಮೇಶ್ವರ, ಹುಟ್ಟೂರು ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕಿನ ಸುಳಗೋಡು, ಅರ್ಚಕರು; ಕಾರ್ಯಕ್ಷೇತ್ರ ಚಿಪ್ಪಳಿ (ಜಿಲ್ಲೆ–ತಾಲ್ಲೂಕು ಸಿಕ್ಕಿಲ್ಲ), ಹವ್ಯಕ ಬ್ರಾಹ್ಮಣರು, ಅದ್ವೈತಿಗಳು; 147 ಕೀರ್ತನೆಗಳು ದೊರೆತಿವೆ. ಅನೇಕ ಶಾಸ್ತ್ರಗ್ರಂಥ, ಪುರಾಣಾದಿಗಳನ್ನು ಪ್ರತಿ ಮಾಡಿದ್ದಾರೆ. [26]

2. **ಕೃಷ್ಣಾಚಾರ್ಯರು (ಅಪ್ಪಾವರು) (ಕ್ರಿ.ಶ. 1789–1869)** ಹುಟ್ಟೂರು ಮತ್ತು ಕಾರ್ಯಕ್ಷೇತ್ರ ಮಂತ್ರಾಲಯದ ಹತ್ತಿರ ಆಂಧ್ರಪ್ರದೇಶದ ಇಭರಾಮಪುರ, ಪಂಡಿತರು; ಸಮಾಜಸೇವೆಯ ಜೊತೆಗೆ ದಾಸ ಪಂಥದ ಸಂಘಟನೆಗೆ, ದಾಸ ಸಾಹಿತ್ಯದ ರಚನೆಗೆ ಸ್ಫೂರ್ತಿ ನೀಡಿದವರು; ಕಾಲವಾದದ್ದು ಆಷಾಢ ಶುಕ್ಲ ತೃತೀಯೆದಂದು; ಇಭರಾಮಪುರದಲ್ಲಿ. [194]

3. **ಗುರುರಾಮಲಿಂಗರು** ಹುಟ್ಟೂರು ಮತ್ತು ಕಾರ್ಯಕ್ಷೇತ್ರ ಗುಲಬರ್ಗಾ ಜಿಲ್ಲೆ ಸುರಪುರ ತಾಲ್ಲೂಕಿನ ಯಾಳಗಿ, ತಪಸ್ವಿಗಳು; 3 ಕೀರ್ತನೆಗಳು ದೊರೆತಿವೆ. [173]

4. **ನಿಡಂಬೂರು ರಾಮದಾಸ ಬಲ್ಲಾಳ (ಕ್ರಿ.ಶ. 1898–1988)** ಹುಟ್ಟೂರು ಉಡುಪಿಯ ಅಂಬಲಪಾಡಿ ಬೀಡು, ಅಧ್ಯಾಪಕರು, ಕಾರ್ಯಕ್ಷೇತ್ರ ಉಡುಪಿ; 1 ಕೀರ್ತನೆ ದೊರೆತಿದೆ. [14]

5. **ಪಾವಂಜೆ ಗುರುರಾಯರು (ಕ್ರಿ.ಶ. 1869–1948)** ಹುಟ್ಟೂರು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ತಾಲ್ಲೂಕಿನ ಪಾವಂಜೆ, ಕಾರ್ಯಕ್ಷೇತ್ರ ಉಡುಪಿ; ದಾಸಸಾಹಿತ್ಯ ಸಂಗ್ರಹ, ಪರಿಷ್ಕರಣ, ಮುದ್ರಣ, ಪ್ರಕಟಣೆಗಳಿಗೆ ದುಡಿದವರು, 500ಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಿದ್ದಾರೆ. [48, 50]

6. **ವೆಂಕಟರಾವ್. ಬಿ (ಕ್ರಿ.ಶ. ಸು 1886–?)** ಅಧ್ಯಾಪಕರು, ಅದ್ವೈತಿಗಳು; 43 ಕೀರ್ತನೆಗಳು ದೊರೆತಿವೆ. [14]

7. **ಸುಳಾದಿ ಕುಪ್ಪೇರಾಯರು (ಕಿ.ಶ. 1913–78)** ಹುಟ್ಟೂರು ರಾಯಚೂರು ಜಿಲ್ಲೆ ಲಿಂಗಸುಗೂರು, ಹರಿದಾಸ ಸಾಹಿತ್ಯ ಪ್ರಚಾರಕರು, ಕಾರ್ಯಕ್ಷೇತ್ರ ರಾಯಚೂರು ಜಿಲ್ಲೆ; ಸ್ವಂತ ರಚನೆಗಳು ಮಾಡಿದಹಾಗಿಲ್ಲ; ಸುಳಾದಿಗಳನ್ನು ಧಾಟಿ ಹಿಡಿದು ಹಾಡುವುದರಲ್ಲಿ ಪರಿಣತರು, ರಾಯಚೂರು ಜಿಲ್ಲೆಯಲ್ಲಿ ಇಂದು ಸುಳಾದಿ ಪ್ರಕಾರ ಉಳಿದು ಬಂದಿರುವುದು ಇವರಿಂದ ಎನ್ನುವ ಗೌರವ ಭಾವನೆ ಇದೆ. [194]

8. **ಹೊಸಕೆರೆ ಚಿದಂಬರಯ್ಯನವರು (ಕ್ರಿ.ಶ. 1870–1939)** ಹುಟ್ಟೂರು ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಹೊಸಕೆರೆ, ಅದ್ವೈತ ಪಂಡಿತರು; 6 ಕೀರ್ತನೆಗಳು ದೊರೆತಿವೆ. [95]

Rarest Archiver

# ಭಾಗ - 3

ಹೆಸರು, ಅಂಕಿತ, ಕಾಲ (ಕ್ರಿಸ್ತಶಕ ಎಂದು ಸೇರಿಸಿ ಕೊಳ್ಳುವುದು), ರಚನೆಗಳ ಬಗ್ಗೆ ದೊರೆತಿರುವ ಮಾಹಿತಿಯನ್ನು ಕೊಡಲಾಗಿದೆ. ಆಧಾರ ಗ್ರಂಥಗಳ ಕ್ರಮ ಸಂಖ್ಯೆಯನ್ನು [ . ] ಚೌಕಕಂಸಗಳಲ್ಲಿ ಕೊಡಲಾಗಿದೆ.

| | | |
|---|---|---|
| 1 | ಅಂಬೇಗಾಲುಕೃಷ್ಣ | 15-16ನೆಯ ಶತಮಾನ [22] |
| 2 | ಅನಂತವಿಠಲ | 19-20ನೆಯ ಶತಮಾನ, (1 ಕೀರ್ತನೆ) [22] |
| 3 | ಅನಿರುದ್ಧವಿಠಲ | ಸು. 1780 [108, 178] |
| 4 | ಇಮ್ಮಡಿವಾದಿರಾಜ | 15-16ನೆಯ ಶತಮಾನ [22] |
| 5 | ಕಮಲಾಬಾಯಿ | 15-16ನೆಯ ಶತಮಾನ [22] |
| 6 | ಕೊಂಡಲದಾಸ | 15-16ನೆಯ ಶತಮಾನ [22] |
| 7 | ಕೊಪ್ಪರೇಶ | 19-20ನೆಯ ಶತಮಾನ, (1 ಕೀರ್ತನೆ) [22] |
| 8 | ಕೋಣಪರಿ ಹನುಮೇಶ | 18-19ನೆಯ ಶತಮಾನ, (1ಕೀರ್ತನೆ) [22] |
| 9 | ಗರುಡವಾಹನ ಲಕ್ಷ್ಮೀನಾರಾಯಣ | 1 ಕೀರ್ತನೆ ದೊರೆತಿದೆ [73] |
| 10 | ಗಿರಿಪುರವಾಸ | 19-20ನೆಯ ಶತಮಾನ, (1 ಕೀರ್ತನೆ) [22] |
| 11 | ಗುರುಕೂರ್ಮವಿಠಲ | 19-20ನೆಯ ಶತಮಾನ, (3 ಕೀರ್ತನೆಗಳು) [22] |
| 12 | ಗುರುಕೊಪ್ಪರೇಶ | 19-20ನೆಯ ಶತಮಾನ, (2 ಕೀರ್ತನೆಗಳು) [22] |
| 13 | ಗುರುನರಹರಿ | 3 ಕೀರ್ತನೆಗಳು ದೊರೆತಿವೆ [73] |
| 14 | ಗುರುರಘುವೀರ | 18-19ನೆಯ ಶತಮಾನ, (1 ಕೀರ್ತನೆ) [22] |
| 15 | ಗುರುಶ್ರೀನಿವಾಸವಿಠಲ | ಸು. 1750 [108] |
| 16 | ಗುರೂಪೇಂದ್ರ ಅಂಕಿತ | 1 ಕೀರ್ತನೆ ದೊರೆತಿದೆ [73] |
| 17 | ಗೋರಕಲ್ಲು ವೆಂಕಟೇಶ | 19-20ನೆಯ ಶತಮಾನ, [22] |
| 18 | ಗೋವಿಂದವಿಠಲ | 19ನೆಯ ಶತಮಾನ, 1 ಕೀರ್ತನೆ ದೊರೆತಿದೆ [186] |
| 19 | ಚಿಮ್ಮಲಗಿವಾಸ | 19-20ನೆಯ ಶತಮಾನ, (1 ಕೀರ್ತನೆ) [22] |
| 20 | ಜಯಪುರಿ ಹನುಮ | 19-20ನೆಯ ಶತಮಾನ, (1 ಕೀರ್ತನೆ) [22] |
| 21 | ಜೋಡುಗಾವಲಿಭೀಮ | 19-20ನೆಯ ಶತಮಾನ, (36 ಕೀರ್ತನೆಗಳು) [22] |

Rarest Archiver

| | | |
|---|---|---|
| 22 | ತಂದೆಕೇಶವ | ಕೇಶವ ವಿಠಲರ* ಶಿಷ್ಯರು [22] |
| 23 | ತಂದೆವೆಂಕಟೇಶವಿಠಲ | 18–19ನೆಯ ಶತಮಾನ [22] |
| 24 | ತಿರುಮಲೇಶ | 15–16ನೆಯ ಶತಮಾನ, (1 ಕೀರ್ತನೆ) [22] |
| 25 | ತೆಕ್ಕಲಕೋಟೆಚನ್ನ | 19–20ನೆಯ ಶತಮಾನ, [22] |
| 26 | ದ್ರೌಪದೀಶವಿಠಲ | 18–19ನೆಯ ಶತಮಾನ, [22] |
| 27 | ಧುಂಡಿರಾಜೇಶ್ವರ | 19–20ನೆಯ ಶತಮಾನ, (1 ಕೀರ್ತನೆ) [22] |
| 28 | ನರಕೇಸರಿ | 19–20ನೆಯ ಶತಮಾನ, [22] |
| 29 | ನರಸಿಂಹ ಸದ್ಗುರು | ಸಿಂದಗಿ ಸಂಪ್ರದಾಯದವರು, 1 ಕೀರ್ತನೆ ದೊರೆತಿದೆ. [ 173 ] |
| 30 | ನರಹರಿವಿಠಲ | ಸು. 1810, ಇವರದೇ ಇರಬಹುದಾದ 1 ಕೀರ್ತನೆ ದೊರೆತಿದೆ. [108, 77] |
| 31 | ಪುರದಭೀಮ | 19–20ನೆಯ ಶತಮಾನ, (3 ಕೀರ್ತನೆಗಳು) [22] |
| 32 | ಪ್ರದ್ಯುಮ್ನವಿಠಲ | (105 ಕೀರ್ತನೆಗಳು) [22, 108] |
| 33 | ಭೋಗಾಪುರೀಶ | 19–20ನೆಯ ಶತಮಾನ, 1 ಕೀರ್ತನೆ ದೊರೆತಿದೆ; (7 ಕೀರ್ತನೆಗಳು) [22, 152 ] |
| 34 | ಮಧ್ವಾಂತರ್ಗತವಿಠಲ | (ಕಾಲವಾದದ್ದು 1961ರಲ್ಲಿ) ಹೆಸರು ರಾಣೇಬೆನ್ನೂರು ಹಯವದನಾಚಾರ್ಯ. [108, 58] |
| 35 | ಮಾನವಿ ವೆಂಕಟೇಶ | 19–20ನೆಯ ಶತಮಾನ, (1 ಕೀರ್ತನೆ) [22] |
| 36 | ಮುದ್ದುಕೃಷ್ಣ | 19ನೆಯ ಶತಮಾನ 1 ಕೀರ್ತನೆ ದೊರೆತಿದೆ [186] |
| 37 | ಮುದ್ದುಕೇಶವ | 19–20ನೆಯ ಶತಮಾನ, (1 ಕೀರ್ತನೆ) [22] |
| 38 | ಮುದ್ದುರಂಗ | 19–20ನೆಯ ಶತಮಾನ, (2 ಕೀರ್ತನೆಗಳು) [22] |
| 39 | ರಘುಕುಲತಿಲಕ | 18–19ನೆಯ ಶತಮಾನ, (1 ಕೀರ್ತನೆ) [22] |
| 40 | ರಘುನಾಥ | ಹೆಸರು ರಘುನಾಥಯತಿ, 15–16ನೆಯ ಶತಮಾನ, (1 ಕೀರ್ತನೆ, 2 ಸುಳಾದಿಗಳು) [22] |

Rarest Archiver

| | | |
|---|---|---|
| 41 | ರವಡಕುಂದಿ ಭೀಮದಾಸ | 19–20ನೆಯ ಶತಮಾನ, (1 ಕೀರ್ತನೆ) [22] |
| 42 | ರಾಘವವಿಠಲ | 18–19ನೆಯ ಶತಮಾನ [22] |
| 43 | ರಾಮದಾಸರು | ಸು.1825 [108] |
| 44 | ರುಕ್ಮಿಣೀಪಂಡಿತರು | ಸು.1700 [108] |
| 45 | ಲಕ್ಕಸದ ತಿಮ್ಮಮ್ಮ(ತಿಮ್ಮಪ್ಪ?) | 15–16ನೆಯ ಶತಮಾನ [22] |
| 46 | ಲಕ್ಷ್ಮೀನಾಥ | 19–20ನೆಯ ಶತಮಾನ, (1 ಕೀರ್ತನೆ) [22] |
| 47 | ವಡ್ಡಿನಹಳ್ಳದರಾಯ | 19–20ನೆಯ ಶತಮಾನ, (1 ಕೀರ್ತನೆ) [22] |
| 48 | ವರದಓಬಳಪತಿ | 19–20ನೆಯ ಶತಮಾನ, (1 ಕೀರ್ತನೆ) [22] |
| 49 | ವರದಪ್ರಾಣೇಶವಿಠಲ | 19–20ನೆಯ ಶತಮಾನ,<br>ಹೆಸರು ಚಂದಿ ವೆಂಕೋಬರಾಯರು. [ 108 ] |
| 50 | ವರದಮೋಹನವಿಠಲ | (1 ಕೀರ್ತನೆ) [22] |
| 51 | ವರದರಾಜಕೃಷ್ಣ | 15–16ನೆಯ ಶತಮಾನ [22] |
| 52 | ವರದರಾಜರಾಮ | 15–16ನೆಯ ಶತಮಾನ [22] |
| 53 | ವರದವಿಠಲ | ಸು.1750 [108] |
| 54 | ವಲ್ಲಿಯಪುರವಾಸ | 19–20ನೆಯ ಶತಮಾನ, [22] |
| 55 | ವಳಬಳ್ಳಾರಿರಂಗ | 19–20ನೆಯ ಶತಮಾನ, (1 ಕೀರ್ತನೆ) [22] |
| 56 | ವಾಮನವಿಠಲ | ಸು. 19–20ನೆಯ ಶತಮಾನ,<br>ಹೆಸರು ವರವಣಿ ಸುಬ್ಬರಾಯರು. [ 92 ] |
| 57 | ವಿಜಯೀಂದ್ರರಾಮ | 18–19ನೆಯ ಶತಮಾನ,<br>(2 ಕೀರ್ತನೆಗಳು, 2 ಸುಳಾದಿಗಳು) [22] |
| 58 | ವಿಜೇಂದ್ರ ಅಂಕಿತ | 1 ಕೀರ್ತನೆ ದೊರೆತಿದೆ [73] |
| 59 | ವೆಂಕಟವಿಠಲ | 18–19ನೆಯ ಶತಮಾನ, (4 ಕೀರ್ತನೆಗಳು) [22] |
| 60 | ವೆಂಕಟಾದ್ರಿವಿಠಲ | 18–19ನೆಯ ಶತಮಾನ, (1 ಕೀರ್ತನೆ) [22] |
| 61 | ವೆಂಕಟೇಶವಿಠಲ | 18ನೆಯ ಶತಮಾನ,<br>ವರದಗೋಪಾಲವಿಠಲರಿಂದ* ಅಂಕಿತಪ್ರಾಪ್ತಿ;<br>(2 ಕೀರ್ತನೆಗಳು); [ 22 ] |
| 62 | ವೇದವಿಠಲ | ಕಾಲ 1860 [108] |

Rarest Archiver

| | | |
|---|---|---|
| 63 | ವೇದವ್ಯಾಸ | 19–20ನೆಯ ಶತಮಾನ, (1 ಕೀರ್ತನೆ) [22] |
| 64 | ವೈಕುಂಠವೆಂಕಟೇಶ | 15–16ನೆಯ ಶತಮಾನ, (1 ಸುಳಾದಿ) [22] |
| 65 | ವ್ಯಾಸ | 19–20ನೆಯ ಶತಮಾನ, (1 ಕೀರ್ತನೆ)[22] |
| 66 | ಶೇಷಗಿರಿ | 18–19ನೆಯ ಶತಮಾನ, (1 ಕೀರ್ತನೆ) [22] |
| 67 | ಶೇಷಗಿರೀಶ | ಸು. 1825, ಹೆಸರು ಸಕ್ಕರೀ ತಿಮ್ಮಪ್ಪ. [ 108 ] |
| 68 | ಶೇಷಾಚಲವಾಸ | 19–20ನೆಯ ಶತಮಾನ, (1 ಕೀರ್ತನೆ) [22] |
| 69 | ಶ್ರೀಕಾಂತವಿಠಲ | 18–19ನೆಯ ಶತಮಾನ, (1 ಕೀರ್ತನೆ) [22] |
| 70 | ಶ್ರೀಕೃಷ್ಣವಿಠಲ | 18–19ನೆಯ ಶತಮಾನ, (145 ಕೀರ್ತನೆಗಳು) [22, 108] |
| 71 | ಶ್ರೀಗುರು ವಿಶ್ವಪತಿ | ಸಿಂದಗಿ ಸಂಪ್ರದಾಯದವರು, 1 ಕೀರ್ತನೆ ದೊರೆತಿದೆ. [173] |
| 72 | ಶ್ರೀಧರವಿಠಲ | 18–19ನೆಯ ಶತಮಾನ, (2 ಕೀರ್ತನೆಗಳು) [22, 108] |
| 73 | ಶ್ರೀನರಸಿಂಹ | 19–20ನೆಯ ಶತಮಾನ, (1 ಕೀರ್ತನೆ) [22] |
| 74 | ಶ್ರೀನಾಥವಿಠಲ | 18–19ನೆಯ ಶತಮಾನ, (1 ಕೀರ್ತನೆ) [22] |
| 75 | ಶ್ರೀರಂಗ | 18–19ನೆಯ ಶತಮಾನ, (1 ಕೀರ್ತನೆ) [22] |
| 76 | ಶ್ರೀರಾಮಕೃಷ್ಣ | 18–19ನೆಯ ಶತಮಾನ, (1 ಉಗಾಭೋಗ) [22] |
| 77 | ಸಿದ್ಧಗುರು ತ್ರಿಪುರಾಂತಕ | ಸಿಂದಗಿ ಸಂಪ್ರದಾಯದವರು, 2 ಕೀರ್ತನೆಗಳು ದೊರೆತಿವೆ. [173] |
| 78 | ಸಿರಿರಾಮ ಅಂಕಿತ | 1 ಕೀರ್ತನೆ ದೊರೆತಿದೆ [73] |
| 79 | ಸುಖಮಯವಿಠಲ | 18–19ನೆಯ ಶತಮಾನ, (1 ಕೀರ್ತನೆ) [22] |
| 80 | ಹನುಮೇಶವಿಠಲ | ಸು. 1870, ಹೆಸರು ಶೇಷಮ್ಮ. [ 108 ] |
| 81 | ಹಯಗ್ರೀವವಿಠಲ | 18–19ನೆಯ ಶತಮಾನ, (1 ಕೀರ್ತನೆ) [22] |
| 82 | ಹುಲಿಗುಡ್ಡಿಭೀಮ | 19–20ನೆಯ ಶತಮಾನ, (1 ಕೀರ್ತನೆ) [22] |
| 83 | ಹೇಮಾದ್ರೀಶ | 19–20ನೆಯ ಶತಮಾನ, (1 ಕೀರ್ತನೆ) [22] |

~ ~ ~ * ~ ~ ~

Rarest Archive

